ಹಂಪ. ನಾಗರಾಜಯ್ಯ

# ದ್ರಾವಿಡಭಾಷಾವಿಜ್ಞಾನ

## ಪರಿಷ್ಕೃತ ದ್ವಿತೀಯ ಮುದ್ರಣ

ಈ ಗ್ರಂಥ ವಿದ್ವಾಂಸರೆಲ್ಲಾ ಓದಬೇಕಾದುದು, ಓದುವವರೆಲ್ಲಾ ವಿದ್ವಾಂಸರೂ ಆಗಬಹುದು. ಗ್ರಂಥದ ಮೌಲ್ಯ ಅದು.

ತೀ. ನಂ. ಶ್ರೀಕಂಠಯ್ಯ

ಹಂಪ. ನಾಗರಾಜಯ್ಯನವರು 'ದ್ರಾವಿಡಭಾಷಾವಿಜ್ಞಾನ' ವೆಂಬ ಉದ್ಗ್ರಂಥವನ್ನು ರಚಿಸಿದ್ದಾರೆ. ದ್ರಾವಿಡಭಾಷಾವಿಜ್ಞಾನದ ಕ್ಷೇತ್ರದಲ್ಲಿ ಇದುವರೆಗೆ ನಡೆದಿರುವ ಸಂಶೋಧನೆಯ ಫಲಗಳನ್ನೆಲ್ಲ ಅವರು ಒಂದೆಡೆಗೆ ತಂದು ಜೋಡಿಸಿದ್ದಾರೆ.

ಡಾ|| ಹಾ. ಮಾ. ನಾಯಕ



...ಗರಾಜಯ್ಯನವರು ಈ ಪುಸ್ತಕದಿಂದ ಕನ್ನಡ ಸಾರಸ್ವತ ...ಹೆಚ್ಚಿಸಿದ್ದಾರೆ.

ಡಾ|| ರಂ. ಶ್ರೀ. ಮುಗಳಿ

...ಭಾಷಾವಿಜ್ಞಾನವನ್ನು ಹೊಸದಾಗಿ ವ್ಯಾಸಂಗಮಾಡಲಿಚ್ಛಿಸುವವರಿಗೆ ಇದೊಂದು ಉತ್ತಮ ಪ್ರವೇಶಿಕೆ ; ವ್ಯಾಸಂಗ ಮಾಡಿರುವವರಿಗೆ ವಿಚಾರಪ್ರಚೋದಕ.

ಎಂ. ವಿ. ಸೀತಾರಾಮಯ್ಯ

ಡಿ. ವಿ. ಕೆ. ಮೂರ್ತಿ :: ಪ್ರಕಾಶಕರು :: ಮೈಸೂರು-೪

## ಮುನ್ನುಡಿ

ಭಾಷೆ ವಿಶ್ವದ ಪರಮಾಶ್ಚರ್ಯಗಳಲ್ಲೊಂದಾಗಿದೆ; ಅದು ಬಡವ ಬಲ್ಲಿದರೆಂಬ ಭೇದವಿಲ್ಲದೆ ಸರ್ವರ ಮನೋರಥವನ್ನೀಡೇರಿಸುವ ಕಾಮಧೇನುವಾಗಿದೆ. ಮಾನವನ ಐಹಿಕಾಮುಷ್ಮಿಕ ಕ್ಷೇಮಾಭ್ಯುದಯ ಸಾಧನೆಗೆ ಭಾಷೆಯೇ ಮೂಲ ಕಾರಣ. ಅವನ ಬೌದ್ಧಿಕ ಮಾನಸಿಕ ಸಾಂಸ್ಕೃತಿಕವೇ ಮೊದಲಾದ ಸರ್ವಾಂಗೀಣ ಪ್ರಗತಿಗನುಗುಣವಾಗಿ ಭಾಷೆಯೂ ವಿಶ್ವವಿಸ್ತಾರವಾಗಿ ಬೆಳೆದಿದೆ. ಸಂಸ್ಕೃತಿ ವಿಕಾಸಹೊಂದಿದಂತೆಲ್ಲ ಭಾಷೆಯೂ, ಭಾಷೆ ಬೆಳೆದಂತೆಲ್ಲ ಸಂಸ್ಕೃತಿಯೂ ಪರಸ್ಪರಾವಲಂಬಿಗಳಾಗಿ ಸತತವಾಗಿ ಪ್ರಗತಿ ಹೊಂದುತ್ತಿವೆ.

ಭಾಷೆ ಭೌತಿಕವಸ್ತುಗಳಂತೆ ಸುಲಭವಾಗಿ ನಾಶವಾಗುವಂಥ ಪದಾರ್ಥವಲ್ಲ. ಅದು ಎಷ್ಟು ಸನಾತನವೋ ಅಷ್ಟು ನೂತನವೂ ಅಹುದು. ಒಂದೊಂದು ಪದವೂ ಯುಗ ಯುಗಾಂತರದ ಸಂಸ್ಕಾರವನ್ನು ಪಡೆದಿರುವ ಜೀವಾಣು; ಸಾವಿಲ್ಲದ ಕೇಡಿಲ್ಲದ ಜ್ಯೋತಿ. ಇಂದು ಪ್ರಾಚೀನ ಸಂಸ್ಕೃತಿಯ ಮೇಲೆ ಅಮೂಲ್ಯವಾದ ಬೆಳಕು ಬೀರುವ ಮಹತ್ತರ ಸಾಧನಗಳಲ್ಲೊಂದಾಗಿದೆ. ಪ್ರಪಂಚದ ಮೂಲೆಮೂಲೆಗಳಲ್ಲಿ ಚದರಿ ಹೋಗಿರುವ ಜನರ ವೈವಿಧ್ಯ ಭಿನ್ನತೆಗಳ ಹಿಂದಿರುವ ಏಕಸೂತ್ರತೆಯನ್ನು ಅದು ಎತ್ತಿ ತೋರಿಸುತ್ತದೆ.

ಇಂಥ ಭಾಷೆಯ ಸ್ವರೂಪಲಕ್ಷಣಗಳ ರೂಪರೇಷೆ ರಚನೆಗಳ ಕಡೆಗೆ ಇತ್ತೀಚಿನ ತನಕ ಮನುಷ್ಯ ಗಮನಹರಿಸದಿದ್ದುದು ಸೋಜಿಗದ ಸಂಗತಿಯಾಗಿದೆ. ಗ್ರೀಸ್ ಮತ್ತು ಭಾರತ ದೇಶಗಳಲ್ಲಿ ಎರಡು ಸಾವಿರ ವರ್ಷಗಳಿಗೂ ಹಿಂದಿನಿಂದ ಭಾಷಾ ವ್ಯಾಸಂಗ ಸಕ್ರಮವಾಗಿ ಸಾಗುತ್ತಿದ್ದರೂ, ತುಲನಾತ್ಮಕವೂ ಶಾಸ್ತ್ರೀಯವೂ ಆದ ಅಧ್ಯಯನ ಸಂಶೋಧನೆಗಳು ಪ್ರಾರಂಭವಾದದ್ದು ಸುಮಾರು ನೂರೈವತ್ತು ವರುಷಗಳಿಂದೀಚೆಗೆ. ೧೭೮೬ರಲ್ಲಿ ವಿಲಿಯಂ ಜೋನ್ಸ್ ಕೆಲವು ಯೂರೋಪೀಯ ಭಾಷೆಗಳಿಗೂ ಸಂಸ್ಕೃತಕ್ಕೂ ಇದ್ದ ಸಂಬಂಧವನ್ನು ವಿವರಿಸಿದಾಗ ಭಾಷಾಶಾಸ್ತ್ರ ವ್ಯಾಸಂಗಕ್ಕೆ ಅಮೂಲ್ಯವಾದ ಕೀಲಿಕೈ ದೊರೆತಂತಾಯಿತು. ಶ್ಲೀಗೆಲ್, ರಾಸ್ಕ್, ಗ್ರಿಮ್, ಬಾಪ್, ಹಂಬೋಲ್ಟ್, ರಾಪ್, ಆಗಸ್ಟ್ ಶ್ಲೀಷರ್, ಕರ್ತಿಯಸ್, ಮ್ಯಾಡ್‌ವಿಂಗ್, ಮ್ಯಾಕ್ಸ್‌ಮುಲರ್, ವ್ಹಿಟ್ನಿ ಮೊದಲಾದ ಪ್ರಭೃತಿಗಳು ತೌಲನಿಕ ವ್ಯಾಸಂಗ ಸಂಶೋಧನೆಗಳನ್ನು ನಡೆಸಿ ವಿಶಿಷ್ಟ ಫಲಿತಾಂಶಗಳನ್ನು ಹೊರಗೆಡವಿದರು. ನವ ವೈಯಾಕರಣಿಗಳೆಂದು ಖ್ಯಾತ

ನಾಮರಾದ ಬ್ರುಗ್‌ಮನ್ ಮತ್ತು ಓಸ್ತಾಫ್ (೧೮೭೬) ಧ್ವನಿಸಿದ್ಧಾಂತವನ್ನು ಪ್ರಕಟಿಸಿದಾಗ ಭಾಷಾಶಾಸ್ತ್ರ ಚರಿತ್ರೆಯಲ್ಲಿ ದ್ವಿತೀಯ ಯುಗ ಪ್ರಾರಂಭವಾಯಿತೆನ್ನಬಹುದು. ಅಲ್ಲಿಂದೀಚೆಗೆ ಭಾಷಾಶಾಸ್ತ್ರ ಸಂಬಂಧವಾದ ಅಧ್ಯಯನ ಸಂಶೋಧನೆಗಳು ತ್ವರಿತ ಗತಿಯಲ್ಲಿ ಬಹು ವ್ಯಾಪಕವಾಗಿ ನಡೆಯುತ್ತಿವೆ.

ಇಂಡಿಯಾದೇಶದಲ್ಲಿ ಕಳೆದ ನೂರು ವರ್ಷಗಳಿಂದ ಈ ಸಂಶೋಧನ ಕಾರ್ಯ ಮಂದಗತಿಯಿಂದ ಸಾಗುತ್ತಿದೆ. ವಿದೇಶಿಗಳಿಂದ ಬಂದ ಪಾದ್ರಿಗಳೂ ಉನ್ನತಾಧಿಕಾರಿಗಳೂ ಈ ಬಗೆಗೆ ತುಂಬ ಮುತುವರ್ಜಿ ವಹಿಸಿದ್ದಾರೆ. ದ್ರಾವಿಡ ಭಾಷೆಗಳು ಸಂಸ್ಕೃತಜನ್ಯವಲ್ಲವೆಂದು ಮೊತ್ತಮೊದಲಿಗೆ ಅನುಮಾನಿಸಿದ ಫ್ರಾನ್ಸಿಸ್‌ವೈಟ್ ಎಲ್ಲಿಸ್‌ನನ್ನು ದ್ರಾವಿಡ ಭಾಷಾಶಾಸ್ತ್ರದ ಜನಕನೆಂದು ಕರೆಯುತ್ತಾರೆ. ೧೮೫೬ ರಲ್ಲಿ ಪ್ರಕಟವಾದ ಕಾಲ್ಡ್‌ವೆಲ್ ವ್ಯಾಕರಣ ದ್ರಾವಿಡ ಭಾಷಾಶಾಸ್ತ್ರದ ಸಂಶೋಧಕರಿಗೆ ಬೈಬಲ್ ಆಗಿ ಉಳಿದಿದೆ. ರಾಸ್‌ಮಸ್‌ರಾಸ್ಕ್, ಕೃಷ್ಣಮಾಚಾರ್ಯ, ಕ್ಯಾರೆ, ಬ್ರೌನ್, ಗುಂಡರ್ಟ್, ಕಿಟೆಲ್, ಬ್ರಿಗೆಲ್, ಹಾಡ್ಸನ್, ರೀವ್ಸ್, ರಾಮಸ್ವಾಮಿ ಅಯ್ಯರ್, ರಾ. ನರಸಿಂಹಾಚಾರ್, ಭಟ್ಟಾಚಾರ್ಯ, ಎಮಿನೊ, ಬರೊ ಮೊದಲಾದ ವಿದ್ವಾಂಸರು ಈ ದಿಶೆಯಲ್ಲಿ ಪ್ರಶಂಸನೀಯವಾದ ಸಂಶೋಧನೆಗಳನ್ನು ಪ್ರಕಟಿಸಿದ್ದಾರೆ. ಬೋಧನೆ ಸಂಶೋಧನೆಗಳ ಮೂಲಕ ಚಟರ್ಜಿ, ಮೀನಾಕ್ಷಿ ಸುಂದರಂ, ತೀ. ನಂ. ಶ್ರೀ, ಡಿ. ಎಲ್. ಎನ್., ಮರಿಯಪ್ಪಭಟ್, ಹಿರೇಮಠ್, ಕೃಷ್ಣಮೂರ್ತಿ, ಮಾನಪ್ಪ ನಾಯಕ್, ಬಿಳಿಗಿರಿ, ಸುಬ್ರಹ್ಮಣ್ಯಂ, ನರಸಿಂಹಯ್ಯ, ಗಾಯ್, ಶಂಕರಭಟ್ಟ, ಕೆ. ಜಿ. ಶಾಸ್ತ್ರಿ ಮೊದಲಾದವರು ಈ ಶಾಸ್ತ್ರದ ಮಹೋನ್ನತಿಯನ್ನು ಸಾಧಿಸುತ್ತಿರುವರಲ್ಲದೆ, ಈ ಕಡೆಗೆ ಅನೇಕ ವಿದ್ಯಾರ್ಥಿಗಳನ್ನು ಆಕರ್ಷಿಸಿದ್ದಾರೆ.

ಈ ಕ್ಷೇತ್ರ ಇನ್ನೂ ಕನ್ನೆ ನೆಲ. ಆಗಬೇಕಾದ ಕಾರ್ಯ ಅಗಾಧವಾಗಿದೆ. ಇನ್ನೂ ಸಮೀಕ್ಷೆಗೊಳಪಡದ ಭಾಷೆಗಳನ್ನು ಕುರಿತ ಸಂಶೋಧನೆ ನಡೆಯಬೇಕಾಗಿದೆ; ಉಪಭಾಷೆಗಳ ವೀಕ್ಷಣೆ ವಿಲಂಬವಿಲ್ಲದೆ ಮುಗಿಯಬೇಕಾಗಿದೆ; ವೃತ್ತಿಪದಕೋಶಗಳ ಸಿದ್ಧತೆ, ಸ್ಥಳ ಮತ್ತು ವ್ಯಕ್ತಿನಾಮಗಳ ವಿಶ್ಲೇಷಣೆ ಅತ್ಯಗತ್ಯವಾಗಿ ನಡೆಯಬೇಕಾಗಿದೆ; ಹಳಗನ್ನಡ ಮತ್ತು ನಡುಗನ್ನಡ ಗ್ರಂಥಗಳ ಮತ್ತು ಶಾಸನಗಳ ಭಾಷಾಸಾಮಗ್ರಿಯನ್ನು ವೈಜ್ಞಾನಿಕ ಸಮೀಕ್ಷೆಗೆ ಒಳಪಡಿಸಬೇಕಾಗಿದೆ. ಇಷ್ಟೆಲ್ಲ ಯಶಸ್ವಿಯಾಗಿ ಕೈಗೂಡಿದರೆ ತೌಲನಿಕ ವ್ಯಾಸಂಗ ಸುಲಭವಾಗಿ ಅಭೇದ್ಯ ಸಮಸ್ಯೆಗಳ ಪರಿಹಾರ ಹತ್ತಿರವಾಗಬಹುದು.

ಆಗಬೇಕಾದ ಕೆಲಸ ಅಪಾರವಾಗಿದೆ, ನಿಜ. ಆದರೆ ಆಗಿರುವ ಕೆಲಸ ಕಡಮೆಯೇನಲ್ಲ. ಈ ಕೆಲಸದ ಗುಣಪ್ರಮಾಣಗಳ ಅರಿವು ಮೂಡಬೇಕಾದರೆ, ಮುಂದಾಗಬೇಕಾಗಿರುವ ಕಾರ್ಯದ ರೂಪರೇಷೆಗಳನ್ನು ಗುರುತಿಸಬೇಕಾದರೆ, ಇಲ್ಲಿಯವರೆಗೆ ನಡೆದಿರುವ ಸಂಶೋಧನೆಯ ಫಲಿತಾಂಶಗಳನ್ನು ಕ್ರೋಢೀಕರಿಸಿ, ಸಕ್ರಮವಾಗಿ ಜೋಡಿಸಿ, ವ್ಯವಸ್ಥೆಗೊಳಿಸಬೇಕಾದದ್ದು ಅತ್ಯಗತ್ಯ. ಪ್ರಪಂಚದ ಹಲವಾರು ಪತ್ರಿಕೆ

ಗಳಲ್ಲಿ ಚದರಿಹೋಗಿರುವ ವಿದ್ವಾಂಸರ ಸಂಶೋಧನ ಲೇಖನಗಳನ್ನು ಸಂಗ್ರಹಿಸಿ, ವ್ಯಾಸಂಗಮಾಡಿ, ಅವುಗಳ ಆಧಾರದ ಮೇಲೆ ಶ್ರೀ ನಾಗರಾಜಯ್ಯನವರು 'ದ್ರಾವಿಡ ಭಾಷಾವಿಜ್ಞಾನ'ವನ್ನು ರಚಿಸಿದ್ದಾರೆ. ಭಾಷಾವಿಜ್ಞಾನಕ್ಕೆ ಸಂಬಂಧಿಸಿದ ಲೇಖನಗಳು ಕನ್ನಡ ಪತ್ರಿಕೆಗಳಲ್ಲಿ ಆಗಾಗ್ಗೆ ಬೆಳಕು ಕಾಣುತ್ತಿದ್ದರೂ ಈವರೆಗೆ ಪ್ರಕಟವಾಗಿರುವ ಗ್ರಂಥಗಳು ಕೇವಲ ಮೂರೇಮೂರು : (೧) ಶಾರದೆಯ ಸಂಸಾರ, (೨) ಕನ್ನಡ ಭಾಷಾ ಶಾಸ್ತ್ರ ಮತ್ತು (೩) ಭಾಷಾವಿಜ್ಞಾನದ ಮೂಲ ತತ್ವಗಳು. ಪ್ರಕೃತ ಗ್ರಂಥ ನಾಲ್ಕನೆಯದು.

ಆದರೆ ಅತ್ಯಾಧುನಿಕ ವಿಚಾರಧಾರೆಯನ್ನೊಳಗೊಂಡು ಸಕಲ ದ್ರಾವಿಡ ಭಾಷೆಗಳ ಸಮಗ್ರ ಚಿತ್ರವನ್ನು ಪರಿಚಯಮಾಡಿಕೊಡುವ ಗ್ರಂಥ ಸದ್ಯಕ್ಕೆ ಇದೊಂದೇ ಎಂದು ಧಾರಾಳವಾಗಿ ಹೇಳಬಹುದು. ಇಲ್ಲಿಯವರೆಗೆ ಉಪಲಬ್ಧವಾಗಿರುವ ಗ್ರಂಥ ಮತ್ತು ಲೇಖನ ಸಂಪತ್ತನ್ನು ಸೂರೆಗೊಂಡಿರುವ ವಿಷಯ ವೈಪುಲ್ಯ ಈ ಗ್ರಂಥದ ಮೇಲ್ಮೆಗೆ ಕಾರಣವಾಗಿದೆ. ದ್ರಾವಿಡಭಾಷೆಗಳ ಉಗಮ ವಿಕಾಸ ವರ್ಗೀಕರಣ ಅವುಗಳ ಪ್ರಾಚೀನತೆ, ಅವುಗಳ ಸ್ವರೂಪ ಲಕ್ಷಣ ಪರಸ್ಪರ ಸಂಬಂಧಗಳ ನಿರೂಪಣೆ, ತೌಲನಿಕ ಧ್ವನಿಮಾ ಮತ್ತು ಆಕೃತಿಮಾ ವಿಜ್ಞಾನಗಳ ವಿವರಣೆ, ಇವೇ ಮೊದಲಾದ ಅನೇಕ ವಿಷಯಗಳನ್ನೊಳಗೊಂಡಿದೆ. ಈಗಾಗಲೇ ನಡೆದಿರುವ ಸಂಶೋಧನೆಗಳ ಮತ್ತು ಜಿಜ್ಞಾಸೆಯ ಫಲಿತಾಂಶಗಳ ಸಕ್ರಮವಾದ ವಿವರಣೆ ಈ ಗ್ರಂಥದ ಪ್ರಧಾನೋದ್ದೇಶವಾದದ್ದರಿಂದ, ಪ್ರಸಿದ್ಧ ವಿಜ್ಞಾನಿಗಳ ಅಭಿಪ್ರಾಯಗಳನ್ನು ಉಲ್ಲೇಖಿಸುವುದರ ಮೂಲಕ ಪ್ರಚಲಿತ ಸಮಸ್ಯೆಗಳಿಗೆ ಪರಿಹಾರ ಸೂಚಿಸಿದೆ. ಶ್ರೀಮಾನ್ ಹಂಪನಾ ಅವರ ದೀರ್ಘಾಧ್ಯಯನದ, ಚಿಂತನಮಂಥನ ಮತ್ತು ಆಲೋಚನೆಯ ಫಲ, ಜೊತೆಗೆ ಭಾಷಾ ಶಾಸ್ತ್ರ ಸಂಬಂಧವಾದ ಅವರ ಆದರಾನುರಕ್ತಿ ಶ್ರದ್ಧೆಗಳು ಈ ಕೃತಿಯಲ್ಲಿ ಹೆಜ್ಜೆ ಹೆಜ್ಜೆಗೂ ಪ್ರತಿಬಿಂಬಿಸುತ್ತಿವೆ.

ದ್ರಾವಿಡಭಾಷಾ ವಿಜ್ಞಾನಕ್ಕೆ ಸಂಬಂಧಿಸಿದ ಅನೇಕ ಸಮಸ್ಯೆಗಳು ಇನ್ನೂ ಅಪರಿಹಾರ್ಯವಾಗಿ, ವಿಜ್ಞಾನಿಗಳ ನಿಶಿತಮತಿಗೆ ಮತ್ತು ವಿಚಾರಬುದ್ಧಿಗೆ ಸವಾಲಾಗಿ ಉಳಿದಿವೆ. ದ್ರಾವಿಡ ಶಬ್ದದ ನಿಷ್ಪತ್ತಿಯ ಬಗೆಗೆ ಇನ್ನೂ ಸಂದೇಹ ಹೋಗಿಲ್ಲ ; ದ್ರಾವಿಡರು ಯಾರು ? ಎಲ್ಲಿಂದ ಬಂದವರು ? ಎಂಬ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರ ದೊರೆತಿಲ್ಲ. ಸಿದ್ಧಾಂತದ ಹೆಸರಿನಲ್ಲಿ ಈಗ ಪ್ರಕಟವಾಗಿರುವ ಅಭಿಪ್ರಾಯಗಳು ಯಾವುದೋ ಪೂರ್ವಕಲ್ಪಿತ ನಿರ್ಣಯದ ಸಮರ್ಥನೆಗಾಗಿ ಮಂಡಿಸಿದ ವಾದ ವಿವಾದಗಳಂತಿವೆ. ಅವರು ಮೆಸೊಪೊಟೇಮಿಯಾ ಪ್ರದೇಶದಿಂದಲೋ ಮೆಡಿಟರೇನಿಯನ್ ಭೂಭಾಗದಿಂದಲೋ ಬಂದಿರಬೇಕೆಂದು ವಿದ್ವಾಂಸರು ಚರ್ಚೆ ನಡೆಸಿದ್ದಾರೆ.

ಮೊಹೆಂಜೊದಾರೊ ಸಂಸ್ಕೃತಿಯನ್ನು ಹುಟ್ಟುಹಾಕಿ ಬೆಳೆಸಿದ ಜನ ದ್ರಾವಿಡರೇ ಎಂದು ಘಂಟಾಘೋಷವಾಗಿ ಸಾರುವ ವಿದ್ವನ್ಮಣಿಗಳೂ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಅವರು ಎಂದೊ ಮುಳುಗಿಹೋದ ಲಿಮೂರಿಯಾ ದ್ವೀಪದ ಮೂಲನಿವಾಸಿಗಳಾಗಿರ

ಬೇಕೆಂಬ ವಾದವೂ ಜೀವಂತವಾಗಿದೆ. ಅವರು ಇಂಡಿಯಾದೇಶಕ್ಕೆ ಸಮುದ್ರದ ಮೂಲಕ ವಲಸೆ ಬಂದವರೆಂದು ಕೆಲವರು ಹೇಳಿದರೆ, ಮತ್ತೆ ಕೆಲವರು ವಾಯವ್ಯದ ಮೂಲೆಯಿಂದ ಬಂದಿರಬೇಕೆಂದು ಉದ್ಗಾರ ತೆಗೆಯುತ್ತಾರೆ. ಭರತಖಂಡದಲ್ಲಿ ಸ್ವತಂತ್ರವಾದ ಸಂಸ್ಕೃತಿಯೊಂದಿಲ್ಲ, ಭಾರತೀಯ ಸಂಸ್ಕೃತಿಯೆಂಬುದು ವಿದೇಶದಿಂದ ಆಮದಾದುದು, ಈ ಜನ ಪ್ರಪಂಚದ ಪ್ರಗತಿಗೆ ಏನೂ ಕಾಣಿಕೆ ನೀಡಲಾರದ ನಿರ್ವೀರ್ಯರು ಎಂಬುದನ್ನು ಸಮರ್ಥಿಸುವ ಸಲುವಾಗಿ ವಿದೇಶೀಯ ವಿದ್ವಾಂಸರು ಅನೇಕ ತರ್ಕಹೀನವಾದ ಅವೈಜ್ಞಾನಿಕವಾದ ಪ್ರಮಾಣರಹಿತವಾದ ವಿತಂಡ ವಾದವನ್ನೊಡ್ಡಿ ಭರತಖಂಡದಲ್ಲಿ ಮನುಕುಲವೆಂಬುದೇ ಇರಲಿಲ್ಲವೆಂದು ಸಾಧಿಸುತ್ತಿರುವುದಾಗಿ ಸರ್ದಾರ್ ಪಣಿಕ್ಕರ್ ಅವರಂಥ ಖ್ಯಾತ ಚರಿತ್ರಕಾರರು ಈ ವಿತಂಡ ವಾದವನ್ನು ಖಂಡಿಸಿ, ದ್ರಾವಿಡರು ಇಲ್ಲಿಯ ಮೂಲನಿವಾಸಿಗಳೆಂದು ಉದ್ಘೋಷಿಸಿದ್ದಾರೆ.[1]

ದ್ರಾವಿಡಭಾಷೆ ಸಂಸ್ಕೃತಜನ್ಯವಲ್ಲವೆಂದು ಸಾರಿದ ರಾಸ್ಕ್ ಕಾಲ್ಡ್‌ವೆಲ್ ಮೊದಲಾದ ವಿದ್ವಾಂಸರು ಅದರ ನಂಟನ್ನು ಸಿಥಿಯನ್ ಭಾಷಾವರ್ಗದ ಜೊತೆಗೆ ಗಂಟು ಹಾಕಿದ್ದಾರೆ. ಕಾಲ್ಡ್‌ವೆಲ್ ತನಗೆ ಪ್ರಿಯವೆನಿಸಿದ ಈ ಸಿದ್ಧಾಂತವನ್ನು ದೃಢ ಹಠದ ನಿಷ್ಠೆಯಿಂದ ಸಮರ್ಥಿಸುತ್ತಿರುವಂತೆ ಅವನ ಗ್ರಂಥದ ಪುಟಪುಟದಲ್ಲಿಯೂ ವ್ಯಕ್ತವಾಗುತ್ತದೆ. ಇಂಡೋ ಯುರೋಪೀಯ ಭಾಷೆಗಳಿಗಿಂತಲೂ ಪ್ರಾಚೀನವಾದ ಮೆಡಿಟರೇನಿಯನ್ ಸಮುದ್ರ ತೀರದ ಭಾಷೆಗಳಿಗೂ ದ್ರಾವಿಡಭಾಷೆಗಳಿಗೂ ಸಂಬಂಧವಿರಬೇಕೆಂದು ಸ್ಪೈಯಿನ್-ಫ್ರಾನ್ಸ್ ದೇಶಗಳ ಗಡಿನಾಡಿನಲ್ಲಿ ಇಂದಿಗೂ ಬಳಕೆಯಲ್ಲಿರುವ ಬಾಸ್ಕ್ ಭಾಷೆಯ ಆಧಾರದ ಮೇಲೆ ಡಾ. ಲಹಾವರಿ ಎಂಬ ವಿದ್ವಾಂಸರು ಸಮೃದ್ಧವಾದ ನಿದರ್ಶನ ಸಹಿತ ವಾದಿಸಿದ್ದಾರೆ. ದ್ರಾವಿಡ ಭಾಷೆಯ ಧ್ವನಿಮಾಗಳನ್ನೂ ವ್ಯಾಕರಣಾಂಶಗಳನ್ನೂ ಬಾಸ್ಕ್ ಭಾಷೆಯ ಸಮಾನಾಂಶಗಳೊಡನೆ ವಿವರ ವಿವರವಾಗಿ ಹೋಲಿಸಿ, ಆ ಎರಡೂ ಭಾಷಾ ವರ್ಗಗಳಿಗೆ ಸೇರಿದ ಕೆಲವು ಸಮಾನ ಪದಗಳ ನಿಷ್ಪತ್ತಿಯಲ್ಲಿ ಕಾಣುವ ಹೋಲಿಕೆಯನ್ನು ವಿದ್ವಾಂಸರೂ ಅಪ್ರತಿಭರಾಗುವಂತೆ ವಿಶದಪಡಿಸಿದ್ದಾರೆ, ಸುಮಾರು ನಾನೂರು ಪುಟಗಳ ದೊಡ್ಡ ಗ್ರಂಥ[2] ಈ ಸಿದ್ಧಾಂತ ಸಮರ್ಥನೆಗಾಗಿಯೇ ಹುಟ್ಟಿಕೊಂಡಿದೆ.

ಇದೆಲ್ಲ ಸರಿಯೆ; ಆದರೆ ದ್ರಾವಿಡರು ಹೊರಗಡೆಯಿಂದ ಬಂದದ್ದೇ ನಿಜವಾದರೆ ಯಾವ ಮಾರ್ಗದಿಂದ ಬಂದರು? – (ವಾಯುಮಾರ್ಗವಂತು ಇರಲಿಲ್ಲವಲ್ಲ) ಹಾಗೆ ಭೂಮಾರ್ಗವಾಗಿ ಬಂದಿದ್ದರೆ ಆರ್ಯ ಭಾಷೆಯ ಅವಶೇಷಗಳು ಆ ದಾರಿಯಲ್ಲಿ ಸಿಗುವಂತೆ ದ್ರಾವಿಡ ಭಾಷೆಯ ಪಳೆಯುಳಿಕೆಗಳು ಏಕೆ ಸಿಗುತ್ತಿಲ್ಲ? ಮೊಹೆಂಜೊದಾರೊ ಸಂಸ್ಕೃತಿ ಮೂಲದಲ್ಲಿ ದ್ರಾವಿಡರದಾಗಿದ್ದು ಕಾಲಾನಂತರದಲ್ಲಿ ಅದು ಪಡುವಣ ಸೀಮೆಗೇಕೆ ಹೋಗಿರಬಾರದು? ಜಿಪ್ಸಿಗಳಂತೆ ದ್ರಾವಿಡರೂ ಇಂಡಿಯಾದಿಂದ

---

[1] *A Survey of Indian History*, p. 59.

[2] *Dravidian Origins and the West*, Pub. by Orient Langmans.

ಪ್ರಾಗೈತಿಹಾಸಿಕ ಕಾಲದಲ್ಲಿಯೇ ಆ ಕಡೆಗೇಕೆ ವಲಸೆ ಹೋಗಿರಬಾರದು ? ಆ ಸಮಸ್ಯೆಗೆ ಬೇರೊಂದು ಮುಖವೂ ಇದೆಯೆನ್ನುವುದನ್ನು ವಿದ್ವಾಂಸರು ಅರಿತಂತೆ ಕಾಣುವುದಿಲ್ಲ.

ತಮಿಳೇ ಪೂರ್ವದ್ರಾವಿಡದ ಮೂಲ ಪ್ರತಿಸಿಧಿ, ಅದರಿಂದ ಕೆಲವು ದ್ರಾವಿಡ ಭಾಷೆಗಳು ಉದ್ಭವವಾಗಿವೆಯೆಂಬ ಭಾವಾತಿರೇಕದ ಕೆಲವು ವಿಚಾರಗಳಂತು ಆಧುನಿಕ ಭಾಷಾವಿಜ್ಞಾನದ ಸೂತ್ರಗಳಿಂದ ಪರಿಷ್ಕಾರಗೊಂಡು, ಆ ಭ್ರಮೆ ನಿರಸನಗೊಂಡಿದೆ. ಕ ಕಾರದ ಚರಿತ್ರೆಯೇ ಇದಕ್ಕೆ ಸೂಕ್ತ ನಿದರ್ಶನ. ಪ್ರಕೃತ ಗ್ರಂಥದಲ್ಲಿ ಈ ವಿಷಯವನ್ನು ಸ್ಪಷ್ಟವಾಗಿ ಪ್ರತಿಪಾದಿಸಿದೆ. ಘೋಷಸ್ಪರ್ಶಗಳೂ ಮೂಲ ದ್ರಾವಿಡದ ಆಸ್ತಿಯಲ್ಲವೆಂಬುದನ್ನು ಸಕಾರಣವಾಗಿ ತಿಳಿಸಿದೆ.

ಮರಾಠಿಯ ಪ್ರಭಾವದಿಂದ ಕನ್ನಡದ * ಪ > ಹ ಆಯಿತೆಂಬ ಅಭಿಪ್ರಾಯ ಸರಿಯಲ್ಲವೆಂದು ತಿಳಿಸಿ, 'ಕನ್ನಡದಲ್ಲಿ ಪ > ಹ ಆದುದಕ್ಕೆ ಒಂದು ಐತಿಹಾಸಿಕ ಹಿನ್ನೆಲೆ, ಬೆಳೆವಣಿಗೆ ಇದೆ' ಎಂದು ಹಂಪನಾ ಹೇಳಿದ್ದಾರೆ. ಅವರ ಈ ಹೇಳಿಕೆ ಸತ್ಯದೂರವಲ್ಲವೆಂದು ತೋರುತ್ತದೆ. ಆದರೆ ತರಂಗ ಸಿದ್ಧಾಂತವನ್ನು ಅನ್ವಯಿಸಿ, ಪ ಸಂಪೂರ್ಣ ನಿರ್ನಾಮವಾಗಿ, ಮತ್ತೆ ಅನ್ಯಭಾಷಾ ಸಂಪರ್ಕದ ಮೂಲಕ ಕನ್ನಡಕ್ಕೆ ಬಂತೆನ್ನುವ ಹಿರಿಯ ವಿದ್ವಾಂಸರ ಅಭಿಪ್ರಾಯವನ್ನು ಅನುಮೋದಿಸಿರುವಂತೆ ಭಾಸವಾಗುತ್ತದೆ. 'ಪ' ಕಾರದಂಥ ಸುಲಭ ಧ್ವನಿಮಾ ಉಚ್ಚಾರಣೆ ಕಷ್ಟವಾದ 'ಹ' ಕಾರಕ್ಕೆ ಸಂಪೂರ್ಣವಾಗಿ ಶರಣಾಯಿತು ಎನ್ನುವ ಸಿದ್ಧಾಂತಬದ್ಧವಾದ ಅಭಿಪ್ರಾಯದಲ್ಲಿ ಸ್ವಲ್ಪವೂ ಸತ್ಯವಿಲ್ಲ. ಹಕಾರ ಗರ್ಭಸ್ಥವಾಗಿದ್ದಾಗಲೇ ಕೆಂದಿಹೋದ್ದರಿಂದ ಪ ಧ್ವನಿಮಾ ಜೊತೆ ಜೊತೆಯಾಗಿ ಉಳಿದುಕೊಂಡು ಬಂತೆಂದು ಸಾಕ್ಷ್ಯಾಧಾರಗಳಿಂದ ತೋರಿಸಬಹುದು.

'ಯಾವ ಧ್ವನಿಗಳು ದ್ರಾವಿಡ ಭಾಷೆಗಳ ವೈಶಿಷ್ಟ್ಯವೋ ಅಂಥ ವಿಶಿಷ್ಟ ಧ್ವನಿಮಾಗಳಿಂದ ಪ್ರಾರಂಭವಾಗುವ ಪದಗಳೇ ದ್ರಾವಿಡ ಭಾಷೆಗಳಲ್ಲಿ ಇಲ್ಲ'ದಿರುವುದು ಮೂರ್ಧನ್ಯ ಧ್ವನಿಗಳ ವೈಚಿತ್ರ್ಯವೆಂದು ಮಿತ್ರರು ಶಂಕೆ ವ್ಯಕ್ತಪಡಿಸಿದ್ದಾರೆ. ಧ್ವನಿಮಾವೊಂದು ಪದಾದಿಯಲ್ಲಿ ಬರದಿದ್ದ ಮಾತ್ರಕ್ಕೆ ಅದರ ಸ್ವತಂತ್ರ ಅಸ್ತಿತ್ವದ ಬಗ್ಗೆ ಶಂಕಿಸುವುದು ಸರಿಯಲ್ಲ. ಆಗ ಱೞಗಳೂ ದ್ರಾವಿಡ ವರ್ಣಮಾಲೆಯಿಂದ ಉಚ್ಚಾಟನೆಯಾಗಬೇಕಾಗುತ್ತದೆ ; 'x' ಧ್ವನಿಮಾ ಇಂಗ್ಲಿಷ್ ವರ್ಣಮಾಲೆಯಿಂದ ನಿರ್ಗಮಿಸಬೇಕಾಗುತ್ತದೆ.

ಹಂಪನಾ ಅವರು ಅತ್ಯಂತ ಶ್ರೇಯಸ್ಕರವಾದ ಈ ಕೃತಿರಚನೆಯ ಮೂಲಕ ಭಾಷಾಋಣವನ್ನೂ ಗುರುಋಣವನ್ನೂ ತೀರಿಸಿದ್ದಾರೆ. ಪ್ರೌಢವಾದ ವಿಜ್ಞಾನ ವಿಷಯವನ್ನು ಕನ್ನಡದಲ್ಲಿ ಎಷ್ಟು ಲಲಿತವಾಗಿ ಸರಾಗವಾಗಿ ನಿಷ್ಕೃಷ್ಟವಾಗಿ ಲೀಲಾಜಾಲವಾಗಿ ಬರೆಯಬಹುದೆಂಬುದಕ್ಕೆ ಈ ಕೃತಿ ಅನಮೂಲ್ಯ ನಿದರ್ಶನವಾಗಿದೆ. ಇಂಥದೊಂದು ಉದ್ಘಕೃತಿ ಕನ್ನಡದಲ್ಲಿ ಮೈತಾಳಿದಾಗ ನನ್ನಂಥವನಿಗೆ ರೋಮಾಂಚವಾಗದಿರದು. ಭಾಷಾಶಾಸ್ತ್ರದ ಅಧ್ಯಯನ ಸಂಶೋಧನೆಗಳಿಗೆ ಈ ಕೃತಿ ತುಂಬ ನೆರವಾಗುವುದರಲ್ಲಿ, ಭಾಷಾಶಾಸ್ತ್ರದ ವಿದ್ಯಾರ್ಥಿಗಳಿಗೆ ಸ್ಫೂರ್ತಿ ನೀಡುವುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ದ್ರಾವಿಡಭಾಷಾ ವ್ಯಾಸಂಗಕ್ಕೆ ಭದ್ರವಾದ

ತಳಹದಿ ಹಾಕಿದ ಪೂಜ್ಯ ಪ್ರೊ|| ತೀ. ನಂ. ಶ್ರೀಕಂಠಯ್ಯನವರಿಗೆ ಅರವತ್ತು ತುಂಬುವ ಸಮಯದಲ್ಲಿ ಈ ಕೃತಿಯನ್ನರ್ಪಿಸುವ ಸುಯೋಗ ಪಡೆದ ಶ್ರೀ ಹಂಪನಾ ಅವರು ನಿಜವಾಗಿಯೂ ಅಭಿನಂದನಾರ್ಹರು.

ದೇಜಗೌ

ಏಪ್ರಿಲ್ ೨೪, ೧೯೬೬
'ಗುರುಕೃಪಾ', ಮೈಸೂರು

## ಮೊದಲಮಾತು

ಕನ್ನಡ ಭಾಷೆ ತನ್ನ ಸಹಜವಾದ ಮೌಲ್ಯ, ಸಂಸ್ಕೃತಿ, ಮತ್ತು ಔನ್ನತ್ಯಗಳಿಂದ ಇಂದಿಗೂ ಉತ್ಕರ್ಷವನ್ನು ಹೊಂದುತ್ತಾ ಗೌರವಸ್ಥಾನ ಪಡೆದಿದೆ, ಜೀವಂತ ಭಾಷೆಯಾಗಿ ಇಪ್ಪತ್ತು ಶತಮಾನಗಳಿಂದ ಉಳಿದುಬಂದಿದೆ. ಉತ್ತರ ಭಾರತದ ದ್ರಾವಿಡ ಭಾಷೆಗಳು ಇಂಡೊ-ಆರ್ಯನ್ ಮತ್ತು ಇಂಡೊ-ಇರಾನಿಯನ್ ಭಾಷೆಗಳ ಪ್ರಭಾವಕ್ಕೆ ಒಳಗಾಗಿದ್ದರೂ ಕನ್ನಡ ತನ್ನ ನೆರೆಹೊರೆಯ ಭಾಷೆಗಳ ಪ್ರಭಾವಕ್ಕೆ ಅಷ್ಟಾಗಿ ಒಳಗಾಗದೆ ತನ್ನ ಮೂಲ ಸ್ವರೂಪವನ್ನು ಕಾಪಾಡಿಕೊಂಡು ಬಂದಿದೆ. ಜ್ಞಾನದ ವಿವಿಧ ಶಾಖೆಗಳನ್ನು ನಿರೂಪಿಸುವ ಅಮೂಲ್ಯ ಕೃತಿಗಳು ಇತರ ಭಾಷೆಗಳಿಗೆ ಸರಿದೊರೆಯಾದ ಪ್ರಮಾಣದಲ್ಲಿ ಕನ್ನಡದಲ್ಲೂ ರಚಿತವಾಗುತ್ತಿವೆ; ಆದರೆ ಭಾಷಾವಿಜ್ಞಾನವನ್ನು ಕುರಿತ ಪುಸ್ತಕಗಳು ಕೇವಲ ಬೆರಳೆಣಿಕೆಗೆ ನಿಲುಕುವಷ್ಟು ಕಡಿಮೆ. ಇಂಗ್ಲಿಷ್ ಭಾಷೆಗೆ ಹೋಲಿಸುವುದಂತಿರಲಿ, ದ್ರಾವಿಡ ಭಾಷೆಗಳಲ್ಲೇ ಕನ್ನಡೇತರ ಚಾಕ್ಷುಷ ಭಾಷೆಗಳಿಗೆ ಹೋಲಿಸಿದಾಗ—ಈ ಹೊತ್ತಗೆಯಲ್ಲಿ ಕೊಟ್ಟಿರುವ ಅನುಬಂಧ ನೋಡಿ—ಕನ್ನಡದ ಬಡತನ ಎದ್ದು ಕಾಣುತ್ತದೆ. ಭಾಷಾವಿಜ್ಞಾನದ ಪೂರಕ ಶಾಖೆಗಳಾದ ಧ್ವನಿವಿಜ್ಞಾನ, ಆಕೃತಿಮ ವಿಜ್ಞಾನ, ವಾಕ್ಯವಿಜ್ಞಾನ, ತೌಲನಿಕ ವಿಜ್ಞಾನ—ಮೊದಲಾದ ಹಲವು ಭಾಗಗಳನ್ನು ವಿವರಿಸುವ ವೈಜ್ಞಾನಿಕ ವಿಶ್ಲೇಷಣಾತ್ಮಕ ಕೃತಿಗಳು ಹೆಚ್ಚುಹೆಚ್ಚಾಗಿ ರಚಿತವಾಗದಿರುವುದು ಕನ್ನಡದಲ್ಲಿ ಎದ್ದು ಕಾಣುವ ಕೊರತೆ.

ಹಲವು ವರುಷಗಳ ಹಿಂದೆ "ಭಾಷಾಚರಿತ್ರೆಯೆಂದರೆ, ವ್ಯಾಕರಣವೆಂದರೆ ನಮ್ಮ ಜನರು ಹಾವು ತುಳಿದವರಂತೆ ಹೆದರಿಕೊಳ್ಳುತ್ತಾರೆ. ಅದರ ಆವಶ್ಯಕತೆ ಎಷ್ಟು ಎಂಬುದು ಗೊತ್ತಿದ್ದವರೂ ಮನಸ್ಸಿನ ಈ ಹೇಡಿತನವನ್ನು ಬಿಟ್ಟು ಭಾಷೆಯ ಲಕ್ಷಣವನ್ನು ತಿಳಿಯಲು ಮುಂದೆ ಬರುವುದಿಲ್ಲ"[1]—ಎಂಬ ನಿರಾಶೆಯ ವಾತಾವರಣವಿದ್ದಿತು. ಆದರೆ ಈಗ ಆ ಭಾವನೆಯ ಛಳಿ ಬಿಟ್ಟು, "ಕನ್ನಡ ತಿರುಳಿಲ್ಲದ ಭಾಷೆ, ಯಾವುದಾದರೂ ಹೊಸ ವಿಷಯವನ್ನು ಹೇಳಬೇಕಾದರೆ ಇದಕ್ಕೆ ಚೈತನ್ಯವಿಲ್ಲ—ಎಂಬ ಮಾತು ಹಲವು ಸಾರಿ ಕೇಳಿಬರುತ್ತಿದೆ. ಭಾಷೆಯ ತಳಹದಿಯನ್ನು ಬೆದಕಿ, ನಿಜವಾದ ಅಂಶವನ್ನು ಕಂಡುಹಿಡಿಯಲು ಪ್ರಯತ್ನ ಮಾಡಿರುವವರು ಈ ಮಾತನ್ನು ಹೇಳಿದರೆ ಅದಕ್ಕೆ ಬೆಲೆಯಿದೆ. ಭಾಷೆಯ ಜೀವಾಳವನ್ನು ತಿಳಿಯದೆ, ತಮ್ಮ ಭಾಷೆಯನ್ನೇ ಉಪಯೋಗಿ

1 ಆಚಾರ್ಯ ಶ್ರೀ ಡಿ. ಎಲ್. ಎನ್., ಪ್ರ. ಕ. ೧೯, ೨–೩, ಪುಟ ೨೧೯–೨೨೦

ಸಲು ಹಿಂಜರಿದು ಪರಭಾಷೆಯ ಮೋಹಕ್ಕೆ ಸಿಕ್ಕಿರುವವರ ಈ ಮಾತಿಗೆ ಏನು ಬೆಲೆಯೋ" —ಎಂದು ಧೈರ್ಯದಿಂದ ಸವಾಲು ಹಾಕುವ ಸಂಪನ್ನ ಸಿದ್ಧತೆ ಕನ್ನಡದಲ್ಲಿ ವಿಶೇಷ ವಾಗಿ ಆಗುತ್ತಿದೆ.

ಭಾಷೆ ಎಂದಿಗೂ ಕೊರತೆ ಆಗದು, ಸಮರ್ಥರು ಮುಂದೆ ಬಂದಾಗ. ಕನ್ನಡಭಾಷೆ ಯಾವುದೇ ಬಗೆಯ ಶಾಸ್ತ್ರ ಅಥವಾ ವಿಜ್ಞಾನ ವಿವರಣೆಗೆ ಯಶಸ್ವೀ ಮಾಧ್ಯಮವಾಗ ಬಲ್ಲ ತಕ್ಕ ಕಸುವು ಪಡೆದಿದೆ; ಸ್ನಾತಕೋತ್ತರ ತರಗತಿಗಳಿಗೂ ಶಿಕ್ಷಣ ಮಾಧ್ಯಮ ವಾಗುವ ಸಿದ್ಧತೆ ಹಾಗೂ ಅರ್ಹತೆ ಹೊಂದಿದೆ. ಆದರೆ ಅದಕ್ಕೆ ಆ ಅವಕಾಶ ದೊರೆಯು ತ್ತಿಲ್ಲ. ಆದರೂ ನಿರಾಶರಾಗಬೇಕಾದುದಿಲ್ಲ. ಇಂದಲ್ಲ ನಾಳೆ ಅದು ಅವಶ್ಯವಾಗಿ ಆಗು ತ್ತದೆ; ಎಷ್ಟು ಬೇಗ ಆದರೆ ಅಷ್ಟು ಒಳ್ಳೆಯದು. ಅಲ್ಲಿಯವರೆಗೂ ಶಾಸ್ತ್ರೀಯ ಕೃತಿ ಗಳನ್ನು ತರುವ ಪ್ರಯತ್ನ ನಿರಂತರವಾಗಿ ನಡೆಯುತ್ತಿರಬೇಕು. ಈ ದ್ರಾವಿಡ ಭಾಷಾ ವಿಜ್ಞಾನ ಆ ದಿಕ್ಕಿನಲ್ಲಿ ಇಟ್ಟ ಒಂದು ಪುಟ್ಟ, ಆದರೆ ದಿಟ್ಟ ಹೆಜ್ಜೆ !

ಈ ಹೊತ್ತಗೆಯಲ್ಲಿ ಇದುವರೆಗೆ ತಿಳಿದುಬಂದಿರುವ ಎಲ್ಲ ದ್ರಾವಿಡಭಾಷೆಗಳ ಸಮಗ್ರ ಇತಿಹಾಸವನ್ನೂ ಕೊಡಲೆತ್ನಿಸಿದ್ದೇನೆ. ಗ್ರಂಥ ವಿಸ್ತಾರದ ಭೀತಿಯಿಂದ ಹಲವು ಭಾಗ ಗಳಲ್ಲಿ ವಿವರಣೆ ಸಂಕ್ಷಿಪ್ತವಾಗಿದೆ, ಬೇಕೆಂದೇ ಮೊಟಕುಮಾಡಿದೆ. ಬರವಣಿಗೆಯಲ್ಲಿ ಅಪಪ್ಪೂ ಅತ್ಯುಕ್ತಿ ಅನುಕ್ತಿಗಳಿಗೆ ಅವಕಾಶ ಕೊಡದೆ ಸಮತೂಕವನ್ನು ಕಾಪಾಡಿ ಕೊಂಡು ಬರಲು ಎಚ್ಚರದಿಂದ ಪ್ರಯತ್ನಿಸಿದ್ದೇನೆ. ಅಪ್ಪಿತಪ್ಪಿ ಎಲ್ಲಿಯಾದರೂ ತಪ್ಪುಗಳು ನುಸುಳಿದ್ದರೆ ತಿಳಿದವರು ದಯೆಯಿಟ್ಟು ತಿಳಿಸಬೇಕು, ತಿದ್ದಿ ತೋರಿಸಬೇಕು. ಇಂಥ ಶಾಸ್ತ್ರೀಯ ಹಾಗೂ ತೌಲನಿಕ ಗ್ರಂಥದಲ್ಲಿ ಹಲವರ ಅಭಿಪ್ರಾಯಗಳು ಅನಿವಾರ್ಯ ವಾಗಿ ಸಮಾವೇಶವಾಗಿದ್ದು ಹೊಳಲುಗೊಡುತ್ತಿರುತ್ತವೆ. ಆದುದರಿಂದ ಎಲ್ಲೆಲ್ಲಿ ವಿದ್ವಾಂಸರ ಹೇಳಿಕೆಗಳನ್ನು ಸ್ವೀಕರಿಸಿರುವೆನೋ ಅಲ್ಲೆಲ್ಲಾ ಅಡಿಟಿಪ್ಪಣಿಯಲ್ಲಿ ಆ ಮೂಲ ಕೃತಿ ಇಲ್ಲವೇ ಕೃತಿಕಾರರ ಉಲ್ಲೇಖವನ್ನು ಪ್ರಾಮಾಣಿಕತೆಯಿಂದ ಕೊಟ್ಟಿದ್ದೇನೆ. ಕೆಲವೆಡೆಗಳಲ್ಲಂತೂ ಯಾರ ಅಭಿಪ್ರಾಯವನ್ನೂ ಸ್ವೀಕರಿಸದಿದ್ದರೂ ಅಲ್ಲಿನ ಹೇಳಿಕೆಗೆ ಸಂಬಂಧಿಸಿದಂತೆ ಇನ್ನೂ ಇತರ ಹೆಚ್ಚಿನ ವಿಚಾರವಿರುವ ಹೊತ್ತಗೆಗಳತ್ತ ಓದುಗರ ಗಮನ ಸೆಳೆಯಲು ಅವನ್ನು ಹೆಸರಿಸಿದ್ದೇನೆ.

ನಾವು ದೊಡ್ಡವರಾಗಿ ಕಂಡರೆ ಅದಕ್ಕೆ ಹಿರಿಯರ, ಹಿಂದಿನವರ ಹೆಗಲಮೇಲೆ ನಿಂತಿರುವುದೇ ಮುಖ್ಯ ಕಾರಣವೆಂಬುದನ್ನು ಮರೆಯಲಾಗದು. ಕೆಲವು ವಿಚಾರಗಳನ್ನು ಬೇರೆಯವರಿಂದ ಸ್ವೀಕರಿಸಿದಾಗ ನಾವು ಯಾರಿಂದ ಅಥವಾ ಎಲ್ಲಿಂದ ಆ ಮಾತು ಗಳನ್ನು ಪಡೆದೆವೆಂಬುದನ್ನು ಮರೆಮಾಚದೆ ತಿಳಿಸುವುದರಲ್ಲಿ ತಪ್ಪಿಲ್ಲ; ಬದಲು ನಮ್ಮ ಶ್ರಮದ ಸಾರ್ಥಕ್ಯ ಹಾಗೆ ಪ್ರಾಮಾಣಿಕವಾಗಿ ತಿಳಿಸುವುದರಲ್ಲೇ ಅಡಗಿದೆ. ಹೀಗಾಗಿ ಈ ಹೊತ್ತಗೆಯ ಪುಟಪುಟವೂ ಅಡಿಟಿಪ್ಪಣಿಯನ್ನು ಪ್ರಕಟಿಸಿದ್ದರೆ ಅದು ಪಾಂಡಿತ್ಯದ ಪ್ರದರ್ಶನವಲ್ಲ, ಹಿರಿಯರಿಗೆ—ಹಿಂದಿನವರಿಗೆ ವಿನಯವಂತಿಕೆಯಿಂದ ಮರೆಯದೆ ಸಲ್ಲಿಸಿದ ಕೃತಜ್ಞತೆಯ ಕಾಣಿಕೆ.

ಇಲ್ಲಿ ಬಳಸಿರುವ ಕೆಲವು ಸಂಕೇತ ಹಾಗೂ ಪರಿಭಾಷೆಯ ವಿಚಾರವಲ್ಲಿ ಎರಡು ಮಾತು. ದಿವಂಗತರಾದವರನ್ನು ಆದಷ್ಟೂ ಏಕವಚನದಲ್ಲೇ ಸಂಬೋಧಿಸಿದೆ, ಇದನ್ನು ಅವಿನಯವೆಂದು ಯಾರೂ ತಿಳಿಯಬಾರದು. ವ್ಯಂಜನಗಳನ್ನು ವ್ಯಂಜನಾಂತವಾಗಿಯೇ ತೋರಿಸಬೇಕಾದುದು ಕ್ರಮವಾದರೂ ಅಲ್ಲಲ್ಲಿ ಸ್ವರಾಂತವಾಗಿ ಕೊಟ್ಟಿದೆ. ಪೂರ್ವ ದ್ರಾವಿಡ ಧ್ವನಿವ್ಯವಸ್ಥೆಯಲ್ಲಿ Laryngeal Theoryಯನ್ನು ಪ್ರಸ್ತಾಪಿಸಿಲ್ಲ. ಏಕೆಂದರೆ ಅದರ ವಿಚಾರದಲ್ಲಿ ಇನ್ನೂ ಭಿನ್ನಾಭಿಪ್ರಾಯವಿದೆ. ಇಂಗ್ಲಿಷಿನಲ್ಲಿ ಬರೆಯುವಾಗ ಧ್ವನಿವಿಜ್ಞಾನದ ವಿವರಣೆ ನೀಡುವ ಸಂದರ್ಭದಲ್ಲಿ ಕೆಲವು ನಿಯಮಗಳನ್ನು ರೂಪಿಸುತ್ತಾ vc, cv ಎಂದು ಬರೆಯುವರು. ಅಲ್ಲಿ v ಎಂದರೆ vowel, c ಎಂದರೆ consonant. ಕನ್ನಡದಲ್ಲೂ ಕೆಲವರು ಅವನ್ನೇ ಬಳಸಿದ್ದಾರೆ. ಆದರೆ ಇಲ್ಲಿ vಗೆ ಸಮನಾಗಿ ಸ ಎಂದೂ, c ಗೆ ಸಮನಾಗಿ ವ ಎಂದೂ ಕೊಟ್ಟಿದ್ದೇನೆ ; ಸ ಎಂದರೆ ಸ್ವರ, ವ ಎಂದರೆ ವ್ಯಂಜನ. ವಿದ್ವಾಂಸವರ್ಗ ಇದನ್ನು ಸರಿಕಾಣಿಸಿದರೆ ಬಳಕೆಗೆ ತರಬಹುದು, ಇಲ್ಲವಾದರೆ ಬಿಡಬಹುದು. Phonome ಎಂಬ ಇಂಗ್ಲಿಷ್ ಪದಕ್ಕೆ ಸಮನಾರ್ಥದಲ್ಲಿ ಧ್ವನಿಮಾ ಎಂಬ ಪದವನ್ನು ಇದುವರೆಗೂ ಬಳಸುತ್ತಿದ್ದರು, ಆದರೆ ಈಗ ಸ್ವನಿಮಾ ಎಂಬ ಪದ ರೂಢಿಗೆ ಬರುತ್ತಿದೆ. ಇಲ್ಲಿ ಅವೆರಡನ್ನೂ, ಪರಿಚಯವಾಗಲೆಂದು, ಬಳಸಿದೆ. ಉಳಿದ ಪಾರಿಭಾಷಿಕ ಪದಗಳಿಗೆ ಸಮಾನ ಇಂಗ್ಲಿಷ್ ಪದಗಳನ್ನು ಇಲ್ಲಿ ಕೊಟ್ಟಿಲ್ಲ. ಪಾರಿಭಾಷಿಕ ಪದಕೋಶವನ್ನು ಅನುಬಂಧದಲ್ಲಿ ಕೊಡುವ ಉದ್ದೇಶವಿತ್ತು, ಗ್ರಂಥದ ಗಾತ್ರ ಹೆಚ್ಚುತ್ತದೆಂಬ ಭೀತಿಯಿಂದ ಕೈಬಿಡಲಾಯಿತು. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯ ೪೯–೩ನೆಯ ಸಂಚಿಕೆಯಲ್ಲಿ ಪ್ರಕಟವಾಗಿರುವ ಭಾಷಾವಿಜ್ಞಾನದ ಪಾರಿಭಾಷಿಕ ಪದಕೋಶವನ್ನು ಕುತೂಹಲಿಗಳು ಉಪಯೋಗಿಸಿಕೊಳ್ಳಬಹುದು.

೧೯೫೭–೫೮ರಲ್ಲಿ, ನಾನು ಬಿ.ಎ. (ಆನರ್ಸ್) ಎರಡನೆಯ ವರ್ಷದಲ್ಲಿ ಓದುತ್ತಿದ್ದಾಗ, ಧಾರವಾಡದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ 'ತೀ. ನಂ. ಶ್ರೀ'ಯವರು ಆಗತಾನೆ ಮೈಸೂರಿಗೆ ಮತ್ತೆ ಬಂದರು. ಈ ಹೊಸದರಲ್ಲಿ, ಮಹಾರಾಜಾ ಕಾಲೇಜಿನ ಸುಪ್ರಸಿದ್ಧ 'ಜೂನಿಯರ್ ಬಿ.ಎ.' ಉಪನ್ಯಾಸ ಮಂದಿರದಲ್ಲಿ ಮೂರು ದಿನ ಭಾಷಾಶಾಸ್ತ್ರವನ್ನು ಕುರಿತು ವಿಶೇಷೋಪನ್ಯಾಸಗಳನ್ನು ಇತ್ತರು. ಅವರ ಮಾತಿನ ಮೋಡಿ, ನುಡಿಯನ್ನು ಕುರಿತ ದೀರ್ಘ ವಿವರಣೆ—ಇವು ನನ್ನ ಮನಸೆಳೆಯಿತು. ಅಲ್ಲಿಂದ ಮುಂದೆ, ಎಂ.ಎ. ತರಗತಿಯವರೆಗೂ ನನಗೆ ಅವರೇ ಭಾಷಾಶಾಸ್ತ್ರವನ್ನು ಬೋಧಿಸಿದರು. ಕೇವಲ ಕೆಲವು ದಿನಗಳು ಮಾತ್ರ ಎಂ.ಎ. ತರಗತಿಯಲ್ಲಿ—೧೯೫೮ರಲ್ಲಿ, ಸಾಮಾನ್ಯ ಭಾಷಾಶಾಸ್ತ್ರ (General Linguistics) ಕುರಿತು ಪಾಠ ಹೇಳಿದ ಕ. ವೆಂ. ರಾಘವಾಚಾರ್ ಅವರು ವೃತ್ತಿಯಿಂದ ನಿವೃತ್ತರಾಗಿ ಹೋಗುವಾಗ, 'ನೋಡ್ರಪ್ಪಾ, ನಾನು ಹೇಳ್ಳೋ ಭಾಷಾಶಾಸ್ತ್ರ ಹಳೇ ಕಾಲದ್ದು, ಎತ್ತಿನಗಾಡಿ ಇದ್ದ ಹಾಗೆ. ಈಗ ನಮ್ಮ ಶ್ರೀಕಂಠಯ್ಯ ಅಮೆರಿಕ—ಇಂಗ್ಲೆಂಡು ಅಂತ ಎಲ್ಲೆಲ್ಲೊ ಸುತ್ತಿ

ಕೊಂಡು ಬಂದಿದಾನೆ. ಅವನ ಪಾಠ ಒಳ್ಳೆ ರೋಲ್ಸ್ ರಾಯ್ಸ್ (Rolce Royce) ಕಾರಿನಲ್ಲಿ ಹೋದಹಾಗೆ. ಆ ಸುಖಾನ ನೀವು ಇನ್ನು ಅನುಭವಿಸಬಹುದು' ಅಂತ ಆಶೀರ್ವಾದ ಮಾಡಿಹೋದ ನೆನಪು ನನಗೆ ಈಗಲೂ ಚೆನ್ನಾಗಿದೆ.

ಅವರು ಹೇಳಿದುದು ಸರಿಯಾಗೇ ಇತ್ತು. ಅವರ ಅಭೀಪ್ಸೆ-ಹಾರೈಕೆಗಳಂತೆ ನಾನು, ನನ್ನ ಸಹಪಾಠಿಗಳೂ 'ತೀನಂಶ್ರೀ'ಯವರ ಜ್ಞಾನದ ತೇರಿನಲ್ಲಿ ಕುಳಿತು ಭಾಷಾ ಪ್ರಪಂಚದಲ್ಲಿ ಸಂಚರಿಸಿ ಅದರ ಅಂದ ಚೆಂದಗಳನ್ನೂ, ಆಶ್ಚರ್ಯ-ಅದ್ಭುತಗಳನ್ನೂ ವಿಲಾಸ-ವೈಭವಗಳನ್ನೂ ಸಂದರ್ಶಿಸಿದೆವು. ಆ ರಸಯಾತ್ರೆಯ ಬಹುಮಟ್ಟಿನ ಪರಿಣಾಮ ಈ ಪುಸ್ತಕದ ಪುಟಗಳಲ್ಲಿ ಪ್ರತಿಬಿಂಬಿಸಿದೆ. ಅವರ ಅರವತ್ತನೆಯ ವಯಸ್ಸಿನಲ್ಲಿ ಈ ಕಿರುಹೊತ್ತಗೆಯನ್ನು ಅರ್ಪಿಸುವ ಸದವಕಾಶ ದೊರೆತುದಕ್ಕಾಗಿ ಹರ್ಷವಾಗುತ್ತಿದೆ. ಮೈಸೂರಿನಲ್ಲಿ ೧೯೫೮ರಲ್ಲಿ ಆರು ವಾರಗಳವರೆಗೆ ನಡೆದ ಭಾಷಾಶಾಸ್ತ್ರದ ಬೇಸಿಕೆಯ ಶಾಲೆಗೆ ಪ್ರವೇಶ ದೊರಕಿಸಿಕೊಟ್ಟ ಪುಣೆಯ ಭಾಷಾಶಾಸ್ತ್ರದ ಶಾಲೆಯ ಅಧಿಕಾರ ವರ್ಗದವರಿಗೆ ನಾನು ಋಣಿ. ಆ ಅಲ್ಪ ಕಾಲದಲ್ಲಿ ಸುನೀತಕುಮಾರ ಚಟರ್ಜಿ, ಎಸ್. ಎಮ್. ಕತ್ರೆ, ಡಾ|| ಎಚ್. ಎ. ಗ್ಲೀಸನ್, ಡಾ|| ಭ. ಕೃಷ್ಣಮೂರ್ತಿ— ಮುಂತಾದ ಹಿರಿಯ ವಿದ್ವಾಂಸರ ಪಾಠಪ್ರವಚನ ಕೇಳುವ ಸದವಕಾಶ ದೊರೆಯಿತು. ಅದು ನಾನು ಎಂದೆಂದಿಗೂ ಮರೆಯಲಾಗದ ಸುಖ.

ಈ ಗ್ರಂಥವನ್ನು ಸಿದ್ಧಪಡಿಸಲು ಮೈಸೂರು ವಿಶ್ವವಿದ್ಯಾನಿಲಯದ ಪುಸ್ತಕಭಂಡಾರ, ಪ್ರಾಚ್ಯ ಸಂಶೋಧನಾಲಯ-ಮೈಸೂರು, ಮಿಥಿಕ್ ಸೊಸೈಟಿ, ಬೆಂಗಳೂರು-ಸರ್ಕಾರಿ ಕಲೆ ಮತ್ತು ವಿಜ್ಞಾನದ ಕಾಲೇಜು, ಬೆಂಗಳೂರು, ಕನ್ನಡ-ಕನ್ನಡ ನಿಘಂಟು ಕಚೇರಿ, ಬೆಂಗಳೂರು—ಮುಂತಾದ ಹಲವು ವಿದ್ಯಾಸಂಸ್ಥೆಗಳಲ್ಲಿರುವ ಪುಸ್ತಕ ಭಂಡಾರವನ್ನು ಉಪಯೋಗಿಸಿಕೊಂಡಿದ್ದೇನೆ. ಇಲ್ಲಿನ ಅಧಿಕಾರಿಗಳೆಲ್ಲರೂ ಅದರಲ್ಲಿಯೂ ಗೆಳೆಯರಾದ ಎನ್. ಬಸವಾರಾಧ್ಯರು ನಾನು ಹೋದಾಗ ಕೇಳಿದ ಪುಸ್ತಕಗಳನ್ನು ಒದಗಿಸಿಕೊಟ್ಟು ಉಪಕಾರ ಮಾಡಿದ್ದಾರೆ. ನಾನು ಸಿಕ್ಕಾಪಟ್ಟೆ ಹರಡಿಹೋಗುತ್ತಿದ್ದ ಪುಸ್ತಕಗಳನ್ನು ಬೇಸರವಿಲ್ಲದೆ ಅವರು ಜೋಡಿಸಿಟ್ಟುಕೊಳ್ಳುತ್ತಿದ್ದರು. ಅವರ ತಾಳ್ಮೆ ದೊಡ್ಡದು, ನನ್ನ ಆತುರ—ಕುತೂಹಲ ಚಿಕ್ಕದು.

ಹಲವು ವರುಷಗಳ ಹಿಂದೆಯೇ ಹೊರಬರಬೇಕಾಗಿದ್ದ ಈ ಕೃತಿ ಈಗಲಾದರೂ ಬೆಳಕು ಕಾಣಲು ಕಾರಣರಾದ ಹಿರಿಯರನ್ನು ಕೃತಜ್ಞತೆಯಿಂದ ನೆನೆಯುವುದು ನನ್ನ ಆದ್ಯ ಕರ್ತವ್ಯ. ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಶ್ರೀ ದೇ. ಜವರೇಗೌಡರು ತಮ್ಮ ಅಪಾರ ಶಿಷ್ಯವಾತ್ಸಲ್ಯದಿಂದ ನನ್ನ ಬೆನ್ನು ತಟ್ಟಿ ಹುರಿದುಂಬಿಸಿದ್ದಾರೆ, ಈ ಗ್ರಂಥವನ್ನು ಆಮೂಲಾಗ್ರವಾಗಿ ಅವಲೋಕಿಸಿ 'ಮುನ್ನುಡಿ' ಬರೆದು ಹರಸಿದ್ದಾರೆ; ಡಾ || ಆ. ನೇ. ಉಪಾಧ್ಯೆ, ಪ್ರಾ || ದೊ. ಲ. ನರಸಿಂಹಾ ಚಾರ್, ಪ್ರಾ|| ಎಂ. ಮರಿಯಪ್ಪಭಟ್, ಪ್ರಾ|| ಜಿ. ಬ್ರಹ್ಮಪ್ಪ ಇವರು ಬಹಳ ಹಿಂದಿ ನಿಂದಲೂ ನನ್ನ ಬರವಣಿಗೆಯನ್ನು ಮೆಚ್ಚುತ್ತಾ ಬಂದಿರುವುದಲ್ಲದೆ ಸಕಾಲಿಕ ಸೂಕ್ತ

ಸಲಹೆಗಳಿಂದ ಅದರ ಬೆಳವಣಿಗೆಗೆ ಕಾರಣರಾಗಿದ್ದಾರೆ; ಡಾ॥ ಆರ್. ಸಿ. ಹಿರೇಮಠ್ ಅವರಂತೂ ಅಭಿಮಾನದಿಂದ ನನ್ನ ಕೈಹಿಡಿದು ಮುಂದೆ ನಡೆಸಿದ್ದಾರೆ—ಈ ಗುರು ವೃಂದಕ್ಕೆ ಅನಂತ ನಮನಗಳು. ಈ ಗ್ರಂಥದ ಒಳಗಿನ ಹೂರಣ ನನ್ನದಾದರೂ ಹೊರಗಿನ ಒಪ್ಪ ಓರಣ ಬೆಂಗಳೂರಿನ ಬಿ. ಎಂ. ಶ್ರೀ ಅಚ್ಚುಕೂಟದವರದು, ಅದರ ಮೇಲ್ವಿಚಾರಕ ಶ್ರೀ ಶೇಷನಾರಾಯಣರದು; ಈ ಪುಸ್ತಕದ ಪ್ರಕಾಶನಕ್ಕೆ ಪ್ರೇರಕ ಶಕ್ತಿ ನನ್ನ ಗೃಹಲಕ್ಷ್ಮಿ, ಸೌ॥ ಕಮಲ. ಹೀಗೆ ಹಲವು ವಿಧದಲ್ಲಿ ನೆರವು ನೀಡಿರುವ ಎಲ್ಲರಿಗೂ ನನ್ನ ಅಂತಃಕರಣ ಪೂರ್ವಕ ನೆನಕೆಗಳು.

ಭಾಷೆಯನ್ನು ಕುರಿತು ವಿವೇಚಿಸುವ ವಿಭಾಗಕ್ಕೆ ಭಾಷಾಚರಿತ್ರೆ, ಭಾಷಾಶಾಸ್ತ್ರ, ಭಾಷಾ ಇತಿಹಾಸ, ಭಾಷಾವಿಜ್ಞಾನ, ಮುಂತಾದ ಹಲವು ಹೆಸರುಗಳಿಂದ ಕರೆಯು ವರು. ಇದು ದ್ರಾವಿಡ ಭಾಷೆಗಳನ್ನು ಕುರಿತದ್ದಾದುದರಿಂದ ಈ ಹೊತ್ತಗೆಗೆ 'ದ್ರಾವಿಡ ಭಾಷಾವಿಜ್ಞಾನ'ವೆಂಬ ಹೆಸರನ್ನು ಇಟ್ಟಿದೆ. ದ್ರಾವಿಡ ಭಾಷಾವಿಜ್ಞಾನದ ವಿಚಾರದಲ್ಲಿ ಕೆಲವು ಸಾಮಾನ್ಯ ರೂಪರೇಖೆಗಳನ್ನು ಮಾತ್ರ ಬಿಡಿಸಲು ಇಲ್ಲಿ ಯತ್ನಿಸಲಾಗಿದೆ. ಅಂದಮಾತ್ರಕ್ಕೆ ಇಂದೊಂದು ಸಮಗ್ರ ಕೃತಿಯೆಂಬ ಧಾರ್ಷ್ಟ್ಯ ಲೇಖಕನಿಗೆ ಎಳ್ಳನಿತೂ ಇಲ್ಲ—ಇದೊಂದು ಅಸಮಗ್ರ ಕೃತಿಯೆಂಬ ನಂಬಿಕೆಯಿದೆ. ಆದರೆ ಅಸಮರ್ಪಕ ಕೃತಿ ಯಲ್ಲವೆಂಬ ಅಚಲ ವಿಶ್ವಾಸವಿರುವುದರಿಂದ ಇದನ್ನು ಅಚ್ಚು ಮಾಡಿಸುವ ಕೆಚ್ಚು ತೋರಲಾಗಿದೆ: ಓದುಗರಿಗೆ ಇದು ಅಚ್ಚು-ಮೆಚ್ಚಾದರೆ ಲೇಖಕನಿಗೆ ಅದೇ ಸುಯೋಗ್ಯ ಸಂಭಾವನೆ. ಈ ಹೊತ್ತಗೆಯಲ್ಲಿ ಇದ್ದಿರಬಹುದಾದ ಅಪಕ್ವ ಅಭಿಪ್ರಾಯಗಳನ್ನು ಪಕ್ವಮತಿಗಳು ತೋರಿ ತಿದ್ದಬೇಕೆಂದು ನನ್ನ ವಿನಮ್ರ ಪ್ರಾರ್ಥನೆ.

ಇನ್ನು ಮುಂದೆಯಾದರೂ 'ಭಾಷಾವಿಜ್ಞಾನವನ್ನು ಕುರಿತು ಕನ್ನಡದಲ್ಲಿ ಕೃತಿಗಳು ಸಾಕಷ್ಟು ಇಲ್ಲವಲ್ಲ' ಎಂಬ ಸಂಕಟದ ಸಂಧ್ಯಾಕಾಲ ದೂರಸರಿದು, ನಮ್ಮಲ್ಲೂ ಅಂಥ ಗ್ರಂಥಗಳು ಹಲವಾರಿವೆ ಎಂಬ ಸಂತೃಪ್ತಿಯನ್ನೂ—ಸಂತೋಷವನ್ನೂ ಸೂಸುವ ಹೃದಯದ ಉಷಃಕಾಲ ಬೇಗನೆ ಬರಲಿ. ಈ ಕೃತಿಯನ್ನು ಕನ್ನಡಿಗರು ತಮ್ಮ ಎಂದಿನ ಸಂಸ್ಕೃತಾಂತಃಕರಣದಿಂದ ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

ಹಂಪನಾ

## ಎರಡನೆಯ ಮುದ್ರಣಕ್ಕೆ ಅರಿಕೆ

ದ್ರಾವಿಡ ಭಾಷಾವಿಜ್ಞಾನದ ಮೊದಲನೆಯ ಮುದ್ರಣದ ಪ್ರತಿಗಳು ಮುಗಿದು ಎರಡು ವರ್ಷವಾಯಿತು. ಕಳೆದ ವರ್ಷ ಇದರ ಪುನರ್ ಮುದ್ರಣದ ಸಿದ್ಧತೆಯಾಯಿತು. ಈಗ ಹೊರಬರುತ್ತಿರುವುದು ಪುನರ್ ಮುದ್ರಣವಷ್ಟೇ ಆಗಿರದೆ ತಕ್ಕಮಟ್ಟಿಗೆ ಪರಿಷ್ಕೃತ ಮುದ್ರಣವೂ ಆಗಿದೆ.

ಒಂದೇ ಹೊತ್ತಗೆಯ ಅಳತೆಯಲ್ಲಿ ಅಳವಡಿಸಲು ಕಷ್ಟಸಾಧ್ಯವಾದ ವಿಸ್ತಾರವಾದ ವಿಷಯವನ್ನು ಆರಿಸಿಕೊಂಡಿರುವುದರ ಎಚ್ಚರ ನನಗಿದೆ. ಈ ಹೊತ್ತಗೆಯ ಮೊದಲರ್ಧ ದ್ರಾವಿಡ ಭಾಷೆಗಳ ಅನಿಯೋಜಿತ ಪರಿಚಯಕ್ಕೆ ಮೀಸಲಾದಂತೆ ತೋರುತ್ತದೆ. ಮುಂದಿನ ಮುದ್ರಣದಲ್ಲಿ ಆಧುನಿಕ ವರ್ಣನಾತ್ಮಕ ವ್ಯಾಕರಣದ ಹಿನ್ನೆಲೆಯಲ್ಲಿ ಒಂದೊಂದು ಭಾಷೆಯ ಧ್ವನಿಮಾ ವಿನ್ಯಾಸ, ಆಕೃತಿಮ ವಿನ್ಯಾಸ, ಸಂಧಿವಿಚಾರ, ವಾಕ್ಯವಿವೇಚನೆ—ಮೊದಲಾದುವನ್ನು ವಿವರಿಸುವ ಉದ್ದೇಶವಿದೆ.

ಈ ಮುದ್ರಣಕ್ಕೆ ಸಂಬಂಧಿಸಿದಂತೆ ನನ್ನ ವಿಶೇಷ ನೆನಕೆಗಳ ಸಲ್ಲಿಕೆ—

ಇದರ ಪ್ರಕಾಶನದ ಹೊಣೆ ಹೊತ್ತ ಸನ್ಮಿತ್ರರಾದ ಶ್ರೀ. ಡಿ. ವಿ. ಕೆ. ಮೂರ್ತಿ, ಅಂದವಾಗಿ ಅನತಿಕಾಲದಲ್ಲೇ ಮುದ್ರಿಸಿಕೊಟ್ಟ ಶ್ರೀ. ಜಿ. ಎಚ್. ಕೃಷ್ಣಮೂರ್ತಿ, ಬೆಂಗಳೂರಿಗೆ ಬಂದಾಗ ತಪ್ಪದೆ ಮನೆಗೆ ಬಂದು ಹುರುಪು ಹೆಚ್ಚಿಸಿದ ಡಾ|| ಆ. ನೇ. ಉಪಾಧ್ಯೆ, ಸೂಕ್ತ ಸೂಚನೆಗಳಿತ್ತ ಡಾ|| ಬಿಳಿಗಿರಿ, ಪ್ರಾ|| ಬಿ. ವಿ. ವೀರಭದ್ರಪ್ಪ, ಶ್ರೀ ಕಲ್ಲೆ ಶಿವೋತ್ತಮ, ಮತ್ತು ದಿವಂಗತ ಶ್ರೀ. ಕಾ. ಸ. ಧರಣೇಂದ್ರಯ್ಯ. ಈ ಕೃತಿ ಸಿದ್ಧಪಡಿಸುವಲ್ಲಿ ನಾನು ನೆರವು ಪಡೆದ ಎಲ್ಲ ಮೂಲ ಬರೆಹಗಾರರು, ಬರವಣಿಗೆಯಲ್ಲೇ ನಾನು ತೊಡಗಲು ಬಿಡುವು ಮಾಡಿಕೊಡುತ್ತಿರುವ ಮಡದಿ ಕಮಲಾ ಹಂಪನಾ, ಮೊದಲ ಬಹುಮಾನವಿತ್ತು ಪ್ರೋತ್ಸಾಹಿಸಿದ ರಾಜ್ಯದ ಸಾಹಿತ್ಯ ಅಕಾಡೆಮಿ ಅವರುಗಳಿಗೆ.

ಇದರಲ್ಲಿ ಇರಬಹುದಾದ ಅರೆಕೊರೆಗಳನ್ನು ತಿಳಿದವರು ತೋರಿಸಬೇಕೆಂದು ಅರಿಕೆ.

ಹಂಪನಾ

## ಈ ಹೊತ್ತಗೆಯಲ್ಲಿ ಬಳಸಿರುವ ಕೆಲವು ಸಂಕೇತಗಳ ವಿವರ

ಕ—ಕನ್ನಡ

ತ—ತಮಿಳು

ತೆ—ತೆಲುಗು

ತು—ತುಳು

ಮರಾ—ಮರಾಠಿ

ಗ—ಗದಬ

ಗ(ಸ)—ಗದಬ(ಸಲೂರ್)

ಕುರು—ಕುರುಖ್

ಸಂ—ಸಂಸ್ಕೃತ

ಪ್ರೊ—ಪ್ರೊಫೆಸರ್

(ಸಂ)—ಸಂಪಾದಕ

ಲ್ಯಾ—ಲ್ಯಾಟಿನ್

ಪ್ರಾ॥—ಪ್ರಾಧ್ಯಾಪಕ

ರೆ—ರೆವರೆಂಡ್

ಪ್ರಕ—ಪ್ರಬುದ್ಧ ಕರ್ನಾಟಕ

ಏ—ಎ, ಏ

ಪೂದ್ರಾ—ಪೂರ್ವದ್ರಾವಿಡ

ಮ—ಮಲೆಯಾಳ

ಗೋಂ—ಗೋಂಡಿ

ನಾ—ನಾಯ್ಕಿ

ಕೋಲಾ—ಕೋಲಾಮಿ

ತೊ—ತೊದ

ಕ್ರಿಶ—ಕ್ರಿಸ್ತಶಕ

ಗು—ಗುಜರಾತಿ

ವಿಪ್ರ—ವಿಭಕ್ತಿಪ್ರತ್ಯಯ

ಶಮದ—ಶಬ್ದಮಣಿದರ್ಪಣ

ಉದಾ—ಉದಾಹರಣೆ

ಏವ—ಏಕವಚನ

ಕಸಾಪಪ—ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ

ಇ—ಇ, ಈ

ದ್ವಿ. ಮು—ದ್ವಿತೀಯ ಮುದ್ರಣ

ಪ—ಪರ್ಜಿ

ಪಾ—ಪಾಳಿ

ಪ್ರಾ—ಪ್ರಾಕೃತ

ದ್ರಾ—ದ್ರಾವಿಡ

ಕಭಾಭೂ—ಕರ್ನಾಟಕ ಭಾಷಾಭೂಷಣ

ಬ್ರಾ—ಬ್ರಾಹೂಈ

ಕೊಡ—ಕೊಡಗು

ಹಿಂ—ಹಿಂದಿ

ಹಗ—ಹಳಗನ್ನಡ

ಹೋ—ಹೋಲಿಸಿ

ಹೊಗ—ಹೊಸಗನ್ನಡ

ಪೂಸ್ವ—ಪೂರ್ವ ಸ್ವರ

ಸಂವಿ—ಸಂಬೋಧನಾವಿಭಕ್ತಿ

ಡಾ॥—ಡಾಕ್ಟರ್

ಪು—ಪುಟ

*

# ABBREVIATIONS

AO : Acta Orientalia
AORM : Annals of Oriental Research, Madras
BDCPRI : Bulletin of the Deccan College Post-Graduate and Research Institute, Poona
BRVRI : Bulletin of the Rama Varma Research Institute, Trichur
BSO(A)S : Bulletin of the School of Oriental (and African) Studies, London.
ERM : Educational Review, Madras
IA : Indian Antiquary
IL : Indian Linguistics
IHQ : Indian Historical Quarterly
JAOS : Journal of the American Oriental Society
JAU : Journal of the Annamalai University
JBBRAS : Jouraal of the Bombay Branch of the Royal Asiatic Society : JASB (Bengal Branch).
JOR : Journal of the Oriental Research
Lg : Language, Journal of the Linguistic Society of America.
NIA : New Indian Antiquary, Poona
PAPS : Proceedings of the American Philosophical Society
OC : All-India Oriental Conference
QJMS : Quarterly Journal of the Mythic Society, Bangalore
TC : Tamil Culture, Madras
TPS : Transactions of the Philological Society, London
UCR : University of Ceylon Review

*—ಪುನರಚಿತ, Reconsrructed
>—ಇದರ ಹಿಂದಿನ ಪದದಿಂದ ಮುಂದಿನ ಪದ ಬಂದಿದೆ
>—ಇದರ ಹಿಂದಿರುವ ಪದ ಮುಂದಿರುವ ಪದದಿಂದ ಬಂದಿದೆ
∽—ಸಮಾನಾರ್ಥಕ ರೂಪಗಳು

[ ]—ಧ್ವನಿಲೇಖ
/ /—ಧ್ವನಿಮಾಲೇಖ
– × —ಪದಾಂತ್ಯ ಧ್ವನಿ
× – —ಪದದ ಆದಿಯ ಧ್ವನಿ
– × – —ಪಸ ಮಧ್ಯ ಧ್ವನಿ

# ಪರಿವಿಡಿ


| | | |
|---|---|---|
| | ಮುನ್ನುಡಿ ... ... ... ... | v |
| | ಮೊದಲಮಾತು ... ... ... ... | xi |
| | ಎರಡನೆಯ ಮುದ್ರಣಕ್ಕೆ ಅರಿಕೆ ... ... ... | xvi |
| | ಸಂಕೇತಸೂಚಿ ... ... ... ... | xvii |
| ೧. | ಹಿನ್ನೆಲೆ ... ... ... .... | ೧ |
| ೨. | ದ್ರಾವಿಡರು ... ... ... ... | ೨೪ |
| ೩. | ದ್ರಾವಿಡ ಶಬ್ದದ ವಿಶ್ಲೇಷಣೆ ... ... ... | ೨೯ |
| ೪. | ದ್ರಾವಿಡ ಹಾಗೂ ಸಿಥಿಯನ್ ಭಾಷೆಗಳು ... ... ... | ೩೪ |
| ೫. | ದ್ರಾವಿಡ ಭಾಷೆಗಳು: ಜನಸಂಖ್ಯೆ ... ... ... | ೪೫ |
| ✓೫. | (ಅ) ದ್ರಾವಿಡ ಭಾಷೆಗಳು ... ... ... ... | ೪೯ |
| ✓೬. | ಕನ್ನಡ ವರ್ಣಮಾಲೆ ... ... ... ... | ೬೧ |
| ೭. | ತಮಿಟ್>ತಮಿಳು ... ... ... ... | ೮೩ |
| ೮. | ಮಲೆಯಾಳ(ಮ್) ... ... ... ... | ೯೪ |
| ೯. | ತೆಲುಗು ಭಾಷೆ ... ... ... ... | ೧೦೦ |
| ೧೦. | ಕೊಡಗು ಭಾಷೆ ... ... ... ... | ೧೧೨ |
| ೧೧. | ತುಳು ಭಾಷೆ ... ... ... ... | ೧೧೭ |
| ೧೨. | ಶ್ರಾವಣ ದ್ರಾವಿಡ ಭಾಷೆಗಳು: ಗೋಂಡಿ ಭಾಷೆ ... ... | ೧೨೬ |
| ೧೩. | ತೊದ ಭಾಷೆ ... ... ... ... | ೧೩೧ |
| ೧೪. | ಬ್ರಾಹೂಈ ಭಾಷೆ ... ... ... ... | ೧೩೬ |
| ೧೫. | ಕುಈ ಭಾಷೆ ... ... ... ... | ೧೪೧ |
| ೧೬. | ಕುವಿ ಭಾಷೆ ... ... ... ... | ೧೪೫ |
| ೧೭. | ಪೆಂಗು ಭಾಷೆ ... ... ... ... | ೧೪೭ |
| ೧೮. | ಕೋಲಾಮಿ ಭಾಷೆ ... ... ... ... | ೧೪೮ |
| ೧೯. | ಪರ್ಜಿ ಭಾಷೆ ... ... ... ... | ೧೫೪ |
| ೨೦. | ಮಲ್ತೊ ಭಾಷೆ ... ... ... ... | ೧೫೯ |
| ೨೧. | ಒಲ್ಲಾರಿ ಭಾಷೆ ... ... ... ... | ೧೬೧ |
| ೨೨. | ಕೊರಗರ ಭಾಷೆ ... ... ... ... | ೧೬೨ |
| ೨೩. | ಗದಬ ಭಾಷೆ ... ... ... ... | ೧೬೪ |
| ೨೪. | ಕೊಯ ಭಾಷೆ ... ... ... ... | ೧೬೫ |
| ೨೫. | ಕೊಂಡ ಭಾಷೆ ... ... ... ... | ೧೬೬ |

೨೬. ಬಡಗ ಭಾಷೆ ... ... ... ... ೧೬೮
೨೭. ಕೋತ ಭಾಷೆ ... ... ... ... ೧೭೫
೨೮. ಕುರುಖ್ ಭಾಷೆ ... ... ... ... ೧೭೯
೨೯. ನಾಯಿಕಿ ಭಾಷೆ ... ... ... ... ೧೮೧
೩೦. ವಿಭಕ್ತಿ ; ಪ್ರತ್ಯಯಗಳು ... ... ... ೧೮೭
೩೧. ಸರ್ವನಾಮಗಳು ... ... ... ೨೧೫
೩೨. ದ್ರಾವಿಡ ಭಾಷೆಗಳಲ್ಲಿ ವಚನ ... ... ... ೨೩೧
೩೩. ಗುಣವಾಚಕಗಳು ... ... ... ... ೨೩೮
೩೪. ದ್ರಾವಿಡ ಭಾಷೆಗಳಲ್ಲಿ ಲಿಂಗವ್ಯವಸ್ಥೆ ... ... ... ೨೪೫
೩೫. ನಿಷೇಧಾರ್ಥಕ ಪ್ರತ್ಯಯಗಳು ... ... ... ೨೫೬
೩೬. ಕರ್ಮಣಿ ಪ್ರಯೋಗ ... ... ... ... ೨೫೯
೩೭. ಕ್ರಿಯಾಪದ ... ... ... ... ೨೬೪
೩೮. ಸಂಖ್ಯಾವಾಚಕ ... ... ... ... ೨೭೧
೩೯. ಮೂಲದ್ರಾವಿಡ ಭಾಷೆಯ ಧ್ವನಿವ್ಯವಸ್ಥೆ ... ... ... ೨೮೩
೪೦. ಮೂಲದ್ರಾವಿಡದಲ್ಲಿ ಸ್ವರವ್ಯವಸ್ಥೆ ... ... ... ೩೦೨
೪೧. ಘೋಷ ಹಾಗೂ ಅಘೋಷ ಧ್ವನಿ ... ... ... ೩೨೩
೪೨. ಟಕಾರದ ಚರಿತ್ರೆ : / ಟ್ / ... ... ... ೩೪೨
೪೩. ಪಕಾರದ ಚರಿತ್ರೆ : / ಪ್ – / ... ... ... ೩೫೦
೪೪. ಟ–ತಕಾರಗಳ ಚರಿತ್ರೆ : / ಟ್ – / ತ್ – / ... ... ... ೩೫೯
೪೫. ರೇಫ ಮತ್ತು ಶಕಟರೇಫ : / ರ್ / – / ಱ್ / ... ... ... ೩೬೫
೪೬. ಕಕಾರ, ಚಕಾರ : / ಕ್ – /, / ಚ್ – / ... ... ... ೩೭೮
೪೭. ಳಕಾರ : / ಳ್ _ ... ... ... ... ೩೮೮
೪೮. ವ / ಬಕಾರ : / ವ್ – /, / ಬ್ – / ... ... ... ೩೯೩
೪೯. ಉಪಭಾಷಾ ಪರಿವೀಕ್ಷಣೆ ... ... ... ೩೯೭
ಇಂಗ್ಲಿಷ್ ಗ್ರಂಥಸೂಚಿ ... ... ... ... ೪೪೬
ಕನ್ನಡ ಗ್ರಂಥ ಸೂಚಿ ... ... ... ... ೪೬೧

# ೧

# ಹಿನ್ನೆಲೆ

೧೯೬೧ರ ಜನಗಣತಿಯಂತೆ ಭಾರತದಲ್ಲಿ ೧೦೧೬ ವರ್ಗೀಕೃತ ಭಾಷೆಗಳೂ ೫೧೪ ಅವರ್ಗೀಕೃತ ಭಾಷೆಗಳೂ ಇವೆ. ವರ್ಗೀಕೃತ ಭಾಷೆಗಳು ನಾಲ್ಕು ಭಾಷಾಪರಿವಾರಗಳಿಗೆ ಅಳವಡುತ್ತವೆ.

ಭಾರತದಲ್ಲಿ ಪ್ರಧಾನವಾಗಿ ಇರುವ ನಾಲ್ಕು ಭಾಷಾಪರಿವಾರಗಳಲ್ಲಿ ಎರಡನೆಯ ಬಹು ದೊಡ್ಡ ಪರಿವಾರ ದ್ರಾವಿಡ ಭಾಷಾಪರಿವಾರ. ಅವಿಭಾಜ್ಯ ಭಾರತದ ಒಟ್ಟು ಜನಸಂಖ್ಯೆಯ ಶೇಕಡ ೨೦ ರಷ್ಟು ಅಥವಾ ವಿಭಾಜ್ಯ ಭಾರತದ ಒಟ್ಟು ಜನಸಂಖ್ಯೆಯ ೨೪.೪೭%ರಷ್ಟು ದ್ರಾವಿಡ ಭಾಷೆಗಳನ್ನು ಆಡುವವರಿದ್ದಾರೆ. ೧೯೬೧ರ ಜನಗಣತಿಯ ವರದಿಯ ಅನುಸಾರವಾಗಿ ದ್ರಾವಿಡ ಭಾಷೆ ಮತ್ತು ಉಪಭಾಷೆಗಳ ಸಂಖ್ಯೆ ಸುಮಾರು ೧೫೩. ಇವುಗಳಲ್ಲಿ ನಾಲ್ಕು ಭಾಷೆಗಳು ಪ್ರಮುಖವಾಗಿವೆ—ಕನ್ನಡ, ತೆಲುಗು, ತಮಿಳು ಮತ್ತು ಮಲೆಯಾಳ. ಭಾರತ ರಾಜ್ಯಾಂಗದ ಎಂಟನೆಯ ನಿಬಂಧನೆಯಲ್ಲಿ ನಮೂದಿಸಿರುವ, ಭಾರತದ ಹದಿನಾಲ್ಕು ರಾಷ್ಟ್ರಭಾಷೆಗಳಲ್ಲಿ ಈ ನಾಲ್ಕು ದ್ರಾವಿಡ ಭಾಷೆಗಳು ಸೇರಿವೆ. ಇದರಿಂದ ದ್ರಾವಿಡ ಭಾಷೆಗಳಲ್ಲಿ ಈ ನಾಲ್ಕು ಭಾಷೆಗಳು ಹಿರಿಯ ಭಾಷೆಗಳೆಂದು ಸ್ಪಷ್ಟವಾಗುತ್ತದೆ. ದ್ರಾವಿಡ ಭಾಷೆಗಳನ್ನು ಆಡುವವರ ಒಟ್ಟು ಜನಸಂಖ್ಯೆಯಲ್ಲಿ ಈ ನಾಲ್ಕು ಹಿರಿಯ ಭಾಷೆಗಳನ್ನು ಆಡುವವರ ಸಂಖ್ಯೆ ಶೇಕಡ ೯೫.೫೮ರಷ್ಟು.

೧೯೦೧ ರಿಂದ ೧೯೨೭ರವರಗೆ ಭಾರತದ ಭಾಷೆಗಳ ಪರಿವೀಕ್ಷಣೆ (*Linguistic Survey of India*) ನಡಸಿದ ಸರ್ ಜಾರ್ಜ್ ಎಬ್ರೆಹಾಮ್ ಗ್ರಿಯೆರ್ಸನ್ನನು ಮದರಾಸು, ಹೈದರಾಬಾದು ಮತ್ತು ಮೈಸೂರು ಸಂಸ್ಥಾನಗಳಲ್ಲಿ ಭಾಷಾಸಮೀಕ್ಷೆ ನಡಸಲಿಲ್ಲವಾಗಿ, ದ್ರಾವಿಡ ಭಾಷೆಗಳ ಸಮಗ್ರ ವಿವರಣೆ ಅವನ ಬರವಣಿಗೆಯಲ್ಲಿ ಬರಲಾಗಲಿಲ್ಲ. ಇದಲ್ಲದೆ ಆ ಸಮೀಕ್ಷೆಯಲ್ಲಿ ಕಾಣುವ ಕೊರತೆಯೆಂದರೆ ತುಳು, ಕೊಡಗು, ತೊದ ಮತ್ತು ಕೋತ-ಭಾಷೆಗಳ ಪರಿಚಯ ಇಲ್ಲದಿರುವುದು. ಆದರೂ ಆತ ಆದಷ್ಟೂ ಸಮಂಜಸವಾದ ವಿವರ ನೀಡಲು ಪ್ರಯತ್ನಿಸಿದ್ದಾನೆಂಬುದನ್ನು ಮರೆಯುವಂತಿಲ್ಲ. ಅವನ ಬರೆಹದಿಂದಾಗಿ ಮುಂದೆ ಬಂದ ಭಾಷಾವಿಜ್ಞಾನಗಳಲ್ಲಿ ಬಹು ಜನರು ಈ ದ್ರಾವಿಡ ಭಾಷೆಗಳ ಅಭ್ಯಾಸಕ್ಕೆ ತೊಡಗಿದರು.

ದ್ರಾವಿಡ ಭಾಷಾ ಪರಿವಾರ ಜಗತ್ತಿನ ಹಿರಿಯ ಭಾಷಾವರ್ಗಗಳ ಸಾಲಿನಲ್ಲಿ ಐದನೆಯ ಅಥವಾ ಆರನೆಯ ಸ್ಥಾನವನ್ನು ಪಡೆಯುತ್ತದೆ. ಇಷ್ಟು ಪ್ರಮುಖ ಹಾಗೂ ಪ್ರಾಚೀನ ಭಾಷಾ ಪರಿವಾರದ ಅಲಿಪಿ ಭಾಷೆಗಳ ಹೆಚ್ಚಿನ ಅಭ್ಯಾಸಕ್ಕೆ ವಿದ್ವಾಂಸರು ತೊಡಗಿದ್ದು ಈ ಶತಮಾನದಲ್ಲೇ ಎನ್ನಬಹುದು. ಈ ಇಪ್ಪತ್ತನೆಯ ಶತಮಾನದಲ್ಲಿ ಭಾಷಾವಿಜ್ಞಾನಿಗಳು ಸುವ್ಯವಸ್ಥಿತವಾದ ಇತಿಹಾಸ ಹಾಗೂ ಸಾಹಿತ್ಯ ಸಾಮಗ್ರಿ, ಸಂಪತ್ತುಳ್ಳ ಭಾಷೆಗಳನ್ನು ಬಿಟ್ಟು ಸಾಹಿತ್ಯವಾಗಲಿ ಅಥವಾ ಬೇರೆ ಯಾವುದೇ ಬರವಣಿಗೆಯಾಗಲಿ ಇಲ್ಲದ ಆದಿವಾಸಿ ಜನಾಂಗಗಳ ಸಂಪರ್ಕ ಬೆಳಸಿ, ಆ ಗುಡ್ಡಗಾಡಿನವರ ಭಾಷೆಯ ಮೂಲಧ್ವನಿಗಳನ್ನೂ, ವ್ಯಾಕರಣ ನಿಯಮಗಳನ್ನೂ ಗುರುತಿಸ ತೊಡಗಿದುದು ಹೆಮ್ಮೆಯ ಸಂಗತಿ. ಇದರಿಂದಾಗಿ ಅಲಿಪಿ ಭಾಷೆಗಳ ಬಗೆಗೂ ತಕ್ಕ ಮಟ್ಟಿಗೆ ಕೆಲಸ ನಡೆದಿದೆ. ದ್ರಾವಿಡ ಭಾಷಾವಿಜ್ಞಾನವನ್ನು ಮೂರು ಮುಖ್ಯ ದೃಷ್ಟಿಗಳಿಂದ ಅಭ್ಯಾಸ ಮಾಡಬಹುದು :

೧. ಕೇವಲ ಭಾಷಾವಿಜ್ಞಾನ ದೃಷ್ಟಿಯಿಂದ.
೨. ಇಂಡೊ-ಯುರೋಪಿಯನ್ (ಆರ್ಯನ್) ಮತ್ತು ದ್ರಾವಿಡ ಭಾಷೆಗಳ ದೃಷ್ಟಿಯಿಂದ.
೩. ದ್ರಾವಿಡ ಮತ್ತು ಇತರ ಭಾಷೆಗಳ ದೃಷ್ಟಿಯಿಂದ.

ದ್ರಾವಿಡ ಭಾಷೆಗಳನ್ನು ಕುರಿತ ಕ್ರಮಬದ್ಧವಾದ ಅಭ್ಯಾಸ ಸರ್ ಫ್ರಾನ್ಸಿಸ್ ವೈಟ್ ಎಲ್ಲಿಸ್, ರ್‍ಯಾಸ್‌ಮಸ್ ರಾಸ್ಕ್, ಶ್ರೀರಂಗಪಟ್ಟಣದ ಕೃಷ್ಣಮಾಚಾರಿ, ಕಾಲ್ಡ್‌ವೆಲ್ ಮೊದಲಾದ ಮಹನೀಯರಿಂದ ಮೊದಲುಗೊಂಡು ಇಂದಿಗೂ ನಡೆಯುತ್ತಿದೆ. ಕಾಲ್ಡ್‌ವೆಲ್ಲನ ಮಾದರಿಯನ್ನು ಮುಂದುವರಿಸಿ ಜೂಲ್ಸ್ ಬ್ಲಾಕ್ ಒಳ್ಳೆಯ ಕಿರುಹೊತ್ತಗೆಯನ್ನು ಹೊರತಂದಿದ್ದಾನೆ.[1] ಒಂದು ದಶಕದ ಹಿಂದೆ ಹೊರಬಂದ ದ್ರಾವಿಡ ಭಾಷಾ ಜ್ಞಾತಿಕೋಶ ಈ ಕ್ಷೇತ್ರದಲ್ಲಿ ಒಂದು ಮಹತ್ತರವಾದ ಮೈಲಿಗಲ್ಲು.[2] ದ್ರಾವಿಡವರ್ಗದ ಬೇರೆಬೇರೆ ಭಾಷೆಗಳನ್ನು ಕುರಿತು, ಈ ಅಪೂರ್ವ ಸೋದರರಂತಿರುವ ಬರೋ ಮತ್ತು ಎಮಿನೋ ಅವರಲ್ಲದೆ, ಇತರರೂ ಐದಾರು ಬಿಡಿಹೊತ್ತಗೆಗಳನ್ನು ಹೊರತಂದಿದ್ದಾರೆ.[3] ಒಂಬತ್ತು ವರುಷಗಳ ಕೆಳಗೆ ಹೊರಬಂದ ಭದ್ರಿರಾಜು ಕೃಷ್ಣ

---

[1] Jules Bloch, *Grammatical Structure of Dravidian Languages :* English Tr. R. G. Harshe, 1954.

[2] T. Burrow and M. B. Emeneau, *Etymological Dictionary of Dravidian Languages*, 1961, Supplement, 1968.

[3] T. Burrow, *A Pargi Language*, 1953.
M. B. Emeneau, *Kolami : A Dravidian Language*, 1961.

ಮೂರ್ತಿಯವರು ಬರೆದ ತೆಲುಗು ಭಾಷೆಯ ಮೂಲ ಧಾತುಗಳು ಎಂಬ ಬೃಹದ್ಗ್ರಂಥ ಅಮೂಲ್ಯ ಕಾಣಿಕೆ.[1]

ಇಷ್ಟಾದರೂ ದ್ರಾವಿಡ ಭಾಷೆಗಳನ್ನು ಕುರಿತು ಆಗಬೇಕಾದಷ್ಟು ಕೆಲಸ ಆಗಿರುವಂತೆ ತೋರುವುದಿಲ್ಲ. "ಐತಿಹಾಸಿಕ ಮತ್ತು ವರ್ಣನಾತ್ಮಕ ಭಾಷಾವಿಜ್ಞಾನ ಕಾಲ್ಡ್‌ವೆಲ್ಲನ ಕಾಲದಿಂದೀಚೆಗೆ ಜಗತ್ತಿನ ಎಲ್ಲೆಡೆಗಳಲ್ಲೂ ಮಹತ್ತರವಾದ ಮುನ್ನಡೆ ಪಡೆದಿದೆ. ಹೀಗಿದ್ದೂ ದ್ರಾವಿಡಭಾಷಾ ಕ್ಷೇತ್ರದಲ್ಲಿ ಆಗಿರುವ ಮುಂಬರಿಕೆ ಮಾತ್ರ, ಒಂದು ಶತಮಾನದ ದೊಡ್ಡ ಅವಧಿಯ ಹರಹಿನಲ್ಲಿ ಎಷ್ಟು ಕೆಲಸ ಆಗಬಹುವೆಂದು ನಿರೀಕ್ಷಿಸಬಹುದೊ ಅಷ್ಟು ಸಮ ಪ್ರಮಾಣದ್ದಾಗಿಲ್ಲ"[2] ಎಂಬ ಅತೃಪ್ತಿಯ ಧ್ವನಿಯನ್ನು ಅನುಮೋದಿಸದೆ ವಿಧಿಯಿಲ್ಲ. ಕಾಲ್ಡ್‌ವೆಲ್ಲನು ಬರೆದ ಬೃಹತ್ ಗ್ರಂಥದ ಸಮಾನ, ಅದರ ಲೋಪದೋಷಗಳು ಏನೇ ಇರಲಿ, ಇನ್ನೂ ಹತ್ತಾರು ಉತ್ತಮ ಕೃತಿಗಳು, ಅವನ ತರುವಾಯ ಕಳೆದುಹೋದ, ಒಂದು ಶತಮಾನದ ಸುದೀರ್ಘಕಾಲದ ಅವಧಿಯಲ್ಲಿ ರಚಿತವಾಗದಿರುವುದು ತುಂಬಲಾಗದ ಕೊರತೆ. ಮುಖ್ಯ ಕೊರತೆ ವಿದ್ವಾಂಸರು, ಸುಸಮರ್ಥರು ಇಲ್ಲವೆಂಬುದಲ್ಲ. ಆದರೆ ಅವರ ಜ್ಞಾನದ ಒರತೆ, ಗಮನ ಮತ್ತು ಅಮೂಲ್ಯ ವೇಳೆ ಈ ಕಡೆಗೆ ಹೊರಳದಿರುವುದು.

ದ್ರಾವಿಡ ಭಾಷೆಗಳನ್ನು ಕುರಿತ ಪ್ರೌಢಗ್ರಂಥಗಳ ರಚನೆಗೆ ಸಾಧನ ಸಾಮಗ್ರಿ ಸಾಕಷ್ಟು ಸಿದ್ಧವಾಗಿದೆ; ಕಾಲ ಈಗ ಸರಿಯಾಗಿ ಪಕ್ವವಾಗಿದೆ. ಬಹುಶಃ ಇನ್ನು ಮುಂದೆ ಈ ದಿಶೆಯಲ್ಲಿ ನಾವು ಅನೇಕ ಪ್ರಮಾಣ ಗ್ರಂಥಗಳನ್ನೂ ನಿರೀಕ್ಷಿಸಬಹುದು. ಆದರೂ ಈ ಕಾರ್ಯವನ್ನು ವಿಶ್ವವಿದ್ಯಾಲಯದವರೂ, ಸರ್ಕಾರದವರೂ ವಹಿಸಿಕೊಳ್ಳಬೇಕೆಂದು ತೋರುತ್ತದೆ. "ದ್ರಾವಿಡ ಭಾಷೆಯಲ್ಲಿನ ಮಧ್ಯದ್ರಾವಿಡ ಗುಂಪಿನ ಭಾಷೆಗಳ ಎಣಿಕೆಯನ್ನು ಪರಿಭಾವಿಸಿ. ಇದು ಈ ಕ್ಷೇತ್ರದಲ್ಲಿ ಇನ್ನೂ ಮಾಡಬೇಕಾದ ಕೆಲಸ ಎಷ್ಟೊಂದು ಇದೆ ಎಂಬುದನ್ನು ವಿಶದಪಡಿಸುತ್ತದೆ. ಈ ಕೆಲಸ ಚೆನ್ನಾಗಿ ನಡೆದ ಮೇಲೆ ಮಾತ್ರ ದ್ರಾವಿಡ ಭಾಷೆಗಳ ತುಲನಾತ್ಮಕ ಅಭ್ಯಾಸವನ್ನು ಸರಿಯಾದ ಬುನಾದಿಯ ಮೇಲೆ ನಡಸುವುದು ಸಾಧ್ಯವಾಗುತ್ತದೆ. ಈ ಕೆಲಸ ತ್ವರಿತವಾಗಿ ನಡೆಯಬೇಕಾದುದು ಕೂಡ ಮುಖ್ಯವಾಗಿದೆ. ಏಕೆಂದರೆ ತಡಮಾಡಿದಷ್ಟೂ ಆಧುನಿಕ ವಿದ್ಯಾಭ್ಯಾಸ ಹಾಗೂ ಹೊಸ ನಾಗರಿಕತೆಯ ಪ್ರಭಾವದಿಂದ ಆ ಭಾಷೆಗಳು ಅಳಿದು ಹೋಗಬಹುದು. ಅದರಲ್ಲಿಯೂ ವಿಶೇಷವಾಗಿ ಇದು ದಕ್ಷಿಣಭಾರತದ ವಿಶ್ವವಿದ್ಯಾಲಯಗಳ ಆದ್ಯ ಕರ್ತವ್ಯವಾಗಿದೆ. ಅವರುಗಳು ಕೂಡಲೆ ತಕ್ಕ ವ್ಯವಸ್ಥೆಮಾಡಿ ದ್ರಾವಿಡ ಪರಿವಾರದ ಅಮೂಲ್ಯ ಆಸ್ತಿಯಾಗಿ ಉಳಿದಿರುವ ಭಾಷೆಗಳನ್ನು ಕಾಪಾಡಬೇಕು. ದ್ರಾವಿಡ ಭಾಷಾವಿಜ್ಞಾನದ ಒಂದು ವೈಜ್ಞಾನಿಕ ಅಭ್ಯಾಸವನ್ನು ಬಹುಕಾಲದಿಂದ

---

[1] Bhadriraju Krishnamurthi, *Telugu Verbal Bases*, A Comparative and Descriptive Study, 1961.

[2] ಅದೇ : ಮುನ್ನುಡಿ, ಪುಟ vii.

ಕಡೆಗಣಿಸಲಾಗಿತ್ತು. ಇಷ್ಟು ಮುಖ್ಯವಾದ ಮತ್ತಾವ ಭಾಷಾ ಪರಿವಾರವನ್ನೂ ಹೀಗೆ ನಿರ್ಲಕ್ಷಿಸಿರಲಿಲ್ಲ. ಆದರೆ ಕಡೆಗೆ ಈಗ ಆ ನಿರ್ಲಕ್ಷ್ಯ ದೃಷ್ಟಿ ವ್ಯತ್ಯಾಸವಾಗುತ್ತಿರುವ ಸ್ವಾಗತಾರ್ಹ ಸೂಚನೆಗಳು ಕಾಣುತ್ತಿವೆ. ತುಲನಾತ್ಮಕ ವ್ಯಾಸಂಗವೇನಿದ್ದರೂ ಹೊಸ ಹೊಸ ಸಾಮಗ್ರಿ ಸಂಕಲನದ ಪ್ರಧಾನ ಕೆಲಸದ ಜೊತೆ ಜೊತೆಯಲ್ಲೇ ನಡೆಯು ವುದು ಲೇಸು."[1]

ದ್ರಾವಿಡ ಭಾಷೆಗಳ ಸಂಖ್ಯೆ, ಸಂಶೋಧನೆ ಮುಂದುವರಿದಷ್ಟೂ, ದಿನೇ ದಿನೇ ಇನ್ನೂ ಹೆಚ್ಚುತ್ತಲಿದೆ. ಪಂಚದ್ರಾವಿಡವೆಂಬ ಸಂಖ್ಯೆ ಮೀರಿ ಇಂದು, ಈ ಲೆಕ್ಕ ಅಷ್ಟಾದಶ ದ್ರಾವಿಡ ಭಾಷೆಗಳಾಗಿ, ಮತ್ತೆ ಆ ಸಂಖ್ಯೆಯನ್ನೂ ದಾಟುತ್ತಲಿದೆ. ಸುಮಾರು ಇಪ್ಪತ್ತೈದು ದ್ರಾವಿಡ ಭಾಷೆಗಳವರೆಗೂ ಈಗ ಪರಿಗಣನೆಯಾಗಿದೆ. "ಮಧ್ಯ ಭಾರತದ ಎಲ್ಲ ದ್ರಾವಿಡ ಭಾಷೆಗಳೂ ಪತ್ತೆಯಾಗಿವೆ ಎಂಬುದನ್ನು ಇನ್ನೂ ಖಚಿತವಾಗಿ ಹೇಳಬರುವಂತಿಲ್ಲ. ಆದರೂ ೧೯೫೦ರಿಂದ ಈಚೆಗೆ ನಡೆದ ಭಾಷಾ ಪರಿವೀಕ್ಷಣೆಯಿಂದ ಬಹುಮಟ್ಟಿನ ದ್ರಾವಿಡ ಭಾಷೆಗಳೆಲ್ಲಾ ಸಂಶೋಧನೆಗೆ ಸಿಕ್ಕಿವೆ ಯೆಂದು ತಿಳಿಯಬಹುದು."[2]

ದ್ರಾವಿಡಭಾಷಾ ಪರಿವಾರವನ್ನು ಮುಖ್ಯವಾಗಿ ಎರಡು ಬಗೆಯಾಗಿ ವಿಭಾಗಿಸ ಬಹುದು (೧) ಲಿಪಿಯುಳ್ಳ ಭಾಷೆಗಳು. (೨) ಲಿಪಿರಹಿತ ಭಾಷೆಗಳು ಎಂದು. ಇವನ್ನೇ ಸಂಸ್ಕಾರಗೊಂಡ ಭಾಷೆಗಳು—ಅಸಂಸ್ಕಾರಗೊಂಡ ಭಾಷೆಗಳೆಂದೂ, ಸುಸಂಸ್ಕೃತ ಭಾಷೆಗಳು—ಕ್ಷುಲ್ಲಕ ಭಾಷೆಗಳೆಂದೂ, ನಾಗರಿಕ ಭಾಷೆಗಳು ಅನಾಗರಿಕ ಭಾಷೆ ಗಳೆಂದೂ, ಗ್ರಾಂಥಿಕ ಭಾಷೆಗಳು ನಿರ್ಗ್ರಾಂಥಿಕ ಭಾಷೆಗಳೆಂದೂ, ಬಗೆ ಬಗೆಯಾಗಿ ಬೇರೆ ಬೇರೆ ಹೆಸರುಗಳಿಂದ ಕರೆಯುವರು. ಕನ್ನಡ-ತೆಲುಗು-ತಮಿಳು-ಮಲೆಯಾಳ (ಮತ್ತು ತುಳು, ಕೊಡಗು)—ಇವು ಮೊದಲನೆಯ ಗುಂಪಿಗೆ ಸೇರಿದರೆ, ಉಳಿದ ದ್ರಾವಿಡ ಭಾಷೆಗಳು ಎರಡನೆಯ ಗುಂಪಿಗೆ ಸೇರುತ್ತವೆ. ಆದರೆ ಈ ಎರಡನೆಯ ಗುಂಪಿಗೆ ಸೇರಿದ ಭಾಷೆಗಳಿಗೆ ಅಲಿಪಿ ಅಥವಾ ಅಸಂಸ್ಕಾರ ಅಥವಾ ಕ್ಷುಲ್ಲಕ ಅಥವಾ ಅನಾಗರಿಕ ಎಂಬ ವಿಶೇಷಣಗಳನ್ನಿತ್ತು ನಿರ್ದೇಶಿಸುವಾಗ, ಭಾಷಾವಿಜ್ಞಾನಿಗಳ ದೃಷ್ಟಿ ಯಲ್ಲಿ ಬೇರೆ ಯಾವ ಸಾಮಾನ್ಯ ಅರ್ಥಪರಿಕಲ್ಪನೆಯೂ ಇಲ್ಲದಿದ್ದರೂ, ಈ ಪದಗಳ ಅರ್ಥಪರಿಧಿಯಲ್ಲಿ ಸಾಮಾನ್ಯವಾದ ಅರ್ಥಛಾಯೆ ಸುಳಿದಾಡುತ್ತಿದೆ. ಹೀಗಾಗಿ ಓದುಗರಿಗೆ ಈ ಹೆಸರು ಹೇಳಿದಾಗ ಇಲ್ಲವೇ ಕೇಳಿದಾಗ ಇವು ಕಡಮೆ ಇಲ್ಲವೇ ಕೀಳು ಭಾಷೆಗಳೆಂಬ ಭಾವನೆ ಬರುವ ಸಂಭವವಿದೆ.

ಗ್ರಂಥಸ್ಥ ಭಾಷೆಯಲ್ಲ ಎಂದು ಹೇಳಿದರೆ ಅದಕ್ಕೆ ಅನಾಗರಿಕ ಭಾಷೆ ಎಂಬ ಅರ್ಥ

---

[1] T.Burrow, S. Bhattacharya, The Pargi Language: *A Dravidian Language of Bastar*, xi, 1953.

[2] T. Burrow, M. B. Emeneau, *A Dravidian Etymological Dictionary*, p. v. 1961.

ವಲ್ಲ, ಆ ಅರ್ಥ ಮಾಡಬಾರದು. ಯಾವುದೇ ಒಂದು ಭಾಷೆಯಲ್ಲಿ ಶಬ್ದಗಳ ಸಂಖ್ಯೆ ಹೆಚ್ಚು ಇಲ್ಲವೇ ಇನ್ನೊಂದರಲ್ಲಿ ಕಡಮೆಯೆಂಬ ಆಧಾರದಿಂದ ಭಾಷೆಗಳ ಯೋಗ್ಯತೆಯನ್ನು ನಿರ್ಧರಿಸಲಾಗುವುದಿಲ್ಲ. ಈ ಎಲ್ಲ ಕಾರಣಗಳಿಂದಾಗಿ ಈ ಎರಡನೆಯ ವರ್ಗದ ಭಾಷೆಗಳನ್ನು ಬೇರೆ ಹೆಸರಿನಿಂದ, ಬೇರೆ ವಿಶೇಷಣದಿಂದ ಕರೆಯುವುದು ಒಳ್ಳೆಯದೆಂದು ಕಾಣುತ್ತದೆ. ಕನ್ನಡದ ಹಿರಿಯ ವೈಯಾಕರಣಿ ಕೇಶಿರಾಜನು ಹೇಳಿದ ಪರಿಭಾಷೆಯ ಎರಡು ಶಬ್ದಗಳನ್ನು ಇಲ್ಲಿ ನಾವು ಬಳಸಿಕೊಳ್ಳಬಹುದು, ಈ ಶಬ್ದಯುಗಳವೇ ಚಾಕ್ಷುಷ ಶ್ರಾವಣ ಎಂಬುವು.[1] ಮೇಲೆ ಹೇಳಿದ ಎರಡು ವರ್ಗದ ಭಾಷೆಗಳಲ್ಲಿ ಮೊದಲನೆಯ ವರ್ಗದ ಭಾಷೆಗಳನ್ನು ಚಾಕ್ಷುಷ ಭಾಷೆಗಳೆಂದೂ, ಎರಡನೆಯ ವರ್ಗದ ಬ್ರಾಹೂಈ, ಕುರುಖ್, ಕುಈ ಮೊದಲಾದ ಭಾಷೆಗಳನ್ನು ಶ್ರಾವಣಭಾಷೆಗಳೆಂದೂ ಕರೆಯುವುದು ಸಮಂಜಸವಾಗಿರುವಂತೆ ತೋರುತ್ತದೆ.

ಈ ಎರಡನೆಯ ವರ್ಗದ, ಅಂದರೆ ಶ್ರಾವಣ ಭಾಷೆಗಳಲ್ಲಿ ಬಹುಮಟ್ಟಿನ ಭಾಷೆಗಳು ಆದಿವಾಸಿ ಭಾಷೆಗಳು. ಆದಿವಾಸಿಗಳೆಂದರೆ ಅವರು ಅನಾಗರಿಕ, ಅಸಂಸ್ಕೃತ ಹಾಗೂ ಅಸಭ್ಯ ಜನಾಂಗವೆಂದು ಅವಜ್ಞೆಗೈಯಬಾರದು. ತುಳು ಮತ್ತು ಕೊಡಗು ಭಾಷೆಗಳನ್ನು, ಅವು ಆದಿವಾಸಿ ಭಾಷೆಗಳಲ್ಲದುದರಿಂದ, ಚಾಕ್ಷುಷ ಭಾಷೆಗಳ ಗುಂಪಿಗೆ ಸೇರಿಸಬಹುದು. ಹೀಗೆ ಮಾಡುವುದರಿಂದ ಶ್ರಾವಣ ಭಾಷೆಗಳೆಲ್ಲವೂ ಆದಿವಾಸಿ ಭಾಷೆಗಳೆಂಬ ಹೆಸರಿಗೆ ಬಹುಮಟ್ಟಿಗೆ ಸರಿ ಹೊಂದುತ್ತವೆ. ದಕ್ಷಿಣ ಭಾರತದ ನೀಲಗಿರಿಯ ತೊದ, ಕೋತ, ಬಡಗ, ಭಾಷೆಗಳೂ, ಉತ್ತರಭಾರತದ ವಾಯವ್ಯದಲ್ಲಿರುವ ಬಲೂಚಿಸ್ಥಾನದ ಬ್ರಾಹೂಈ ಭಾಷೆ, ಮಧ್ಯಭಾರತದಲ್ಲಿರುವ ಕೋಲಾಮಿ, ಪರ್ಜಿ ಮೊದಲಾದ ಭಾಷೆಗಳು—ಇವೆಲ್ಲಾ ಶ್ರಾವಣಭಾಷೆಗಳು, ಆದಿವಾಸಿ ಭಾಷೆಗಳು.

ಈ ಎಲ್ಲ ಭಾಷೆಗಳೂ ಕ್ರಮವಾಗಿ ಮತ್ತು ಪ್ರತ್ಯೇಕವಾಗಿ, ಕಾಲಕಾಲಕ್ಕೆ ಬೇರೆ ಬೇರೆಯಾಗಿ ಬೆಳೆದು ಬಂದಿರುವ ಭಾಷೆಗಳು. ಈ ಭಾಷೆಗಳ ನಡುವೆ ಹಲ ಕೆಲವು ವ್ಯತ್ಯಾಸಗಳೂ ಇವೆ. ಇವುಗಳಲ್ಲಿ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಅಲ್ಪಸ್ವಲ್ಪ ಭಿನ್ನತೆ ಇದ್ದರೂ, ಒಟ್ಟಿನ ಮೇಲೆ ಸಮಾನತೆ ಹೆಚ್ಚಾಗಿದೆ; ಆಳವಾದ ಹೊಂದಾಣಿಕೆ ಇದೆ. ಈ ಭಾಷೆಗಳಿಗೆ ಮೂಲವಾಗಿರಬಹುದಾದ ಒಂದು ಭಾಷೆಯನ್ನು ಮೂಲದ್ರಾವಿಡ ಭಾಷೆಯೆಂದು ಕರೆಯುವರು. ಆ ಮೂಲದ್ರಾವಿಡ ಭಾಷೆಯ ಅಥವಾ ಆ ತಾಯಿ ನುಡಿಯ ಶಬ್ದಗಳು ಮತ್ತು ಅವುಗಳ ಧ್ವನಿರೂಪ ಬಹುಶಃ ಹೀಗಿದ್ದಿರಬಹುದು ಎಂದು ಊಹಿಸಲು ಸಾಧ್ಯವಿದೆ. ಆದರೆ ಚಾಕ್ಷುಷ ಭಾಷೆಗಳ ಗ್ರಾಂಥಿಕ ಆಧಾರದ ಜೊತೆಗೆ ಶ್ರಾವಣ ಭಾಷೆಗಳ ಶಬ್ದಗಳನ್ನೂ, ಸಾಧ್ಯವಾದರೆ ಅವುಗಳ ಉಪಭಾಷೆಗಳನ್ನೂ ಗಮನಿಸಬೇಕಾಗುತ್ತದೆ.

೧. ದ್ರಾವಿಡ ಕುಟುಂಬದ ಭಾಷೆಗಳನ್ನು ಮೂರು ನಾಲ್ಕು ತೆರನಾಗಿ ವಿಭಾಗಿಸಿದ್ದಾರೆ. ಅವುಗಳನ್ನು ಒಂದೊಂದಾಗಿ ಗಮನಿಸಬಹುದು. ಸರ್ ಜಾರ್ಜ್ ಗ್ರಿಯೆರ್ಸನ್ ಮಾಡಿದ ವರ್ಗೀಕರಣ ಇಂತಿದೆ:

---

1 ಕೇಶಿರಾಜ, ಶಬ್ದಮಣಿದರ್ಪಣ, ಸೂತ್ರ ೧೩.




೨. ಭೌಗೋಳಿಕ ಆಧಾರದಿಂದ ಮಾಡಿದ ವರ್ಗೀಕರಣ :

**ದ್ರಾವಿಡ ಕುಟುಂಬ ಭಾಷೆಗಳು**




೩. ಈ ಮೂರನೆಯ ವಿಭಾಗದಲ್ಲಿ ದ್ರಾವಿಡ ಭಾಷೆಗಳು, ಕಾಲಾನುಕ್ರಮದಲ್ಲಿ ಐತಿಹಾಸಿಕವಾಗಿ ಹೇಗೆ ಮೂಲದ್ರಾವಿಡದ ತಾಯಿಬೇರಿನಿಂದ ಬೇರೆ ಬೇರೆಯಾಗಿ ಬೆಳೆದು ಬಂದಿವೆ ಎಂಬುದನ್ನು ರೇಖಾರೂಪದಲ್ಲಿ ತೋರಿಸಿದೆ. ಆಧುನಿಕ ಭಾಷಾವಿಜ್ಞಾನಿಗಳು ಕೊಡುವ ದ್ರಾವಿಡ ಭಾಷಾ ವಂಶವೃಕ್ಷದಲ್ಲಿ ಒಂದೆರಡು ವ್ಯತ್ಯಾಸಗಳಿವೆಯೆಂಬುದನ್ನು ಮರೆಯುವಂತಿಲ್ಲ. ಪ್ರೊ. ಎಂ. ಬಿ. ಎಮಿನೊ, ಮೂಲದ್ರಾವಿಡದಿಂದ ತೆಲುಗಿಗಿಂತಲೂ ಮೊದಲು ಕುಈ ಪ್ರತ್ಯೇಕವಾಯಿತೆಂದು ತಿಳಿಸಿದ್ದಾರೆ. ಈ ದ್ರಾವಿಡ ಭಾಷೆಗಳು ಇಂಥದೇ ಶತಮಾನದ, ಇಷ್ಟನೆಯ ಇಸವಿಯಲ್ಲಿ ಒಂದರಿಂದ ಮತ್ತೊಂದು ಕವಲೊಡೆದಿದೆಯೆಂದು ಖಚಿತವಾಗಿ 'ಇದಮಿತ್ಥಂ' ಎಂದು ಹೇಳುವುದಕ್ಕೆ ಸಾಕಷ್ಟು ಆಧಾರಗಳು ಸಿಗುವುದಿಲ್ಲ. ಆದುದರಿಂದ ಸ್ಥೂಲವಾಗಿ ಈ ಪರಿವರ್ತನೆಯನ್ನು ಅಂಗೀಕರಿಸಬಹುದು.

ಇಲ್ಲಿ ಮೂಲದ್ರಾವಿಡ, ಮೂಲ ದಕ್ಷಿಣ ದ್ರಾವಿಡ....ಇತ್ಯಾದಿಯಾಗಿ ಹೇಳುವಾಗ ಈ ಪದಪುಂಜಗಳಲ್ಲಿ ಬರುವ ಪೂರ್ವಪದವಾದ 'ಮೂಲ' ಎಂಬ ಪದವನ್ನು ಪ್ರಾಕ್, ಪ್ರಾಚೀನ, ಮೊಟ್ಟಮೊದಲಿನ, ಪ್ರಾರಂಭದ, ಆದಿಯ ಎಂಬ ಅರ್ಥದಲ್ಲಿ ಬಳಸಲಾಗಿದೆ. ಈ ಮುಂದೆ ಕೊಡುವ ರೇಖಾಚಿತ್ರದಲ್ಲಿ ಉಪಯೋಗವಾಗಿರುವ ಸಂಕ್ಷಿಪ್ತ ಶಬ್ದಗಳ ಪೂರ್ಣರೂಪ ಇಂತಿದೆ : ಮೂದ್ರಾ—ಮೂಲದ್ರಾವಿಡ; ಮೂಲದದ್ರಾ—ಮೂಲದಕ್ಷಿಣ ದ್ರಾವಿಡ ; ಮೂಲಮದ್ರಾ—ಮೂಲ ಮಧ್ಯ ದ್ರಾವಿಡ ; ಮೂಲ ಉದ್ರಾ—ಮೂಲ ಉತ್ತರ ದ್ರಾವಿಡ ; ಮೂಲತ—ಮೂಲದ ತಮಿಳು ; ಮೂಲಕ—ಮೂಲದ ಕನ್ನಡ ; ಮೂಲತೆ—ಮೂಲದ ತೆಲುಗು ; ಮೂಲಪ—ಮೂಲದ ಪರ್ಜಿ ; ಮೂಲಕುರು—ಮೂಲದ ಕುರುಖ್ ; ಹತ—ಹಳೆಯ ತಮಿಳು ; ಮೂಲಕು—ಮೂಲದ ಕುಯಿ ; ಮೂಲಗ—ಮೂಲದ ಗದಬ ; ಮೂಲನಾ—ಮೂಲದ ನಾಯ್ಕಿ ; ತ—ತಮಿಳು ; ಮಲೆ—ಮಲೆಯಾಳ ; ತೊ—ತೊ ; ಕೋ—ಕೋತ ; ಕ—ಕನ್ನಡ ; ಬ—ಬಡಗ ; ಕೊಡ—ಕೊಡಗು ; ತು—ತುಳು ; ತೆ—ತೆಲುಗು ; ಕು—ಕುಈ ; ಪ—ಪರ್ಜಿ ; ಒ—ಒಲ್ಲಾರಿ ; ಗ—ಗದಬ ; ಕೋಲಾ—ಕೋಲಾಮಿ ; ನಾ—ನಾಯ್ಕಿ ; ಗೋಂ—ಗೋಂಡಿ ; ಕುರು—ಕುರುಖ್ ; ಮ—ಮಲ್ತೋ ; ಬ್ರಾ—ಬ್ರಾಹೂಈ. ಮೂಲದ್ರಾವಿಡದಿಂದ ಇಂದಿನ ದ್ರಾವಿಡಭಾಷೆಗಳು ಯಾವಾಗ ಬೇರೆ ಆದುವೆಂಬ ವಿಚಾರದಲ್ಲಿ, ಭಾಷಾ ಕಾಲಕ್ರಮ ವಿಜ್ಞಾನದ ನಿಯಮಗಳನ್ನು ಅನ್ವಯಿಸಿ ನಡಸಿದ ಅಭ್ಯಾಸದಂತೆ,[1] ಅಯ್ದು ದ್ರಾವಿಡ ಭಾಷೆಗಳು ಪ್ರತ್ಯೇಕಗೊಂಡಿರಬಹುದಾದ ವಿವರ ಇಂತಿದೆ :

| ಭಾಷೆಗಳು | ಉಳಿಸಿಕೊಂಡಿರುವ ಶಬ್ದಗಳು, ಶೇಕಡಾವಾರು | ಬೇರೆಯಾದ ಕಾಲಾವಧಿಯ ಅಂದಾಜು |
|---|---|---|
| ತಮಿಳು-ಮಲೆಯಾಳ | ೭೪.೪ % | ಕ್ರಿ.ಶ. ೧೧೦೦-೧೫೦೦ |
| ತಮಿಳು-ಕನ್ನಡ | ೬೦ % | ಕ್ರಿ.ಶ. ೪೦೦-೧೦೦೦ |
| ತಮಿಳು-ತುಳು | ೫೨ % | ಕ್ರಿ.ಶ. ೨೦೦-೮೦೦ |
| ತಮಿಳು-ತೆಲುಗು | ೪೨.೨ % | ಕ್ರಿ.ಪೂ. ೪೦೦-ಕ್ರಿ.ಶ. ೪೦೦ |
| ಮಲೆಯಾಳ-ಕನ್ನಡ | ೬೧.೧ % | ಕ್ರಿ.ಶ. ೫೦೦-೧೧೧೦ |
| ಮಲೆಯಾಳ-ತುಳು | ೫೧.೧ % | ಕ್ರಿ.ಶ. ೧-೮೦೦ |
| ಮಲೆಯಾಳ-ತೆಲುಗು | ೩೭.೮ % | ಕ್ರಿ.ಪೂ. ೮೦೦-ಕ್ರಿ.ಶ. ೧೦೦ |
| ಕನ್ನಡ-ತುಳು | ೫೭.೬ % | ಕ್ರಿ.ಶ. ೩೦೦-೧೦೦೦ |
| ಕನ್ನಡ-ತೆಲುಗು | ೪೯.೯ % | ಕ್ರಿ.ಪೂ. ೩೦೦-ಕ್ರಿ.ಶ. ೫೦೦ |
| ತುಳು-ತೆಲುಗು | ೩೭.೫ % | ಕ್ರಿ.ಪೂ. ೮೦೦-ಕ್ರಿ.ಶ. ೧೦೦ |

[1] ಟಿ. ಎಂ. ಕಾಮೇಶ್ವರಿ, ಲೇಖನ, ಸಂಕಲನ ಕೃತಿ *Dravidian Linguistics*, ಅಣ್ಣಾಮಲೈ ವಿಶ್ವವಿದ್ಯಾನಿಲಯ, 1968.

ಮೂಲದ್ರಾವಿಡ
ಮೂಲ ದ ದ್ರಾವಿಡ
ಮೂ ಮಧ್ಯದ್ರಾವಿಡ
ಮೂ ಉ ದ್ರಾವಿಡ
ಮೂತ
ಮೂಕ
ಮೂತೆ
ಮೂಪ
ಮೂಕುರು
ಹತ
ಮೂಕುಯಿ
ಮೂಗ
ಮೂ ನಾ
ತ ಮಲೆ ತೊ ಕೋ ಕ ಬ ಕೊಡ ತು ತೆ ಕು ಕುವಿ ಪ ಒ ಗ ಕೋಲಾ ನಾ ಗೋಂ ಕುರು ಮ ಬ್ರಾ







ಈ ಭಾಷೆಗಳಲ್ಲಿ ಸವರ, ದೊರ್ಲಿ ಭಾಷೆಗಳನ್ನು ಪ್ರಶ್ನಾರ್ಥಕ ಚಿಹ್ನೆಯಿಂದ ನಿರ್ದೇಶಿಸಿದೆ. ಅದಕ್ಕೆ ಕಾರಣ ಖಚಿತತೆಯ ಅಭಾವ. ಸವರ ದಕ್ಷಿಣ ಕೊರಾಪುಟ್ ಪ್ರದೇಶದಲ್ಲಿನ 'ಸವರದೊರ'ಗಳ ಭಾಷೆ. ದಕ್ಷಿಣ ದ್ರಾವಿಡ ಗುಂಪಿಗೆ ಸೇರಿಸಿದೆ. ದೊರ್ಲಿ ದಕ್ಷಿಣ ಬಸ್ತಾರ ಪ್ರದೇಶದ ಭಾಷೆ. ಅವನ್ನು ಮಧ್ಯದ್ರಾವಿಡ ಗುಂಪಿಗೆ ಸೇರಿಸಿದೆ.

## ೩. ದ್ರಾವಿಡ ಭಾಷೆಗಳ ವಿಕಾಸದ ಚಿತ್ರ

ಕೇವಲ ಚಾಕ್ಷುಷ ದ್ರಾವಿಡ ಭಾಷೆಗಳ ವಿಕಾಸ:







ದ್ರಾವಿಡ ಭಾಷಾ ಪರಿವಾರ
ದಕ್ಷಿಣ ದ್ರಾವಿಡ ಶಾಖೆ
ಮಧ್ಯದ್ರಾವಿಡ ಶಾಖೆ
ಉತ್ತರ ದ್ರಾವಿಡ ಶಾಖೆ
ತಮಿಳು-ಮಳೆಯಾಳ ವರ್ಗ
೧. ತಮಿಳು
೨. ಮಲೆಯಾಳ
೩. ತೊದ
೪. ಕೋತ
ಕನ್ನಡ ವರ್ಗ
೧. ಕನ್ನಡ
೨. ಬಡಗ
೩. ಕೊಡಗು
ತುಳು ವರ್ಗ
ತುಳು
ತೆಲುಗು ವರ್ಗ
೧. ತೆಲುಗು
೨. ಸವರ
ಕುರುಖ್-ಮಲ್ತೊ ವರ್ಗ
೧. ಕುರುಖ್
೨. ಮಲ್ತೊ
ಬ್ರಾಹೂಈ ವರ್ಗ
ಬ್ರಾಹೂಈ
ಕೋಲಾಮಿ-ಪಾರ್ಜಿ ವರ್ಗ
೧. ಕೋಲಾಮಿ
೨. ನಾಯಿಕಿ
೩. ಪಾರ್ಜಿ
೪, ಗದಬ
ಗೋಂಡಿ-ಕೊಂಡ ವರ್ಗ
೧. ಗೋಂಡಿ
೨. ನಾಯಿಕಿ
೩. ಮೊರ್ಲಿ
೪. ಪೆಂಗು
೫. ಕೊಂಡ
ಕುಈ-ಕುವಿ ವರ್ಗ
೧. ಕುಈ
೨. ಕುವಿ
೩. ಮಂಡ

ತಮಿಳು ಮಲೆಯಾಳ ಭಾಷೆಗಳು ಒಂದು ಜೋಡಿಯಾಗಿಯೂ, ತೊದ ಮತ್ತು ಕೋತ ಭಾಷೆಗಳು ಒಂದು ಜೋಡಿಯಾಗಿಯೂ ನಿಲ್ಲುತ್ತವೆ. ಈ ಭಾಷೆಗಳ ನಡುವೆ ಇರುವ ಭಾಷಿಕಸಂಬಂಧ ಸಾದೃಶ್ಯಗಳನ್ನು ಭಾಷಾವಿಜ್ಞಾನಿಗಳು ಸ್ಪಷ್ಟಪಡಿಸಿದ್ದಾರೆ. ಹೀಗೆಯೇ ಕನ್ನಡ, ಬಡಗ ಮತ್ತು ಕೊಡಗುಗಳು ಒಂದು ಉಪಶಾಖೆಯಾಗಿ ಗೋಚರಿಸುತ್ತವೆ. ಇದು ತಾತ್ಕಾಲಿಕವೆಂದೇ ಹೇಳಬಹುದು, ಇನ್ನೂ ಆಳವಾದ ಐತಿಹಾಸಿಕ ಹಾಗೂ ತೌಲನಿಕ ಅಭ್ಯಾಸ ಆಗಬೇಕಾಗಿರುವುದರಿಂದ. ಒಲ್ಲಾರಿ, ಗದಬ, ಕೋಲಾಮಿ, ನಾಯಿಕ್ಕಿ ಮತ್ತು ಪರ್ಜಿ ಭಾಷೆಗಳು ಒಂದು ಗುಂಪಾಗಿ ಕಾಣಿಸುತ್ತವೆ. ಇದರಂತೆ ಮಲ್ತೋ ಮತ್ತು ಕುರುಖ್ ಒಂದು ಜೋಡಿಯಾಗಿಯೂ, ಕುಯಿ ಮತ್ತು ಕುವಿಗಳು ಒಂದು ಜೋಡಿಯಾಗಿಯೂ ವ್ಯಕ್ತವಾಗುತ್ತವೆ. ಕೊಂಡ ಭಾಷೆಯನ್ನೂ ಈ ಕುವಿ–ಕುಯಿ ಜೋಡಿಗೆ ಸೇರಿಸಬಹುದು. ಆದರೆ ದಕ್ಷಿಣದ ತುಳು ಮತ್ತು ಉತ್ತರದ ಬ್ರಾಹೂಈ ಭಾಷೆಗಳು ಮಾತ್ರ ಪ್ರತ್ಯೇಕವಾಗಿ, ಬಿಡಿಬಿಡಿಯಾಗಿ ನಿಲ್ಲುತ್ತವೆ. ತುಳು ಭಾಷೆಯನ್ನು ಮೂಲ ಮಧ್ಯ ದ್ರಾವಿಡ ಭಾಷೆಯಿಂದ ಸ್ವತಂತ್ರವಾಗಿ ಕವಲೊಡೆದು ನಿಂತ ಭಾಷೆ ಇರಬೇಕೆಂಬ ಅಭಿಪ್ರಾಯವೊಂದು ವ್ಯಕ್ತವಾಗಿದೆ.

ಇದೇ ರೀತಿಯಲ್ಲಿ ತೆಲುಗು ಭಾಷೆ ದಕ್ಷಿಣ ದ್ರಾವಿಡ ಭಾಷಾಶಾಖೆಯಲ್ಲಿ ಉಲ್ಲೇಖವಾಗಿದ್ದರೂ, ಭೌಗೋಳಿಕವಾಗಿಯಷ್ಟೇ ನೋಡುವುದಾದರೆ, ಅದು ಉತ್ತರ ಮತ್ತು ದಕ್ಷಿಣ ದ್ರಾವಿಡ ವಿಭಾಗಗಳೆರಡರಲ್ಲೂ ಅಳವಡುತ್ತದೆ. ಭಾಷಿಕ ಆಧಾರಗಳಿಂದ ಅವಲೋಕಿಸಿದಾಗ, ತೆಲುಗು ಮಧ್ಯದ್ರಾವಿಡ ವಿಭಾಗದಲ್ಲಿ ನಿಲ್ಲುವುದಕ್ಕೆ ಸಾಧ್ಯತೆ ಇದೆ. ಭದ್ರಿರಾಜು ಕೃಷ್ಣಮೂರ್ತಿಯವರು ತೆಲುಗು ಭಾಷೆಯನ್ನು ಮಧ್ಯದ್ರಾವಿಡ ವಿಭಾಗದ ಪ್ರಧಾನ ಕವಲೆಂದು ಪ್ರಬಲವಾಗಿ ಪ್ರತಿಪಾದಿಸಿದ್ದಾರೆ. ಅಲ್ಲದೆ ಮೂಲ ದ್ರಾವಿಡದಿಂದ ತೆಲುಗು ಮೊದಲೇ ಬೇರೆಯಾಗಿ, ತಮಿಳು-ಕನ್ನಡ, ತಮಿಳು-ಮಲೆಯಾಳ ಅನಂತರ ಕವಲೊಡೆದವು ಎಂಬ ತಿಳಿವಳಿಕೆ ಇದೆ. ಗೋಂಡಿ ಭಾಷೆಯ ಸ್ಪಷ್ಟವಾದ ಸಂಬಂಧ ಯಾವ ಭಾಷೆಯೊಡನೆ ಎಂಬುದು ಖಚಿತವಾಗಿ ನಿರ್ಧರವಾಗಬೇಕಾಗಿದೆ. ಈ ಎಲ್ಲ ನಿರ್ದೇಶನಕ್ಕೆ ಇನ್ನೂ ಹೆಚ್ಚಿನ ವ್ಯಾಕರಣಾತ್ಮಕ, ಧ್ವನ್ಯಾತ್ಮಕ, ಆಕೃತಿಕ ಹಾಗೂ ಚಾರಿತ್ರಿಕ ವ್ಯಾಸಂಗ, ಪ್ರತಿಯೊಂದು ದ್ರಾವಿಡ ಭಾಷೆ, ಉಪಭಾಷೆಯನ್ನು ಕುರಿತು ನಡೆಯಬೇಕಾಗಿದೆ. ದ್ರಾವಿಡ ಭಾಷೆಗಳಿಗಿಂತ, ದ್ರಾವಿಡ ಉಪಭಾಷೆಗಳ ವ್ಯಾಸಂಗ ಆಗಬೇಕು. ಇತ್ತೀಚೆಗೆ ಈ ಕೆಲಸ ನಡೆಯುತ್ತಿದೆ.

ದ್ರಾವಿಡ ಭಾಷೆಗಳಲ್ಲಿ ಕೇವಲ ಶಬ್ದಕೋಶವನ್ನೇ ಅನುಲಕ್ಷಿಸಿದಾಗ ಅಲ್ಲಲ್ಲಿ ಹಲ ಕೆಲವು ವ್ಯತ್ಯಾಸಗಳು ಭಾಷಾಸ್ವೀಕರಣದಿಂದಾಗಿ ಕಾಣಿಸಿದರೂ, ಒಟ್ಟಿನಲ್ಲಿ ಅವು ಒಂದು ಕುಟುಂಬದ ಭಾಷೆಗಳಿಗೆ ಅಥವಾ ಒಂದು ಮೂಲ ಭಾಷೆಗೆ ಸೇರಿವೆಯೆಂದು ಹೇಳುವುದು ಸಾಧ್ಯವಿದೆ.

ದ್ರಾವಿಡ ಭಾಷೆಗಳ ಅಧ್ಯಯನ ಪ್ರಾರಂಭವಾದ ವಿವರ, ದ್ರಾವಿಡರು ಯಾರು ಮತ್ತು ಎಲ್ಲಿಂದ ಬಂದರು ಮತ್ತು ದ್ರಾವಿಡ ಭಾಷೆಗಳ (ಚಾಕ್ಷುಷ ಭಾಷೆಗಳ) ಲಿಪಿಯ

ವಿಕಾಸ ಮುಂತಾದ ವಿವರಗಳನ್ನೂ ತಿಳಿಯುವುದು ಅಗತ್ಯ. ಮುಂದಿನ ಪುಟಗಳಲ್ಲಿ ಈ ವಿವರಣೆ ಸಂಗ್ರಹವಾಗಿ ಬಂದಿದೆ. ಅನೇಕ ಭಿನ್ನಾಭಿಪ್ರಾಯಗಳನ್ನು ಇಲ್ಲಿ ಅತ್ಯಂತ ಸಂಕ್ಷಿಪ್ತವಾಗಿ ಸಮೀಕ್ಷಿಸಲಾಗಿದೆ. ಇಲ್ಲವೇ ಕೆಲವೊಮ್ಮೆ ಅಂಥ ವಿಚಾರಗಳನ್ನು ವಿಸ್ತಾರದ ಭೀತಿಯಿಂದ ಇಲ್ಲಿ ಕೈಬಿಡಲಾಗಿದೆ. ಎಲ್ಲ ಸಂಗತಿಗಳನ್ನೂ ಕಲೆಹಾಕುವುದು ಈ ಹೊತ್ತಗೆಯ ಪರಿಮಿತಿಯಲ್ಲಿ ಸಾಧ್ಯವೂ ಇಲ್ಲ, ಸಾಧುವೂ ಅಲ್ಲ.

ಮೂಲ ದ್ರಾವಿಡ ಭಾಷೆಯಲ್ಲಿ ಇದ್ದಿರಬಹುದಾದ ಪದಗಳ ಧ್ವನಿರೂಪವನ್ನು ಪುನರ್‌ರಚಿಸಲು ಈ ಎಲ್ಲ ದ್ರಾವಿಡ ಭಾಷೆಗಳ ರೂಪಗಳನ್ನು ತುಲನೆಮಾಡಿ ನೋಡಬೇಕು. ಇಷ್ಟಾದರೂ, ನಾವು ಯಾವುದಾದರೂ ಒಂದು ದ್ರಾವಿಡ ಭಾಷೆಯನ್ನು (ಅಥವಾ ಯಾವುದೇ ಒಂದು ಭಾಷೆಯನ್ನು) ಕುರಿತು, ಅದು ಪ್ರಾಚೀನ ಇಲ್ಲವೆ ತುಂಬಾ ಹಳೆಯ ಭಾಷೆಯೆಂದು ಹೇಳಿದಾಗ ಅದರ ಅರ್ಥ, 'ಈಗ ದೊರೆತ ಬರಹದ, ಸಾಹಿತ್ಯಿಕ ಆಧಾರಗಳಿಂದ ಅದು ಪ್ರಾಚೀನವೆಂದು ತಿಳಿದುಬಂದಿದೆ'—ಎಂದು. ಬರಹದ ಸಾಮಗ್ರಿ ದೊರೆಯದ ಭಾಷೆ ಪ್ರಾಚೀನವೇ ಆಗಿದ್ದರೂ ಅದು ಎಷ್ಟು ಪ್ರಾಚೀನವೆಂದು ತಿಳಿಸುವುದು ಕಷ್ಟಸಾಧ್ಯವಾಗುತ್ತದೆ. ಮೂಲದ್ರಾವಿಡಭಾಷೆ ಲಭ್ಯವಾಗಿಲ್ಲ. ಆದುದರಿಂದ ಅದರ ಸ್ವರೂಪ ತಿಳಿಯುವುದು ಕಷ್ಟಸಾಧ್ಯ. ಮೂಲದ್ರಾವಿಡಭಾಷೆ ಎಂಬುದೊಂದು ಇದ್ದಿತೆಂಬ ತೀರ್ಮಾನ ತಳೆಯಲು ಈಗ ಇರುವ ಭಾಷೆಗಳೇ ಆಧಾರ. ಅವುಗಳ ಪರಸ್ಪರ ಹೋಲಿಕೆ ಈ ತೀರ್ಪಿಗೆ ಇಂಬು. ಇಂದಿನ ಭಾಷೆಗಳ ಪ್ರಾಚೀನ ರೂಪಗಳನ್ನು ಪತ್ತೆ ಹಚ್ಚಬೇಕು—ಎಂಬ ಅಂಶ ನೆನಪಿನಲ್ಲಿಡಬೇಕು.

ತೌಲನಿಕ ಭಾಷಾವಿಜ್ಞಾನದ ಕಡೆಗೆ ದೃಷ್ಟಿ ಹೊರಳಿದ್ದು ತೀರ ಇತ್ತೀಚಿಗೆ. ಅಂದರೆ ಪಾಶ್ಚಾತ್ಯರ ಪ್ರಭಾವ, ಪ್ರಯತ್ನ, ಪರಿಣಾಮಗಳಿಂದಾಗಿ ಎಂಬ ಹೇಳಿಕೆ ನಿಜವಾದರೂ ನಮ್ಮ ಪ್ರಾಚೀನ ಕಾವ್ಯಗಳ ಅಭ್ಯಾಸವನ್ನು ಸೂಕ್ಷ್ಮವಾಗಿ ನಡಸಿ ಸರಿಯಾಗಿ ಅವಲೋಕಿಸಿದರೆ ನಮ್ಮ ಹಿಂದಿನ ಕವಿಗಳಿಗೂ, ಲಾಕ್ಷಣಿಕರಿಗೂ ಭಾಷೆಯನ್ನು ಕುರಿತು ಪ್ರತ್ಯೇಕವಾಗಿ ವಿಚಾರಮಾಡುವ ಪ್ರಜ್ಞೆ ಇತ್ತೆಂಬುದು ಓದುಗರಿಗೆ ಮನದಟ್ಟಾಗುತ್ತದೆ. ಸಾಮಾನ್ಯ ಜನರ ಭಾಷೆಯನ್ನು ಕಾವ್ಯಮಟ್ಟದ, ವಿದ್ಯಾವಂತರ ಭಾಷೆಯಿಂದ ಬೇರ್ಪಡಿಸಿ ನೋಡುವ ಮಾತು ಕನ್ನಡದಲ್ಲಿ ಸಿಗುವ ಮೊದಲ ಗ್ರಂಥವಾದ ಕವಿರಾಜಮಾರ್ಗದಲ್ಲಿಯೇ ಸಿಗುತ್ತದೆ:

ಕುಱಿತವರಲ್ಲದೆ ಮತ್ತಂ
ಪೆಱರುಂ ತಂತಮ್ಮ ನುಡಿಯೊಳೆಲ್ಲರ್ ಜಾಣರ್
ಕಿರುವಕ್ಕಳುಮಾ ಮೂಗರು
ಮಱಿಪಲ್ಕಱಿವರ್ ವಿವೇಕಮಂ ಮಾತುಗಳಂ ॥ (೧-೩೯)

ವಿದ್ಯಾವಂತರ-ಅವಿದ್ಯಾವಂತರ ಭಾಷೆಯ ತಾರತಮ್ಯ ಗುರುತಿಸಿದ ಈ ಕವಿಗೆ ಭಾಷಾದೃಷ್ಟಿಯಿತ್ತೆಂಬುದನ್ನು ತಿಳಿಯಬಹುದು. ಹಾಗೆಯೇ ಕನ್ನಡ ಭಾಷೆಯಲ್ಲಿಯೂ ಪ್ರಾಂತ ಭೇದಗಳು ಅಂದಿನಿಂದಲೂ ಇದ್ದುವೆಂಬುದನ್ನು ಉತ್ತರಮಾರ್ಗ-ಉತ್ತರೋತ್ತರ

ಮಾರ್ಗ, ದಕ್ಷಿಣಮಾರ್ಗ–ದಕ್ಷಿಣೋತ್ತರ ಮಾರ್ಗಗಳೆಂಬ, ಕವಿರಾಜಮಾರ್ಗಕಾರನ ವಿಂಗಡಣೆಯಿಂದ ಗೊತ್ತಾಗುತ್ತದೆ. ಕೇಳುವವರನ್ನೂ ಸೂರೆಗೊಳ್ಳುವಂತೆ ಮೆಚ್ಚುಗೆಯ ಮಾತುಗಳನ್ನಾಡುವ ಉತ್ತಮ ಕನ್ನಡದ ಭಾಗಗಳನ್ನೂ ಕವಿ ಗುರುತಿಸಿದ್ದಾನೆ.

ಅದಱೊಳಗಂ ಕಿಸುವೊಳಲಾ
ವಿದಿತ ಮಹಾ ಕೊಪಣ ನಗರದಾ ಪುಲಿಗೆಱೆಯಾ
ಸದಭಿಸ್ತುತಮಪ್ಪೊಂಕುಂ
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥ (೧–೩೭)

ಕನ್ನಡ ಭಾಷೆಯನ್ನಾಡುವ ಜನರು ಇರುವ ಭಾಗದ ಎಲ್ಲೆಗಳನ್ನು ತಿಳಿಸಿ ಭಾಷಾ ಭೂಗೋಳದ ಅಭ್ಯಾಸದ ಬುನಾದಿ ಹಾಕಿದ್ದಾನೆ—ಕವಿರಾಜಮಾರ್ಗಕಾರ. ಈ ರೀತಿಯ ವಿವರ ಆದಿ ಕವಿಯಾದ ಪಂಪನಲ್ಲೂ ಸಿಗುತ್ತದೆ. ಕನ್ನಡ ಭಾಷೆ ಎಲ್ಲಿ ಚೆನ್ನಾಗಿರುತ್ತದೆ ಎಂಬುದನ್ನು ತಿಳಿಸುತ್ತಾ ಪಂಪ,

ರಾಜದ್ರಾಜಕಮೆಸಿಸಿದ
ಸಾಜದ ಪುಲಿಗೆಱೆಯ ತಿರುಳ ಕನ್ನಡದೊಳ್ ನಿ
ವ್ಯಾಜದೆಸಕದೊಳೆ ಪುದಿದೊಂ
ದೋಜೆಯ ಬಲದಿನಿಯ ಕವಿತೆ ಪಂಪನ ಕವಿತೆ ॥ (ಪಂಪ ಭಾ. ೧೪–೫೮)

ಎಂದು ಹೇಳಿದ್ದಾನೆ. ಇಲ್ಲಿ ಪಂಪನ ಕವಿತೆಯ ವಿಚಾರ ನಮಗೆ ಬೇಡದಿದ್ದರೂ ಅವನು ಅಂದಿನ ಕನ್ನಡನಾಡಿನಲ್ಲಿ ಜನರ ಭಾಷೆಯಲ್ಲಿ ವ್ಯತ್ಯಾಸಗಳಿದ್ದು ಪುಲಿಗೆಱೆಯ ಕನ್ನಡವನ್ನು ತಿರುಳಿನ ಕನ್ನಡವೆಂದು ಭಾವಿಸುತ್ತಿದ್ದರೆಂಬ ಹೇಳಿಕೆ ಮುಖ್ಯವಾಗಿದೆ. ನಾಗವರ್ಮನು ಛಂದೋಂಬುಧಿಯಲ್ಲಿ ಹೇಳಿರುವ "ಸಂಸ್ಕೃತಂ ಪ್ರಾಕೃತಂ, ಅಪಭ್ರಂಶಿಕಂ ಎಂಬ ಮೂಱುವರೆ ಭಾಷೆಗಳೊಳ್ ಪುಟ್ಟುವುವೆಲ್ಲಂ ದ್ರವಿಡಾಂಧ್ರ ಕರ್ಣಾಟಕಾದಿ ಷಟ್ಪಂಚಾಶತ್ ಸರ್ವ ವಿಷಯ ಭಾಷಾ ಜಾತಿಗಳಕ್ಕುಂ"[1] ಎಂಬ ಈ ಹೇಳಿಕೆ ಭಾಷಾ ಶಾಸ್ತ್ರದ ಅಧ್ಯಯನದ ದೃಷ್ಟಿಯಲ್ಲಿ ತೀರ ಸ್ವಾರಸ್ಯವಾದ ಮಾತು. ನಾಗವರ್ಮನು ಹೇಳಿದಂತೆ ದ್ರವಿಡಾಂಧ್ರ ಕರ್ಣಾಟಕಗಳೇ ಆದಿಯಾಗಿ ಐವತ್ತಾರು ಭಾಷೆಗಳು ಮೇಲಿನ ಮೂರುವರೆ ಭಾಷೆಗಳಿಂದಲೇ ಹುಟ್ಟಿದೆಯೋ ಇಲ್ಲವೋ, ಅಂತು ಈ ಕವಿಯ ಕಾಲಕ್ಕಾಗಲೇ ಭಾಷಾಕ್ಷೇತ್ರದ ಪೃಥಕ್ಕರಣೆ ನಡೆದಿತ್ತೆಂಬುದು ಸಂತೋಷದಾಯಕವಾದ ಮಾತು.

ಅಲ್ಲದೆ ಬರವಣಿಗೆಯ ಭಾಷೆಯೇ (Written Language) ಬೇರೆ, ಆಡು ನುಡಿಯೇ ಬೇರೆಯೆಂಬ (Spoken Language) ತಿಳಿವಳಿಕೆ ನಮ್ಮ ಹಿಂದಿನ ಕವಿಗಳಿಗೂ ಇದ್ದಿತೆಂದು ಹೇಳಬಹುದು. ಉದಾಹರಣೆಗೆ ಆಂಡಯ್ಯನ ಕಬ್ಬಿಗರ ಕಾವದ ಈ ಪದ್ಯವನ್ನು ನೋಡಿ :

[1] ನಾಗವರ್ಮ, ಛಂದೋಂಬುಧಿ, ಮದ್ರಾಸು ಮುದ್ರಣ, ೧–೫೫ ವ.

ಸೊಗಯಿಪ ಸಕ್ಕದಂ ಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬಮಂ
ಬಗೆಗೊಳೆ ಪೇೞಲಾಱರಿನಿತುಂ ಸಲೆ ಮುನ್ನಿನ ಪೆಂಪನಾಳ್ದ ಕ
ಬ್ಬಿಗರದು ಮಾತನಾಡಿದವೊಲಂದವನಾೞ್ದಿರೆ ಬಲ್ಪು ನೆ
ಟ್ಟಗೆ ದೊರೆಕೊಟ್ಟುದಿಂತಿವನೊಲ್ಲದೆ ಕೇಳ್ ದೊರೆಕೊಳ್ಳದಾರೊಡಂ

ಆದರೂ ಕನ್ನಡದ ಹಿರಿಯ ಕವಿಗಳೆಲ್ಲರೂ ತಮ್ಮನ್ನು ಉಭಯ ಭಾಷಾ ವಿಶಾರದರೆಂದೂ (ಸಂಸ್ಕೃತ-ಕನ್ನಡ), ಚತುರ್ಭಾಷಾ ಕವಿ ಚಕ್ರವರ್ತಿಗಳೆಂದೂ, ಕರೆದುಕೊಂಡರೇ ಹೊರತು, ಇತರ ಸೋದರ ಭಾಷೆಗಳ ಕಡೆಗೆ ಹೊರಳಲಿಲ್ಲ, ತಮ್ಮ ಗಮನ ಹರಿಸಲಿಲ್ಲ. ಆದರೆ ರತ್ನಾಕರವರ್ಣಿಯೊಬ್ಬ ಈ ಹೇಳಿಕೆಗೆ ಅಪವಾದವಾಗಿ ನಿಂತಿದ್ದಾನೆ. ಅವನು ಸಂಸ್ಕೃತದ ಹೆಸರನ್ನೇ ಎತ್ತದೆ ಕೇವಲ ದ್ರಾವಿಡವರ್ಗದ ಕನ್ನಡ-ತೆಲುಗು-ತುಳು ಭಾಷೆಗಳ ಕಡೆಗೆ ತನ್ನ ಒಲವು ತೋರಿದ್ದಾನೆ. ಅವರ ಆನಂದಕ್ಕಾಗಿಯೇ ತಾನು ಕಾವ್ಯ ಬರೆದಂತೆ ಹೇಳಿಕೊಂಡಿದ್ದಾನೆ. ಹಾಗೆಂದು ರತ್ನಾಕರ ಕವಿ ಸಾರಿದ ಪದ್ಯವಿದು.

ಅಯ್ಯಯ್ಯ ಚೆನ್ನಾದುದೆನೆ ಕನ್ನಡಿಗರು
ರಯ್ಯ ಮಚಿಂದಿ ಎನೆ ತೆಲುಗ
ಅಯ್ಯಯ್ಯ ಎಂಚ ಪೊರ್ಲಾಂಡೆಂದು ತುಳುವರು
ಮೆಯ್ಯುಬ್ಬಿ ಕೇಳಬೇಕಣ್ಣಾ[1]

ರತ್ನಾಕರನಾದ ಮೇಲೆ ಹತ್ತೊಂಬತ್ತನೆಯ ಶತಮಾನದವರೆಗೂ ಮತ್ತೆ ದ್ರಾವಿಡ ಭಾಷೆಗಳ ಕಡೆಗೆ ಒಂದು ತೌಲನಿಕ ದೃಷ್ಟಿಯನ್ನು ಕನ್ನಡ ಕವಿಗಳೂ—ವಿದ್ವಾಂಸರೂ ಹರಿಸಲಿಲ್ಲ. ಇದಕ್ಕೆ ಕಾರಣವೂ ಇತ್ತೆಂದು ಕಾಣುತ್ತದೆ. ಹಿಂದಿನವರು, ತಮ್ಮ ಭಾಷೆಗಳನ್ನು ಬಿಟ್ಟು, ಉಳಿದ ಭಾಷೆಗಳನ್ನು ಕುರಿತು ತೌಲನಿಕ ವ್ಯಾಸಂಗ ನಡೆಸಲಿಲ್ಲವೆಂದು ಹೇಳುವಾಗ, ಆ ಕಾಲದಲ್ಲಿದ್ದ ನಂಬಿಕೆಯೂ ಬಹುಮಟ್ಟಿಗೆ ಕಾರಣವೆಂಬುದನ್ನು ಮರೆಯಬಾರದು—"ಕನ್ನಡವನ್ನುಳಿದ ಕಡಮೆ ಭಾಷೆಗಳೆಲ್ಲಾ ಅಶುದ್ಧ ಭಾಷೆಗಳೆಂತಲೂ, ಅವನ್ನು ಸ್ನಾನಜಪಾದಿ ಕಾಲಗಳಲ್ಲಿ ಹೇಳಬಾರದೆಂತಲೂ, ಸಂಸ್ಕೃತ ಬಾರದ ಪಕ್ಷದಲ್ಲಿ ಕನ್ನಡ ಭಾಷೆಯನ್ನು ಹೇಳಬಹುದೆಂದೂ"[2] ಜನ ಭಾವಿಸಿದ್ದರು.

ಕಾಲ್ಡ್‌ವೆಲ್ ತನ್ನ ಕೃತಿರತ್ನವನ್ನು ಬರೆದ ತರುವಾಯವೇ ನಮ್ಮ ವಿದ್ವಾಂಸರಿಗೆ ಭಾಷೆ ಹಾಗೂ ದ್ರಾವಿಡಭಾಷೆಗಳ ತೌಲನಿಕ ವ್ಯಾಸಂಗದತ್ತ ಆಸಕ್ತಿ, ಅಭಿರುಚಿಗಳು ಉಂಟಾಯಿತೆಂಬುದು ನಿಜವಾದರೂ ಈ ಹೇಳಿಕೆಗೆ ಅಪವಾದದಂತೆ ಅಲ್ಲಲ್ಲಿ ಒಬ್ಬಿಬ್ಬರು ಕನ್ನಡ ಲೇಖಕರಿದ್ದಾರೆ. ಅವರಲ್ಲಿ ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯ ಒಬ್ಬ ಗಮನಾರ್ಹ. ಆತ ತನ್ನ "ಹೊಸಗನ್ನಡ ನುಡಿಗನ್ನಡ ಎಂಬ ಹೊಸಗನ್ನಡ ವ್ಯಾಕರಣವು" ಎಂಬ ವ್ಯಾಕರಣ ಪುಸ್ತಕದಲ್ಲಿ ದ್ರಾವಿಡಭಾಷೆಗಳ ಅಲ್ಪಸ್ವಲ್ಪ ಪ್ರಸ್ತಾಪ

---

[1] ರತ್ನಾಕರವರ್ಣಿ, ಭರತೇಶ ವೈಭವ, ಆಸ್ಥಾನ ಸಂಧಿ, ಪದ್ಯ ೭.

[2] ಕೃಷ್ಣಮಾಚಾರ್ಯ, ಹೊಸಗನ್ನಡ ನುಡಿಗನ್ನಡ, ದ್ವಿ. ಮು, ಪು. iv, ಮೊದಲನೆಯ ಮುದ್ರಣ : ಮದರಾಸು, ಎರಡನೆಯದು : ಮಂಗಳೂರು.

ಮಾಡಿದ್ದಾನೆ. ಈ ಪುಸ್ತಕದ ಮೊದಲನೆಯ ಮುದ್ರಣ ೧೮೩೮ರಲ್ಲೂ ಮತ್ತು ಎರಡನೆಯ ಮುದ್ರಣ ೧೮೮೨ರಲ್ಲೂ ಆಯಿತು. ಅಂದರೆ ಕಾಲ್ಡ್‌ವೆಲ್ ಪುಸ್ತಕ ಬರುವುದಕ್ಕಿಂತಲೂ ಹದಿನೆಂಟು ವರುಷ ಮೊದಲೇ ಕೃಷ್ಣಮಾಚಾರ್ಯನ ಪುಸ್ತಕ ಪ್ರಕಟವಾಗಿತ್ತು.

ಭಾಷಾಚರಿತ್ರೆಯ ದೃಷ್ಟಿಯಿಂದ ಇದೊಂದು ಅಪೂರ್ವ ವ್ಯಾಕರಣ ಗ್ರಂಥ. ಪ್ರತಿಭಾಶಾಲಿಯಾದ ಈ ಲೇಖಕ ಆ ವೇಳೆಗಾಗಲೇ ಕೆಲವು ಧ್ವನಿತತ್ವಗಳನ್ನು ಕುರಿತು ಪ್ರಸ್ತಾಪಿಸುತ್ತಾನಲ್ಲದೆ ಸಂಸ್ಕೃತ ಹಾಗೂ ದ್ರಾವಿಡಭಾಷೆಗಳು ಬೇರೆ ಬೇರೆ ವರ್ಗಕ್ಕೆ ಸೇರಿದ ಭಾಷೆಗಳಿರಬೇಕೆಂದು ತನ್ನ ಅನುಮಾನವನ್ನು ವ್ಯಕ್ತಪಡಿಸಿದ್ದಾನೆ. ಅಲ್ಲದೆ ಆಗ ಜನರು ಆಡುತ್ತಿದ್ದ ಭಾಷೆಯನ್ನೇ, ಶ್ರೀಸಾಮಾನ್ಯರ ಆಡುನುಡಿಯನ್ನೇ ಆಧಾರವಾಗಿಟ್ಟುಕೊಂಡು ವ್ಯಾಕರಣ ರಚಿಸಿದ್ದು ಮೆಚ್ಚಬೇಕಾದ ಸಾಹಸ. ಏಕೆಂದರೆ ಭಾಷೆಯ ಅಭ್ಯಾಸಕ್ಕೆ ಸಂಬಂಧಪಟ್ಟ ಹಾಗೆ ೧೯ನೆಯ ಶತಮಾನದಲ್ಲಿ ಊಹಾತೀತ ಪ್ರಗತಿ ಪಾಶ್ಚಾತ್ಯ ದೇಶಗಳಲ್ಲಿ ನಡೆದಾಗ್ಯೂ ಕೆಲವು ಮೂಲಭೂತ ಅಂಶಗಳನ್ನು ಅವರು ಮರೆತಿದ್ದರು.

ಜಾಕೋಬ್ ಗ್ರಿಮ್ ವ್ಯಾಕರಣದಲ್ಲಿ ಹಳೆಯ ನಾರ್ಸ್, ಪ್ರೌಢ ಜರ್ಮನ್ ಗೋಥಿಕ್ ಭಾಷೆಗಳತ್ತ ಗಮನವಿತ್ತೇ ಹೊರತು ಆಗಿನ ಆಡುನುಡಿಯ ಕಡೆಗೆ ಆತ ಮನಸ್ಸು ಹರಿಸಲಿಲ್ಲ. ಫ್ರಾಂಜ್ ಬಾಪ್ ಕೂಡ ಪ್ರಾಚೀನ ಗ್ರೀಕ್–ಲ್ಯಾಟಿನ್ ಭಾಷೆಗಳನ್ನು ಕುರಿತು ಯೋಚಿಸಿದನೇ ಹೊರತು ಅಂದಿನ ಗ್ರೀಕ್, ರೋಮನಿಕ್ ಭಾಷೆಗಳನ್ನು ಮರೆತುಬಿಟ್ಟನು. ಇದರಂತೆ ಪಾಟ್, ಬೆನ್ ಫೆ ಇವರು ಯಾರೂ ಆಡುನುಡಿಯ ಸೊಗಡನ್ನು ಬಳಸಿಕೊಂಡು ಭಾಷಾಪಾಕವನ್ನು ಸಿದ್ಧಪಡಿಸಲಿಲ್ಲ. ಹೀಗಿರುವಾಗ ಭಾರತೀಯನೊಬ್ಬ, ಕನ್ನಡಿಗನೊಬ್ಬ ೧೯ನೆಯ ಶತಮಾನದ ಪೂರ್ವಾರ್ಧದಲ್ಲಿಯೇ ಕನ್ನಡ ಭಾಷೆಯ ಆಡುನುಡಿಗೆ ವ್ಯಾಕರಣ ರಚಿಸಿದ್ದು ಗಮನಾರ್ಹ.

ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯನ "ಹೊಸಗನ್ನಡ ನುಡಿಗನ್ನಡ"ದ ಮೇಲ್ಪಂಕ್ತಿಯನ್ನು ಅನುಸರಿಸಿ ರಾಮಾಶಾಸ್ತ್ರಿಗಳೆಂಬ ಲೇಖಕ 'ವಾಗ್ವಿದಾಯಿನಿ'ಯೆಂಬ ವ್ಯಾಕರಣ ಗ್ರಂಥವನ್ನು ರಚಿಸಿದನು. ಆದರೆ ಒಬ್ಬ ಲೇಖಕರು ಮಾತ್ರ ಕೃಷ್ಣಮಾಚಾರ್ಯನ ಕ್ರಮವನ್ನು ಮೆಚ್ಚಲಿಲ್ಲ. ಕೃಷ್ಣಮಾಚಾರ್ಯನ ಪ್ರಯತ್ನವನ್ನು ವಿರೋಧಿಸುತ್ತಾ ಅವರು ಬರೆದಿರುವ ಕೆಲವು ಮಾತುಗಳು ಇಂತಿವೆ—"ಗ್ರಂಥಸ್ಥವಾದ ಪ್ರಯೋಗಗಳನ್ನು ಬಿಟ್ಟು ಹಿರಿಯರು ಮಾತನಾಡಿಕೊಳ್ಳುವ ಮಾತಿಗೆ ಮಾತ್ರ ವ್ಯಾಕರಣವನ್ನು ಕಲ್ಪಿಸಬೇಕೆಂಬ ಬುದ್ಧಿ ಹುಟ್ಟಿದುದಕ್ಕೆ ಕನ್ನಡಿಗರೆಲ್ಲರೂ ವ್ಯಸನಪಡಬೇಕಾಗಿದೆ. ಕೃಷ್ಣಮಾಚಾರ್ಯರೂ ರಾಮಸ್ವಾಮಿಶಾಸ್ತ್ರಿಗಳೂ ತಂತಮ್ಮ ವ್ಯಾಕರಣದಾದಿಯಲ್ಲಿ ಬರೆದಿರುವ ಪ್ರಶ್ನೋತ್ತರಗಳನ್ನು ಯೋಚಿಸಿ ನೋಡಿದರೆ, ಇವರಿಗೆ ಹೊಸಗನ್ನಡವೆಂಬುದರ ಅರ್ಥವು ತಿಳಿಯಲಿಲ್ಲವೆಂಬುದು ಸ್ಪಷ್ಟವಾಗುತ್ತದೆ."[1]

[1] ಆರ್. ರಘುನಾಥರಾಯ, ಕರ್ನಾಟಕ ಭಾಷಾ ವ್ಯಾಕರಣೋಪನ್ಯಾಸ ಮಂಜರಿ, ೧೮೯೪, ಪು. ೧೧೩–೧೧೪.

ಆದರೆ ಹೀಗೆ ಬರೆದ ರಘುನಾಥರಾಯರೇ, ಅವರು ಸ್ವತಃ ಪ್ರೌಢ ವಿದ್ವಾಂಸರಾಗಿದ್ದೂ ಈ ವಿಚಾರದಲ್ಲಿ ಎಡವಿದ್ದಾರೆಂಬುದು ನನಗೆ ಸ್ಪಷ್ಟವಾಗುತ್ತದೆ. ಅಲ್ಲಿಂದ ಮುಂದೆ ಬಂದ ಕನ್ನಡದ ಹಿರಿಯ ಲೇಖಕರಲ್ಲಿ ಕೆಲವರು ಕೃಷ್ಣಮಾಚಾರ್ಯ ಬರೆದ ಪುಸ್ತಕವನ್ನು ಪ್ರಸ್ತಾಪಿಸಿದ್ದಾರೆ. ದಿವಂಗತ ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್ ಬಹಾದುರ್ ರಾ. ನರಸಿಂಹಾಚಾರ್ಯರು 'ಕನ್ನಡ ಭಾಷೆಯ ಇತಿಹಾಸ'ವೆಂಬ ಇಂಗ್ಲಿಷ್ ಭಾಷೆಯಲ್ಲಿ ಬರೆದಿರುವ ಕಿರುಹೊತ್ತಗೆಯಲ್ಲೂ, ಅಂಬಿಕಾತನಯದತ್ತರು ತಮ್ಮ 'ಸಾಹಿತ್ಯಸಂಶೋಧನ'ವೆಂಬ ಪುಸ್ತಕದಲ್ಲೂ ಕೃಷ್ಣಮಾಚಾರ್ಯನ ಈ ಗ್ರಂಥವನ್ನು ಪ್ರಸ್ತಾಪಿಸಿದ್ದಾರೆ. ಅಲ್ಲದೆ ಈ ವೇಳೆಗಾಗಲೇ ಫ್ರಾನ್ಸಿಸ್ ವೈಟ್ ಎಲ್ಲಿಸ್ ಹಾಗೂ ರ್ಯಾಸಮಸ್ ರಾಸ್ಕ್ ಎಂಬ ಇಬ್ಬರು ಪಾಶ್ಚಾತ್ಯ ವಿದ್ವಾಂಸವರೇಣ್ಯರು ಈ ದ್ರಾವಿಡ ಭಾಷೆಗಳ ವಿಚಾರ ಪ್ರಸ್ತಾಪಿಸಿದ್ದರು.

ಫ್ರಾನ್ಸಿಸ್ ವೈಟ್ ಎಲ್ಲಿಸ್ (೧೭೮೦-೧೮೧೯) ಬಗೆಗೆ ಎನ್. ವೆಂಕಟರಾಯರು ಬರೆಯುತ್ತಾ "ಆತನನ್ನು (ಎಫ್. ಡಬ್ಲ್ಯು ಎಲ್ಲಿಸ್‌ನನ್ನು) ದ್ರಾವಿಡ, ಅದರಲ್ಲಿಯೂ ತೆಲುಗು, ಭಾಷೆಯ ವಿವರಣೆಯ ವಿಚಾರದಲ್ಲಿ, ಭಾಷಾಶಾಸ್ತ್ರದ ಒಬ್ಬ ಜನಕನೆಂದು ನಿಸ್ಸಂದೇಹವಾಗಿ ಹೇಳಬಹುದು. ಅಲ್ಲದೆ ಆತ ತಮಿಳು ತೆಲುಗು ಅಥವಾ ಯಾವುದೇ ದ್ರಾವಿಡ ಭಾಷೆ ಸಂಸ್ಕೃತ ಭಾಷೆಯಿಂದ ಬಂದಿಲ್ಲವೆಂದು ಹೇಳಿದ ಮೊಟ್ಟ ಮೊದಲನೆಯ ಯುರೋಪಿನ ವಿದ್ವಾಂಸ. ಸಂಸ್ಕೃತ ಭಾಷೆ ದ್ರಾವಿಡ ಭಾಷೆಗಳ ನಯ ನುಣುಪುಗಳನ್ನು ವೆಗ್ಗಳಿಸಿರಬಹುದು. ಆದರೂ ದ್ರಾವಿಡ ಭಾಷೆಗಳು ಒಂದು ಪ್ರತ್ಯೇಕ ಗುಂಪಾಗಿ ನಿಲ್ಲುತ್ತವೆ ಎಂದೂ ಆತ ತಿಳಿಸಿದನು...."[1] ಎಂಬುದಾಗಿ ಕೊಂಡಾಡಿದ್ದಾರೆ. ಎಲ್ಲಿಸ್ ಇಂಗ್ಲೆಂಡ್ ದೇಶದಿಂದ ಭಾರತಕ್ಕೆ ಕೇವಲ ಒಬ್ಬ ಅಧಿಕಾರಿಯಾಗಿ ಬಂದವನು ಇಲ್ಲಿಯೇ ಮದರಾಸಿನಲ್ಲಿ ನೆಲಸಿದನು. ಭೂಕಂದಾಯ ಶಾಖೆಯ ಕಲೆಕ್ಟರ್ ಆಗಿ ಮೊದಲು ಅಧಿಕಾರ ಪಡೆದ ಎಲ್ಲಿಸ್, ತರುವಾಯ ೧೮೧೭ ರಲ್ಲಿ ಫೋರ್ಟ್ ಸೇಂಟ್ ಜಾರ್ಜ್ ಕಾಲೇಜಿನಲ್ಲಿ 'ಸೂಪರಿಂಟೆಂಡೆಂಟ್' ಆಗಿ ಸೇರಿದನು. ಆ ಕಾಲದಲ್ಲಿ ಎಲ್ಲಿಸ್ ತೆಲುಗು ಭಾಷೆಯನ್ನು ಕುರಿತು ಸಿದ್ಧಪಡಿಸಿದ ನಿಬಂಧ ಹಲವು ಉಪಯುಕ್ತ ಮಾತುಗಳನ್ನು ಒಳಗೊಂಡಿದೆ.

ಫ್ರಾನ್ಸಿಸ್ ವೈಟ್ ಎಲ್ಲಿಸ್ (Francis White Ellis) ಆದ ಮೇಲೆ ದ್ರಾವಿಡ ಭಾಷೆಗಳ ವಿಚಾರದಲ್ಲಿ ರ್ಯಾಸಮುಸ್‌ರಾಸ್ಕ್ (೧೭೮೭-೧೮೩೨) ಎಂಬಾತ ಒಂದೆರಡು ಮಾತುಗಳನ್ನು ತಿಳಿಸಿದನು. ಭಾರತ ದೇಶಕ್ಕೆ ಬಂದಿದ್ದ ರ್ಯಾಸ್‌ಮುಸ್‌ರಾಸ್ಕ್ ಕೂಡ ದ್ರಾವಿಡ ಭಾಷೆಗಳು ಸಂಸ್ಕೃತಕ್ಕೆ ಸೇರದ ಒಂದು ಬೇರೆ ಪರಿವಾರವೆಂದು ಭಾವಿಸಿದ್ದು ಗಮನಾರ್ಹ.

---

[1] N. Venkata Rao, Ellis Dissertation on the Telugu Language, *Annals of Oriental Research of the University of Madras*, vol. Xii, 1954-55.

He (Rasmus Rask) was also the first to see that the Dravidian Languages (by him called Malabaric) were totally different from Sanskrit"[1] ಅಲ್ಲದೆ Karl graul (೧೮೧೪–೧೮೬೪) ಎಂಬ ಜರ್ಮನಿಯಾತ "Outline of Tamil Grammar accompanied by specimens of Tamil structure and comparative tables of the flextional system in other Dravidian dialects, (Leipzig)

ಎನ್ನುವ ಹೊತ್ತಗೆಯನ್ನು ೧೮೫೫ ರಲ್ಲಿ ಪ್ರಕಟಿಸಿದ. ಕಾಲ್ಡ್‌ವೆಲ್‌ಗಿಂತ ಒಂದು ವರ್ಷ ಮುಂಚೆ ದ್ರಾವಿಡ ಉಪಭಾಷೆಗಳೆಂಬ ಪ್ರಯೋಗವಾಗಿದೆ ಅದರಲ್ಲಿ.

ಇವನ ತರುವಾಯ ಶ್ರೀರಂಗಪಟ್ಟಣದ ಕೃಷ್ಣಮಾಚಾರಿ, ಅಲ್ಲಿಂದ ಮುಂದೆ ರಾಬರ್ಟ್ ಕಾಲ್ಡ್‌ವೆಲ್—ಹೀಗೆ ದ್ರಾವಿಡ ಭಾಷೆಗಳ ಮೂಲವನ್ನು ಬೆದಕಿ, ನಿಜಾಂಶಗಳನ್ನು ಕೆದಕಿ—ಹುಡುಕಿ ಸತ್ಯದ ಅನ್ವೇಷಣೆಯಲ್ಲಿ ನಿರತರಾದ ವಿದ್ವಾಂಸರ ಸಮೂಹ ಸಾಲಾಗಿ ನಿಲ್ಲುತ್ತದೆ. ಈ ಕಾಲದಲ್ಲಿ ದ್ರಾವಿಡ ಭಾಷೆಗಳಿಗೆ ರೆವರೆಂಡ್ ಕಿಟೆಲ್, ಗೊವರ್, ಬ್ರಿಗೆಲ್, ಡಾಸನ್, ಗ್ರೇಟರ್, ಗ್ರೌಲ್, ಗುಂಡರ್ಟ್, ಹೊಡ್ಸನ್, ಕೆನ್ನೆತ್, ಪೋಪ್, ರೀವ್ಸ್, ಸ್ಯಾಂಡರ್ಸನ್, ವಿನ್ಸ್‌ಲೊ—ಮುಂತಾದ ಕ್ರೈಸ್ತ ಪಾದ್ರಿಗಳ—ಪಾಶ್ಚಾತ್ಯ ಪಂಡಿತ ಪಂಕ್ತಿಯೊಂದು ನಿರ್ವ್ಯಾಜ ಸೇವೆಯನ್ನು ಸಲ್ಲಿಸಿತು.

ದ್ರಾವಿಡ ಭಾಷೆಗಳ ಸಮಗ್ರ ಇತಿಹಾಸದ ದೃಷ್ಟಿಯಿಂದ ಅಪೂರ್ವವೂ, ಅಮೂಲ್ಯವೂ ಆದ ಗ್ರಂಥವೆಂದರೆ ತಿನ್ನವೆಲ್ಲಿಯ ರೆವರೆಂಡ್ ಬಿಷಪ್ ರಾಬರ್ಟ್ ಕಾಲ್ಡ್‌ವೆಲ್ (೧೮೧೪–೧೮೯೧) ಬರೆದ 'ದ್ರಾವಿಡ ಭಾಷೆಗಳ ತೌಲನಿಕ ವ್ಯಾಕರಣ.' ಈತ ದ್ರಾವಿಡ ಭಾಷಾಶಾಸ್ತ್ರದ ಅಸ್ತಿತ್ವಕ್ಕೆ ಒಂದು ಭದ್ರವಾದ ಬುನಾದಿಯನ್ನು ಹಾಕಿಕೊಟ್ಟುದೇ ಅಲ್ಲದೆ ಅದಕ್ಕೊಂದು ಸರಿಯಾದ ರೂಪವನ್ನೂ, ಹೊಸ ಆವಿಷ್ಕಾರವನ್ನೂ ದೊರಕಿಸಿಕೊಟ್ಟನು. ಈತನ ವಿಷಯಸಂಗ್ರಹಣೆ ಹಾಗೂ ಜೋಡಣೆ, ಕ್ರಮಬದ್ಧವಾದ ವಿಂಗಡಣೆ, ಇವೆಲ್ಲವೂ ಅನುಕರಣೀಯವಾಗಿದ್ದುದಲ್ಲದೆ ಶಾಸ್ತ್ರೀಯ ವಿಷಯ ಲಲಿತವೂ—ಸರಳವೂ, ಹಿತವೂ—ಹದವೂ ಆದ ಶೈಲಿಯಲ್ಲಿ ನಿರೂಪಿತವಾಗಿದೆ. ಸುಮಾರು ಮೂರು ದಶಕಗಳಿಗೂ ಮಿಗಿಲಾದ ಸುದೀರ್ಘ ಅವಧಿಯಲ್ಲಿ ತಪಸ್ಸಿನಂತೆ ಅಭ್ಯಸಿಸುತ್ತಾ ತನ್ನ ಮೇರುಕೃತಿಯನ್ನು ರಚಿಸಿದನು. ಒಂದು ಶತಮಾನದ ಹಿಂದೆ ದ್ರಾವಿಡ ಭಾಷೆಗಳನ್ನು ಕುರಿತು ವಿದ್ವಾಂಸರ ಗಮನ ಸಾಕಷ್ಟು ಪ್ರಮಾಣದಲ್ಲಿ ಹರಿಯದಿದ್ದ ಕಾಲದಲ್ಲಿ, ಆ ಭಾಷೆಗಳ ವಿವರಗಳು ದುರ್ಲಭವಾಗಿದ್ದ ಕಾಲದಲ್ಲಿ, ಕಾಲ್ಡ್‌ವೆಲ್ ಸಾಹಸಪಟ್ಟು ಸಾಮಗ್ರಿಗಳನ್ನು ಸಮೃದ್ಧವಾಗಿ ಸಂಗ್ರಹಿಸಿದ್ದಾನೆ. ಅವನಲ್ಲಿ ಪ್ರತಿಭೆ-ಪಾಂಡಿತ್ಯಗಳೆರಡೂ ಸಮಪ್ರಮಾಣದಲ್ಲಿ ಸಮಾವೇಶವಾಗಿದ್ದುವು. ಅದರ ಪರಿಣಾಮವಾಗಿ ದ್ರಾವಿಡ ಭಾಷೆಗಳು ಸಂಸ್ಕೃತ ಭಾಷೆಯಿಂದ ಬಂದ ಭಾಷೆ

[1] Otto Jesperson, *Language, Origin and Growth.*

ಗಳಾಗಿರದೆ ಸ್ವತಂತ್ರವಾಗಿ ನಿಲ್ಲುವ ಪ್ರತ್ಯೇಕ ವರ್ಗವೆಂದು ಸಾಧಾರವಾಗಿ ನಿರೂಪಿಸಲು ಸಾಧ್ಯವಾಯಿತು, ಸುಲಭವಾಯಿತು.

ಕಾಲ್ಡ್‌ವೆಲ್ ತನ್ನ ಹಿರಿಯ ಹೊತ್ತಗೆಯನ್ನು ಹೊರತರುವುದರ ಮೂಲಕ ಒಂದು ಹೊಸ ವಿಚಾರ ವೇದಿಕೆಯನ್ನು ಸಿದ್ಧಪಡಿಸಿದನು. ಐತಿಹಾಸಿಕ ದೃಷ್ಟಿಯಿಂದ ದ್ರಾವಿಡ ಭಾಷಾಶಾಸ್ತ್ರ ಕ್ಷೇತ್ರದಲ್ಲಿ ನೂತನ ಶಕೆಯೊಂದು ಇವನ ಕೃತಿಯಿಂದಲೇ ಆರಂಭವಾಯಿತೆಂದು ಹೇಳಬಹುದು. ಆತ ಪರಿಶ್ರಮಪಟ್ಟು ಹುಡುಕಿದ ಆಧಾರ ಗಳಿಗಾಗಿ ಕೃತಜ್ಞತೆಯನ್ನು ತೋರಿಸೋಣ; ಆತನ ಅಮೋಘವಾದ ಕೃತಿ ರಚನೆಗಾಗಿ ಗೌರವ ವ್ಯಕ್ತಪಡಿಸೋಣ—ಸರಿಯೆ. ಆದರೂ ಕೆಲವೊಂದು ಅಂಶಗಳಲ್ಲಿ ಬಹುಶಃ ನಾನಾ ಕಾರಣಗಳಿಂದಾಗಿ, ಒಂದೆರಡು ದೋಷಗಳು ಉಳಿದುಹೋದವು. ಕನ್ನಡದ ವಿಚಾರದಲ್ಲಿ ಅವನು ತಿಳಿದದ್ದು ತೀರಾ ಕಡಿಮೆಯಾಗಿತ್ತು.

ಕಾಲ್ಡ್‌ವೆಲ್ಲನ ತರುವಾಯ ಅಥವಾ ಸಮಕಾಲದಲ್ಲಿಯೇ ರೆವರೆಂಡ್ ಎಫ್. ಕಿಟೆಲ್, ಗುಂಡರ್ಟ್, ಆರ್. ಆರ್. ಭಗವತ್ ಮೊದಲಾದವರು ದ್ರಾವಿಡ ಭಾಷೆ ಗಳು ಸಂಸ್ಕೃತದಿಂದ ಹುಟ್ಟಿದ ಭಾಷೆಗಳಲ್ಲವೆಂದು ಅನೇಕ ಅಂಕಿ ಅಂಶಗಳ ಆಧಾರದಿಂದ ಸ್ಪಷ್ಟಪಡಿಸಿದರು. ಇಷ್ಟಾದರೂ ಕೆಲವು ಸಂಪ್ರದಾಯಶೀಲರಾದ ಘನ ಪಂಡಿತರೂ, ಅಂಥ ಪಂಡಿತರ ಪ್ರಭಾವಕ್ಕೆ ಒಳಗಾಗಿ ಅವರ ಹೇಳಿಕೆಗಳನ್ನು ವಿಚಿಕಿತ್ಸೆಗೆ ಒಳಗು ಮಾಡಿ ಪರಿಶೀಲಿಸದ ಪಾಶ್ಚಾತ್ಯ ಪಂಡಿತರೂ, ಸಂಸ್ಕೃತದಿಂದಲೇ ಭಾರತೀಯ ಭಾಷೆ ಗಳು ಬಂದಿವೆಯೆಂದು ಭ್ರಮಿಸಿದರು. ಪ್ರಾಧ್ಯಾಪಕ ವಿಲ್ಸನ್ "ದ್ರಾವಿಡ ಭಾಷೆಗಳು ಸಂಸ್ಕೃತ ಭಾಷೆಯ ಆದರ್ಶ—ಅನುಕರಣೆಗಳಿಂದ ಸಂಸ್ಕಾರಗೊಂಡಿವೆ, ದ್ರಾವಿಡ ಭಾಷೆಗಳ ಪ್ರಮುಖ ಕಾವ್ಯಗಳೆಲ್ಲಾ ಸಂಸ್ಕೃತ ಮಹಾಕಾವ್ಯಗಳ ಅನುವಾದಗಳು, ಇಲ್ಲವೆ ಅವುಗಳ ಮಾದರಿಯ ಚೌಕಟ್ಟಿನಲ್ಲಿ ರಚಿತವಾದುವು"—ಎಂದು ನುಡಿದಿರು ವುದರಲ್ಲಿ ಅರ್ಧ ಸತ್ಯವಿದೆಯಾದರೂ, ಇದರಿಂದಲೇ ದ್ರಾವಿಡ ಭಾಷೆಗಳು ಸಂಸ್ಕೃತ ದಿಂದ ಹುಟ್ಟಿವೆಯೆಂದು ತಿಳಿಯಬಾರದು.

ಕನ್ನಡದಲ್ಲಿ 'ಕವಿರಾಜಮಾರ್ಗ', 'ಆದಿಪುರಾಣ', 'ವಿಕ್ರಮಾರ್ಜುನ ವಿಜಯ', 'ಶಾಂತಿಪುರಾಣ', 'ಸಾಹಸಭೀಮವಿಜಯ'ದಿಂದ ಮೊದಲುಗೊಂಡು ಎಲ್ಲ ಗದ್ಯ ಪದ್ಯ ಕಾವ್ಯಗಳಲ್ಲೂ, ಪಲ್ಮಿಡಿ—ಬಾದಾಮಿಯಿಂದ ಮೊದಲುಗೊಂಡು ಎಲ್ಲ ಶಾಸನಗಳಲ್ಲೂ ಸಂಸ್ಕೃತ ಪದಗಳನ್ನು ಬಹುವಾಗಿ ಬಳಸಿರುವುದು ಎದ್ದು ಕಾಣುತ್ತದೆ, ನಿಜ. ಕೊನೆಗೆ ಜನಬಳಕೆಯ ಆಡುನುಡಿಗಳನ್ನು ಬಳಸಿಕೊಂಡು ಕಾವ್ಯರಚನೆಗೆ ತೊಡಗಿದ ಶರಣರ ವಚನಗಳಲ್ಲೂ, ದಾಸರ ಕೀರ್ತನೆಗಳಲ್ಲೂ ಸಂಸ್ಕೃತ ತಲೆ ಹಾಕಿದೆ, ಸರಿಯೆ. ಆದರೆ ಕವಿರಾಜಮಾರ್ಗ ಕಾಲದಿಂದಲೂ ಅಥವಾ ಅದಕ್ಕೂ ಹಿಂದಿನ ಶಾಸನಗಳ ಕಾಲದಿಂದಲೂ ಬೆಳೆದು ಬಂದಿರುವ ಕನ್ನಡ ಭಾಷೆಯಲ್ಲಿ ಸಂಸ್ಕೃತಕ್ಕೆ ಹೊರತಾದ, ದ್ರಾವಿಡ ಭಾಷೆಗಳಿಗೆ ವಿಶಿಷ್ಟವಾದ ವ್ಯಾಕರಣ ನಿಯಮದ ಸೂತ್ರ ಹಾಸುಹೊಕ್ಕಾಗಿ ಸೇರಿಹೋಗಿದೆ. ಅದರ ಒಳ ಎಳೆಗಳನ್ನು ಕಂಡ ಹೊರತು ಸಂಸ್ಕೃತ ದ್ರಾವಿಡ ಭಾಷೆ

ಗಳ ನಂಟು-ಗಂಟುಗಳ ಬೆಸುಗೆ-ಬೇರ್ಪಡೆಗಳು ತಿಳಿಯುವುದಿಲ್ಲ.

ಕಾಲ್ಡ್‌ವೆಲ್ಲನಿಗಿಂತ ಹಿಂದಿನವರಾದ ಕೋಲ್‌ಬ್ರೂಕ್, ಕ್ಯಾರಿ, ವಿಲ್ಕಿನ್ಸ್ ಮೊದಲಾದವರು ಸಂಸ್ಕೃತದಿಂದ ದ್ರಾವಿಡ ಭಾಷೆಗಳು ಬಂದುವೆಂದು ನಂಬಿದ್ದುದು ಹಾಗಿರಲಿ, ಆರ್. ಜಿ. ಭಂಡಾರಕರರೂ ದ್ರಾವಿಡ ಭಾಷೆಗಳು ಸ್ವತಂತ್ರ ಕುಟುಂಬಕ್ಕೆ ಸೇರಿದ ಭಾಷೆಗಳೆಂಬುದನ್ನು ಒಪ್ಪಲಿಲ್ಲ. ಈ ಅವಧಿಯಲ್ಲಿ ಅಲ್ಲಲ್ಲಿ ಅಭಿಪ್ರಾಯಗಳ ಚಕಮಕಿಯೂ, ಮಂಡನೆ-ಖಂಡನೆಗಳೂ ಆದುವು. ಆದರೆ ಕೊನೆಕೊನೆಗೆ ದ್ರಾವಿಡ ಭಾಷೆಗಳು ಸ್ವತಂತ್ರವಲ್ಲವೆಂದು ವಿರೋಧಿಸಿದ ವಿದ್ವಾಂಸರು ತಣ್ಣಗಾದರು. ಈ ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲೂ ಹಿಂದಿನ ನಂಬಿಕೆಯನ್ನೇ ಹಿಂಬಾಲಿಸುತ್ತಾ ಒಬ್ಬ ಲೇಖಕರು ಬರೆದ ವಾಕ್ಯಗಳನ್ನು ಅವಶ್ಯ ಗಮನಿಸಬೇಕು.

ಅವರು "....ಪ್ರಪಂಚದಲ್ಲಿ ಮೊದಲು ಇದ್ದುದೇ ವೇದದ ಸಂಸ್ಕೃತ. ಅದರಿಂದ ಪಾರ್ಸಿಯವರ ಝೆಂಡ ಅವಸ್ಥಾ ಭಾಷೆ,[1] ಅದರಿಂದ ಪ್ರಾಚ್ಯ ದೇಶದ ಭಾಷೆಗಳು, ಹಾಗೆಯೇ ನಮ್ಮ ಈಗಿನ ಸಂಸ್ಕೃತ, ಆ ಸಂಸ್ಕೃತದಿಂದ ಪ್ರಾಕೃತ ಭಾಷೆ, ಅದರಿಂದ ಉತ್ತರದೇಶದ ಪಂಜಾಬಿ, ಬೇಹಾರಿ, ಬಂಗಾಳಿ, ಮಹಾರಾಷ್ಟ್ರಾದಿ ಭಾಷೆಗಳು, ಹಾಗೆಯೇ ನಮ್ಮ ಕನ್ನಡವೂ ಉಂಟಾದ್ದೆಂದು ಕಾಣುತ್ತದೆ. ಈಗಿನ ಪಾಶ್ಚಾತ್ಯರು ಗೋತ್ರವನ್ನೂ ಬದಲಾಯಿಸಿಬಿಟ್ಟಿರುವರು. ಶಬ್ದಮಣಿದರ್ಪಣಕಾರನಾದ ಕೇಶಿರಾಜನೂ ತನ್ನ ಪ್ರತಿ ಸೂತ್ರಗಳಲ್ಲಿ ಸಕ್ಕದ-ಕನ್ನಡವೆಂದು ಆಗಾಗ ಉದ್ಘೋಷಿಸುವುದರಿಂದಲೂ, ಕನ್ನಡ ವ್ಯಾಕರಣವನ್ನು ವಿವರಿಸಿದುದರಿಂದಲೂ, ವಿಶೇಷವಾಗಿ ಸಂಸ್ಕೃತ ಶಬ್ದಗಳು ಗ್ರಂಥಗಳಲ್ಲಿ ಕಂಡುಬರುವುದರಿಂದಲೂ ಅಕ್ಷರ ಸಮಾಮ್ನಾಯದಲ್ಲಿ ಸಂಸ್ಕೃತಕ್ಕೂ ಕನ್ನಡಕ್ಕೂ ದೇಶೀಯವಾದ ಱಳಕುಳಗಳ ಹೊರತು ವಿಶೇಷ ಭೇದವು ಕಂಡುಬಾರದಿರುವುದರಿಂದಲೂ ಸಂಸ್ಕೃತ ಅಥವಾ ಪ್ರಾಕೃತದಿಂದಲೇ ಈ ನಮ್ಮ ಕನ್ನಡವು ಹುಟ್ಟಿದ್ದಿರಬೇಕೆಂದು ಕಾಣುತ್ತದೆ. ತಮಿಳು ಭಾಷೆಯು ಯಾವ ವಿಧದಿಂದಲೂ ಸಂಸ್ಕೃತದೊಡನೆ ಸರಿಹೋಲದಿರುವುದರಿಂದ ಅದು ಬೇಕಾದರೆ ದ್ರವಿಡ ಕುಲಕ್ಕೇ ಸೇರಿರಲಿ, ನಾವು ಬೇಡವೆನ್ನುವುದಿಲ್ಲ. ಆದುದರಿಂದ ಸಂಸ್ಕೃತ ಅಥವಾ ಪ್ರಾಕೃತದಿಂದ ನಮ್ಮ ಹಳಗನ್ನಡವೂ, ಆಮೇಲೆ ಹಿಂದೆ ವಿವರಿಸಿದಂತೆ ಮಧ್ಯಮ ತರಗತಿಯ ಕನ್ನಡವೂ, ಆಮೇಲೆ ಈಗಿನ ಹೊಸಗನ್ನಡವೂ ಉಂಟಾದ್ದಿರಬೇಕು."[2] ಇಂಥ ಮಡಿವಂತಿಕೆಯ ಮೊಂಡು ವಾದಗಳು ಅವೈಜ್ಞಾನಿಕವಾದುದರಿಂದ ಲಕ್ಷ್ಯಾರ್ಹವಾಗಿಲ್ಲ.

---

[1] Zend (ಜೆಂದ್), ಅವೆಸ್ಥಾ (Avesta) ಭಾಷೆಗಳಿಗೆ ಬಂದ ಅವಸ್ಥೆ ಇದು! ಆ ಕಾಲದ ಹಳೆಯ ಪರಿಷತ್ಪತ್ರಿಕೆಗಳನ್ನು ಓದಿದರೆ ಅಂದಿನ ಕೆಲವು ಕನ್ನಡ ಲೇಖಕರು ಕಿಟೆಲರನ್ನು ಕಿತ್ತೀಳೆಯೆಂದೂ, ಗುಂಡರ್ಟರನ್ನು ಗುಂಡರಟ್ಟೆಯೆಂದೂ ಕಾಲ್ಡ್‌ವೆಲ್ ಅವರನ್ನು ಕಾಳೆಡವಲ ಎಂದೂ, ಬ್ರೌನ್ (Brown) ಅವರನ್ನು ಬ್ರೌಣನೂ ಎಂದೂ, ನಿಘಂಟನ್ನು ದಿಕ್ಷನರಿ ಎಂದೂ ವಿಚಿತ್ರವಾಗಿ ಕರೆದಿರುವುದು ಕಾಣುತ್ತದೆ.

[2] ಕೊಳಕೆ ಪರಮೇಶ್ವರಯ್ಯ, ಕಸಾಪಪ ೧೨-೩, ೧೯೨೭, ಪುಟ ೧೭೪-೭೫.

ದ್ರಾವಿಡ ಭಾಷೆಗಳನ್ನು ಆಳವಾಗಿ ಅಭ್ಯಾಸ ಮಾಡಿದಷ್ಟೂ ಸಂಸ್ಕೃತದೊಡನೆ ಹಾಗೂ ಇತರ ಪ್ರಾಚೀನ ಇಂಡೋ-ಯುರೋಪಿಯಾ ಭಾಷೆಗಳೊಡನೆ ಅದರ ಸಂಬಂಧ ಸ್ಪಷ್ಟವಾಗಿ ಸ್ಥಾಪಿತವಾಗುತ್ತದೆಂದು ಡಾ|| ಪೋಪ್ ಹೇಳಿದ್ದಾನೆ.[1] ಏಸುಕ್ರಿಸ್ತನ ಪರ್ವತ ಪ್ರಸಂಗವನ್ನು ನಾಲ್ಕು ದ್ರಾವಿಡ ಭಾಷೆಗಳಲ್ಲಿ ಅನುವಾದ ಮಾಡಿ ಅಚ್ಚು ಹಾಕಿಸಿದ ಪುಸ್ತಕದ ಪೀಠಿಕೆಯಲ್ಲಿ ಈ ವಿಚಾರದ ಪುನಃ ಪ್ರಸ್ತಾಪ ಮಾಡಿ, ದ್ರಾವಿಡ ಭಾಷೆಗಳ ಮತ್ತು ಕೆಲ್ಟಿಕ್ ಮತ್ತು ಟ್ಯುಟೋನಿಕ್ ಭಾಷೆಗಳ ರಚನಾ ಸಾದೃಶ್ಯಗಳತ್ತ ಭಾಷಾ ವಿದ್ವಾಂಸರು ತಮ್ಮ ಗಮನ ಹರಿಸಬೇಕೆಂದು ಬಿನ್ನಪ ಮಾಡಿದ್ದಾನೆ.[2]

ಇಷ್ಟಲ್ಲದೆ ತನಗೆ ಬಿಡುವು ಇದ್ದಿದ್ದಲ್ಲಿ ತಾನೇ ಈ ಕೆಲಸ ನಡಸುತ್ತಿದ್ದುದಾಗಿಯೂ, ಸಾಧ್ಯವಾದಲ್ಲಿ ಮುಂದಿನ ಮುದ್ರಣಗಳಲ್ಲಿ ಈ ಕೊರತೆಯನ್ನು ಹೋಗಲಾಡಿಸುವುದಾಗಿಯೂ ಹೇಳಿದ್ದಾನೆ. ಆದರೆ ಆತ ಅಂದುಕೊಂಡ ಕಾರ್ಯ ಆಗಲಿಲ್ಲ. ಬಹುಶಃ ಅದಕ್ಕೆ ಬೇಕಾದ ಪುರುಸೊತ್ತು ಸಿಗಲಿಲ್ಲ. ಆದರೂ ಆತ ತನ್ನ ಮುಂದಿನ ಒಂದು ಹೊತ್ತಗೆಯಲ್ಲಿ ಕಾಲ್ಡ್‌ವೆಲ್ಲನ ನಿರ್ಣಯಗಳತ್ತ ತನ್ನ ಗೌರವಾನ್ವಿತ ಒಲವು ತೋರಿದಂತೆ ಭಾಸವಾಗುತ್ತದೆ. ಆದರೆ ತನ್ನ ವೈಯಕ್ತಿಕ ನಿಲವನ್ನು ಆತ ಆಗಲೂ ಬಿಟ್ಟುಕೊಡಲಿಲ್ಲ.

> While agreeing in the main with Dr. Caldwell, I yet think that the remarkable analogies between the Celtic and the Dravidian Languages merit a more thorough investigation.

ಎಂದು ನುಡಿದಿದ್ದಾನೆ.[3]

ಕಾಲ್ಡ್‌ವೆಲ್ಲನು ಪೋಪನ ಅಭಿಪ್ರಾಯಗಳನ್ನು ಪರಾಮರ್ಶಿಸುತ್ತಾ, ಆದಷ್ಟು ಬೇಗ ಪೋಪ್ ತನ್ನ ಆಮೂಲಾಗ್ರ ಸಂಶೋಧನೆ ನಡಸಿ ಅದರಿಂದ ಬಂದ ನಿರ್ಧಾರಗಳನ್ನು ಹೊರಗೆಡಹಲು ಆಹ್ವಾನಿಸಿದನಲ್ಲದೆ ಪೋಪನ ಹೇಳಿಕೆಗಳಲ್ಲಿದ್ದ ಒಂದೆರಡು ಮಾತುಗಳನ್ನು ಇನ್ನೂ ನಿಶ್ಚಯಪಡಿಸಿದನು. ಇಂಡೊ-ಯೂರೋಪಿಯನ್ ವರ್ಗದ ಕೆಲ್ಟಿಕ್ ಭಾಷೆಯೊಡನೆ ದ್ರಾವಿಡ ಭಾಷೆಯ ಸಾದೃಶ್ಯವಿದ್ದಂತಿದೆಯೆಂದು ಪೋಪ್ ಹೇಳಿದುದನ್ನು ಕಾಲ್ಡ್‌ವೆಲ್ ತನ್ನ ವಾದಕ್ಕೆ ತಕ್ಕಂತೆ ಹೊಂದಿಸಿಕೊಂಡು ಇಂಡೊ-ಯುರೋಪಿಯನ್ ಗುಂಪಿನಲ್ಲೆಲ್ಲಾ ಕೆಲ್ಟಿಕ್ ಒಂದೇ ಸಿಥಿಯನ್ ಗುಂಪಿನೊಡನೆ ಹೋಲತಕ್ಕದ್ದು; ಆದುದರಿಂದ ಕೆಲ್ಟಿಕ್, ಸಿಥಿಯನ್ ಮತ್ತು ದ್ರಾವಿಡ ಭಾಷೆಗಳು ಒಂದು ಮೂಲ ಭಾಷೆಯ ಸಂಪರ್ಕ ಭಾಷೆಗಳಿರಬೇಕು—ಎಂದು ವಿವರಿಸಿದನು.

---

[1] Dr. pope, *Tamil Hand-Book*, 1859, Madras.

[2] Dr. pope, *Sermon on the Mount*, 1960, Madras.

[3] Dr. pope, *Outlines of the Grammar of the Tuda Language*, 1872, Bangalore.

ಕೆಲವು ಪಾಶ್ಚಾತ್ಯ ಹಾಗೂ ಭಾರತೀಯ ವಿದ್ವಾಂಸರು ದ್ರಾವಿಡ ಭಾಷೆಗಳು ಇಂಡೊ-ಯುರೋಪಿಯಾ ಭಾಷಾಪರಿವಾರಕ್ಕೆ ಸೇರಿದುವೆಂದು ವಾದಿಸಿದರು. ಇದೇ ರೀತಿಯಲ್ಲಿ ದಿವಂಗತರಾದ ಆರ್. ಸ್ವಾಮಿನಾಥ ಅಯ್ಯರ್ ಅವರೂ ಬಹು ಶ್ರಮ ಪಟ್ಟು ತಮಿಳು ಭಾಷೆ ಸಂಸ್ಕೃತಜನ್ಯವೆಂದು ಸಾಧಿಸಲು ವೃಥಾ ಪ್ರಯತ್ನಪಟ್ಟರು. ಆದರೆ ನೀರಗುಳ್ಳೆಯಂತೆ ಇವರ ತಪ್ಪು ಕಲ್ಪನೆಗಳು ಕ್ರಮೇಣ ನಿರಸನಗೊಂಡುವು. ದ್ರಾವಿಡ ಭಾಷೆಗಳು ಸ್ವತಂತ್ರವೆಂಬ ವಿಚಾರ ಸ್ಥಾಪಿತವಾಯಿತು. ಭಾಷೆಗಳ ಬಾಂಧವ್ಯ ವನ್ನು ಪ್ರಕಟಗೊಳಿಸುವ ಅಳತೆಗೋಲು ವ್ಯಾಕರಣ. ಹಿಂದಿಭಾಷೆಗೂ ಸಂಸ್ಕೃತಕ್ಕೂ ಇರುವ ವ್ಯಾಕರಣದ ಸಂಬಂಧ, ಕನ್ನಡ ಅಥವಾ ದ್ರಾವಿಡ ಭಾಷೆಗಳಿಗೂ ಸಂಸ್ಕೃತಕ್ಕೂ ಇದೆಯೇ ಎಂಬುದನ್ನು ನೋಡಬೇಕು. ಆಗ ದ್ರಾವಿಡ ಭಾಷೆಗಳು ಸ್ವತಂತ್ರ ಪರಿ ವಾರದ ಭಾಷೆಗಳೆಂಬುದು ತಾನಾಗೇ ತಿಳಿದುಬರುತ್ತದೆ.

ಇದೇ ಕಾಲದಲ್ಲಿ ಪಂಚದ್ರಾವಿಡ ಭಾಷೆಗಳ ವಿಚಾರದಲ್ಲಿ ಇದ್ದ ತಪ್ಪು ಅಭಿಪ್ರಾಯಗಳೂ ನೇರ್ಪುಗೊಂಡುವು. ಕನ್ನಡ, ತೆಲುಗು, ತಮಿಳು, ಮಲೆಯಾಳ, ತುಳು—ಈ ಐದು ಭಾಷೆಗಳನ್ನು ಪಂಚದ್ರಾವಿಡ ಭಾಷೆಗಳೆಂದು ಕರೆಯುವರಾದರೂ, ಹಿಂದಿನ ಪಂಡಿತರು ಕನ್ನಡ, ತೆಲುಗು, ತಮಿಳು, ಮರಾಠಿ ಮತ್ತು ಗುಜರಾತಿ ಈ ಅಯ್ದು ಭಾಷೆಗಳನ್ನು ಪಂಚದ್ರಾವಿಡವೆಂದು ಕರೆಯುತ್ತಿದ್ದರು. ಭಾಷಾಶಾಸ್ತ್ರಜ್ಞರು ಸಂಶೋಧನೆಗಳಿಂದ ಮರಾಠಿ ಮತ್ತು ಗುಜರಾತಿ ಭಾಷೆಗಳನ್ನು ಪಂಚದ್ರಾವಿಡದ ಗುಂಪಿಗೆ ಸೇರುವುದಿಲ್ಲವೆಂದೂ, ಅದರ ಬದಲು ಅವು ಪಂಚಗೌಡ ಭಾಷೆಗಳ ಸಂಗಡಕ್ಕೆ ಸೇರುತ್ತವೆಯೆಂದೂ ಈ ಭಾಷೆಗಳನ್ನು ಸರಿಯಾಗಿ ವರ್ಗೀಕರಿಸಿದರು. ಉತ್ತರ ಭಾರತದಲ್ಲಿ ವಿಶೇಷವಾಗಿ ಇರುವ ಇಂಡೊ-ಆರ್ಯನ್ ವರ್ಗಕ್ಕೆ ಸೇರಿದ ಪಂಚಗೌಡ ಭಾಷೆಗಳೇ ಬೇರೆ, ದಕ್ಷಿಣ ಭಾರತದಲ್ಲಿ ಹೆಚ್ಚಾಗಿ ಇರುವ ಪಂಚದ್ರಾವಿಡ ಭಾಷೆಗಳೇ ಬೇರೆ. ಪಂಚಗೌಡ ಭಾಷೆಗಳು ; ಬಂಗಾಳಿ (ವಂಗಭಾಷೆ), ಸಿಂಧಿ, ಮರಾಠಿ, ಗುಜರಾತಿ ಮತ್ತು ಸಂಸ್ಕೃತ—ಇವು ಇಂಡೊ-ಆರ್ಯನ್ ಗುಂಪಿನ ಭಾಷೆ ಗಳು. ಇಂಡೊ-ಆರ್ಯನ್ ವರ್ಗ ಇಂಡೊ-ಯುರೋಪಿಯನ್ ಭಾಷಾಪರಿವಾರದ ಒಂದು ಪ್ರಧಾನ ಶಾಖೆ.

ದ್ರಾವಿಡ ಭಾಷಾಪರಿವಾರವನ್ನು ಕುರಿತು ಅಭ್ಯಾಸ ಮಾಡಿ ಸಂಶೋಧನೆ ನಡಸಿ ಕೃತಿರಚನೆ ಮಾಡಿದವರಲ್ಲಿ ಕಾಲ್ಡ್‌ವೆಲ್ ಧ್ರುವತಾರೆಯೆಂದು ಹಿಂದೆ ಹೇಳಿದೆ, ಅವನ ಮೇರುಕೃತಿಯ ಪ್ರಸ್ತಾಪ ಮಾಡಿದೆ. ಅದರಂತೆ ಜೂಲ್ಸ್‌ಬ್ಲಾಕ್, ಬರೊ, ಎಮಿನೊ, ಭ. ಕೃಷ್ಣಮೂರ್ತಿ, ಭಟ್ಟಾಚಾರ್ಯ ಮುಂತಾದವರ ಬರೆಹದ ವಿಚಾರ ಕೂಡ ಉಲ್ಲೇಖಿಸಿದೆ. ಇವರಲ್ಲದೆ ಇನ್ನೂ ಅನೇಕ ಮಹನೀಯರು ಈ ಕ್ಷೇತ್ರದಲ್ಲಿ ಕೃಷಿಮಾಡಿದ್ದಾರೆ. ಅವರಲ್ಲಿ ಎಲ್. ವಿ. ರಾಮಸ್ವಾಮಿ ಅಯ್ಯರ್ ಅಗ್ರಗಣ್ಯ. ಜಿ. ವಿ. ಗ್ರಿಯರ್‌ಸನ್, ಸ್ಟೆನ್‌ಕೊನೊ, ರಾ. ನರಸಿಂಹಾಚಾರ್, ರಾಮಕೃಷ್ಣಯ್ಯ, ಕೆ. ವಿ. ಸುಬ್ಬಯ್ಯ, ಸಿ. ನಾರಾಯಣರಾವ್, ಟಟಲ್, ಕಿಟೆಲ್, ಆಲ್ಫ್ರೆಡ್

ಮಾಸ್ಟರ್, ತೀ.ನಂ.ಶ್ರೀ, ಸಿ. ಆರ್. ಶಂಕರನ್, ಟಿ. ಪಿ. ಮೀನಾಕ್ಷಿಸುಂದರಂ, ಬ್ರೈಟ್, ಕಮಿಲ್ ಜ್ವಲೇಬಿಲ್, ಆಂಡ್ರೊನೋವ್, ಡಾ|| ಡಿ. ಎಲ್. ಎನ್. ಮೊದಲಾದವರನ್ನು ಮರೆಯುವಂತಿಲ್ಲ.

೨

# ದ್ರಾವಿಡರು

ಭಾರತದಲ್ಲಿ ಭಾಷಾಸಂಕರವಾಗಿರುವಂತೆ ವರ್ಣಸಂಕರವೂ ಆಗಿದೆ. ಹೊರಗಿನಿಂದ ಬಂದ ಭಾಷೆಗಳು ಬಹುಕಾಲ ಇಲ್ಲಿ ಬಾಳಿ ಭಾರತೀಯತ್ವವನ್ನು ಪಡೆದುಬಿಟ್ಟಿರುವಂತೆ ಹೊರಗಿನಿಂದ ಬಂದ ಜನಾಂಗಗಳೂ ಆಗಿವೆ. ಈ ನಾಡಿನಲ್ಲಿ ಸಾಂಸ್ಕೃತಿಕವಾಗಿ ಜನಾಂಗಿಕವಾಗಿ ಭಾಷಿಕವಾಗಿ ಪರಸ್ಪರ ಪ್ರಭಾವ ಆಗಿದೆ. ಮೊದಲಲ್ಲಿ ಸಂಘರ್ಷ ತಲೆ ತೋರಿರಬಹುದು. ಅನಂತರ ಸಂಪರ್ಕ ನಿಕಟವಾಯಿತು. ಸೌಹಾರ್ದ ಮೂಡಿತು. ಹೀಗಾಗಿ ಇಂದು ಭಾರತದಲ್ಲಿ ದ್ರಾವಿಡರು ಸಂಪೂರ್ಣ ಭಾರತೀಯತ್ವ ಹೊಂದಿರುವ ಜನಾಂಗವಾಗಿದೆ.

ಆದರೆ ದ್ರಾವಿಡರು ಮೂಲಭಾರತೀಯರಲ್ಲವೆಂಬುದು ಬಲ್ಲಿದರ ಅಭಿಪ್ರಾಯ. ಭಾರತದಲ್ಲಿ ಮೊತ್ತಮೊದಲಿದ್ದವರು ನೀಗ್ರೋ ವರ್ಗದ ಜನರು. ಇವರು ಪುರಾತನ ಶಿಲಾಯುಗದವರು. ಈ ಜಾತಿಯ ಜನರು ಕೂಡ ಮುಂಡಾವರ್ಗದ ಜನರಿಗಿಂತ ಮೊದಲು ಬಂದವರೇ ಹೊರತು ಇಲ್ಲಿನ ಮೂಲನಿವಾಸಿಗಳಲ್ಲವೆಂಬ ತಿಳಿವಳಿಕೆಯಿದೆ. ನೀಗ್ರೋ ಜನ ಅಚ್ಚ ಕಪ್ಪುಬಣ್ಣದವರು. ಅವರ ಕೂದಲು ಗುಂಗುರು. ಆಫ್ರಿಕದಿಂದ ಅರೇಬಿಯಾ ಹಾಗೂ ಇರಾನಿನ ಸಮುದ್ರತೀರದ ಮೂಲಕವಾಗಿ ಅವರು ಭಾರತ ಹೊಕ್ಕಿರಬೇಕೆಂದು ಭಾವಿಸಲಾಗಿದೆ. ನೀಗ್ರೋ ಜಾತಿಯ ಜನರು ಈ ನಾಡಿನ ನೆಲದಿಂದ ಬಹುಮಟ್ಟಿಗೆ ಇಲ್ಲವಾಗಿದ್ದಾರೆ. ಬಹುಮಟ್ಟಿಗೆ ಎಂದು ಹೇಳಲು ಕಾರಣವಿದೆ. ಅವರ ಒಂದೆರಡು ಚದುರಿದ ಕುಡಿಗಳು ಅಲ್ಲಲ್ಲಿ ಮಿನುಗುವುದುಂಟು. ಬೆಟ್ಟಗುಡ್ಡ ಹಾಗೂ ಕಾಡುಮೇಡುಗಳ ಕಪ್ಪು ಜನಾಂಗದವರಲ್ಲಿನ ದುಂಡು ತಲೆಯ ಅಂಶ ಕೂಡ ನೀಗ್ರೋಗೆ ಸೇರಿದ್ದೆಂದು ತಿಳಿಯಲಾಗಿದೆ.

ನೀಗ್ರೋ ಜನಾಂಗ ಉಳಿದಿಲ್ಲವೆಂಬುದರ ಅರ್ಥ ಅವರು ಇಲ್ಲಿನ ಇತರ ಜನಾಂಗಗಳೊಡನೆ ತಮ್ಮತನ ನೀಗಿಕೊಂಡಂತೆ ಸಮಾವೇಶವಾಗಿಬಿಟ್ಟಿದ್ದಾರೆಂಬುದು. ಆದರಂತೆ ಅವರ ಭಾಷೆಯೂ ಉಳಿದಿಲ್ಲ. ಅಂದರೆ ಅವರ ಭಾಷೆ ಇತರ ಭಾಷೆಗಳಲ್ಲಿ, ಇಲ್ಲವೇ ಬೆರೆತುಬಿಟ್ಟಿದೆ, ಇಲ್ಲವೇ ಅವರು ಇತರ ಭಾಷೆಗಳನ್ನು ಸ್ವೀಕರಿಸಿದ್ದಾರೆ. ಅಂತೂ ಅವರ ಭಾಷೆ ಇಂದು ಪರಿಚಯವಿಲ್ಲದಂತೆ ಮರೆಯಾಗಿದೆ. ಅವರು ಸ್ವೀಕರಿಸಿದ ನೆರೆಹೊರೆಯ

ಭಾಷೆಗಳಲ್ಲಿ ದ್ರಾವಿಡ ಮತ್ತು ಮುಂಡಾ ಪ್ರಮುಖ. ನೀಗ್ರೋ ಜನಾಂಗದ ಮತ್ತು ಭಾಷೆಯ ಪಳೆಯುಳಿಕೆಯೆಂದು ಊಹಿಸಿರುವ ಜನ ಕುಳುವ್ರು. ಇವರು ತೆಂಕಣ ಭಾರತ ದಲ್ಲಿ ಅಲ್ಲಲ್ಲಿ ಇದ್ದಾರೆ. ಇವರನ್ನು ಕೊರವರೆಂದೂ ಎರುಕಲರೆಂದೂ ಕೈಕಾಡಿ ಎಂದೂ ಕರೆಯುವರು. ಬುಟ್ಟಿ ಹೆಣೆಯುವುದು ಇವರ ಮುಖ್ಯ ಕಸುಬು. ಇವರು ಆಡುವ ಭಾಷೆ ತಮಿಳಿನಂತೆ ತೋರುತ್ತದೆ. ಆದರೆ ಭಾಷಾವಿಜ್ಞಾನಿಗಳು ಇವರ ಭಾಷೆ ಯಲ್ಲಿನ ಸುಮಾರು ನೂರಿಪ್ಪತ್ತು ಶಬ್ದಗಳತ್ತ ನಿಟ್ಟಿಸಿದ್ದಾರೆ. ಈ ಶಬ್ದಗಳು ಭಾರತದ ಬೇರಾವ ಭಾಷೆಗೂ ಹೊಂದಿಕೆಯಾಗುವುದಿಲ್ಲವೆಂದು ತಿಳಿಸಿದ್ದಾರೆ. ಅಲ್ಲದೆ ಈ ಶಬ್ದ ಗಳು ನೀಗ್ರೋ ಜನಾಂಗದವರು ಮೊದಲು ಆಡುತ್ತಿದ್ದ ಭಾಷೆಯ ಉಳಿಕೆಯಿರಬ ಬಹುದೆಂದೂ ಸಂದೇಹಿಸಿದ್ದಾರೆ. ಹೀಗೆಯೇ ಸಮುದ್ರತೀರದ, ಕನ್ನಡನಾಡ ಕರಾವಳಿಯ ವಿಶಾಂಗುಲಿಗರಲ್ಲಿ ಈ ನೀಗ್ರೋ ಪಳೆಯುಳಿಕೆಗಳಿವೆಯೆಂದು ತಿಳಿದಿದ್ದಾರೆ.

ನೀಗ್ರೋಜಾತಿಯ ಜನಾಂಗವಾದಮೇಲೆ ಬಂದವರು ಮಂಗೋಲಿಯನರು. ಇವರನ್ನು ಕಿರಾತರೆಂದು ಪ್ರಾಚೀನ ಕೃತಿಗಳಲ್ಲಿ ನಿರ್ದೇಶಿಸಿದೆ. ಮಂಗೋಲಿಯನರು ಆರ್ಯರ ಅನಂತರ ಈ ನಾಡಿಗೆ ಬಂದವರೆಂಬ ತಿಳಿವಳಿಕೆಯನ್ನೂ ಕೆಲವರು ಮಂಡಿಸಿದ್ದಾರೆ. ಈ ತಿಳುವಳಿಕೆಯುಳ್ಳವರ ಅನ್ನಿಸಿಕೆಯಂತೆ ಮಂಗೋಲಿಯನರು ಆರ್ಯಾನಂತರ ಬಂದವ ರಾದುದರಿಂದ ಇಡಿಯ ನಾಡಿನ ತುಂಬ ಹರಡಿಕೊಳ್ಳಲಾಗಲಿಲ್ಲ. ಇವರ ಗುಂಪಿನವರು ಯಾರೂ ಸಮಗ್ರಭಾರತದ ಪ್ರಾಮುಖ್ಯ ಪಡೆಯಲಾಗಲಿಲ್ಲ. ಸಾಂಸ್ಕೃತಿಕ ಸ್ವೀಕರಣ ಕಾರ್ಯದಲ್ಲೂ ಇವರು ಹೆಚ್ಚಿನ ಪ್ರಭಾವ ಬೀರಲಿಲ್ಲ. ಈಶಾನ್ಯ ಭಾಗದಲ್ಲಿ ಬೀರಿದ ಪ್ರಭಾವ ಕೂಡ ಪ್ರತ್ಯೇಕವಾಗಿ ನಿಲ್ಲುವ ಸತ್ವದ್ದಕ್ಕಿಂತ ಸಮಾವೇಶ ಸ್ವರೂಪದ್ದಾಗಿತ್ತು.

ಮಂಗೋಲರು ಉತ್ತರ ಹಾಗೂ ಈಶಾನ್ಯದ ಎಲ್ಲೆಕಟ್ಟುಗಳಲ್ಲಿ ಬಹುಕಾಲ ನೆಲೆ ನಿಂತರು. ಅಸ್ಸಾಂ ಪಂಜಾಬು ಹಿಮಾಲಯ ತಪ್ಪಲು ಮಂಗೋಲರು ಬಾಳಿದ ಪ್ರದೇಶ ಗಳು. ಮಂಗೋಲಿಯನರು ಒಮ್ಮೆಲೇ ವಲಸೆ ಬರಲಿಲ್ಲ. ಕಡಮೆಯೆಂದರೆ ಮೂರು ತಂಡಗಳಲ್ಲಿ ಮೂರು ಕಡೆಗಳಿಂದ ಬಂದಿರಬಹುದು. ಮೊದಲ ಗುಂಪು ಸುಮಾರು ನಾಲ್ಕು ಸಾವಿರ ವರ್ಷಗಳ ಹಿಂದೆಯೇ ಬಂದಿರಬೇಕು. ಅವರು ಟಿಬೆಟ್ ಮೂಲಕ ಮೂಡಣ ಕಡೆಯಿಂದ ಹೊಕ್ಕಿದ್ದಾರೆ. ಈ ತಂಡದವರ ಭಾಷೆಯ ಪ್ರಭಾವ ಮುಂಡ ಭಾಷೆಗಳ ಮೇಲೂ ಆದಂತೆ ತೋರುತ್ತದೆ. ಮೊದಲಸಲ ಬಂದ ಇವರ ಭಾಷೆಗಳು— ನೇಪಾಲದ ನೇವಾರಿ, ಲಡಾಖಿನ ಲಡಾಖಿ, ಹಿಮಾಲಯದ ಶೆರ್ಪಾ, ನೀಫಾದ ಡಾಫ್ಲ, ಮಿರಿ, ಮಿಶ್ಮಿ, ಅಬೊರ್, ಅಕ ಮೊದಲಾದುವು.

ಮಂಗೋಲರ ಎರಡನೆಯ ತಂಡ ಬ್ರಹ್ಮಪುತ್ರಾನದಿ ಹಾಗೂ ಅದರ ಉಪನದಿಗಳ ಮೂಲಕ ಪ್ರವೇಶಿಸಿತು. ಅವರು ಅಸ್ಸಾಂ ತ್ರಿಪುರ ಬಂಗಾಲಗಳಲ್ಲಿ ನೆಲಸಿದರು. ಇವರು ಆರ್ಯರ ಪ್ರಭಾವಕ್ಕೆ ಒಳಗಾದರು. ಆರ್ಯಭಾಷೆಗಳನ್ನು ಅಂಗೀಕರಿಸಿದರು. ತಮ್ಮ ಭಾಷೆ ಕಳೆದುಕೊಂಡರು. ಮೇಲೆ ಹೇಳಿದ ಭಾಗಗಳಲ್ಲಿ ಇಂದೂ ಇರುವ ಗುಡ್ಡ ಗಾಡುಗಳಲ್ಲಿನ ಗಾರೋ, ಬೋರೋ, ತ್ರಿಪುರಿ—ಇವರು ತಮ್ಮ ಭಾಷೆಯನ್ನು ಅಲ್ಪ

ಸ್ವಲ್ಪ ಕಾಪಾಡಿಕೊಂಡಿದ್ದಾರೆ. ಮಂಗೋಲರ ಮೂರನೆಯ ಗುಂಪು ಬರ್ಮಾದ ಕಡೆಯಿಂದ ಬಂದಿತು. ಈ ಗುಂಪಿನವರು ಮೊದಲ ಎರಡು ತಂಡಕ್ಕಿಂತ ಬಲಶಾಲಿಗಳೆಂದು ತೋರುತ್ತದೆ. ಇವರು ಮಂಗೋಲರ ಭಾಷೆಯನ್ನು ಉಳಿಸಿಕೊಂಡಿದ್ದಾರೆ. ಮಣಿಪುರಿ ಭಾಷೆ ಮುಖ್ಯವಾದುದು. ನೈಥೈ ಎಂದೂ ಅದಕ್ಕೆ ಹೆಸರು. ಇವರ ಇತರ ಭಾಷೆಗಳಲ್ಲಿ ಮಿಜೋ (ಲುಡಾಯಿ), ಕುಕಿ (ಕುಕಿ-ಛಿನ್), ಮಿಕಿರ್, ಥಾಡೋ ಎಂಬ ಅಸ್ಸಾಂ ಪ್ರದೇಶದ ಭಾಷೆಗಳೂ ಮತ್ತು ಆವೋ, ಅಂಗಾಮಿ, ತಾಂಖುರ್, ಸೇಮಾ ಎಂಬ ನಾಗಾ ಭಾಷೆಗಳೂ ಸೇರಿವೆ.

ಮಂಗೋಲರ ಭಾಷೆಗಳು ಸಿನೊ-ಟಿಬೆಟನ್ ಎಂಬ ಭಾಷಾಪರಿವಾರಕ್ಕೆ ಅಳವಡುತ್ತವೆ. ಇದಕ್ಕೆ ಟಿಬೆಟೊ-ಬರ್ಮನ್ ಎಂದೂ ಕರೆವರು. ಇದರಲ್ಲಿ ನೂರಾರು ಭಾಷೆಗಳು ಸೇರಿವೆ. ಆದರೆ ಸಿನೋ-ಟಿಬೆಟನ್ ಎಂಬುದು ವ್ಯಾಪಕಾರ್ಥದ ಶಬ್ದವೆಂದು ಮಾನ್ಯವಾಗಿದೆ. ಅದರಲ್ಲಿ ಚೈನೀಸ್, ಥಾಯಿ, ಟಿಬೆಟನ್, ಬರ್ಮಿಸ್ ಮುಂತಾದ ಹೆಚ್ಚು ಜನರಾಡುವ ಭಾಷೆಗಳು ಸೇರಿವೆ. ಆದರೆ ಭಾರತದಲ್ಲಿ ಒಟ್ಟು ಜನಸಂಖ್ಯೆಯ ಶೇಕಡ ೦.೮೫ (ಒಂದಕ್ಕೂ ಕಡಮೆ) ಮಾತ್ರ ಈ ಭಾಷೆಗಳನ್ನಾಡುವವರಿದ್ದಾರೆ.

ಮಂಗೋಲಿಯನರ ಗೆಂಟಿನಲ್ಲಿಯೇ ಬಂದವರು ಮುಂಡಾ ಜನಾಂಗದವರು. ಇವರೇ ಪ್ರಾಚೀನ ಕೃತಿಗಳಲ್ಲಿ ಉಲ್ಲೇಖವಾಗಿರುವ ನಿಷಾದರು. ಇವರೂ ಆದಿವಾಸಿಗಳು. ಕೋಲರೆಂದರೂ ಇವರೇ. ಒಂದು ಕಾಲಕ್ಕೆ ಈ ಕೋಲರು ಕಾಶ್ಮೀರದಿಂದ ಬರ್ಮಾದವರೆಗೆ ಹರಡಿಕೊಂಡಿದ್ದರು. ಇವರೂ ಅಸ್ಸಾಮಿನ ಮೂಲಕ ಬಂದಿರಬಹುದು. ಈ ಕೆಳಕಂಡ ಜನ ಮುಂಡಾ ಭಾಷೆ ಆಡುವರು : ಬರ್ಮಾದ ತೈಲಂಗರು ಮತ್ತು ವಾಗಳು (Mons, Was) ಕಾಂಬೋಡಿಯಾದ ಖೇರರು, ಬರ್ಮಾದ ಪಲೌಂಗರು, ಅಸ್ಸಾಮಿನ ಖಾಸಿಗಳು, ಸಂತಾಲರು, ಹೋಗಳು, ಕೊರವಾಗಳು, ಖರಿಯಾಗಳು, ಕುರ್ಕು, ಸವಾರ ಮತ್ತು ಜುಆಂಗರು. ಇವರ ಭಾಷೆಗಳು : ಮುಂಡಾರಿ, ಸಂತಾಲಿ, ಖಡಿಯಾ, ಹೋ, ಸೋರ, ಭಾಮಿಜ್, ಬಿರ್‌ಹರ್, ಕೊರ್ಕು. ಇವರಲ್ಲಿ ಬಹುಪಾಲು ಜನ ಮಧ್ಯಭಾರತದ ಆದಿವಾಸಿಗಳು.

ಒಂದು ಕಾಲಕ್ಕೆ ಭಾರತದ ಬಹು ಭಾಗಗಳಲ್ಲಿ ಮುಂಡಾಗಳು ಕಂಡುಬರುತ್ತಿದ್ದರೂ ಇಂದು ಅವರ ಒಟ್ಟು ಸಂಖ್ಯೆ ಶೇಕಡಾ ೧.೩ ಮಾತ್ರ. ಇವರಲ್ಲಿ ಬಹುಪಾಲು ಭಾರತದ ಮೂಲಕ ಸಿಲೋನು ಇಂಡೋನೇಷ್ಯಾ ಇಂಡೊಚೈನಾಗಳಿಗೆ ಹಾದು ಹೋದರು. ಇಲ್ಲಿದ್ದವರೂ ಮಂಗೋಲರಂತೆ, ಹಿಂದೂಗಳೊಡನೆ ಸಮ್ಮಿಳಿತರಾದರು. ಮುಂಡಾಗಳ ಭಾಷೆ ಆಸ್ಟ್ರೋ-ಏಷಿಯಾಟಿಕ್ ಎಂಬ ಭಾಷಾಪರಿವಾರಕ್ಕೆ ಸೇರಿದುವು. ಆಸ್ಟ್ರೋನೇಷಿಯನ್ ಎಂದೂ ಹೇಳುವರು. ಈ ಪರಿವಾರಕ್ಕೆ ಮಲಯೊ-ಪಾಲಿನೇಷಿಯನ್ ಭಾಷೆಗಳನ್ನೂ ಸೇರಿಸಿ ಆಸ್ಟ್ರಿಕ್ ಎಂಬ ಬೃಹದ್ ಭಾಷಾಪರಿವಾರವನ್ನು ಕಲ್ಪಿಸಲಾಗಿದೆ. ಅದರಲ್ಲಿ ಭಾರತ ಇಂಡೋಚೈನಾ ಇಂಡೋನೇಷ್ಯಾ ಬರ್ಮಾ (ಮೋನ್) ಕಾಂಬೋಡಿಯಾ ಮೆಲನೇಷ್ಯಾ ಪಾಲಿನೇಷ್ಯಾ ಪ್ರದೇಶಗಳ ಭಾಷೆಗಳೆಲ್ಲ ಸಮಾವೇಶ

ವಾಗುತ್ತವೆ. ನಿಕೊಬರೀಸ್ ವಿಯೆಟ್ನಮೀಸ್ ಭಾಷೆಗಳೂ ಸೇರುತ್ತವೆ.

ಮುಂಡಾಗಳ ತರುವಾಯ ಬಂದವರು ದ್ರಾವಿಡರು. ಇವರು ಕಪ್ಪುಕೂದಲಿನ ಎಣ್ಣೆಗೆಂಪು(ಕಪ್ಪು)ಬಣ್ಣದ ಕೋಲುತಲೆಯವರು.ಮೊದಲ ಮೂರು ಜನಾಂಗಗಳಿಗಿಂತ ಇವರು ಪ್ರಬಲರು, ಪ್ರಭಾವಶಾಲಿಗಳು. ಭಾರತದ ಹಿಂದೂಗಳ ಅನೇಕ ಧಾರ್ಮಿಕಾಚರಣೆಗಳು ದ್ರಾವಿಡರ ಕೊಡುಗೆ; ಗರುಡಪೂಜೆ ಶಕ್ತಿಪೂಜೆ ಶಿವಪೂಜೆ ಮೊದಲಾದುವು. ಹೀಗಾಗಿ ಎಲ್ಲ ನಿಟ್ಟಿನಿಂದಲೂ ಆರ್ಯಪೂರ್ವ ಜನಾಂಗಗಳಲ್ಲಿ ದ್ರಾವಿಡರು ಪ್ರಮುಖ. ದ್ರಾವಿಡರು ಯಾವ ಕಾಲದಲ್ಲಿ, ಯಾವ ಮಾರ್ಗವಾಗಿ ಮತ್ತು ಎಲ್ಲಿಂದ ಭಾರತಕ್ಕೆ ಬಂದರೆಂಬ ವಿಚಾರದಲ್ಲಿ ತುಂಬ ಅನುಮಾನಗಳಿವೆ. ಅವರು ಮೆಡಿಟರೇನಿಯ್ನ ಇಲ್ಲವೇ ಆರ್ಮೇನಿಯನ್ ಎಂದು ಕೆಲವರ ಗ್ರಹಿಕೆ. ಅಂತೂ ನಾಲ್ಕು ಸಾವಿರ ವರ್ಷದ ಹಿಂದೆ ಇವರ ಆಗಮನ. ಸೈಬೀರಿಯಾದೆಡೆಗಳಲ್ಲಿ ಮೊದಲು ನೆಲೆಸಿದ್ದಿರಬಹುದು. ಕೆಲವು ನಿತ್ಯೋಪಯೋಗಿ ಶಬ್ದಗಳಲ್ಲಿ ಆ ಭಾಷೆಗಳಿಗೂ ದ್ರಾವಿಡ ಭಾಷೆಗಳಿಗೂ ಹೊಂದಾಣಿಕೆ ಕಂಡುಬಂದಿದೆ.

ದ್ರಾವಿಡರ ಬಗೆಗೆ ಕೆಲವು ತಪ್ಪು ಕಲ್ಪನೆಗಳಿವೆ. ಅವರು ಆದಿವಾಸಿಗಳು, ಅಸಂಸ್ಕೃತರು, ಒರಟರು, ಕಾಡಿಗರು, ರೂಕ್ಷರು, ತಿಳಿಯದ ಅಲೆಮಾರಿಗಳು ಇತ್ಯಾದಿ. ಇದಕ್ಕೆ ತದ್ವಿರುದ್ಧವಾಗಿ ಆರ್ಯರ ಬಗೆಗೆ ತಿಳಿಯಲಾಗಿದೆ. ಆರ್ಯರು ನಾಗರಿಕರು, ಸುಸಂಸ್ಕೃತರು ಸಂಪನ್ನರು–ಸಾಹಿತ್ಯಿಕ ಹಾಗೂ ಸಾಂಸ್ಕೃತಿಕವಾಗಿ, ಎಲ್ಲ ವಿಧದಲ್ಲೂ ಮುಂದುವರಿದಿದ್ದವರು—ಎಂಬುದು ಸಾಮಾನ್ಯ ತಿಳುವಳಿಕೆ. ಆದರೆ ವಸ್ತುಸ್ಥಿತಿ ಇದಾಗಿರಲಿಲ್ಲ. ದ್ರಾವಿಡರು ಒಳ್ಳೆಯ ವ್ಯವಸಾಯಗಾರರು ಹಾಗೂ ನಗರ ನಾಗರಿಕತೆಯವರು. ಪೂರ್ವ ಮೆಡಿಟರೇನಿಯನರಿಗೂ (Pelasgians, Aegeans) ದ್ರಾವಿಡರಿಗೂ ಹೊಂದಾಣಿಕೆಯಿದೆ. ಮೆಡಿಟರೇನಿಯ-ದ್ರಾವಿಡ ಸಂಬಂಧ ಸಂಭಾವ್ಯ. ಆದುದರಿಂದಲೇ ಇವೆರಡೂ ಜನಾಂಗಗಳನ್ನು ಸೇರಿಸಿ ಮೆಲನೊ-ದ್ರಾವಿಡ ಎಂದೂ, ದಕ್ಷಿಣಭಾರತ ಜನಾಂಗವೆಂದೂ ಕರೆದಿದ್ದಾರೆ. ಇವರು ವೆದ್ದಿದ್ ಇಲ್ಲವೇ ಆಸ್ಟ್ರೇಲಿಯನರೊಡನೆ ಸಂಬಂಧ ತೋರುತ್ತಾರೆಂಬ ಅಭಿಪ್ರಾಯವೂ ವ್ಯಕ್ತವಾಗಿದೆ. ದ್ರಾವಿಡರಾದ ಮೇಲೆ ಬಂದವರೇ ಆರ್ಯರು.[1]

ಅಂತೂ ನಮ್ಮ ಪ್ರಾಚೀನರಿಗೆ ಈ ಬೇರೆ ಬೇರೆ ಜನಾಂಗಗಳ ವಿಚಾರ ತಿಳಿದಿತ್ತೆಂದು ತೋರುತ್ತದೆ. ಕೋಲರು (ಮುಂಡಾ ಅಥವಾ ಆಸ್ಟ್ರಿಕರು), ಮಂಗೋಲಿಯನರು, ದ್ರಾವಿಡರು ಮತ್ತು ಆರ್ಯರನ್ನು ಕ್ರಮವಾಗಿ ನಿಷಾದರು, ಕಿರಾತರು, ದಾಸ (ದಸ್ಯು) ಇಲ್ಲವೇ ಶೂದ್ರರು, ಮತ್ತು ಆರ್ಯರು ಎಂದು ಕರೆದಿರುವುದು ಗೊತ್ತಾಗುತ್ತದೆ. ಪುರಾಣಗಳಲ್ಲಿ ಆಸ್ಟ್ರಿಕರನ್ನು ಸೌದ್ಯುಮ್ನರೆಂದೂ, ದ್ರಾವಿಡರನ್ನು ಮಾನವನ್ ಎಂದೂ, ಆರ್ಯರನ್ನು ಐಲನ್ ಎಂದೂ ನಿರ್ದೇಶಿಸಿರುವರೆಂಬ ಒಂದು ಊಹೆಯೂ ಇದೆ.

1 'ಆರ್ಯರು—ದ್ರಾವಿಡರು' ಎಂಬ ಮುಂಬರುವ ಹೊತ್ತಗೆಯಲ್ಲಿ ಹೆಚ್ಚಿನ ವಿವರಗಳನ್ನು ನೋಡಬಹುದು.

ದ್ರಾವಿಡರಿಗಿಂತ ಮೊದಲಿದ್ದ ಜನಾಂಗ, ದ್ರಾವಿಡರು ಹಾಗೂ ಆರ್ಯರು—ಈ ಮೂವರ ಮುಪ್ಪುರಿಯ ಹೊರತು, ಭಾಷೆ ಸಾಹಿತ್ಯ ಸಂಸ್ಕೃತಿ ನಾಗರಿಕತೆಗಳ ದೃಷ್ಟಿಯಿಂದ, ಭಾರತದ ಸಮಗ್ರಕಲ್ಪನೆ ಸಾಧ್ಯವೇ ಇಲ್ಲ. ಈ ಮೂರು ಜನಾಂಗಗಳು ಒಳ ಎಳೆಗಳಂತೆ ಹಾಸುಹೊಕ್ಕಾಗಿ ಗಟ್ಟಿಯಾಗಿ ಕೂಡಿವೆ. ಕೆಲವೊಮ್ಮೆ ಇವುಗಳ ಗುರುತು ಸಿಗುವುದೂ ಕಷ್ಟ.

# ದ್ರಾವಿಡ ಶಬ್ದದ ವಿಶ್ಲೇಷಣೆ

ಸಂಪ್ರದಾಯಸ್ಥರಾದ ಪಂಡಿತರು ಸಂಸ್ಕೃತದಿಂದಲೇ ದಕ್ಷಿಣ ಮತ್ತು ಉತ್ತರಭಾರತದ ದ್ರಾವಿಡ ಭಾಷೆಗಳು ಹಾಗೂ ಭಾರತದ ಇತರ ಎಲ್ಲ ಭಾಷೆಗಳೂ ಬಂದಿವೆಯೆಂದು ಭಾವಿಸಿದ್ದರು. ಈ ಭಾವನೆಯ ಬೆಂಬಲಿಗರು ಇಂದೂ ಇದ್ದಾರೆ. ಜಗತ್ತಿನ ಎಲ್ಲ ಭಾಷೆಗಳೂ ಸಂಸ್ಕೃತದಿಂದಲೇ ಜನಿಸಿವೆಯೆಂಬ ಪ್ರತಿಪಾದನೆಯೂ, ಪ್ರತಿಪಾದಕರೂ ಉಂಟು. ಪಾಶ್ಚಾತ್ಯರಲ್ಲೂ ಯಹೂದ್ಯರು ಹೀಬ್ರೂ ಭಾಷೆಯಿಂದಲೇ ಪ್ರಪಂಚದ ಭಾಷೆಗಳು ಹುಟ್ಟಿವೆಯೆಂದು ನಂಬಿದ್ದರು. ಬೌದ್ಧರು ಪಾಳಿಯನ್ನು ಮೂಲಭಾಷೆ ಯೆಂದು ಕರೆದರು. ಜೈನರು ಪ್ರಾಕೃತವನ್ನು ಆರ್ಷಭಾಷೆಯೆಂದು ಕರೆದರು. ತಮಿಳೇ ತಾಯ್-ಮೊೞಿಯೆಂದು ತಿಳಿಸಿದವರೂ ಉಂಟು. ಆದರೆ ಈ ಹೇಳಿಕೆಗಳಲ್ಲಿ ಹುರುಳು ಕಡಮೆ.

ಭಾಷೆಗಳ ವಾಂಶಿಕ ವರ್ಗೀಕರಣಕ್ಕೆ ತುಂಬ ಮಾನ್ಯತೆಯಿದೆ. ಅದು ಎಂಟು ಹತ್ತು ದಶಕಗಳಿಂದ ವ್ಯವಸ್ಥಿತವಾಗಿ ರೂಪುಗೊಳ್ಳುತ್ತಿದೆ. ಅದರ ನಿಯಮಾನುಸಾರ ದ್ರಾವಿಡ ಭಾಷೆಗಳು ಸಂಸ್ಕೃತ ಅಥವಾ ಆ ಪರಿವಾರಕ್ಕೆ ಸೇರದ ಪರಿವಾರವೆಂದು ಪರಿಗಣಿತ ವಾಗಿವೆ. ಇವುಗಳದೇ ಒಂದು ಸ್ವತಂತ್ರ ಪರಿವಾರವೆಂದು ಭಾವಿಸಲಾಗಿದೆ. ೧೮೦೧ರಲ್ಲಿ ಕಲಕತ್ತೆಯಲ್ಲಿ ಫೋರ್ಟ್ ವಿಲಿಯಂ ಕಾಲೇಜು ಪ್ರಾರಂಭವಾಯಿತು. ಅದರ ಮುಖ್ಯಾಧಿಕಾರಿ (William Carey). ಬಂಗಾಲದ ಸೆರಂಪೂರಿನ ಮಿಶನರಿ ಸಿದ್ಧ ಪಡಿಸಿದ ವರದಿಯಲ್ಲಿ, ಈತ ಭಾಷಾಸಮೀಕ್ಷೆಯನ್ನು ನಡೆಸಿದ್ದು, ಈತ ೧೮೧೬ರಲ್ಲಿ ಕನ್ನಡ, ತೆಲುಗು, ತಮಿಳು ಮುಂತಾದ ದಕ್ಷಿಣದ ಭಾಷೆಗಳು ಸಂಸ್ಕೃತದಿಂದ ಬಂದಿವೆ ಯೆಂದು ಅಭಿಪ್ರಾಯಿಸಿದನು. ಬಹುಶಃ ಈ ಭಾಗಗಳಲ್ಲಿ ಕಂಡುಬಂದ ಹೆಚ್ಚಿನ ಸ್ವೀಕರಣ ಶಬ್ದಗಳಿಂದ ಆ ಭ್ರಮೆಗೆ ಒಳಗಾಗಿರಬಹುದು. ೧೮೧೬ರಲ್ಲೇ ಕ್ಯಾಂಪಬೆಲ್ಲನ ತೆಲುಗು ಭಾಷೆಯ ವ್ಯಾಕರಣ ಹೊರಬಂತು. ಅದರ ಮುನ್ನುಡಿಯಲ್ಲಿ ಎಲ್ಲಿಸ್ ದಕ್ಷಿಣದ ಮೂರು ಸಾಹಿತ್ಯಿಕ ಭಾಷೆಗಳ ಶಬ್ದಗಳನ್ನು ತಾಳೆಮಾಡಿ ನೋಡಿದನು. ಇದು ಭಾರತೀಯ ಭಾಷೆಗಳ ಅಧ್ಯಯನದಲ್ಲಿ ನೂತನ ಅಧ್ಯಾಯಕ್ಕೆ ಹಾದಿ ಮಾಡಿಕೊಟ್ಟಿತು. ಅನಂತರ ಕಾಲು ಶತಮಾನವಾದಮೇಲೆ ೧೮೪೧–೪೪ರಲ್ಲಿ ಸ್ಟೀಫನ್‌ಸನ್ ಎಂಬಾತ

ಈ ಸೂಚನೆಗೆ ಇಂಬುಕೊಟ್ಟನು. ಸಂಸ್ಕೃತದಿಂದ ಬಂದ ಭಾಷೆಗಳೆಂಬ ನಿಲವನ್ನು ನಿರಾಕರಿಸುವ ನೂರಾರು ಶಬ್ದಗಳು ಈ ಭಾಷೆಯಲ್ಲಿವೆಯೆಂದು ಸ್ಟೀಫನ್‌ಸನ್ ತಿಳಿಸಿದನು. ಅಲ್ಲದೆ ಸಂಸ್ಕೃತೇತರ ಅಂಶಗಳು ಮತ್ತು ದಕ್ಷಿಣದ ಭಾಷೆ ತೆಗೆದುಕೊಂಡಿರಬಹುದಾದ ಉತ್ತರದ ಭಾಷೆಗಳಲ್ಲಿ ಅನೇಕವಾಗಿವೆಯೆಂದೂ ಆತ ಸಾರಿದನು. ಆದರೆ ಆತ ಈ ಅಂಶವನ್ನು ಸ್ಥಾಪಿಸದೆ ಹೋದುದು ಸೋಜಿಗ. ಏಕೆಂದರೆ ದ್ರಾವಿಡ ಭಾಷೆಗಳ ವ್ಯಾಕರಣ ವ್ಯವಸ್ಥೆ ವಿಚಾರವಾಗಲಿ, ದ್ರಾವಿಡ ಭಾಷೆಗಳಲ್ಲಿ ಇರುವ ಪರಸ್ಪರ ಬಾಂಧವ್ಯದ ವಿಚಾರವಾಗಿಯಾಗಲಿ ಆತ ನೀಡಿದ ವಿವರಣೆ ಸಮರ್ಪಕವಾಗಿತ್ತು. ದ್ರಾವಿಡ ಭಾಷೆಗಳ ಅಧ್ಯಯನ ಮೊದಮೊದಲಲ್ಲಿ ಬಿಡಿಬಿಡಿಯಾಗಿ ನಡೆಯಿತು. ತೌಲನಿಕ ಅಧ್ಯಯನ ಆದದ್ದು ತಡವಾಗಿ. ಅದು ೧೯ನೆಯ ಶತಮಾನದ ಎರಡನೆಯ ದಶಕದಿಂದ ಕುಡಿಯಿಟ್ಟಿತು. R. E. ರಾಬರ್ಟ್ಸ್ ಮಾಲ್ತೊ ಭಾಷೆ ಕುರಿತು ೧೭೭೯ರಲ್ಲೂ, ಬರ್ನಾರ್ಡ್ Schmidt ತೊದ ಕುರಿತು ೧೮೩೭ರಲ್ಲೂ, R. Leech ಬ್ರಾಹೂಈ ಕುರಿತು ೧೮೩೮ರಲ್ಲೂ ಬರೆದರು. V. Oysey ಗೋಂಡಿ ಕುರಿತು ೧೮೪೪ರಲ್ಲಿ, M. Buhlre ಬಡಗ ಕುರಿತು ೧೮೪೯, ಜಾನ್ Percival Frye ಕುಯಿ ಕುರಿತು ೧೮೫೧ರಲ್ಲಿ ಬರೆದರು.

B. H. Hodgson ೧೮೪೮ರಲ್ಲಿ ಮತ್ತು ೧೮೫೬ರಲ್ಲಿ ಆದಿವಾಸಿಗಳ ಭಾಷೆಗಳಿಗೆ ಸೇರಿದ ಶಬ್ದಗಳ ಪಟ್ಟಿಗಳನ್ನು ಪ್ರಕಟಿಸಿದನು. ಈ ಆದಿವಾಸಿಗಳ ಭಾಷೆಗಳನ್ನು ಆತ ತಮುಲಿಯನ್ (Tamulian) ಎಂದು ನಿರ್ದೇಶಿಸಿದನು. ೧೮೬೬ರಲ್ಲಿ Hislop ಕೋಲಾಮಿ ನಾಯಕಿ ಭಾಷೆಗಳನ್ನು ಕುರಿತು ಬರೆದಿದ್ದನು. ಇದನ್ನು ನೋಡಿಯೂ ಕಾಲ್ಡ್‌ವೆಲ್ ಎರಡನೆಯ ಮುದ್ರಣದಲ್ಲಿ ಈ ಭಾಷೆಗಳ ಉಲ್ಲೇಖ ಮಾಡಲಿಲ್ಲ.

ಇದೇ ಸಮಯಕ್ಕೆ Max Muller ಭಾರತೀಯ ಭಾಷೆಗಳೆಲ್ಲಾ ಸಂಸ್ಕೃತ ಮೂಲದಿಂದ ಬಂದುವಲ್ಲವೆಂದು ಭಾವಿಸಿದನು. ಆತ ಹಲವು ಆರ್ಯೇತರ ಭಾಷೆಗಳು ಭಾರತದಲ್ಲಿವೆಯೆಂದು ತಿಳಿಸಿದನು. ಅವುಗಳಲ್ಲಿ ಹಿಮಾಲಯನ್, ಕೋಲ್ ಮತ್ತು ತಮಿಳಿಯನ್ ಭಾಷೆಗಳೂ ಸೇರುತ್ತವೆಂದನು. ಅವುಗಳನ್ನು ಆತ ನಿಷಾಧಭಾಷೆಗಳೆಂದು ಕರೆದನು. ಅಲ್ಲದೆ ಆತ ೧೮೫೦ರ ಸರಿಸುಮಾರಿಗೆ ದ್ರಾವಿಡಭಾಷೆಗಳು ತಮ್ಮದೇ ಆದ ಒಂದು ಸ್ವತಂತ್ರ ಪರಿವಾರಕ್ಕೆ ಸೇರಿದುವೆಂದು ಸಾರಿದನು. ದ್ರಾವಿಡ ಎಂಬ ಶಬ್ದ ಅಲ್ಲಿಂದೀಚೆಗೆ ಬಹು ಜನಪ್ರಿಯವಾಯಿತು. ಕೋಪೆನ್ ಹೇಗನ್ನಿನ ರ್‍ಯಾಸ್‌ಮಸ್ ರಾಸ್ಕ್ ಈ ಮಲಬಾರಿಕ್ (ದ್ರಾವಿಡ) ಭಾಷೆಗಳನ್ನು ಇಂಡೊ-ಯುರೋಪಿಯನ್ ಭಾಷೆಗಳಿಗೆ ಸೇರಿಸಲಾಗುವುದಿಲ್ಲ, ಸಿಥಿಯನ್ ಪರಿವಾರದೊಡನೆ ಸಮೀಕರಿಸಬಹುದೆಂದು ಸಾರಿದನು. ಆದರೆ ಈ ಪರಿವಾರಕ್ಕೆ ಸುಭದ್ರ ಬುನಾದಿ ಹಾಕಿಕೊಟ್ಟವನು ಕಾಲ್ಡ್‌ವೆಲ್. ೧೮೫೬ರಲ್ಲಿ ಕಾಲ್ಡ್‌ವೆಲ್ ದ್ರಾವಿಡ ಭಾಷೆಗಳು ಇಂಡೊ-ಆರ್ಯನ್‌ಗಿಂತ ಪ್ರತ್ಯೇಕ. ಆದರಂತೆ ಕೋಲರ ಇಲ್ಲವೇ ಮುಂಡಾ ಭಾಷೆಗಳು ಮತ್ತು ಹಿಮಾಲಯರ್ ಗುಂಪಿನ ಭಾಷೆಗಳಿಗಿಂತ ಬೇರೆಯೆಂದು ಸ್ಥಾಪಿಸಿದನು. ಈ ಎಲ್ಲ ಗುಂಪಿನ ಭಾಷೆಗಳ

ಪರಸ್ಪರ ಪ್ರಭಾವವನ್ನೂ, ದಕ್ಷಿಣದಲ್ಲೇ ಅಲ್ಲದೆ ಉತ್ತರದಲ್ಲೂ ಕೆಲವು ದ್ರಾವಿಡ ಭಾಷೆಗಳಿವೆಯೆಂಬುದನ್ನು ಖಚಿತಗೊಳಿಸಿದನು.

> On the whole, the Dravidian Languages may be regarded as most nearly allied to Finnish or Ugrian family, with special affinities, as it appears, to the Ostiak (46)

ಮೊದಲ ಮುದ್ರಣದಲ್ಲಿ ಒಂಬತ್ತು ಪ್ರಧಾನ ದ್ರಾವಿಡ ಭಾಷೆಗಳನ್ನು ಹೆಸರಿಸಿದ್ದಾನೆ. ಎರಡನೆಯ ಮುದ್ರಣದಲ್ಲಿ ಹನ್ನೆರಡಿವೆ; ಆರು ಸಂಸ್ಕಾರ ಭಾಷೆಗಳು, ಆರು ಅಸಂಸ್ಕಾರ ಭಾಷೆಗಳು. ಬ್ರಾಹೂಈಯನ್ನು ಈ ಪಟ್ಟಿಯಲ್ಲಿ ಬಿಟ್ಟಿದ್ದಾನೆ, ಅದನ್ನು ಹೆಸರಿಸಿದ್ದರೂ. ಗ್ರಿಯೆರ್ಸನ್ ಸಮೀಕ್ಷೆಯಲ್ಲಿ ಬ್ರಾಹೂಈ, ಕೊಲಾಮಿ, ನಾಯಿಕಿ ಭಾಷೆಗಳನ್ನು ಸೇರಿಸಿದ್ದಾನೆ. (೧೯೦೬) ಆದುದರಿಂದ L S Iನಲ್ಲಿ 15 ದ್ರಾವಿಡ ಭಾಷೆಗಳು ಇವೆ.

Dravidian ಎಂಬುದು ಆಂಗ್ಲೀಕರಣಗೊಂಡ ಭಾರತೀಯ ಸಮಾಸಪದ; ದ್ರಾವಿಡ+—ian (<ಲ್ಯಾಟಿನ್)

ದ್ರಮಿಡ, ದ್ರವಿಡ, ದ್ರಾವಿಡ ಎಂಬ ಮೂರು ರೂಪಗಳಿವೆ. ದ್ರಮಿಡ ಎಂಬುದು ತಮಿಳು ಭಾಷಾವರ್ಗಕ್ಕೆ ಅನ್ವಯಿಸಿರುವುದೂ ಉಂಟು. ತೆಲುಗರಿಗೆ ಆಂಧ್ರ ಎಂದೂ, ಕನ್ನಡಕ್ಕೆ ಕರ್ನಾಟಕ ಎಂದೂ, ಮಲೆಯಾಳ ವರ್ಗಕ್ಕೆ ಕೇರಳ ಎಂದೂ ಹೇಳಿರುವಂತೆ. ಆದರೆ ದ್ರಮಿಡ ಎಂಬ ಶಬ್ದವನ್ನು ಈ ಎಲ್ಲ ವರ್ಗಕ್ಕೂ ಸೇರಿಸಿಕೊಂಡು ಪ್ರಯೋಗಿಸಿರುವುದೂ ಉಂಟು. ದ್ರಮಿಡ ಎಂಬುದೇ ಮೂಲರೂಪವಾಗಿದ್ದು ದ್ರವಿಡ, ದ್ರಾವಿಡ ಎಂಬುವು ತರುವಾಯದ ರೂಪಗಳೆಂದು ತೋರುತ್ತದೆ.

ತಮಿೞ್/†ದಮಿೞ್ ದ್ರಮಿಡ ದ್ರವಿಡ
ದಮಿೞ > ದಮಿಳ — ದ್ರಮಿಳ > ದ್ರಾವಿಡ :—ಮ್— > —ವ್—

ತಿರವಿಡ ಎಂಬ ತಮಿಳು ರೂಪ ಕೂಡ ದ್ರವಿಡ ಎಂಬ ಸಂಸ್ಕೃತರೂಪದ ತಮಿಳು ರೂಪಾಂತರವೆಂದು ಭಾವಿಸಲಾಗಿದೆ. ತಮಿೞಗಮ್ (ದ್ರಾವಿಡಗಮ್=ತಮಿಳು ಮಲೆಯಾಳ ದೇಶ) > ಗ್ರೀಕ್‌ರೂಪ ದಮರಿಕೇ. ಗ್ರೀಕ್ ಭಾಷೆಯಲ್ಲಿ ಕ್ರಿ.ಶ.ದ ಆರಂಭ ಶತಮಾನಗಳಲ್ಲೇ ಈ ರೂಪ ಸಿಗುತ್ತದೆ. ಮಧ್ಯಕಾಲದಲ್ಲಿ ಪಂಚಗೌಡ ಮತ್ತು ಪಂಚದ್ರಾವಿಡ ಎಂಬ ಎರಡು ರೂಪ (ವರ್ಗ)ಗಳು ಭಾರತದಲ್ಲಿ ಬಳಕೆಯಲ್ಲಿದ್ದುವು. ಪಂಚಗೌಡ : ಗೌಡ, ಸಾರಸ್ವತ, ಕಾನ್ಯಕುಬ್ಜ, ಉತ್ಕಲ, ಕಾಶ್ಮೀರ. ಪಂಚದ್ರಾವಿಡ : ಗೂರ್ಜರ, ಮಹಾರಾಷ್ಟ್ರ, ಕರ್ನಾಟ (ಕಾರ್ನಾಟ), ಆಂಧ್ರ, ದ್ರಾವಿಡ. ಇಲ್ಲಿ ದ್ರಾವಿಡ ಎಂಬ ಪದವನ್ನು ತಮಿಳು, ಮಲೆಯಾಳ, ಎಂಬ ಅರ್ಥದಲ್ಲಿ ಬಳಸಲಾಗಿದೆ. ವಾಸ್ತವವಾಗಿ ಗೂರ್ಜರ ಮತ್ತು ಮಹಾರಾಷ್ಟ್ರ ದ್ರಾವಿಡವಲ್ಲ. ಆದರೂ ಪಂಚದ್ರಾವಿಡ ಎಂಬುದನ್ನು ದಕ್ಷಿಣದ ಅಯ್ದು ವರ್ಗಗಳು ಎಂಬ ವಿಶಾಲವಾದ ಅರ್ಥದಲ್ಲಿ ಬಳಸಲಾಗಿದೆ. ರವೀಂದ್ರನಾಥ ಠಾಕೂರರ 'ಜನಗಣಮನ ಅಧಿನಾಯಕ ಜಯಹೇ' ಎಂಬ

ರಾಷ್ಟ್ರಗೀತೆಯಲ್ಲೂ, 'ಪಂಜಾಬ ಸಿಂಧು ಗುಜರಾತ ಮರಾಠಾ ದ್ರಾವಿಡ ಉತ್ಕಲವಂಗ' ಎಂಬ ಪ್ರಯೋಗವಿದ್ದು ಅದನ್ನು ವಿಸ್ತೃತಾರ್ಥದಲ್ಲಿ ಉಪಯೋಗಿಸಿದೆ. ದ್ರಾವಿಡ ದೇಶ, ದ್ರಾವಿಡನಾಡು ಎಂಬ ಪ್ರಯೋಗಗಳೂ ಇವೆ.

ಹೆರೊಡಟಸ್ ಎಂಬ ಇತಿಹಾಸಕಾರ ಕ್ರೀಟಿನ ಹೆಲೆನಿಕ್ ಪೂರ್ವದ ಮೂಲ ಜನ ತಮ್ಮನ್ನು ತೆರ್ಮಿಲೈ (Termilai) ಎಂದು ಕರೆದುಕೊಳ್ಳುತ್ತಿದ್ದರೆಂದು ತಿಳಿಸಿದ್ದಾನೆ. ಲಿಸಿಯನ್ ಶಾಸನಗಳಲ್ಲಿ ಲಿಸಿಯನರು ತಮ್ಮನ್ನು Trṁmili ಎಂದು ಹೇಳಿಕೊಂಡಿದ್ದಾರೆ. Termilai ಮತ್ತು Trṁmili ಇವೆರಡೂ ಒಂದೇ ಮೂಲ ಶಬ್ದದ (ತಮಿಟ್) ತಮಿಳದ ಎರಡು ರೂಪಗಳಿರಬೇಕು.

ಕ್ರಿ.ಶ.ದ ಆರಂಭಕಾಲದಲ್ಲಿ ಈ ತಮಿಟ್/ತಮಿಳ್ ಹೆಸರನ್ನು ಗ್ರೀಕರು ಮತ್ತು ಸಿಲೋನಿನವರು, †ದಮಿಟ್ ಇಲ್ಲವೇ ದಮಿಟ ಎಂಬ ರೂಪದಲ್ಲಿ ಕೇಳಿದ್ದರು. ಗ್ರೀಕರು ತಮ್ಮ ಭಾಷೆಯಲ್ಲಿ ಈ ಹೆಸರನ್ನು ದಮಿರ್ (ದಮಿರಿಕೆ=ತಮಿಟಗಮ್) ಎಂದು ಉಪಯೋಗಿಸಿದ್ದಾರೆ. ಸಿಂಹಳೀಯರು ದಮಿಳ ಎಂಬ ರೂಪ ಬಳಸಿದ್ದಾರೆ. ಇದೆಲ್ಲಾ ಸಂಸ್ಕೃತದ ದ್ರಮಿಡ ಮತ್ತು ದ್ರವಿಡ ಶಬ್ದಕ್ಕೆ ಸಮೀಪವರ್ತಿ.

ತಮಿಟ್—†ದಮಿಟ—ದಮಿಳ—† ದ್ರಮಿಳ—ದ್ರಮಿಳ—ದ್ರಮಿಡ—ದ್ರವಿಡ —Trṁmili—Termilai.

[ಮಾರ್ಪಾಟು ಏಕಾಏಕಿ ಆಗುವುದಿಲ್ಲ. ಹೊಸ ರೂಪಗಳು ಬಳಕೆಗೆ ಬರುತ್ತಿದ್ದ ಕಾಲ.]

ದ್ರಾವಿಡ ಎಂಬ ಶಬ್ದ ನಾಲ್ಕೈದು ಬೇರೆ ಬೇರೆ ಅರ್ಥಗಳಲ್ಲಿ ಪ್ರಯೋಗವಾಗಿದೆ:

೧. ಮಹಾಭಾರತದಲ್ಲಿ ಒಂದು ಪ್ರಾಂತದ ಭೂಪ್ರದೇಶದ ಹೆಸರಾಗಿ ಪ್ರಯೋಗವಾಗಿದೆ. ವರಾಹ ಮಿಹಿರ ಪರಾಶರರಲ್ಲೂ ಮನುಸ್ಮೃತಿಯಲ್ಲೂ ಈ ಪ್ರಯೋಗವಿದೆ.

೨. ಜನಾಂಗದ ಹೆಸರಾಗಿಯೂ ಬಳಕೆಯಾಗಿದೆ.
+ ಆದಿದ್ರಾವಿಡರು (ಹಿಂದುಳಿದವರು: ಹೀಗೆಯೇ ಆದಿಕರ್ನಾಟಕ)

೩. ಭಾಷೆಯ, ಭಾಷೆಗಳ ಹೆಸರಾಗಿ ಬಳಸಿದೆ.

೪. ಶಿಲ್ಪದಲ್ಲಿ ಒಂದು ಶೈಲಿಯ ಹೆಸರು.

†ದ್ರಮಿಳ > ದ್ರಾವಿಡ

ಸಂ | ದ್ರಮಿಡ
| ದ್ರವಿಡ

ಪಾಲೀಭಾಷೆಯ ಮಹಾವಂಶದಲ್ಲಿ ದಮಿಲ (-ಟಿ) (ತಮಿಳರು ಎಂಬ ಹುರುಳಿನಲ್ಲಿ) ಇದೆ. ಜೈನ ಗ್ರಂಥಗಳಲ್ಲಿ ದವಿಳ/ದವಿಡ ಎಂಬ ಎರಡು ರೂಪಗಳಿವೆ. ಇದನ್ನು ಗಮನಿಸಬೇಕು. ಕುಮಾರಿಲಭಟ್ಟ ಭಾಷೆ ಎಂಬ ಅರ್ಥದಲ್ಲಿ (ಆಂಧ್ರ ದ್ರಾವಿಡ ಭಾಷಾ) ದ್ರಾವಿಡ ಶಬ್ದ ಉಪಯೋಗಿಸಿದ್ದಾನೆ.

ಪಾಶ್ಚಾತ್ಯರು ದಮರಿಚೆ, ಡಮರಿಕ ಶಬ್ದಗಳನ್ನು ಬಳಸಿದ್ದಾರೆ. ಆದರೆ ಹೂರ್ವೆ-ತ್ಸಾಂಗ್ ಬಳಸಿರುವ ಶಬ್ದ ಚಿಮೋಲೊ—ಇದು ತಮಿಳು ಎಂಬುದರ ಚೀನೀ ರೂಪಾಂತರವಿರಬಹುದು.

Fernār Loper ಎಂಬ ಪೋರ್ಚುಗೀಸನೊಬ್ಬ ೧೫೫೧–೧೫೬೧ರಲ್ಲಿ ಅಚ್ಚಾದ ಭಾರತದ ಸಂಗತಿಗಳು ಎಂಬ ಕೃತಿಯಲ್ಲಿ ದ್ರಾವಿಡ ಭಾಷೆಗಳನ್ನು ಪ್ರಸ್ತಾಪಿಸಿದ್ದಾನೆ.

ಭಾರತದ ಶಿಲ್ಪಶಾಸ್ತ್ರ ಮನ್ನಣೆ ಕೊಡುವ ಮೂರು ಸಂಪ್ರದಾಯಗಳು ನಾಗರ, ದ್ರಾವಿಡ ಮತ್ತು ವೇಸರ.

ಚತುರಶ್ರಾಕೃತಿ ನಾಗರಮ್
ವೃತ್ತಸ್ಸಾಗ್ರೇ ವೇಸರೀ ನಾಮಕಮ್
ಮೂಲಾಗ್ರತ್ ಸ್ತೂಪೀ ಪರ್ಯಂತ ಅಷ್ಟಾಶ್ರಕಮ್
ವಾ ಷಡಾಸ್ರಕಮ್ ದ್ರಾವಿಡಮ್

೪

# ದ್ರಾವಿಡ ಹಾಗೂ ಸಿಥಿಯನ್ ಭಾಷೆಗಳು

ಒಂದು ಪರಿವಾರದ ಭಾಷೆಗಳ ಬಾಂಧವ್ಯ ಆದಿರೂಪದಲ್ಲಿಯೇ ಇರುತ್ತದೆಂದಾಗಲಿ, ಅನಂತಕಾಲ ಅಬಾಧಿತವಾಗಿ ಉಳಿಯುತ್ತದೆಂದಾಗಲಿ ತಿಳಿಯಬಾರದು. ಅದು ಚಾರಿತ್ರಿಕ ಕಾರಣಗಳನ್ನು ಅವಲಂಬಿಸಿರುತ್ತದೆ. ಕ್ರಮೇಣ ಸಾದೃಶ್ಯ ಹೆಚ್ಚಬಹುದು, ಇಲ್ಲವೇ ವೈದೃಶ್ಯ ಹೆಚ್ಚಬಹುದು ಅಥವಾ ಇವು ಕಡಮೆಯೂ ಆಗಬಹುದು. ಇಲ್ಲಿ ಸ್ಥಾಯಿಗಿಂತ ಸಂಚಾರಿತನವೇ ಅಧಿಕ. ಎಲ್ಲ ಭಾಷಾಪರಿವಾರಗಳಲ್ಲೂ ಈ ಏರುಪೇರು ಸಹಜ. ಇದು ಒಂದು ಪರಿವಾರಕ್ಕೆ ಸೇರಿದ ಭಾಷೆಗಳಿಗೆ ಹೇಳಿದ ಮಾತಾದರೂ ಪರಿವಾರದಿಂದ ಪರಿವಾರಕ್ಕೆ ಹೋಲಿಸಿದಾಗಲೂ ಅನ್ವಯವಾಗುತ್ತದೆ. ಒಂದು ಭಾಷೆ ಇಲ್ಲವೇ ಒಂದು ಗುಂಪಿನ ಹಲವು ಭಾಷೆಗಳು ಇನ್ನೊಂದು ಭಾಷೆ ಅಥವಾ ಗುಂಪಿನ ಅಂಶಗಳನ್ನು ಸ್ವೀಕರಿಸಬಹುದು. ಭಾಷಾಬಾಂಧವ್ಯ ಕಾಲ ಪ್ರವಾಹದ ಉಬ್ಬರವಿಳಿತ; ಆಂತರಿಕ ಹಾಗೂ ಬಾಹ್ಯಪ್ರಭಾವಗಳಿಗೆ ಬದ್ಧ.

ದ್ರಾವಿಡ ಭಾಷೆಗಳು ಜಗತ್ತಿನ ಬೇರೆ ಯಾವ ಭಾಷಾವರ್ಗಕ್ಕೂ ಹೊಂದುವುದಿಲ್ಲವೆ? ಎಂಬ ಪ್ರಶ್ನೆ ಸಹಜವಾಗಿಯೇ ಮೂಡುತ್ತದೆ. ದ್ರಾವಿಡ ಭಾಷೆಗಳ ಸುವ್ಯವಸ್ಥಿತ ಅಭ್ಯಾಸ ನಡಸಿದ ಕಾಲ್ಡ್‌ವೆಲ್ ಈ ಬಗೆಗೂ ಯೋಚಿಸುತ್ತಾ, ದ್ರಾವಿಡ ಭಾಷಾಕುಟುಂಬ ಸಿಥಿಯನ್ ಕುಟುಂಬದೊಡನೆ, ಅದರಲ್ಲಿಯೂ ಸಿಥಿಯನ್ ಗುಂಪಿನ ಮಂಗೋಲಿಯನ್ ಜೊತೆಯಲ್ಲಿ ಹೋಲುತ್ತದೆಯೆಂದು ನುಡಿದಿದ್ದಾನೆ.[1] ಈ ಸಿಥಿಯನ್ ಭಾಷಾಕುಟುಂಬ ಯಾವುದು? ಸಿಥಿಯನ್ ಎಂಬ ಶಬ್ದವನ್ನು ಕಾಲ್ಡ್‌ವೆಲ್, ೧೯ನೆಯ ಶ. ದಲ್ಲಿ ತಿಳಿದಂತೆ, ಸಂಕ್ಷಿಪ್ತವರ್ಗಕ್ಕೆ ಅನ್ವಯಿಸಿ ಹೇಳಿದ್ದಾನೆ.

ಅವನ ಅಭ್ಯಾಸದಂತೆ ಸಿಥಿಯನ್ ಎಂದರೆ ಮಧ್ಯ ಏಷಿಯಾದ ವಿವಿಧ ಭಾಷೆಗಳನ್ನು ಒಳಗೊಂಡ ಒಂದು ಗುಂಪು. ಅಂದರೆ ಫಿನ್ನಿಷ್, ಟರ್ಕಿಷ್, ಉಗ್ರಿಯನ್, ಮಂಗೋಲಿಯನ್, ಟಂಗುಸಿಯನ್ ಮೊದಲಾದ ಬೇರೆ ಬೇರೆ ಜಾತಿಯ ಭಾಷೆಗಳು ಸೇರಿ ಆದ ಒಂದು ಜಾತಿಯ ಭಾಷೆಯೇ ಉರಲ್—ಅಲ್ಟೈ; ಕಾಲ್ಡ್‌ವೆಲ್, ರ್‍ಯಾಸ್‌ಮಸ್‌ರಾಸ್ಕ್ ಕರೆಯುವ ಸಿಥಿಯನ್ ಭಾಷಾಕುಟುಂಬ.

[1] ಕಾಲ್ಡ್‌ವೆಲ್ *Acgodls* 1956, p. 63–69 and 610–624.

ಆದರೆ ಇಂದು ಸಿಥಿಯನ್ ಭಾಷಾ ಕುಟುಂಬದ ಬಲ ಹೆಚ್ಚಿದೆ, ಕ್ಷೇತ್ರ ವಿಸ್ತಾರಗೊಂಡಿದೆ. ಇಸ್ತೋನಿಯನ್, ಮಘೀರ್, ಪೋರ್ಡ್ವಿನಿಯನ್, ಲೆಪ್ಪಿಷ್, ಶೆರಮಿಸ್ (ಇವೆಲ್ಲಾ ಸೇರಿದ ಗುಂಪಿಗೆ ಫಿನ್ನೊ—ಉಗ್ರಿಯನ್ ಎಂದು ಕರೆಯುವರು); ಕಿರ್‌ಘ್ಲಿಜ್, ತಾತಾರ್, ತುರ್ಕಿ, ಮಂಗೋಲ್ (ಈ ಭಾಷೆಗಳು ಕೂಡಿದ ಜಾತಿಗೆ ಟರ್ಕ್ಕೊ—ತಾತಾರ್ ವರ್ಗವೆನ್ನುವರು); ಈ ಎಲ್ಲ ಭಾಷೆಗಳೂ ಸೇರಿದ—ಅಂದರೆ ಫಿನ್ನೊ—ಉಗ್ರಿರ್ಯ ಮತ್ತು ಟರ್ಕ್ಕೊ ತಾತಾರ್ ವರ್ಗಗಳನ್ನು ಒಳಗೊಂಡ ಗುಂಪಿಗೆ ಉರಲ್—ಅಲ್ತೈ ಭಾಷಾಕುಟುಂಬವೆಂದು ಹೆಸರಿಸಿದ್ದಾರೆ. ಇದೇ ಸಿಥಿಯನ್ ಭಾಷಾಕುಟುಂಬ. ಇವುಗಳಲ್ಲಿ ಫಿನ್ನೊ—ಉಗ್ರಿಯನ್ ಗುಂಪು ದ್ರಾವಿಡ ಗುಂಪಿಗೆ ಸಮೀಪವೆಂಬುದು ಕಾಲ್ಡ್ವೆಲ್ಲನ ಒಂದು ಅಭಿಪ್ರಾಯ.

ಈ ಸಿಥಿಯನ್ ಭಾಷಾವರ್ಗವನ್ನು ತಾತಾರ್ ಭಾಷಾಕುಟುಂಬವೆಂದೂ, ಆಲ್ಟೇಯಿಕ್ ವರ್ಗವೆಂದೂ, ಮಂಗೋಲಿಯನ್ ಗುಂಪೆಂದೂ, ಟುರೇನಿಯನ್ ಕುಟುಂಬವೆಂದೂ, ಅಲೊಫಿಲಿಯನ್ ಗುಂಪೆಂದೂ, ಉರಲ್—ಅಲ್ತೈಕ್ ಎಂದೂ ಬಗೆಬಗೆಯಾಗಿ ಕರೆದಿದ್ದಾರೆ. ಒಂದು ಹೆಸರಿನ ಆಯ್ಕೆಯಲ್ಲಿ ಒಮ್ಮತ ತೋರಿದಂತೆ ಕಾಣುವುದಿಲ್ಲ. ಇದು ಸಣ್ಣ ತೊಡಕೆಂದು ಮರೆತುಬಿಡಬಹುದು. ಆದರೆ ಇಲ್ಲಿ ಇನ್ನೊಂದು ಸಮಸ್ಯೆ ತಲೆ ಹಾಕುತ್ತದೆ. ಕೆಲವರು ಈ ಭಾಷಾಕುಟುಂಬದಲ್ಲಿ ಸೇರಿಸಿರುವ ಕೆಲವು ಭಾಷೆಗಳನ್ನು ಅಸಮಂಜಸ ವರ್ಗೀಕರಣವೆಂದು ಪ್ರತಿಭಟಿಸಿರುವರು. ಅವರ ಅಭಿಪ್ರಾಯದಂತೆ ಸ್ವರಸಾಮ್ಯವು ನಾಲ್ಕಾರು ಭಾಷೆಗಳಲ್ಲಿ ಕಾಣಬಹುದು. ಆದರೆ ಅದರ ಅರ್ಥಸ್ವರಸಾಮ್ಯ ನಾಲ್ಕೈದು ಭಾಷೆಗಳ ರಚನೆಯಲ್ಲಿದೆ ಎಂದು ಮಾತ್ರ. ಅಷ್ಟು ಮಾತ್ರಕ್ಕೆ ಅವಕ್ಕೆ ಸಂಬಂಧವಿದೆಯೆಂದು ಹೇಳಲಾಗುವುದಿಲ್ಲ. ಪರಸ್ಪರಸಾಮ್ಯ ಕಂಡುಬಂದ ಮಾತ್ರಕ್ಕೆ ಅವುಗಳಿಗೆ ಸಂಬಂಧವೂ ಇದೆಯೆಂದು ಅರ್ಥವಲ್ಲ.

ಡಾ॥ ಬ್ಲಾಕ್, ಪ್ರೊ॥ ಪಾಟ್, ಫ್ರೆಡರಿಕ್ ಮುಲ್ಲರ್, ಮುಂತಾದ ಪಂಡಿತೋತ್ತಮರು ಈ ವರ್ಗದ ಭಾಷೆಗಳು ಒಂದು ಮೂಲದ ಭಾಷೆಗಳೆಂಬುದನ್ನು ವಿರೋಧಿಸಿದರು. ಇವೆಲ್ಲ ಚರ್ಚೆಗಳಿರುವ ಸಿಥಿಯನ್ ವರ್ಗಕ್ಕೆ ದ್ರಾವಿಡ ಭಾಷೆಗಳ ಗುಂಪನ್ನು ಸೇರಿಸುವುದು ಹೇಗೆ? ಅಲ್ಲದೆ ಕಾಲ್ಡ್ವೆಲ್ ಕೂಡ ಆ ಸಿಥಿಯನ್ ಎಂಬ ಪದವನ್ನು ಬಹಳ ಸ್ಥೂಲಾರ್ಥದಲ್ಲಿ ಉಪಯೋಗಿಸುವನಲ್ಲವೆ? ಯಂಗ್ ಗ್ರಮೇರಿಯನ್ನರು ರೂಪಿಸಿದ, ಸಿಥಿಯನ್ ದ್ರಾವಿಡವರ್ಗಗಳ ಬಾಂಧವ್ಯವನ್ನು ಬೆಸೆಯುವಷ್ಟು, ಧ್ವನಿಪರಿವರ್ತನೆ ಹಾಗೂ ಧ್ವನಿಸ್ಥಾಯಿತ್ವದ ನಿಯಮಗಳು (Theory of sound change and sound regularity of Jung Grammarians) ಈ ಹೋಲಿಕೆಯಲ್ಲಿ ಅಡಗಿವೆಯೆ? ಆದುದರಿಂದ ಈ ಅನುಮಾನದ ಹೋಲಿಕೆಯೇಕೆ? ಎಂದು ಕೆಲವರ ವಾದ.

ವಾಸ್ತವವಾಗಿ ದ್ರಾವಿಡ ಭಾಷೆಗಳ ವರ್ಗವನ್ನು ಸಿಥಿಯನ್ ವರ್ಗಕ್ಕೆ ಸಮೀಕರಿ

ಸುವ ಅಭಿಪ್ರಾಯ ಮೊಟ್ಟಮೊದಲು ವ್ಯಕ್ತಪಡಿಸಿದವನು ಕಾಲ್ಡ್‌ವೆಲ್ ಅಲ್ಲ, ರ್‍ಯಾಸಮುಸ್‌ರಾಸ್ಕ್. ದ್ರಾವಿಡ ಭಾಷೆಗಳು ಸಂಸ್ಕೃತ ಅಥವಾ ಇಂಡೊ ಯೂರೋಪಿಯನ್ ವರ್ಗಕ್ಕೆ ಸೇರಿದ ಪ್ರತ್ಯೇಕ ವರ್ಗವೆಂದು ಕಾಲ್ಡ್‌ವೆಲ್‌ನಿಗಿಂತಲೂ ಪೂರ್ವದಲ್ಲಿಯೇ ಸೂಚಿಸಿದ್ದ ರಾಸ್ಕ್ ದ್ರಾವಿಡ ಭಾಷೆಗಳ ಗುಂಪನ್ನು ಸಿಥಿಯನ್ ಕುಟುಂಬಕ್ಕೆ ಸಂಬಂಧಪಟ್ಟಂತೆ ಊಹೆಯನ್ನು ಮಾಡಿದ್ದನು. ಕಾಲ್ಡ್‌ವೆಲ್ ಅವನ ಊಹೆಯನ್ನು ಮುಂದುವರಿಸಿದನು, ರಾಸ್ಕನ ಸಲಹೆಯನ್ನು ವಿಚಿಕಿತ್ಸೆಗೊಳಗುಮಾಡಿದನು. ಆದರೆ ಕಾಲ್ಡ್‌ವೆಲ್ ಕೇವಲ ಊಹೆಯಿಂದ ದ್ರಾವಿಡ ಭಾಷೆಗಳನ್ನು ಸಿಥಿಯನ್ ವರ್ಗಕ್ಕೆ ಸಮೀಪವಾಗಿವೆಯೆಂದು ತಿಳಿಸಲಿಲ್ಲ.

ಅವನ ವಿನಯವಂತಿಕೆಯ ವಾಕ್ಯಗಳನ್ನು ಲಾಲಿಸಿ:

> "My knowledge of the Scythian languages is only at second hand, and I am fully conscious of the truth of Bohtlingk's dictum, that it is dangerous to write on languages of which we do not possess the most accurate knowledge.' I trust therefore, it will be remembered that if I advocate any particular theory on this question of offiliation, I do so with considerable diffidence."[1]

ಆದುದರಿಂದ ಕಾಲ್ಡ್‌ವೆಲ್ ದ್ರಾವಿಡ ಭಾಷಾವರ್ಗ ಸಿಥಿಯನ್ ವರ್ಗಕ್ಕೆ ಸೇರಿದೆಯೆಂದು ಹೇಳುವುದಕ್ಕೆ ಮೊದಲು ಸಿಥಿಯನ್ ವರ್ಗೇತರ ಭಾಷಾಕುಟುಂಬಗಳೊಡನೆಯೂ ಹೋಲಿಸಿ ನೋಡಿದ್ದಾನೆ. ಉದಾಹರಣೆಗೆ ಚೀನೀ ಭಾಷೆ, ಜಪಾನಿ ಭಾಷೆ, ಮಂಗೋಲಿಯ ಭಾಷೆ, ಹಂಗೇರಿಯನ್, ಇಂಡೊ-ಯುರೋಪಿಯನ್, ಸೆಮಿಟಿಕ್—ಹೀಗೆ ಹಲವು ಭಾಷಾ ಶಾಖೆಗಳೊಡನೆ ಹೋಲಿಸಿ ನೋಡುವ ನಿಷ್ಠೆಯ ಪ್ರಯತ್ನಪಟ್ಟಿದ್ದಾನೆ. ಆ ವರ್ಗದ ಭಾಷೆಗಳಿಗೆ ಹೋಲಿಸಿದ ಸಂದರ್ಭದಲ್ಲಿ ಹಲವಾರು ಪದಗಳಿಗೆ ಅಲ್ಲಲ್ಲಿ ಸಂಬಂಧ ಸಾದೃಶ್ಯ ಸರಿಯಾಗಿಯೇ ಕೂಡಿಬಂದಿತು. ಆದರೂ ಕಾಲ್ಡ್‌ವೆಲ್ ಆ ಸಂಬಂಧವನ್ನು ಕೇವಲ ಆಕಸ್ಮಿಕವೇ ಹೊರತು ಅವು ಒಂದು ಮೂಲದ ಭಾಷೆಗಳೆಂದು ಸುಳಿವು ಕೊಡುವುದಿಲ್ಲವೆಂದು ತೀರ ಉಚಿತವಾಗಿ ಭಾವಿಸಿದನು.

ಒಂದು ಭಾಷೆ ಅಥವಾ ಭಾಷಾವರ್ಗ ಇನ್ನೊಂದು ಭಾಷೆಯ ಅಥವಾ ಭಾಷಾಕುಟುಂಬದ ಬಂಧುವೆಂಬುದನ್ನು ಗುರುತಿಸಬೇಕಾದರೆ ವ್ಯಾಕರಣ ರೂಪಗಳ ತುಲನೆಯೇ ಉತ್ಕೃಷ್ಟ ಸಾಮಗ್ರಿ. ಕೇವಲ ಆಕಸ್ಮಿಕ ಸಾದೃಶ್ಯದ ಆಧಾರದಿಂದ ತೀರ್ಮಾನಿಸಬಾರದು. ಕನ್ನಡದ ಕೊಲ್ಲು, ಗುಂಪು, ಗಾಡಿ—ಮೊದಲಾದ ಪದಗಳಿಂದ ಇಂಗ್ಲಿಷ್ ಭಾಷೆಯಲ್ಲಿರುವ Kill, Group, Gaudy ಪದಗಳು ಬಂದಿವೆಯೆಂದಾಗಲೀ, ಅಥವಾ

---

[1] ಕಾಲ್ಡ್‌ವೆಲ್, *Acgodls*, ನಾಲ್ಕನೆಯ ಮುದ್ರಣ, ೧೯೫೬.

ಇಂಗ್ಲಿಷಿನ ಈ ಪದಗಳಿಂದ ಕನ್ನಡದ ಆ ಪದಗಳು ಬಂದಿವೆ ಎಂದಾಗಲೀ ಹೇಳಿದರೆ ಅದು ಆಭಾಸವಾಗುತ್ತದೆ. ತೌಲನಿಕ ಭಾಷಾವಿಜ್ಞಾನದ ದೃಷ್ಟಿಯಿಂದ ಇದನ್ನು ಸಶಾಸ್ತ್ರೀಯವಾಗಿ ವಿವೇಚಿಸಬೇಕಾಗುತ್ತದೆ.

ದ್ರಾವಿಡರು ಹೊರಗಿನಿಂದ ಬಂದವರು. ಈ ವಿಚಾರ ಬಹುಮಟ್ಟಿಗೆ ನಿರ್ವಿವಾದ. ಭಿನ್ನಾಭಿಪ್ರಾಯವಿರುವುದು ದ್ರಾವಿಡರ ಭಾಷೆಯ ವಿಚಾರದಲ್ಲಿ. ಮೂಲದ್ರಾವಿಡ ಭಾಷೆಯನ್ನು ಇಂ-ಯೂ, ಸುಮೇರಿಯನ್, ಕೊರಿಯನ್, ಆಫ್ರಿಕನ್, ಪ್ರಾಚೀನ ಮೆಡಟರೇನಿಯನ್, ಅಲ್ಟೈ ಮತ್ತು ಉರಲಿಯನ್ ಮುಂತಾದ ಭಾಷೆಗಳೊಡನೆ ಸಮೀಕರಿಸುವ ಪ್ರಯತ್ನಗಳಾಗಿವೆ. ಇವುಗಳಲ್ಲಿ ಸಂಭಾವ್ಯದ ಸಾಧ್ಯತೆ ಕಂಡು ಬಂದು, ಹೆಚ್ಚು ಗಮನ ಸೆಳೆದ ಪ್ರಯತ್ನವೆಂದರೆ ಉರಲಿಯನ್ ಭಾಷೆಗಳೊಡನೆ ಸಂಬಂಧ ಸ್ಥಾಪಿಸುವ ಪ್ರಯತ್ನ. ಉರಲಿಯನ್ ಹಾಗೂ ದ್ರಾವಿಡ ಭಾಷೆಗಳ ಪ್ರಾಗ್ ಐತಿಹಾಸಿಕ ಬಾಂಧವ್ಯವನ್ನು ತೋರಿಸಲೆತ್ನಿಸಿದವರಲ್ಲಿ ಕಾಲ್ಡ್‌ವೆಲ್, ಎಂ. ಆಂಡ್ರುನೊವ್, ಬ್ಲಾಕ್, ಬರೊ, ಎಫ್. ಸ್ಕ್ರೇಡರ್, Schoebel, ಎ. ಎಫ್. ತ್ಯಾಗುರಾಜು, ಈ. ಟಟಲ್ ಮೊದಲಾದವರಿದ್ದಾರೆ. ಕಾಲ್ಡ್‌ವೆಲ್ ಇಂಥ ಸಾದೃಶ್ಯವುಳ್ಳ ಸುಮಾರು ೯೦ ನಿದರ್ಶನಗಳನ್ನು ಉಲ್ಲೇಖಿಸಿದ್ದ. ಆತನ ಅಭಿಪ್ರಾಯದಂತೆ ಈ ೯೦ ಸಾದೃಶ್ಯಾಂಶಗಳು ದ್ರಾವಿಡ, ಫಿನ್ನೊ—ಉಗ್ರಿಯನ್, ಸಮೊಯೆದ್ ತುರ್ಕಿ ಮತ್ತು ಮಂಗೋಲಿಯನ್ ಮೊದಲಾದ ಶಾಖೆಗಳು—ಇವುಗಳ ಭಾಷಿಕ ಬಾಂಧವ್ಯವನ್ನು ಬಿಂಬಿಸುತ್ತವೆ. ಅವನ ಅನಂತರ ಅನೇಕ ವರ್ಷಗಳ ಕಾಲ ಈ ಸೂಚನೆ ಅಂಗೀಕೃತ ಇಲ್ಲವೇ ತಿರಸ್ಕೃತ ಎರಡೂ ಆಗದೆ ಮೌನವಾಗಿತ್ತು.

ಸ್ಕ್ರೇಡರ್ ಈ ವಾದಕ್ಕೆ ಹೊಸ ಚಾಲನೆಯಿತ್ತ. ದ್ರಾವಿಡ ಮತ್ತು ಫಿನ್ನೊ ಉಗ್ರಿಯನ್—ಸಮೊಯೆದ್ ಭಾಷೆಗಳ ಐತಿಹಾಸಿಕ ಹೊಂದಾಣಿಕೆ ಈ ಎರಡು ಪರಿವಾರಗಳ ನಡುವಿನ ಸಂಬಂಧಕ್ಕೆ ಸಮೀಕರಿಸದೆ ಪ್ರಾಗ್ ಐತಿಹಾಸಿಕ ಕಾಲದ ನೆರೆಹೊರೆಯ ಭಾಷೆಗಳೆಂದು ಭಾವಿಸಬೇಕೆಂಬುದು ಸ್ಕ್ರೇಡರ್ ಅಭಿಪ್ರಾಯ. ಈ ಬಗೆಯ ಪುದುವಾಳ್ತನದಿಂದ ಈ ಎರಡು ಪರಿವಾರಗಳು ಪರಸ್ಪರ ಪ್ರಭಾವ ಬೀರಿವೆಯೆಂದೂ, ಅಥವಾ ಇವೆರಡೂ ಪರಿವಾರಗಳು ಬೇರೊಂದು ಪರಿವಾರದಿಂದ ಪ್ರಭಾವಿತಗೊಂಡಿವೆಯೆಂದೂ ತಿಳಿಯಲು ಸಾಧ್ಯವಿದೆ. ಆದರೆ ಇವೆರಡರ ಸಂಬಂಧವೇ ಗಟ್ಟಿಯಾದ ಮಾತೆಂಬುದು ಬರೊ ವಾದ. ದೇಹದ ಅಂಗಾಂಗಗಳಿಗೆ ಸಂಬಂಧಿಸಿದ ೭೨ ಶಬ್ದಗಳನ್ನು, ನಿಷ್ಪನ್ನ ರೂಪಗಳನ್ನು, ತುಲನೆ ಮಾಡಿ ನೋಡಿದೆ:

> It would not be possible to produce between any two languages the same amount of detailed comparisons as can be made between Dravidian and Uralian without giving reason to believe that those languages were themselves related.

ಇವೆಲ್ಲಾ ಶಬ್ದರೂಪ ಸಾಮ್ಯವನ್ನು ಸಾರುವ ಅಂಶಗಳು. ಶಬ್ದಗಳಲ್ಲಿ ಸ್ವೀಕರಣ ಕ್ರಿಯೆ ಸಾಮಾನ್ಯ. ಹೀಗಾಗಿ ಸಂದೇಹ ಇನ್ನೂ ಉಳಿಯುತ್ತದೆ. ಈ ಭಾಷೆಗಳ ಆಕೃತಿಮೂಗಳಲ್ಲಿ ಕಾಣುವ ಸಾದೃಶ್ಯ ಸಂಬಂಧ ಆ ಸಂದೇಹವನ್ನು ಸಡಿಲಿಸುತ್ತದೆ. ಎ. ಆಂಡ್ರನೊವ್ ಅವರು ಅಂಥ ಪ್ರಯತ್ನ ಮಾಡಿದ್ದಾರೆ.

ದ್ರಾವಿಡ ಭಾಷೆಗಳಲ್ಲಿ ಕಾಣುವ ಭೂತಕಾಲ ಪ್ರತ್ಯಯಗಳಲ್ಲಿ *—ಇ—ಮತ್ತು *—ಸ್—ಮತ್ತು*—ತ್—ರೂಪಗಳು ಉರಲಿಯನ್ ಭಾಷೆಗಳಲ್ಲೂ ಬಳಕೆಯಲ್ಲಿವೆ.

*—ಇ—:—ಸಮೊಯೆದ್. ಒತಿನ್(=ನಾನು ತೆಗೆದುಕೊಂಡೆ),ಒತಿಶ್ (=ನೀನು) ಫಿನ್ನಿಷ್. ತುಲಿನ್ (=ನಾನು ಬಂದೆ), ತುಲಿದ್ (ನೀನು—) ಎಸ್ತೋನಿಯನ್, ಕರಲಿಯನ್, ವೆಪ್ಸಿಯನ್ ಮೊದಲಾದ ಈ ಪರಿವಾರದ ಭಾಷೆಗಳಲ್ಲಿ–ಇ–ಇದೆ.

*—ಸ್—: ಸಮೊಯೆದ್ ಶಾಖೆಯ ನೆನೆಟ್ಸ್ ಮತ್ತು ಸೆಲ್ಕೂಪ್ ಭಾಷೆಗಳಲ್ಲೂ ಫಿನ್ನೊ—ಉಗ್ರಿಯನ್ ಶಾಖೆಯ ಖಂತಿ ಮತ್ತು ಮನ್ಸಿ ಭಾಷೆಗಳಲ್ಲಿ ಇದು ಪ್ರಾಚುರ್ಯದಲ್ಲಿದೆ.

ನೆನೆಟ್ಸ್. ತಿಸಕ್ (=ನಾನು ದೋಣಿಯೊಳಕ್ಕೆ ಬಂದೆ), ತಿಸಂತಿ (=ನೀನು–) ಖಂತಿ. ತೆಸಮ್ (ನಾನು ತಿಂದೆ), ತೆಸ್ಯನ್ (ನೀನು—) ಮೊರ್ದೂವಿಯನ್, ಲೀವಿಯನ್, ಎಸ್ತೊನಿಯನ್ ಭಾಷೆ ಉಪಭಾಷೆಗಳಲ್ಲೂ ಇದರ ಅವಶೇಷಗಳಿವೆ.

*—ತ್—: ಇದು ಇತ್ತೀಚಿನ ಪ್ರತ್ಯಯ ರೂಪ. ಈ ಪರಿವಾರದ ಭಾಷೆಗಳಲ್ಲಿ ಹಂಗೇರಿಯನ್ ಶಾಖೆಯಲ್ಲಿ ಮಾತ್ರ ಇದು ಬಳಕೆಯಲ್ಲಿದೆ. ಅಲ್ಲದೆ ಇದರ ವಿಚಾರದಲ್ಲಿ ಕೆಲವು ಕ್ಲಿಷ್ಟತೆಗಳೂ ಇವೆ. ಆದರೂ ಇಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ ದ್ರಾವಿಡ ಪರಿವಾರದಲ್ಲಿ ಕಾಣುವಂತೆ ಇಲ್ಲಿಯೂ—ತ್—ಎಂಬುದು ತರುವಾಯದ ಪ್ರತ್ಯಯವೆಂಬುದು.

ವರ್ತಮಾನ ಮತ್ತು ಭವಿಷ್ಯತ್‌ಕಾಲ ಸೂಚಕವಾಗಿ, ಒಂದೇ ಸಮಾನ ಕಾಲ ವಾಚಕ ಸ್ಥಿತಿ, ಈ ಎರಡೂ ಪರಿವಾರಗಳಲ್ಲಿ ಕಾಣುವ ಮತ್ತೊಂದು ಸಾದೃಶ್ಯ. ಮೂಲದ್ರಾವಿಡಕ್ಕೆ ಸೇರಿದಂತೆ ಭೂತಕಾಲೇತರ ಕಾಲವಾಚಕ ಪ್ರತ್ಯಯಗಳಲ್ಲಿ *—ø—ಮತ್ತು *—ಕ್—ಎಂಬೆರಡು ಪ್ರತ್ಯಯಗಳು ಉರಲಿಯನ್ ಭಾಷೆಗಳಲ್ಲೂ ಉಂಟು. ದಕ್ಷಿಣ ದ್ರಾವಿಡ ಭಾಷೆಗಳಲ್ಲಿನ ಭವಿಷ್ಯತ್—ವರ್ತಮಾನ ಕಾಲವಾಚಕ ಪ್ರತ್ಯಯಗಳಲ್ಲೊಂದಾದ—ವ್—ಕೃತ್ ಪ್ರತ್ಯಯವಿರಬೇಕೆಂಬ ಭಾವನೆಯಿದೆ. ಇದೇ ರೀತಿ ಫಿನ್ನೊ—ಉಗ್ರಿಯನ್ ಭಾಷೆಗಳಲ್ಲಿ—ವ್—ಪ್ರತ್ಯಯವಿದ್ದು ಅದನ್ನೂ ಕೃತ್ ಪ್ರತ್ಯಯವೆಂದೇ ತಿಳಿಯಲಾಗಿದೆ. ದ್ರಾವಿಡ ಭಾಷೆಗಳಲ್ಲಿ ಬಹುವಚನ ಪ್ರತ್ಯಯಗಳಲ್ಲಿ ಬಹುವ್ಯಾಪಕ ಸರ್ವಸಾಮಾನ್ಯವಾದ ಪ್ರತ್ಯಯಗಳು—ಕ್,—ಳ್/-ಲ್ (-ಕಳ್).

ಉರಲಿಯನ್ ಭಾಷೆಗಳಲ್ಲೂ ಪ್ರಾಚೀನವಾದ ಬಹುವಚನ ಪ್ರತ್ಯಯ—ಕ್. ಪ್ರಾಚೀನವಾಗಿರುವುದರ ಜೊತೆಗೆ ಇದು ಹೆಚ್ಚು ಪ್ರಾಚುರ್ಯದಲ್ಲೂ ಇದೆ. ಇದರಂತೆ

ಫಿನ್ನಿಷ್‌ನ ಪೂರ್ವಭಾಗದ ಉಪಭಾಷೆಗಳಲ್ಲಿ—ಲ್ ರೂಪ ಕೂಡ ಬಳಕೆಯಲ್ಲಿದೆ.—ತ್ ಎಂಬ ಬಹುವಚನ ಪ್ರತ್ಯಯ ಬಾಲ್ಟಿಕ್ ವೋಲ್ಗ ಮತ್ತು ಸಮೊಯೆಡ್ ಶಾಖೆಗಳ ಭಾಷೆಗಳಲ್ಲಿದೆ. ದ್ರಾವಿಡಪರಿವಾರದಲ್ಲೂ ಕೆಲವು ಉತ್ತರ ದ್ರಾವಿಡ ಶಾಖೆಯ ಭಾಷೆಗಳಲ್ಲಿ(ಪರ್ಜಿ, ಗದಬ)—ತ್ ದ ಇರುವಿಕೆಯನ್ನು ಮನಗಾಣಬಹುದು. ಮೂಲ ದ್ರಾವಿಡ ಭಾಷೆಯ ವಿಭಕ್ತಿ ವ್ಯವಸ್ಥೆಯ ನಿರ್ದೇಶನ ಕ್ಲಿಷ್ಟವಾಗಿರುವಂತೆ ಮೂಲ ಉರಲಿಯನ್ ಭಾಷೆಯ ವಿಭಕ್ತಿ ವ್ಯವಸ್ಥೆಯೂ ತೊಡಕಾಗಿದೆ. ಇವುಗಳಲ್ಲಿ ಸಮಾನತೆ ಕಾಣುವ ಅಂಶಗಳಿಂತಿವೆ: ಚತುರ್ಥೀವಿಭಕ್ತಿ ಪ್ರತ್ಯಯ ಎರಡು ಪರಿವಾರಗಳಲ್ಲೂ *—ಕ್ ಇದೆ. ದ್ವಿತೀಯಾವಿಭಕ್ತಿ ಪ್ರತ್ಯಯ ದ್ರಾವಿಡ ಪರಿವಾರದಲ್ಲಿ *—ಅಮ್ ಇದೆ. ಉರಲಿಯನ್ ಪರಿವಾರದಲ್ಲಿ *—ಮ್ ಇದೆ. ಷಷ್ಠೀವಿಭಕ್ತಿ ಪ್ರತ್ಯಯ ಮೂಲ ದ್ರಾವಿಡದಲ್ಲಿ *—ಇನ್ ಇದೆ; ಮೂಲ ಉರಲಿಯನ್ನಿನಲ್ಲಿ *—ನ್ ಇದೆ.

ಹೀಗೆ ಧ್ವನಿ ಮತ್ತು ಶಬ್ದಗಳಿಂದ ಹಿಡಿದು ಆಕೃತಿಗಳ ತನಕ ಈ ಎರಡು ಭಾಷಾಪರಿವಾರಗಳಲ್ಲಿ ಹಲವಾರು ಹೊಂದಾಣಿಕೆಗಳು ಎದ್ದು ಕಾಣುತ್ತವೆ. ಇವುಗಳನ್ನು ತೀರ ಆಕಸ್ಮಿಕವೆಂದು ಕಡೆಗಣಿಸುವಂತಿಲ್ಲ. ಅಲ್ಲದೆ ಈ ವಿಚಾರದಲ್ಲಿ ಸ್ವೀಕರಣ ಕ್ರಿಯೆ ಅಸಂಭವನೀಯವಾಗಿಯೇ ತೋರುತ್ತದೆ. ಇವು ಈ ಪರಿವಾರಗಳ ದೂರದ ಸಂಬಂಧವನ್ನು ಬಹುಶಃ ಪ್ರಾಗ್ ಐತಿಹಾಸಿಕ ಸಂಬಂಧದ ಹೆಜ್ಜೆ ಗುರುತನ್ನು ಸಾರುತ್ತವೆ. ಆದರೂ ಈ ಎರಡು ಭಾಷಾಪರಿವಾರಗಳ ವೈದೃಶ್ಯಾಂಶಗಳನ್ನು ನಿರಾಕರಿಸುವಂತಿಲ್ಲ. ಸಂಖ್ಯಾವಾಚಿಗಳಲ್ಲೂ, ಸರ್ವನಾಮಗಳಲ್ಲೂ ವೈದೃಶ್ಯ ವಿಪರೀತ.

ಭಾಷೆಗಳ ಬಾಂಧವ್ಯವನ್ನು ಬಿಡಿಸಿ ನೋಡುವ ಮೂಲ ಸೂತ್ರಗಳು ರಾಬರ್ಟ್ ಕಾಲ್ಡ್‌ವೆಲ್ಲನಿಗೆ ಚೆನ್ನಾಗಿ ತಿಳಿದಿತ್ತು. ಆದುದರಿಂದಲೇ ಅವನ ಈ ಪ್ರಶಂಸಾರ್ಹವಾದ ಪ್ರಯತ್ನಗಳನ್ನು ಪರಿಶೀಲಿಸಿದ ಹಾಗೂ ಬಹುಮಟ್ಟಿಗೆ ಅಂಗೀಕರಿಸಿ ಅನುಮೋದಿಸಿದ ಫಾದರ್‌ಕ್ಲೊಸೆಟ್, ವಿಲಿಯಮ್ ವ್ಹಿಟ್ನಿ[1], ಮ್ಯಾಕ್ಸ್‌ಮುಲ್ಲರ್, ಎಡ್ಕಿನ್ಸ್, ಕಸ್ಟ್[2], ಮತ್ತು C. Schoebel—ಎಂಬ ಈ ವಿದ್ವಾಂಸ ಸಮುದಾಯ ದ್ರಾವಿಡ ಭಾಷೆಗಳು ಸಿಥಿಯನ್ (Scythian) ಹಾಗೂ ಸ್ವಲ್ಪಮಟ್ಟಿಗೆ ಸುಮೇರಿಯನ್ ಭಾಷಾಪರಿವಾರದೊಡನೆ ಸಂಬಂಧ ಹೊಂದಿದೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಸರ್ ಜಾರ್ಜ್ ಎಬ್ರಹಾಮ್ ಗ್ರಿಯೆರ್ಸನ್[3] ಮತ್ತು ಸ್ಟೆನ್‌ಕೊನೊ (Stenkonow) ರಾ. ನರಸಿಂಹಾಚಾರ್[4] ಮುಂತಾದ ವಿದ್ವಾಂಸರು ದ್ರಾವಿಡ ಭಾಷಾವರ್ಗ ಸಿಥಿಯನ್ ಅಥವಾ ಜಗತ್ತಿನ ಬೇರೆ ಯಾವುದೇ ಭಾಷಾಪರಿವಾರದೊಡನೆ ಸೇರುವುದಿಲ್ಲವೆಂದೂ, ಅದು

---

[1] William Dwight whitney *Language and the study of Language* 1867.

[2] Cust, *The Modern Language of the East Indies*

[3] ಗ್ರಿಯೆರ್ಸನ್ : *LSI*—Vol. IV, 1906-page 283.

[4] R. N. char *History of Kannada Language*, 1934, p. 7.

ಕೇವಲ ತಾನೇ ಒಂದು ಪ್ರತ್ಯೇಕ ಭಾಷಾಪರಿವಾರವಾಗಿ ನಿಲ್ಲುವುದೆಂದೂ ಅಭಿಪ್ರಾಯ ಪಟ್ಟು ಕಾಲ್ಡ್‌ವೆಲ್ಲನ ಸೂಚನೆಯನ್ನು ಒಪ್ಪದೆ ಹೋದರು.

ಭಾರತದ ಭಾಷಾ ಪರಿವೀಕ್ಷಣೆಯ ಅಧಿಕಾರಿಗಳ ಅಭಿಪ್ರಾಯ ಕಾಲ್ಡ್‌ವೆಲ್ಲನ ಸಲಹೆಗೆ ಪೂರಕವಾಗಿಲ್ಲ—

With regard to the Dravidian Language, the attempt to connect them with other linguistic families outside India is now generaly recognised as a failure, and we must stil consider them as an isolated family.[1]"

ಸ್ಟೆನ್‌ಕೊನೊ ಎಂಬಾತನ ದೃಷ್ಟಿಯಲ್ಲಿ ಸಿಥಿಯನ್ ಎಂಬ ಹೆಸರೇ ಅಷ್ಟು ಹಿತವಾಗಿಲ್ಲ. ಗ್ರೀಕ್ ಬರಹಗಾರರ ಮೂಲಕ ಉಳಿದು ಬಂದಿರುವ ಸಿಥಿಯನ್ ಪದಗಳು ವಾಸ್ತವ ವಾಗಿ ಇಂಡೊ-ಯೂರೋಪಿಯನ್ ಬುಡಕಟ್ಟಿನ ಇರಾನಿಯನ್ ಪದಗಳೇ ಆಗಿವೆ. ಆದರೂ ಈ ಸಿಥಿಯನ್ ಎಂಬ ಪದವನ್ನು ಇಂಡೊ-ಯೂರೋಪಿಯನ್ ವರ್ಗವಾಗಲಿ, ಅಥವಾ ಸೆಮಿಟಿಕ್ ಕುಟುಂಬದವಾಗಲಿ ಸೇರದಿರುವ ಏಷಿಯಾ ಮತ್ತು ಯೂರೋಪಿನ ಬೇರೆ ಭಾಷೆಗಳಿಗೆ ಕೊಡಲಾಗಿದೆ, ಸರಿಯೆ. ಆದರೆ ಸಿಥಿಯನ್ ವರ್ಗಕ್ಕೆ ಸೇರಿದ ಎಲ್ಲ ಭಾಷೆಗಳಲ್ಲೂ ಸ್ಪಷ್ಟ ಸಂಬಂಧವಿದ್ದಂತೆ ತೋರುವುದಿಲ್ಲ. ಏಕಾಕ್ಷರ ಪದಗಳನ್ನು ಹೊಂದಿರುವ ಚೀನಾ ಮತ್ತು ಅದರ ಸಮೀಪದ ಭಾಷೆಗಳು, ಇಂಡೊ-ಯೂರೋಪಿಯಾ ಭಾಷೆಗಳಂತೆಯೇ ಫಿನ್ಸ್ (Finns), ಮಗ್ಯಾರ್ಸ್ ಭಾಷೆಗಳಿಂದ ಬೇರೆಯಾಗಿವೆ.

ಈ ಎಲ್ಲ ತೊಡಕುಗಳಿಂದಾಗಿ ದ್ರಾವಿಡ ಭಾಷೆಗಳ ಗುಂಪನ್ನು ಭಾರತದ ಹೊರಗಿನ ಯಾವುದೇ ಭಾಷೆಯ ಗುಂಪಿನೊಡನೆ ಹೋಲಿಸುವುದು ಇಂಡೊ-ಯೂರೋಪಿಯನ್ ಗುಂಪಿನೊಡನೆ ಹೋಲಿಸುವಷ್ಟೇ ವ್ಯರ್ಥ ಸಾಹಸ; ಅತೃಪ್ತಿಕರ ಹೆಸರನ್ನು ಹೊತ್ತ ಸಿಥಿಯನ್ ವರ್ಗಕ್ಕೆ ದ್ರಾವಿಡಕುಟುಂಬವೂ ಸೇರಿದೆಯೆಂದು ತೀರ್ಮಾನಮಾಡುವು ದಕ್ಕಿಂತಲೂ ದ್ರಾವಿಡ ವರ್ಗವನ್ನು ಪ್ರತ್ಯೇಕ ವರ್ಗವೆಂದೇ ಪರಿಗಣಿಸುವುದು ಒಳಿತು ಎಂಬುದು ಕೆಲವು ಭಾಷಾವಿಜ್ಞಾನಿಗಳ ಅಭಿಪ್ರಾಯದ ಸಾರ. ಪಿ. ಹನ್‌ಫಲ್ವಿ (P. Hunfalvy) ಎಂಬ ವಿದ್ವಾಂಸ ದ್ರಾವಿಡ ಗುಂಪಿನ ಮೂಲ ಮತ್ತೆಲ್ಲೊ ಇರ ಬೇಕೆಂದು ಸೂಚಿಸಿದ್ದಾನೆ:

The Turkis and Samojedian languages, which are geographically nearest to the Finno-Ugric family, constitute two different nuclei, which cannot be included in the Finno-Ugric one....the Dravidian languages have their source likewise in a different nuclues.[2]"

[1] ಗ್ರಿಯೆರ್ಸನ್, *LSI*-Vol. IV, 1906—p. 282.

[2] ಪಿ. ಹನ್‌ಫಲ್ವಿ, *Transations of the II session of the International Congress of orientalists*, London, 1874, p. 89.

ಅಮೆರಿಕ ಪ್ರಾಚ್ಯ ಸಂಘದ ಪತ್ರಿಕೆಯ ಪ್ರಕಾಶನ ಸಮಿತಿಯ ಸದಸ್ಯರ ಅಭಿಪ್ರಾಯವೂ, ಸಂಪೂರ್ಣ ನಿರಾಕರಣೆಯಲ್ಲದಿದ್ದರೂ ಅಷ್ಟಾಗಿ ಕಾಲ್ಡ್‌ವೆಲ್ಲನ ಸೂಚನೆಗೆ ಪೋಷಕ ವಾಗಿಲ್ಲ.[1] ಶಬ್ದಗಳ ಸಾಮಾನ್ಯ ರೂಪಗಳು ಮತ್ತು ಅಂತರಾರ್ಥದಲ್ಲಿ ಏಕರೂಪತೆ ಮತ್ತು ವ್ಯಾಕರಣದಲ್ಲಿಯೂ ಕೆಲವು ಸಮಾನತೆ—ಇವು ಸಿಥಿಯನ್ ಹಾಗೂ ದ್ರಾವಿಡ ವರ್ಗಗಳಲ್ಲಿ, ಅಲ್ಪಪ್ರಮಾಣದಲ್ಲಿಯೇ ಆಗಲಿ, ನಿಸ್ಸಂದೇಹವಾಗಿ ಗೋಚರಿಸುತ್ತದೆ ನಿಜ. ಆದರೆ ತೌಲನಿಕ ಭಾಷಾವಿಜ್ಞಾನ, ಕಾಲ್ಡ್‌ವೆಲ್ ತೋರಿಸುವ ಈ ಹೋಲಿಕೆಯ ಸಾದೃಶ್ಯ ಸಮಾನತೆಗಳು ಕೇವಲ ಆಕಸ್ಮಿಕವಾಗಿ ಕಂಡ ಗುಣಗಳೇ ಅಲ್ಲದೆ, ಜೊತೆಗೆ ಈ ಭಾಷೆಗಳನ್ನು ಆಡುವ ಮೂಲ ಬುಡಕಟ್ಟಿನವರು ಒಂದೇ ಪ್ರದೇಶದಿಂದ ಬಂದಿರು ವರೆ—ಇತ್ಯಾದಿ ವಿಚಾರಗಳಲ್ಲಿ ಬೆಳಕು ಬೀರಿ ಖಚಿತವಾಗಿ ಹೇಳುವಷ್ಟು ಶಕ್ತಿಯುತ ವಾಗಿದೆಯೆ ನೋಡೋಣ.

ಭಾಷಾವಿಜ್ಞಾನಿಗಳು ಈ ವಿಷಯದಲ್ಲಿ ಅಭ್ಯಾಸ ನಡಸಬೇಕಾದುದು ತುಂಬ ಇದೆ. ಅಲ್ಲಿಯವರೆಗೆ ದ್ರಾವಿಡ ಕುಟುಂಬ ಪ್ರತ್ಯೇಕವೆಂದು ತಿಳಿಯುವುದು ತಪ್ಪಾಗಲಾರದು.

> The Dravidian family seems to be isolated within India, all attempts to connect it either with Uralic, Altaic, Elamite, Subaraean, Burushaski, Andamanese, Australian, or Papuan having proved unsuccessfull."[2]

ಆದರೂ ದ್ರಾವಿಡ ಭಾಷೆಗಳಿಗೂ—ಸಿಥಿಯನ್ ಗುಂಪಿಗೂ, ಕೇವಲ ಆಕಸ್ಮಿಕದಿಂದ ಮಾತ್ರ ಸಂಭವಿಸಿದ ಸಾದೃಶ್ಯವಾಗಿರದೆ ಸರಿಯಾದ ಆಧಾರಗಳಿಂದ, ಪ್ರಾಚೀನ ಸಂಬಂಧದಿಂದ ಬಂದ ಸಾದೃಶ್ಯಗಳೂ ಇವೆಯೆಂಬ ಅಭಿಪ್ರಾಯ ವಿಚಾರಾರ್ಹ. ದ್ರಾವಿಡವರ್ಗ ಪ್ರಧಾನವಾಗಿ ಅಂಟು ಭಾಷಾವರ್ಗ; ಸ್ವರಸಾಮ್ಯವಿಧಿಯ ಅಸ್ತಿತ್ವ ತಕ್ಕಮಟ್ಟಿಗೆ (ತೆಲುಗು ಭಾಷೆಯಲ್ಲಿ ವಿಶೇಷವಾಗಿ) ಇದೆ. ಇವೆರಡೂ ಸಿಥಿಯನ್ ವರ್ಗದ ಪ್ರಧಾನ ಲಕ್ಷಣಗಳು. ಸಿಥಿಯನ್ ಭಾಷೆಗಳಲ್ಲಿಯೂ ಅಭಿವ್ಯಾಪಕ ಹಾಗೂ ವ್ಯಾವರ್ತಕವೆಂಬ ಸರ್ವನಾಮವಿದೆ. ಪ್ರಕೃತಿಗಳಿಗೆ ಸೇರಿದ ಪ್ರತ್ಯಯಗಳನ್ನು ಸುಲಭ ವಾಗಿ ಗುರುತಿಸಿ ಪ್ರತ್ಯೇಕಿಸುವುದು ಸಾಧ್ಯವಿದೆ. ಪರುಷವರ್ಣ ಸರಳವರ್ಣವಾಗುವ ವ್ಯವಸ್ಥೆ ಅಲ್ಲಿಯೂ ಇದೆ. ಆದರೂ ಈ ದಿಶೆಯಲ್ಲಿ ಹೆಚ್ಚಿನ ವ್ಯಾಸಂಗ ಇನ್ನು ಆಗ ಬೇಕಾಗಿದೆ.

ಈ ಮಧ್ಯೆ ಕೆಲವು ಕಾಲ, ಸುಮಾರು ಅರ್ಧ ಶತಮಾನ, ತೆಪ್ಪಗಾಗಿದ್ದ ಈ ವಾದ ವನ್ನು ಈಗ ಮತ್ತೆ ಎತ್ತಲಾಗಿದೆ. ಈ ವಾದವನ್ನು ಮೊತ್ತಮೊದಲು ಮತ್ತೆ ಪುನರು

---

[1] ಪತ್ರಿಕೆ, *The Journal of American Oriental Society Volume* VII, p. 271.

[2] Louis H. Gray, *Foundations of Lauguage*, II Edition, 1958. p. 388.

ಜ್ಜೀವಿಸಿದವನು ಎಫ್. ಓ. ಸ್ಕ್ರೇದರ್ ಎಂಬಾತ (F. O. Schrader). ಈತ ಕಾಲ್ಡ್‌ವೆಲ್ ಹೇಳಿದುದು ಸರಿಯಾಗಿದೆಯೆಂದು ಸಮರ್ಥಿಸಿದನು. ಆದರೆ ಇವನ ಹೇಳಿಕೆಯನ್ನು ಈ. ಲೆವಿ (E. Lewy) ಎಂಬ ವಿದ್ವಾಂಸ ತೀವ್ರವಾಗಿ ವಿರೋಧಿಸಿ ಖಂಡಿಸಿದನು. ಇದೇ ಸಮಯದಲ್ಲಿ ಡಬ್ಲ್ಯೂ. ವಾನ್ ಹೆವಿಸಿ (W. von Hevesy) ಎಂಬ ಭಾಷಾವಿಜ್ಞಾನಿ ಮತ್ತೊಂದು ಹೊಸ ಅಭಿಪ್ರಾಯವನ್ನು ಮುಂದಿಡುತ್ತ ಮುಂಡಾ (ಕೊಲರಿಯನ್) ಮತ್ತು ಫಿನ್ನೊ—ಉಗ್ರಿಯನ್ ಭಾಷೆಗಳ ನಡುವೆ ಕಾಣುವ ಸಾದೃಶ್ಯ ಆಕಸ್ಮಿಕ ಹಾಗೂ ತ್ಯಾಜ್ಯವೆಂದು ಬರೆದನು. ಆದರೆ ಇದು ಎಫ್. ಓ. ಸ್ಕ್ರೇದರನ ಕಲ್ಪನೆಗೆ ಬೇರೊಂದು ವಿಧದಲ್ಲಿ ಹಿಡಿಸಿತು. ಸ್ಕ್ರೇದರ್ ಇನ್ನೊಂದು ಲೇಖನ ಬರೆದು ಉರಲಿಯನರು (uralians) ಭಾರತವನ್ನು ಹೊಕ್ಕ ತರುವಾಯ ಎರಡು ಗುಂಪಾದರೆಂದೂ; ಒಂದು ಗುಂಪಿನವರು ದ್ರಾವಿಡ ಭಾಷೆಗಳ ಮೇಲೂ, ಇನ್ನೊಂದು ಗುಂಪಿನವರು ಮುಂಡಾ ಭಾಷೆಗಳ ಮೇಲೂ ಪ್ರಭಾವ ಬೀರಿದರೆಂದೂ ವಿವರಿಸಿದನು.[1]

ಆದರೆ ಥಾಮಸ್ ಬರೋ ಕಾಲ್ಡ್‌ವೆಲ್ಲನ ವಾದವನ್ನು ಅಂಗೀಕರಿಸುತ್ತಾ ಈ ಹಳೆಯ ಹೇಳಿಕೆಗೆ ಹೊಸ ಉಸಿರನ್ನು ತುಂಬಿದ್ದಾರೆ.

"A thorough going correspondence between the two groups of the languages [i. e., the Dravidian and Uralian] emerges quite clearly in this respect, a correspondence which is particularly valuable since this part of the vocabulary is classed among the most primitive and essential elements of language."[2]

ದ್ರಾವಿಡ ಭಾಷಾವಿಜ್ಞಾನ ಕ್ಷೇತ್ರದಲ್ಲಿ ಪರಮ ಪರಿಣತ ಪಂಡಿತರಲ್ಲಿ ಒಬ್ಬರಾದ ಥಾಮಸ್ ಬರೊ ಸುಮಾರು ೭೨ ಪದಗಳನ್ನು ತೆಗೆದುಕೊಂಡು, ಧ್ವನಿಪರಿವರ್ತನೆಯಿಂದ ಮೊದಲುಗೊಂಡು ಅರ್ಥವ್ಯತ್ಯಾಸದ ವರೆಗೆ ಸಾಧಾರಗಳಿಂದ ವಿವರವಾಗಿ ಪರಿಶೀಲಿಸಿದ್ದಾರೆ. ಇಂಥ ಪರಿಶೀಲನೆಯ ಪದಗಳನ್ನು ಕುರಿತು :

"It would not be possible to produce between any two languages the same amount of detailed comparisons as can be made between Dravidian and Uralian without giving reason to believe that those languages were themselves related."[3]

---

[1] F. O. Schrader : *Uralian element in the Dravida and munda Languages :* BSOS VIII, pp. 751–76.

[2] T. Burrow : *Dravidian Studies* IV, the body in Dravidian and Uralian, *BSOAS*, XI, 1943–46.

[3] ಅದೇ— .

ಎಂದು ಸ್ಪಷ್ಟವಾಗಿ ನುಡಿದಿದ್ದಾರೆ. ಇಲ್ಲಿ ಒಂದೆರಡು ಉದಾಹರಣೆಗಳನ್ನು ನೋಡಬಹುದು :

೧. ತ. ತಲೈ: ಮ. ತಲ, ನಾ. ತ್ತಲ, ತಲಕ್ಕನಮ್, ತಲಪ್ಪು: ಕ. ತಲೆ : ತು. ತರೆ : ತೆ. ತಲ : ಕುಯಿ. ತ್ಲಾ, ತ್ಲಾಕ : ಕುವಿ. ತ್ರಾಯು : ಗೋಂ. ತಲಾ : ಮಲ್ತೊ. ತಲಿ. ಓಸ್ತ್ಯಕ್. tdi, toi : ವೊಗುಲ್. ತೊಲಖ್, ತಂಖ್ : ವೊತ್ಯಕ್. ತುಲಿಪ್.

ಈ ಪದಗಳಿಗೆ ಮೂಲಾರ್ಥ ತುದಿ, ಕೊನೆ, ಮೇಲೆ—ಎಂದು ಇದ್ದು ಕಾಲಾಂತರದಲ್ಲಿ ಅದು ತಲೆ, ತಲೆಯ ಕೂದಲು (ಮಲ್ತೊ ಭಾಷೆಯಲ್ಲಿ) ಎಂಬ ಅರ್ಥ ವಿಕಾಸ ಪಡೆದಿರಬಹುದು. ಉರಲ್ ಭಾಷೆಗಳಲ್ಲಿ ತುದಿ ಎಂಬ ಅರ್ಥವೇ ಉಳಿದಿದೆ.

೨. ತ. ಇಮೈ, ನಿಮೈ, ಚಿಮಿಟ್ : ಮ. ಚಿಮ, ಇಮ, ಇಮೆಕ್ಕ : ಕ. ಎಮೆ, ಎವೆ, ಚಿಮುಟು : ತು. ಸಿಮ್ಮೆ, ಸಿಮೆ, ಇಮೆ. ಲಪ್ಪಿಷ್ ನಾರ್ವೇಜಿಯನ್, Calbme : ಫಿನ್ನಿಷ್, ಸಿಲ್ಮ : ಮೊರಡ್ವಿನ್, ಸಿಲ್ಮೆ : ವೊತ್ಯಕ್. ಸಿನ್ : ಜಿರಿಯನ್. ಸಿನ್ : ವೊಗಲ್ Sam : ಕಮಸ್ಸಿನ್. ಸಿಮ : ಮೊಟೊ. ಸಿಮೆ.

ದ್ರಾವಿಡ ಭಾಷೆಗಳಲ್ಲಿ ಚ— > ಸ—ಆಗುವುದು ಸಾಮಾನ್ಯ ಧ್ವನಿ ಪರಿವರ್ತನೆ. ಉರಲ್ ಭಾಷೆಗಳಲ್ಲಿ—ಲಪ್ಪಿಷ್ ನಾರ್ವೇಜಿಯನ್ (Lappish Norwegian) ಹೊರತು—ಸಕಾರವೇ ಇದೆ.

೩. ತ. ಮೂಕ್ಕು : ಮ. ಮೂಕ್ಕ : ಕ. ಮೂಗು : ತು. ಮೂಕು : ತೆ. ಮೂಕ್ಕು : ಫಿನ್ನಿಷ್. ನೊಕ್ಕ, ನೌಕ್ಕ : ಇಸ್ತೋನಿಯನ್. ನೊಕ್ಕ : ಕಮಸ್ಸಿನ್ : ನೊಕ್ಕ.

ಇಲ್ಲಿ ದ್ರಾವಿಡ ಮತ್ತು ಉರಲ್ ಭಾಷೆಗಳಲ್ಲಿನ ಪದಗಳನ್ನು ಗಮನಿಸಿದಾಗ ದ್ರಾವಿಡ ಪದದ ಆದಿಯಲ್ಲಿ ಮ—ಇರುವ ಕಡೆ ಉರಲ್ ಭಾಷೆಗಳಲ್ಲಿ ನ—ಇದೆ : ದ್ರಾವಿಡದಲ್ಲೇ ನ—/ಮ—ಗಳ ಪರಿವರ್ತನೆಗೆ ದೃಷ್ಟಾಂತಗಳಿವೆ: (ಕ) ಮೂಸು, (ಕುರುಖ್) ನುಸುಂಗ್ನಾ :

೪. ತ. ಚೆವಿ : ಮ. ಚೆವಿ, ಚೆನಿಟು : ಕ. ಕಿವಿ, ಕಿವುಡು, ಕೆಪ್ಪ : ತು. ಕೆಬಿ, ಕೆಪ್ಪು : ತೆ. ಚೆವಿ, ಚೆವುಡು : ತೊದ. ಕೆವ್ : ಗೋಂ : ಕೆವ್, ಕವಿ : ಕುಈ. ಕ್ರಿಉ, ಕಿರು : ಕುವಿ. ಕಿರಿಯು, ಕ್ರೀಯು : ಬ್ರಾ. ಖಫ್.

ಫಿನ್ನಿಷ್. ಕೊರ್ವ: ಇಸ್ತೋನಿಯನ್. ಕೋರ್ವ್: ಚೆರೆಮಿಸ್. Korz: ಜುರಕ್ ಸಮೊಯೆದೆ. ಹಾ: Tawgy—ಕೌ: Jeisei, ಕೂ, ಕೋ: ಕಮಸ್ಸಿನ್. ಕು: ಓಸ್ತ್ಯಕ್ ಸಮೊಯೆದೆ. ಕೋ. [ದ್ರಾವಿಡ ಕ/ ಚ: ಉ: ಕ].

ಆದುದರಿಂದ ಕಾಲ್ಡ್‌ವೆಲ್ಲನ ವಿಶೇಷ ವ್ಯಾಸಂಗದ ಫಲ ವ್ಯರ್ಥವಲ್ಲ; ಈ ದೂರ ದೃಷ್ಟಿ ಆ ಕಾಲಕ್ಕೆ ಅವನಿಗೆ ಹೊಳೆದದ್ದು ಪ್ರಶಂಸನೀಯ ಎಂದು ಹೇಳಬಹುದು. ಆದರೂ ಈ ವಿಚಾರವಾಗಿ ಇನ್ನೂ ಹೆಚ್ಚಿನ ಬೆಳಕು ಬೀಳುವ ತನಕ, ಕಡೆಯ ಮಾತೆಂದು ಏನನ್ನೂ ಹೇಳುವಂತಿಲ್ಲ.

ಅಲ್ಲದೆ ಇಲ್ಲಿ ಗಮನಿಸಬೇಕಾದ ಮುಖ್ಯಾಂಶ ಮತ್ತೊಂದಿದೆ. ಇಂಡೊ-ಯೂರೋಪಿಯನ್ನಿನೊಡನೆ ಸೆಮೆಟಿಕ್—ಹೆಮಿಟಿಕ್ ಪರಿವಾರವನ್ನೂ ಅಥವಾ ಉರಲ್—ಅಲ್ಟೈಕ್ ಪರಿವಾರವನ್ನೂ, ಮುಂಡಾ (ಕೋಲ್) ಭಾಷಾಪರಿವಾರದೊಡನೆ ಫಿನ್ನೊ—ಉಗ್ರಿಯನ್ ಪರಿವಾರವನ್ನೂ ಹೋಲಿಸಿ ನೋಡಿ, ಅತ್ಯಂತ ಪ್ರಾಚೀನ ಕಾಲಕ್ಕೆ ಸೇರಿದಂತೆ ಅವುಗಳ ಮೂಲರೂಪವನ್ನು ಪುನರ್ ರಚಿಸಿ ತಾಳೆ ನೋಡಿದರೆ ಇವೆಲ್ಲಕ್ಕೂ ನಡುವೆ ಬಾಂಧವ್ಯ ಕಂಡುಬರುವುದು ತೀರ ಸಾಧ್ಯ.

೫

# ದ್ರಾವಿಡ ಭಾಷೆಗಳು : ಜನಸಂಖ್ಯೆ

ದ್ರಾವಿಡ ಭಾಷೆಗಳನ್ನು ಆಡುವವರ ಒಟ್ಟು ಜನಸಂಖ್ಯೆಯನ್ನು ಕುರಿತ ಅಂಕಿ ಅಂಶಗಳ ವಿವರ ದಶವಾರ್ಷಿಕ ಜನಗಣತಿಯ ಕೆಲವು ಸಂಪುಟಗಳಲ್ಲಿ ಸಿಗುತ್ತದೆ. ಹಲವು ದೃಷ್ಟಿಗಳಿಂದ ಈ ವಿವರ ಅಗತ್ಯವಾದುದರಿಂದ ಇಲ್ಲಿ ಕೆಲವು ವಿವರಗಳನ್ನು ಮಾತ್ರ ಕೊಟ್ಟಿದೆ. ವಾಸ್ತವವಾಗಿ ೧೯೫೧ರವರೆಗೂ ದ್ರಾವಿಡ ಭಾಷೆಗಳನ್ನು ಆಡುವವರ ಸರಿಯಾದ ಪರಿಗಣನೆ ನಡೆಯಲಿಲ್ಲವೆಂದೇ ಹೇಳಬಹುದು. ೧೮೯೧ನೆಯ ಇಸವಿಯ ಜನಗಣತಿಯ ವರದಿಯಂತೆ ಭಾರತದ ಒಟ್ಟು ಜನಸಂಖ್ಯೆಯ ಆರನೆಯ ಒಂದು ಭಾಗ ದ್ರಾವಿಡರಿದ್ದರು. ಅಂದಿನ ಭಾರತದ ಒಟ್ಟು ಪ್ರಜಾಸಂಖ್ಯೆ :—೨೮, ೭೨, ೨೩, ೪೩೧; ಇವರಲ್ಲಿ ೨,೬೦,೦೦,೦೦೦ ಜನರ ಮಾತೃಭಾಷೆ ಯಾವುದೆಂಬುದು ಸರಿಯಾಗಿ ತಿಳಿಯದಿದ್ದರೂ, ಉಳಿದ ೨೬,೨೦,೦೦,೦೦೦ ಜನರಲ್ಲಿ ೫,೩೦,೦೦,೦೦೦ ಜನ ದ್ರಾವಿಡ ಭಾಷೆಗಳನ್ನು ಆಡುವವರೆಂದು ನಮೂದಿಸಿದೆ. ಕೆಲವು ಅಂಕಿ ಅಂಶಗಳು ಇಂತಿವೆ :

೧೮೯೧ ನೆಯ ಜನಗಣತಿ

| | | | | | | |
|---|---|---|---|---|---|---|
| ೧. ತೆಲುಗು ಭಾಷೆಯನ್ನು ಆಡುವವರು | | | | .... | .... | ೧,೯೮,೮೫,೧೩೭ |
| ೨. ತಮಿಳು | ,, | ,, | .... | .... | .... | ೧,೫೨,೨೯,೭೫೯ |
| ೩. ಕನ್ನಡ | ,, | ,, | .... | .... | .... | ೯೭,೫೧,೮೮೫ |
| ೪. ಮಲೆಯಾಳ | ,, | ,, | .... | .... | .... | ೫೪,೨೮,೨೫೦ |
| ೫. ತುಳು | ,, | ,, | .... | .... | .... | ೪,೯೧,೭೨೮ |
| ೬. ಕೊಡಗು | ,, | ,, | .... | .... | .... | ೩೭,೨೧೮ |

ಇತರ—ಅಂದರೆ ಆ ಕಾಲಕ್ಕೆ ತಿಳಿದುಬಂದಿದ್ದ ದ್ರಾವಿಡ ಭಾಷೆಗಳನ್ನು ಆಡುವವರ ಸಂಖ್ಯೆಯೂ ಸೇರಿ, ೧೮೯೧ನೆಯ ಖಾನೇಷುಮಾರಿಯ ಪ್ರಕಾರ, ಒಟ್ಟು ದ್ರಾವಿಡ ಭಾಷೆಗಳನ್ನು ಆಡುವವರ ಸಂಖ್ಯೆ ೫,೩೦,೦೨,೦೦೦. ಈ ಸಂಖ್ಯೆ ೧೮೮೧ರ ಜನಗಣತಿಯಲ್ಲಿ ಉಲ್ಲೇಖವಾಗಿರುವ ಸಂಖ್ಯೆಗಿಂತಲೂ ೪,೬೦,೦೦,೦೦೦ ರಷ್ಟು ಹೆಚ್ಚು.

| | | |
|---|---|---|
| ೧೮೭೧ ನೆಯ ಜನಗಣತಿಯಂತೆ ದ್ರಾವಿಡ ಭಾಷೆಗಳನ್ನು ಆಡುವವರು | .... | ೪,೬೦,೦೦,೦೦೦ |
| ೧೮೯೧ ,, ,, | .... | ೫,೩೦,೦೦,೦೦೦ |
| ೧೯೧೧ ,, ,, | .... | ೬,೩೭,೪೫,೧೪೮ |
| ೧೯೩೧ (ಗ್ರಾಂಥಿಕ ಭಾಷೆಗಳು ಮಾತ್ರ) ಸು. .... | .... | ೬೦,೦೦೦,೦೦೦ |
| ೧೯೫೧ ಒಟ್ಟು ದ್ರಾವಿಡ ಭಾಷೆಗಳವರು .... | .... | ೯೦,೮೧೧,೭೩೨ |
| ೧೯೬೧ ,, ,, .... .... | .... | ೧೦೭,೪೧೦,೮೨೦ |

## ೧೯೧೧ರ ಜನಗಣತಿಯ ವಿವರ

| | | | | |
|---|---|---|---|---|
| ೧. ತಮಿಳು ಭಾಷೆಯನ್ನು ಆಡುವವರು ಒಟ್ಟು | | .... | .... | ೧,೧೮೯,೭೪೮೯ |
| ೨. ತೆಲುಗು | ,, | .... | .... | ೨೩,೫೪೨,೮೫೯ |
| ೩. ಕನ್ನಡ | ,, | .... | .... | ೧೦,೫೨೫,೭೩೯ |
| ೪. ಮಲೆಯಾಳಮ್ | ,, | .... | .... | ೬,೭೯೨,೨೭೭ |
| ೫. ಬ್ರಾಹೂಈ | ,, | .... | .... | ೧೭೦,೯೯೮ |
| ೬. ತುಳು | ,, | .... | .... | ೫೩೧,೪೯೮ |
| ೭. ಕೊಡಗು | ,, | .... | .... | ೪೨,೮೮೧ |
| ೮. ತೊದ | ,, | .... | .... | ೭೩೦ |
| ೯. ಕೋತ | ,, | .... | .... | ೧,೨೮೦ |
| ೧೦. ಗೋಂಡಿ | ,, | .... | .... | ೧,೫೨೭,೧೫೭ |
| ೧೧. ಕುಯಿ | ,, | .... | .... | ೫೩೦,೪೭೬ |
| ೧೨. ಓರಾಒನ್ | ,, | .... | .... | ೮೦೦,೩೨೮ |
| ೧೩. ರಾಜಮಹಾಲ್ | ,, | .... | .... | ೬೪,೮೭೫ |
| ೧೪. ಕೋಲಾಮಿ | ,, | .... | .... | ೨೪,೦೭೪ |
| ೧೫. ಮಲ್ವರ್ | ,, | .... | .... | ೨೩೬ |

೧೯೫೧ನೆಯ ಇಸವಿಯಲ್ಲಿ ಸಿದ್ಧವಾದ ಜನಗಣತಿಯ ಲೆಕ್ಕದಂತೆ ಬೇರೆ ಬೇರೆ ದ್ರಾವಿಡ ಭಾಷೆಗಳನ್ನು ಆಡುವವರ ಅಂಕಿ ಅಂಶಗಳು ಈ ಕೆಳಕಂಡಂತೆ ಇವೆ :—

| | | | | |
|---|---|---|---|---|
| ೧. ತೆಲುಗು ಭಾಷೆಯನ್ನು ಆಡುವವರು | | | .... | ೩೨,೯೯೯,೯೧೬ |
| ೨. ಅ. ತಮಿಳು | ,, | ಭಾರತದಲ್ಲಿ | .... | ೨೬,೫೪೬,೭೬೪ |
| ಇ. ತಮಿಳು | ,, | ಸಿಲೋನಿನಲ್ಲಿ | .... | ೩,೦೦೦,೦೦೦ |
| ೩. ಅ. ಕನ್ನಡ ಭಾಷೆಯನ್ನು ಆಡುವವರು | | ಹಳೆಯ ಮೈಸೂರು | .... | ೧೪,೪೭೧,೭೬೪ |
| ಇ. ಕನ್ನಡ | ,, | ಹೊಸ ಮೈಸೂರು | .... | ೩,೦೦೯,೦೦೦ |
| ೪. ಮಲೆಯಾಳ | ,, | .... | .... | ೧೩,೩೮೦,೧೦೯ |
| ೫. ತುಳು | ,, | .... | .... | ೭೮೭,೬೨೪ |
| ೬. ಕೊಡಗು | ,, | .... | .... | ೬೮,೭೯೯ |
| ೭. ತೊದ | ,, | .... | .... | ೮೭೯ |
| ೮. ಕೋತ(೧೯೩೧ರ ಲೆಕ್ಕ) | ,, | .... | .... | ೧,೧೩೬ |

| | | | | |
|---|---|---|---|---|
| ೯. ಬಡಗ | ,, | .... | .... | ೬೭,೨೮೬ |
| ೧೦. ಗೋಂಡೀ | ,, | .... | .... | ೧,೬೩೨,೮೮೬ |
| ೧೧. ಮಡಿಯಾ | ,, | .... | .... | ೧೪೦,೫೮೩ |
| ೧೨. ಕುಈ ಮತ್ತು ಕುವೀ | ,, | .... | .... | ೨೦೬,೫೦೯ |
| ೧೩. ಕೋಲಾಮಿ, ನಾಯ್ಕಿ | ,, | .... | .... | ೪೨,೬೭೮ |
| ೧೪. ಪರ್ಜಿ | ,, | .... | .... | ೧೯,೮೪೭ |
| ೧೫. ಕುರುಖ್ (ಒರಾಒ) | ,, | .... | .... | ೬೪೪,೦೪೨ |
| ೧೬. ಮಲ್ತೋ | ,, | .... | .... | ೨೩,೮೫೭ |
| ೧೭. ಬ್ರಾಹೂಈ (೧೯೩೧ರ ಲೆಕ್ಕ) | | .... | .... | ೨೦,೦೪೯ |

೧೯೬೧ರ ಖಾನೇಷುಮಾರಿಯ ಪ್ರಕಾರ ದ್ರಾವಿಡ ಭಾಷೆಗಳನ್ನು ಆಡುವವರ ಒಟ್ಟು ಜನಸಂಖ್ಯೆ ೧೦೭, ೪೧೦, ೮೨೦ ; ಇದರಲ್ಲಿ ಗ್ರಾಂಥಿಕ ಭಾಷೆಗಳನ್ನು, ಕನ್ನಡ, ತಮಿಳು, ತೆಲುಗು ಮತ್ತು ಮಲೆಯಾಳ, ಆಡುವವರ ಒಟ್ಟು ಸಂಖ್ಯೆ ೧೦೨, ೬೬೨, ೪೪೭. ೧೯೫೧ರ ಜನಗಣತಿಯೊಡನೆ ಹೋಲಿಸಿದಾಗ ಕೆಲವು ವ್ಯತ್ಯಾಸಗಳು ಎದ್ದು ಕಾಣುತ್ತವೆ. ೧೯೬೧ರ ಲೆಕ್ಕದಂತೆ ದ್ರಾವಿಡ ಭಾಷೆಗಳ ವಿವರ ಇಂತಿದೆ:

| | | | | |
|---|---|---|---|---|
| ೧. ತೆಲುಗು ಭಾಷೆ ಆಡುವವರು | | | .... | ೩೭,೬೬೮,೧೩೨ |
| ೨. ತಮಿಳು | ,, | .... | .... | ೩೦,೫೬೨,೬೧೧ |
| ೩. ಕನ್ನಡ | ,, | .... | .... | ೧೭,೪೧೫,೮೨೭ |
| ೪. ಮಲೆಯಾಳ | ,, | .... | .... | ೧೭,೦೧೫,೫೮೪ |
| ೫. ಗೋಂಡೀ | ,, | | .... | ೧,೩೮೪,೩೨೧ |
| ೬. ಕುರುಖ್ | ,, | | .... | ೧,೧೩೨,೯೩೧ |
| ೭. ಕುಯಿ | ,, | .... | .... | ೫೧೦,೯೦೭ |
| ೮. ಕೊಯ | ,, | .... | .... | ೧೪೦,೭೭೬ |
| ೯. ಖೊಂಡ್ (ಕೊಂದ್) ಭಾಷೆ ಆಡುವವರು | | .... | .... | ೧೬೮,೦೨೭ |
| ೧೦. ಮಲ್ತೊ ಭಾಷೆ ಆಡುವವರು | | .... | .... | ೮೮,೬೪೫ |
| ೧೧. ಪರ್ಜಿ | ,, | .... | .... | ೮೪,೬೦೭ |
| ೧೨. ಕೋಲಾಮಿ | ,, | .... | .... | ೪೬,೦೬೫ |
| ೧೩. ಕೊಂಡ | ,, | .... | .... | ೧೨,೨೯೮ |
| ೧೪. ಪೆಂಗು ಭಾಷೆಯನ್ನು ಆಡುವವರು | | .... | .... | ೧,೨೫೪ |
| ೧೫. ಕೋತ | ,, | .... | .... | ೮೬೨ |
| ೧೬. ತೊದ | ,, | .... | .... | ೭೬೫ |
| ೧೭. ಕೊಡಗು | ,, | .... | .... | ೭೮,೨೦೨ |
| ೧೮. ತುಳು | ,, | .... | .... | ೯,೩೪,೮೪೯ |
| ೧೯೬೧ರ ಮೈಸೂರು ಜನಸಂಖ್ಯೆ | | .... | .... | ೨೩,೫೮೬,೭೭೨ |
| ಕ. | | .... | .... | ೧೫,೩೭೧,೭೫೩ |
| ತೆ. | | .... | .... | ೨,೦೪೭,೩೭೯ |

| | | | |
|---|---|---|---|
| ಉರ್ದು | .... | .... | ೨,೦೩೪,೬೮೨ |
| ಮರಾಠಿ | .... | .... | ೧,೦೫೬,೪೯೮ |
| ತ. | .... | .... | ೮೫೪,೨೨೭ |
| ತುಳು | .... | .... | ೮೫೦,೪೭೪ |
| ಕೊಂಕಣಿ | .... | .... | ೪೯೧,೫೩೫ |
| ಮಲೆ | .... | .... | ೨೯೦,೫೮೬ |
| ಬಂಜಾರಿ | .... | .... | ೨೩೮,೦೧೨ |
| ಹಿಂದಿ/ಹಿಂದೂಸ್ತಾನಿ | .... | .... | ೯೩,೮೩೦ |
| ಕೊಡಗು | .... | .... | ೭೮,೧೯೨ |

ಈ ದ್ರಾವಿಡ ಭಾಷೆಗಳ ಇತಿಹಾಸವನ್ನು ಕುರಿತು ಒಂದೊಂದೇ ಭಾಷೆಯನ್ನು ಪ್ರತ್ಯೇಕವಾಗಿ ಪರಿಶೀಲಿಸಿ ನೋಡಿ, ಆ ತರುವಾಯ ತೌಲನಿಕ ವ್ಯಾಕರಣ ವಿವೇಚನೆಗೆ ತೊಡಗಬಹುದು. ಮೊಟ್ಟಮೊದಲು ಚಾಕ್ಷುಷ ದ್ರಾವಿಡ ಭಾಷೆಗಳನ್ನೂ, ಅನಂತರ ಶ್ರಾವಣ ದ್ರಾವಿಡ ಭಾಷೆಗಳನ್ನೂ ಕ್ರಮಕ್ರಮವಾಗಿ ವಿವರಿಸಿದೆ. ಸುಮಾರು ಇಪ್ಪತ್ತೈದು ದ್ರಾವಿಡ ಭಾಷೆಗಳ ಪರಿಚಯು ಮಾಡಿಕೊಟ್ಟು, ಅಲ್ಲಿಂದ ಮುಂದೆ ದ್ರಾವಿಡ ಭಾಷೆಗಳ ವ್ಯಾಕರಣ ಮತ್ತು ಕೆಲವು ಧ್ವನಿಗಳ ವಿಚಾರವನ್ನು ವಿವರವಾಗಿ ಪ್ರಸ್ತಾಪಿಸಲಾಗುವುದು.

೫-ಅ

# ದ್ರಾವಿಡ ಭಾಷೆಗಳು

## ಚಾಕ್ಷುಷ ಭಾಷೆಗಳು

### ಕನ್ನಡ ಭಾಷೆ

ಕನ್ನಡ ಎಂಬ ಶಬ್ದ ಎಲ್ಲಿ ಮೊದಲು ಸಿಕ್ಕುತ್ತದೆ ಎಂದು ನೋಡಬೇಕು: ನಮಗೆ ತಿಳಿದ ಮಟ್ಟಿಗೆ ಪ್ರಾಚೀನ-೪, ೫, ೬ನೆಯ ಶತಮಾನಗಳ ಶಾಸನಗಳಾವುದರಲ್ಲೂ ಕನ್ನಡ, ಕರ್ಣಾಟ, ಕರ್ನಾಟ- ಮೊದಲಾದ ಪದಗಳು ಸಿಗುವುದಿಲ್ಲ; ಆದರೆ ಪ್ರಾಚೀನ ಕಾವ್ಯಗಳಲ್ಲಿ ಸಿಗುತ್ತದೆ. ಕನ್ನಡ ಭಾಷೆಯ ಪ್ರಾಚೀನತೆಯ ವಿಚಾರದಲ್ಲೂ ಇದೇ ಅನುಮಾನವಿದೆ, ಸರಿಯಾದ ಆಧಾರಗಳು ಸಿಗದೆ ಇರುವುದರಿಂದ. ದಿ|| ಮಂಜೇಶ್ವರ ಗೋವಿಂದಪೈರವರು ಕನ್ನಡ ಭಾಷೆಯಲ್ಲಿ ಸುಮಾರು ಎರಡು ಸಾವಿರ ವರುಷಗಳಿಂದಲೂ ಸಾಹಿತ್ಯ ರಚನೆಯಾಗುತ್ತಿರಬೇಕೆಂದು ಹತ್ತಾರು ಆಧಾರಗಳನ್ನೊದಗಿಸಿ. ಸಾಧಿಸಿದ್ದಾರೆ.[1] ಅವರ ಪರಿಶುದ್ಧವಾದ ಪ್ರಯತ್ನ ಪ್ರಶಂಸನೀಯವಾದರೂ ನಂಬಲರ್ಹವಾದ ಇನ್ನೂ ಹೆಚ್ಚಿನ, ಪ್ರಬಲವಾದ ಐತಿಹಾಸಿಕ ಆಧಾರಗಳು ದೊರಕುವವರೆಗೂ ೨೦೦೦ ವರ್ಷಗಳಿಂದಲೂ ಸಾಹಿತ್ಯವಿರಬೇಕೆಂಬುದನ್ನು ಈಗ ನಂಬಲು ಅಸಾಧ್ಯವಾಗಿದೆಯೆಂದು, ಬೇರೆ ದಾರಿಯಿಲ್ಲದೆ, ಹೇಳಬೇಕಾಗಿದೆ.

ಈ ಕನ್ನಡಕ್ಕೆ ಸಂಬಂಧಪಟ್ಟಂತೆ ಸಿಗುವ ಹಳೆಯ ಕಾವ್ಯಗಳಲ್ಲಿ ಕನ್ನಡ ಕಾವ್ಯಗಳು—ಕನ್ನಡೇತರ ಕಾವ್ಯಗಳೆಂದು ಎರಡು ವಿಧವಾಗಿದೆ. ಮೊದಲು ಕನ್ನಡೇತರ ಕೃತಿಗಳಲ್ಲಿ ಸಿಗುವ ಆಧಾರಗಳನ್ನು ಪರಿಶೀಲಿಸಬಹುದು. ಬೌದ್ಧ ಧರ್ಮದ ಗ್ರಂಥವಾದ ಮಹಾವಂಶದಲ್ಲಿ ಬರುವ ಒಂದು ವರ್ಣನೆಯಂತೆ, ಬೌದ್ಧಮತ ಪ್ರಚಾರಕರು ಕ್ರಿ. ಪೂ. ಮೂರನೆಯ ಶತಮಾನದಲ್ಲಿ ಇಲ್ಲಿಗೆ- ಬನವಾಸಿ, ಮಹಿಷನಾಡುಗಳಿಗೆ- ಬಂದರೆಂಬ ಹೇಳಿಕೆಯಿದೆ. ಬೌದ್ಧಮತ ಪ್ರಚಾರಮಾಡಲು, ಅಶೋಕನು, ಥೇರಮಹದೇವನನ್ನು ಮಹಿಷಮಂಡಲಕ್ಕೂ, ಥೇರರಕ್ಷಿತನನ್ನು (>ರಖ್ಖಿತ) ಬನವಾಸಿಗೂ ಕಳುಹಿಸಿ ಕೊಟ್ಟನಂತೆ. ಈ ಬನವಾಸಿ ನಮ್ಮ ಆದಿಕವಿ ವರ್ಣಿಸಿದ ಬನವಾಸಿಯೇ ಇರಬೇಕು, ಮಹಿಷನಾಡು ನಮ್ಮ ಸಂಸ್ಥಾನದ ಹೆಸರಾದ ಮೈಸೂರು.

[1] ಹೆಚ್ಚಿನ ವಿವರಗಳಿಗೆ ಅವರ 'ಮೂರು ಉಪನ್ಯಾಸಗಳು' ಕೃತಿಯನ್ನು ನೋಡಿ.

ಚಂದ್ರವಳ್ಳಿಯ ಬಳಿ ನಡಸಿದ ಭೂಶೋಧನೆಯಿಂದ ಕ್ರಿ.ಶ.ದ ಸ್ವಲ್ಪ ಹಿಂದೆ ಮತ್ತು ಸ್ವಲ್ಪ ಅನಂತರವೂ ಗ್ರೀಕರೊಡನೆ ಆ ಭಾಗದವರ ವ್ಯಾಪಾರ ವ್ಯವಹಾರವಿದ್ದಂತೆ ತಿಳಿದುಬರುತ್ತದೆ. ಕ್ರಿ. ಶ. ೨೩–೭೯ರ ಪ್ಲಿನಿ ಎಂಬ ಲೇಖಕನ ವರ್ಣನೆಯಲ್ಲಿ ಕನ್ನಡ ನಾಡಿನ ಒಂದೆರಡು ಭಾಗಗಳು ಇವೆಯೆಂದು ವಿದ್ವಾಂಸರ ಅಭಿಪ್ರಾಯ.[1] ಕ್ರಿ.ಶ. ೧–೨ನೆಯ ಶತಮಾನದ ಶಾತವಾಹನ ರಾಜರ ಹೆಸರು, ಬಿರುದುಗಳಲ್ಲಿ ಇರುವ ಪುಲಿಮಾಯಿ, ಮಿಳಿವಾಯಕುರ ಮುಂತಾದ ಪದಗಳು. ಕನ್ನಡ (ದ್ರಾವಿಡ) ಪದಗಳೆನ್ನುವರು. ಹಾಗೆಯೇ ಕ್ರಿ. ಶ. ೨ನೆಯ ಶತಮಾನದ, ಗ್ರೀಕ್ ದೇಶದ ಭೂಗೋಳ ಶಾಸ್ತ್ರಜ್ಞನಾದ (ಟಾಲೆಮಿ ೧೫೦) Ptolemyಯೂ ಕನ್ನಡ ನಾಡಿನ ಭಾಗಗಳನ್ನು ತನ್ನ ಪೆಪ್ಪಿರಸ್ ಗ್ರಂಥದಲ್ಲಿ ಹೆಸರಿಸಿದ್ದಾನೆ.

"ಪ್ತೊಲೆಮಿ ಎಂದಿಗೂ ಭಾರತ ವರ್ಷಕ್ಕೆ ಬಂದವನಲ್ಲ. ಆತನಿದ್ದ ಐಗುಪ್ತ (Egypt) ದೇಶಕ್ಕೂ ನಮ್ಮ ಭಾರತಕ್ಕೂ ಬಹಳ ಪೂರ್ವ ಕಾಲದಿಂದಲೇ ವ್ಯಾಪಾರಸಂಬಂಧವಿತ್ತು. ಐಗುಪ್ತದ ಆಗಣ ಮುಖ್ಯವಾದ ರೇವು ಅಂದರೆ ಆತನಿದ್ದ Alexandria ಎಂಬ ಊರು. ಅಲ್ಲಿ ತಾನು ಕಂಡ ಪ್ರವಾಸಿಗಳನ್ನೂ ನಾವಿಕರನ್ನೂ ವಿಚಾರಿಸಿ ತಾನೆ ರಚಿಸಿದ ಆತನ ಗ್ರಂಥವು ಪ್ರತ್ಯಕ್ಷತಃ ತೀರ ನಿರ್ದುಷ್ಟವೂ ಅಲ್ಲ, ಅದರಲ್ಲಿಯ ಹೇಳಿಕೆಗಳು ತೀರ ನಿಷ್ಕೃಷ್ಟವೂ ಅಲ್ಲ. . . ಆತನು ವಿಚಾರಿಸಿದ ನಾವಿಕರೂ, ಪ್ರವಾಸಿಗಳೂ ಆತನಂತೆಯೆ ಸುಶಿಕ್ಷಿತರಾಗಿದ್ದಿರಲಾಗದ ಕಾರಣವೂ ಈ ಮುಂದೆಯೇ ತಿಳಿವಂತೆ ಭಾರತೀಯ ವರ್ಣಮಾಲೆಯಲ್ಲಿರುವ ಕೆಲವಾದರೂ ಸ್ವರಗಳಿಗೆ ತಕ್ಕವು ಗ್ರೀಕ್ ವರ್ಣಮಾಲೆಯಲ್ಲಿ ಇಲ್ಲದ ಕಾರಣವೂ ಆತನ ಗ್ರಂಥದಲ್ಲಿ ಹೇಳಿರುವ ಅನೇಕ ಊರುಗಳು ಯಥಾಸ್ಥಾನದಲ್ಲಿಯೂ ಇಲ್ಲ, ಯಥಾಕ್ರಮದಲ್ಲಿಯೂ ಇಲ್ಲ . . . ವಿಕೃತವಾಗಿವೆ, ಕೆಲವು ತೀರ ಅಡ್ಡಾದಿಡ್ಡಿಯಾಗಿವೆ,"[2] ಹೀಗೆಂದು ಗೋವಿಂದಪೈಯವರು ಹೇಳಿ, ಆವನು ಕೊಟ್ಟ ಪೌನ್ನಟ (ಪುನ್ನಾಟ) ಬಾದಿಯಾಮೊಯಿ (ಬಾದಾಮಿ.) ಮೊದಲಾದ ಕೆಲವು ಹೆಸರುಗಳನ್ನು ಕನ್ನಡನಾಡಿನ ಭಾಗಗಳಿಗೆ ಅನ್ವಯಿಸಿದ್ದಾರೆ.[3]

ಸಂಸ್ಕೃತ ಕೃತಿಗಳಲ್ಲಿ ಬರುವ ಪ್ರಯೋಗಗಳು ಹೇರಳವಾಗಿವೆ. ಕ್ರಿ.ಶ. ೫ ಅಥವಾ ೬ನೆಯ ಶತಮಾನದ್ದಿರಬಹುದೆಂದು ಭಾವಿಸಲಾಗಿರುವ 'ಮೃಚ್ಛಕಟಿಕ' ನಾಟಕದಲ್ಲಿ

ಕರ್ಣಾಟ ಕಲಹ ಪ್ರಯೋಗಮ್ ಕರಿಷ್ಯಾಮಿ

ಎಂಬ ಮಾತಿದೆ. ಕ್ರಿ. ಶ.ದ ಆರಂಭದ ಶತಮಾನದಲ್ಲಿ ರಚಿತವಾದ ಮಹಾಭಾರತದಲ್ಲಿ ಸಭಾಪರ್ವ, ಭೀಷ್ಮಪರ್ವಗಳಲ್ಲಿಯೂ ಇದರ ಪ್ರಸ್ತಾಪವಿದೆ. ಸಭಾಪರ್ವದಲ್ಲಿ,

[1] ಬಿ. ಎ. ಸಾಲೆತೊರೆ, ಕನ್ನಡನಾಡಿನ ಚರಿತ್ರೆ, ಮೊದಲನೆಯ ಭಾಗ, ೧೯೪೧, ಪುಟ ೧೨

[2] ಗೋವಿಂದಪೈ: ಪ್ತೊಲೆಮಿಯ 'ಹಿಪ್ಪೊಕೂರ, ಪ್ರ. ಕ. ೨೩–೧, ಪುಟ ೮೭

[3] ಟೋಲಮಿಯು 'ಓಲೋಖೋರಿಯ' ಎಂಬ ಪ್ರದೇಶವನ್ನು ಕುರಿತು ಹೇಳಿದ್ದಾನೆ. ಅದು ಆಗಿನ ದಕ್ಷಿಣ ಕರ್ನಾಟಕದ ಅರಸು ಮನೆತನಗಳಲ್ಲೊಂದಾದ 'ಅಳ್ವಖೇಡ' (ಆಳುಪರು) ಇರಬೇಕೆಂದು ಸಂಶೋಧಕರ ಸೂಚನೆ.

ಕರ್ಣಾಟಃ ಕಾಂಸ್ಯಕುಟಾಶ್ಚ ಪದ್ಮಜಾಲಾಃ ಸತೀ ನರಾಃ . . .ಇತ್ಯಾದಿ

ಎಂದೂ, ಭೀಷ್ಮಪರ್ವದಲ್ಲಿ (೭೮–೯೮)

ಅಥಾಪರೇ ಜನಪದಾಃ ದಕ್ಷಿಣಾಃ ಭರತವರ್ಷಭ
ದ್ರವಿಡಾಃ ಕೇರಲಾಃ ಪ್ರಾಚ್ಯಾಃ ಮೂಷಿಕಾಃ ವನವಾಸಿಕಾಃ
ಕರ್ಣಾಟಕಾಃ ಮಹಿಷಕಾಃ ವಿಕಲ್ಪಾಮೂಷಕಸ್ತಥಾ

ಎಂಬುದಾಗಿಯೂ ಹೇಳಿದೆ. (೯–೫೮)

ಪದ್ಮ ಪುರಾಣದಲ್ಲಿ,

ಜಾತಾಪಂ ದ್ರಾವಿಡೇ ದೇಶೇ ಕರ್ಣಾಟೇ ಪರಮಾಂಗತಾ

ಎಂಬ ವಾಕ್ಯವಿದೆ. ಮಾರ್ಕಾಂಡೇಯ ಪುರಾಣದಲ್ಲೂ ಕರ್ಣಾಟಕ ಉಲ್ಲೇಖವಾಗಿದೆ. ಒಂಬತ್ತನೆಯ ಶತಮಾನದ ಕಾವ್ಯಮೀಮಾಂಸಕಾರನಾದ ರಾಜಶೇಖರನ

ರಸಃ ಕೋಪ್ಯಸ್ತು ಕಾಪ್ಯಸ್ತು ರೀತಿಃ
ಸಗರ್ವಮ್ ಸರ್ವಕರ್ಣಾಟಾಃ ಟಂಕಾರೋತ್ಕರ ಪಾಣಿನಃ

ಎಂಬ ವಾಕ್ಯವಂತೂ ಪ್ರಸಿದ್ಧವಾಗಿದೆ. ಹೀಗೆಯೇ ಸೋಮದೇವನ ಕಥಾ ಸರಿತ್ಸಾಗರ ದಲ್ಲೂ, ವರಾಹಮಿಹಿರನ ಬೃಹತ್ ಸಂಹಿತೆಯಲ್ಲೂ (ಕ್ರಿ. ಶ. ೬ನೆಯ ಶತಮಾನ) ಕನ್ನಡನಾಡಿನ ಉಲ್ಲೇಖವಿದೆ.

ತಮಿಳಿನ ಪ್ರಾಚೀನ ಗ್ರಂಥಗಳಲ್ಲೂ ಒಂದೆರಡು ಉಲ್ಲೇಖಗಳು ಉಪಲಬ್ಧವಾಗಿವೆ. ತಮಿಳು ಸಾಹಿತ್ಯದ ಪ್ರಾಚೀನ ಕೃತಿಗಳಲ್ಲಿ ಕೋರಮಂಡಲಂ ತೀರದಿಂದ ತಮಿಳು ಜಿಲ್ಲೆಗಳ ತನಕ ಅಂದರೆ ಪಶ್ಚಿಮ ಕರಾವಳಿಯ ಘಟ್ಟಗಳ ಪ್ರದೇಶವನ್ನು ಕರ್ನಾಟಕ, ಕರುನಾಡು—ಎಂದು ಕರೆದಿರುವುದು ಕಾಣುತ್ತದೆ. ಆದರೆ ಈ ಕರುನಾಡು ಎಂಬ ಪದಕ್ಕೆ 'ಕಪ್ಪುಮಣ್ಣಿನ ನೆಲ ಎಂದು ಕೆಲವರೂ, 'ಎತ್ತರವಾದ ಪ್ರಸ್ಥಭೂಮಿಯಲ್ಲಿರುವ ನಾಡು' ಎಂದು ಕೆಲವರೂ ಹೇಳಿದ್ದಾರೆ. ಅಲ್ಲದೆ "ಸಂಘಂ ಸಾಹಿತ್ಯ" ಸೃಷ್ಟಿಯಾದ ಕಾಲಕ್ಕೆ ತಮಿಳು ಕವಿಗಳು ನೀಲಗಿರಿಯ ಮೇಲಿನ ಪ್ರದೇಶವನ್ನೆಲ್ಲಾ ಕರ್ನಾಟಕ (ಕರುನಾಡು) ಎಂದು ತಿಳಿದಂತೆ ತೋರುತ್ತದೆ. ಇವುಗಳನ್ನು ವಿವರವಾಗಿ ನೋಡೋಣ.

ಇಲಂಕೊ (—ಇಳಂಗೊ) ಅಡಿಗಳ್ ಎಂಬ ಕವಿ ಬರೆದಿರುವ ಕ್ರಿ. ಶ. ೨-೩ನೆಯ ಶತಮಾನದ ಶಿಲಪ್ಪದಿಕಾರಮ್ ಎಂಬ ಪ್ರಾಚೀನ ತಮಿಳು ಕೃತಿಯಲ್ಲಿ 'ಕರುನಾಡು' ಎಂಬ ಸಾಮ್ರಾಜ್ಯವನ್ನು ಕುರಿತು ಪ್ರಸ್ತಾಪವಿದೆ. ಚೇರ ದೊರೆಯಾದ ಶೆಂಗುತ್ತ[ಟ್ಟ] ವನ್ ಎಂಬುವನು ಗಂಗಾತಟದ ಕಡೆಗೆ ಹೋಗುವಾಗ ನೀಲಗಿರಿಯ ಮಾರ್ಗವಾಗಿ ಹೊರಟನು. ಅಲ್ಲಿ ಚೇರ ರಾಜ್ಯದ ಮತ್ತೊಂದು ಬದಿಗೆ ಇದ್ದ ರಾಜ್ಯದತ್ತ ಅವನ ದೃಷ್ಟಿ ಹರಿಯಿತು. ಅರಸನು ಜೈತ್ರಯಾತ್ರೆ ಹೊರಟದ್ದು ಬೇಸಗೆಯ ಸಮಯ—ನಿದಾಘಕಾಲ. ನೀಲಗಿರಿಯ ಗಿರಿಯಮೇಲೆ ಅವನು ವಿಶ್ರಾಂತಿಗಾಗಿ ಇಳಿದುಕೊಂಡಿ

ದ್ದಾಗ ಅವನನ್ನು ನೋಡಲೋಸುಗ ಕೊಂಕಣ ಮತ್ತು ಕರ್ನಾಟಕದಿಂದ ಹೆಂಗಸರೂ ಗಂಡಸರೂ ಇರುವ ನೃತ್ಯತಂಡದವರು ಬಂದರಂತೆ. ಹಾಗೆಯೇ ಕುಡುಗರ (ಕೊಡುಗು) ಸ್ತ್ರೀ ಪುರುಷರೂ ಆಗಮಿಸಿದ್ದರು, ಕರ್ನಾಟಕದವರೂ ಬಂದಿದ್ದರು. ಆಗ ಕರ್ನಾಟಕದ ತಂಡದವರು ತತ್ಕಾಲದ-ಬೇಸಗೆಯ ಸೊಬಗನ್ನು ಕೊಂಡಾಡುವ ಹಾಡುಗಳನ್ನು ಹಾಡಿದರಂತೆ. ಕೊಂಕಣ, ಕುಡಗು, ಚೇರ, ಕರ್ನಾಟಕ ಸಾಮ್ರಾಜ್ಯಗಳು ಅಕ್ಕಪಕ್ಕದ ನಾಡುಗಳಾಗಿದ್ದುವೆಂಬುದೂ ಇವರಿಂದ ತಿಳಿದುಬರುತ್ತದೆ.

ಇಮಯವರಂಬನ್ ನೆಡುಂಚೇರಲಾತನ್ ದೊರೆಯ ಮಗ ಶೆಂಗುತ್ತುವನ್ ಎಂಬುವನ ಮುಂದೆ ಕನ್ನಡಿಗರು ಮಾಡಿದ ನರ್ತನದ ವಿಚಾರ ಬರುವ ಸಾಲುಗಳು ಇಂತಿವೆ :

ಕೊಂಗಣಕೂತ್ತರಮ್ ಕೊಡುಂಕರುಂ ನಾಡರುಂ [ಕುಡುಂಕರುನಾಡರುಂ]
ತಂಗುಲಕ್ಕೋದಿಯತಕ್ಕೈಸಾಲ್ ಅಣಿಯಿನರ್
ಇರುಳ್ ಪಡಪ್ಪೊದುಳಿಯ ಸುರುಳಿರುಮ್ ಕುಂಜಿ
ಮರುಳ್ ಪಡಪರಪ್ಪಿಯ ಒಲಿಯಲ್ ಮಾಲೈಯರ್
ಒಡವ್‌ಸುಮುಂದು ಓಂಗಿಯ ಒಳರ್ ಇಜಜನಮುಲ್ಲೈ
ಕಲಂಗಯಲ್ ನೆಡುಂಗಣ್ ಕಾರಿಗೈಯಾರೊಡು
ಇರುಂಗುಯಿಲ್ ಆಲಙನವಂಡು ಯಾೞ್‌ಸೆಯ
ಅರುಂಬುವಿೞ್ ವೇನಿಲ್ ವಂದುದುವಾರಾರ್
ಕಾದಲರೆನ್ನುಂ ಮೇದಗುಸಿಐಪ್ಪಿನ್
ಮಾದಪ್ಪಾರ್ಣಿವರಿಯೊಡು ತೋನ್ಱ

(ಕಾಂಡ, ೨೬ : ಸಾಲು ೧೦೬)

ಇದೊಂದು ಪ್ರಣಯಗೀತೆ, ವಿರಹಗೀತೆ. ಈ ಪದ್ಯದ ಮೊದಲ ಸಾಲಿನ ಕೊನೆಯ ಪದವನ್ನು ಪದಪರಿಚ್ಛೇದ ಮಾಡುವ ವಿಚಾರ ಸ್ವಲ್ಪ ತೊಡಕಿನದಾಗಿದೆ. ಅದಕ್ಕೆ ಕೂರ್ರಕರುನಾಡರು ಎಂದೂ ಹೇಳಿದ್ದಾರೆ. ಕವಿ ನಕ್ಕೀರರ್ ಬರೆದಿರಬಹುದಾದ ಅಹನಾನೂಱು ಕಾವ್ಯದಲ್ಲಿನ ಒಂದು ಪದ್ಯದಲ್ಲಿ ವಡುಗರ್ ಪೆರುಮಗನ್ ಎಂಬ ವಡುಗರ ಮಹಾನಾಯಕನಿಂದ ಆಳಲಾದ ಎರುಮೈನಾಡು ಎಂಬ ಉಲ್ಲೇಖವಿದೆ. ಈ ಎರುಮೈ ನಾಡು ಎಂಬುದು ಈಗಿನ ಮೈಸೂರು ಸಂಸ್ಥಾನದ ಮಹಿಷನಾಡು ಎಂಬುದೇ ಇರಬೇಕೆಂದು ವಿದ್ವಾಂಸರ ಅಭಿಪ್ರಾಯ. ಇದಕ್ಕೆ ಮಹಿಷಾಸುರಮರ್ದಿನಿಯೆಂಬ ಜನಪ್ರಿಯ ಕತೆಯನ್ನೂ ಉದಾಹರಿಸುತ್ತಾರೆ. ತೆಲುಗರು-ಕನ್ನಡಿಗರು ಇಬ್ಬರಿಗೂ ಹಿಂದೆ ವಡುಗರೆಂದು ಕರೆಯುತ್ತಿದ್ದಂತೆ ಕಾಣುತ್ತದೆ. ವಡುಗರೆಂದರೆ ಉತ್ತರದವರು (ಬಡಗರು) ಎಂಬ ಅರ್ಥವಾದರೂ ಕ್ರಮೇಣ ತೆಲುಗರಿಗೆ ಮಾತ್ರ ಈ ಪದ ಅನ್ವಯವಾಗತೊಡಗಿತು. ಉದಾಹರಣೆಗೆ 'ಜಾಯಮಕೊಂಡಾರ್ ಕವಿ ಬರೆದಿರಬಹುದಾದ ಕಳಿಂಗತ್ತುಪ್ಪರಣಿ ಯೆಂಬ ೧೧ನೆಯ ಶತಮಾನದ ಕಾವ್ಯದಲ್ಲಿ ವಡುಗರೆಂದರೆ ಅದರಲ್ಲಿ ಕನ್ನಡಿಗರೂ ಸೇರಿಕೊಂಡಿರುತ್ತಿದ್ದರೆಂಬುದರಲ್ಲಿ ಸಂದೇಹವಿಲ್ಲ.

ಜಾಯಮಕೊಂಡಾರ್ ಅಥವಾ ಜಯಂಗೊಂಡಾರ್ ಬರೆದಿರುವ 'ಕಲಿಂಗತ್ತುಪ್ಪರಣಿ ಕಾವ್ಯದಲ್ಲಿ 'ತೆಲುಗರು-ವಡುಗರು (=ಕನ್ನಡಿಗರು)' ಎಂದು ಹೇಳಿದೆ. ಉತ್ತರಕ್ಕೆ ಇರುವವರನ್ನು ಕರೆಯಲೂ ವಡುಗರು ಎಂದೇ ಬಳಸಿದ್ದಾರೆ. ಅಹನಾನೂಱು ಕಾವ್ಯ ದಲ್ಲಿ ಬರುವ ಆ ಹಾಡು ಇಂತಿದೆ :

. . . . . . . . . ವಡಾದು
ಅರಿರುಳ್ ನಡುನಾಳ್ ಏರಾವಮ್ಮೆ
ಪಗ್ಗೆಮುನ್ಮೆ ಅಱುತ್ತು ಪಲ್ಲಿನವ್ ಸಾಅಯ್
ಕಣಂಜಾಲ್ ಕೋವಲರ್ ನೆಡುವಿಳಿಪಯಿರಱಿಂದು
ಇನಂಡಲ್ಲೆ ತರೂಂ ತುಳಂಗಿಮಿಲ್ ನಲ್ಲೇಱು
ತಱೂಉಪ್ಪಿಣರ್ ಎರುತ್ತಮ್ ತಾಟಿಪ್ಪೊಟ್ಟಿಯೆ
ಅಂಪೊಂಬು ಅಗಲಮ್ಮೆ ಕಮುಂಜೆಲಪ್ಪೆಯ್ದ
ತುಱುಕ್ಕಾಟ್ಟಿ ವಲ್ಸಿಯರ್ ತೊಟ್ಟುವಜ್ಜಿ
ವಾವಿಕಸ್ಸೂಜ್ಜೆಪೊನಿಜ್ಜೆಮುನ್ನುನಿಜ್ಜೆತರೂವ್
ನೇರಾವನ್ದೊಳ್ ವಡುಗರ್ ಪೆರುಮುಗನ್
ಪೇರಿಸೈ ಎರುಮ್ಮೆನನ್ನಾಟ್ಟು ಉಳ್ಳದ್ದೆ
ಅಯಿರಿ ಆಱು ಇಱಿಂದನರ್ ಅಯಿಸುಮ್
ಮುಯಿರ್ ಇಱಿಂದು ಉಳ್ಳುಪತಿಲ್ಲತಾಮೆ

[೨೫೩ನೆಯ ಹಾಡು]

ಹೆಂಡತಿಯನ್ನು ಬಿಟ್ಟು ಬೇರೆ ಊರಿಗೆ ಹೋಗಿದ್ದವನು ಸಕಾಲದಲ್ಲಿ ಬಾರದಿದ್ದುದ ರಿಂದ ಪ್ರೇಯಸಿಯನ್ನು ಅವಳ ಸಖಿಯೊಬ್ಬಳು ಸಮಾಧಾನಪಡಿಸುತ್ತಿರುವ ಸಂದರ್ಭ ದಲ್ಲಿ ಬರುವ ಪದ್ಯವಿದು. ಇಲ್ಲಿ ಬರುವ 'ಎರುಮ್ಮೆನನ್ನಾಟ್ಟು' ಪದಪುಂಜವನ್ನು ಇದು ವರೆಗಿನ ವಿದ್ವಾಂಸರು ಕನ್ನಡನಾಡಿಗೆ-ಮೈಸೂರಿಗೆ ಸಂಬಂಧಪಟ್ಟುದೆಂದು ಹೇಳಿದ್ದಾರೆ. ಆದರೆ ಇದು ಅಷ್ಟು ಸುಲಭವಾಗಿಲ್ಲ. ಏಕೆಂದರೆ ತಮಿಳು ಸಾಹಿತ್ಯದಲ್ಲಿ ಈ ಪದ ಒಂದು ದೇಶಕ್ಕೂ, ವ್ಯಕ್ತಿಗೂ, ಪಟ್ಟಣಕ್ಕೂ ಅನ್ವಯವಾಗುತ್ತದೆ. ಪುಹನಾನೂರು ಎಂಬ ಸಂಗ್ರಹ ಕಾವ್ಯದಲ್ಲಿ ಈ ಪದ ಬರುತ್ತದೆ. ಅಲ್ಲದೆ ಅಹನಾನೂರು ಕಾವ್ಯದ ಅರ್ಥಕಾರ 'ಎರುಮ್ಮೆ' ಎಂಬುದು ಒಬ್ಬನ ಹೆಸರೆಂದೂ, ನನ್ನಾಡು ಎಂಬುದು ದೇಶ ವೆಂದೂ ಹೇಳುವನು. ಈ ಪದಪುಂಜದ ಅನಂತರ ಬರುವ 'ಅಯಿರಿ ಆಱು'* ಎಂಬುದು ಒಂದು ನದಿಯ ಹೆಸರು. ಈ ನದಿ ಕರ್ನಾಟಕದ ಒಂದು ನದಿಯೆಂದು ಸಾಬೀತು ಮಾಡಿದರೆ ಆಗ ಎರುಮ್ಮೆ ಪದದ ನಿಷ್ಕರ್ಷೆ ಮಾಡಿದಂತೆ ಆಗುತ್ತದೆ. ಸದ್ಯಕ್ಕೆ ಕನ್ನಡನಾಡಿಗೆ ಸಂಬಂಧಿಸಿದ ಒಂದು ಉಲ್ಲೇಖವೆಂದು ಇದನ್ನೂ ತೆಗೆದು ಕೊಳ್ಳಬಹುದು.

---

* 'ಆಱರ್' ಎಂದರೆ ನದಿ. ಕನ್ನಡದಲ್ಲಿಯೂ ಈ ಪದದ ಪ್ರಯೋಗವಿದೆ. ಉದಾಹರಣೆಗೆ ಪಾಲಾರ್, ಪೆನ್ನಾರ್ ಎಂಬ ನದಿಗಳ ಹೆಸರಿನ ಉತ್ತರಪದವನ್ನು ಗಮನಿಸಬಹುದು.

ಹಾಗೆಯೇ ಪಾಂಡ್ಯರ ದೊರೆಯಾದ ಶಡೆಯನ್ ಪರಾಂತಕನೆಂಬವನ (ಕ್ರಿ. ಶ. ೭೭೦) ವೇಳ್ವಿಕುಡಿ ತಾಮ್ರ ಶಾಸನದಲ್ಲಿ ಕರ್ನಾಡಗನ್ (ಕರುನಾಡುಗನ್) ಎಂಬ ಒಂದು ಮಾತಿದೆ. ಕ್ರಿ. ಶ. ೬೩೪ರ ಗಂಗರಾಜ ಭೂವಿಕ್ರಮನ ತಾಮ್ರ ಶಾಸನದಲ್ಲೂ ಕರ್ನಾಡು ಎಂಬ ಮಾತೇ ಇದೆ. 'ಕನ್ನಡ' ಎಂಬ ಪದ ಕನ್ನಡ ಭಾಷೆಗೂ, ಕನ್ನಡ ನಾಡಿಗೂ ಅನ್ವಯವಾಗುತ್ತದೆ. ಇದೊಂದು ವಿಶೇಷ. ಇಂಗ್ಲಿಷ್ ಎಂದರೆ ಬಹುವಾಗಿ ಆ ಭಾಷೆಯೇ ಹೊರತು, ದೇಶಕ್ಕೆ ಅನ್ವಯವಾಗುವುದು ಕಡಮೆ. ಇಂಗ್ಲೆಂಡ್ ಎಂಬುದು ಆ ದೇಶಕ್ಕೇ ಹೊರತು ಭಾಷೆಗಲ್ಲ. ಆದರೆ 'ಕನ್ನಡ' ದೇಶವೂ ಹೌದು, ಭಾಷೆಯೂ ಹೌದು. ಕನ್ನಡದ ಹಳೆಯ ಕೃತಿಯಾದ ಕವಿರಾಜಮಾರ್ಗದಲ್ಲಿ ಬರುವ 'ಕಾವೇರಿಯಿಂದಮಾ ಗೋದಾವರಿ ವರಮಿರ್ಪ ನಾಡದಾ ಕನ್ನಡದೊಳ್' ಎಂಬ ಸಾಲು ಸ್ಮರಣೆಗೆ ಬರುತ್ತದೆ;[1] 'ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು'[2] ಎಂಬ ಆಂಡಯ್ಯನ ನುಡಿಯೊಲವು ನೆನಪಿಗೆ ಬರುತ್ತದೆ. ಒಂಬತ್ತನೆಯ ಶತಮಾನದ ಕವಿರಾಜ ಮಾರ್ಗದಲ್ಲೇ ಪಟಿಗನ್ನಡ, 'ಬಳಸಿರೆ ಬಂಧುರದೊಳ್ ಕನ್ನಡಂ,' 'ಕನ್ನಡಂಗಳ್' ಮೊದಲಾದ ಪದಗಳು ಕಾಣಿಸಿಕೊಂಡಿರುವುದು ಕನ್ನಡ ಭಾಷೆ ಆ ವೇಳೆಗಾಗಲೆ ಚೆನ್ನಾಗಿ ಕುದುರಿತ್ತೆಂಬುದನ್ನು ತಿಳಿಸುತ್ತದೆ.

ಈ ಸಂದರ್ಭದಲ್ಲಿ ಆಚಾರ್ಯ ಶ್ರೀ ಡಿ. ಎಲ್. ನರಸಿಂಹಾಚಾರ್ ಅವರ ಸುದೀರ್ಘ ವಿವರಣೆಯನ್ನು ಇಲ್ಲಿ ಉದಾಹರಿಸುವುದು ಸಮಂಜಸ. ಅವರು ಅನೇಕ ಆಧಾರಗಳನ್ನು ಕ್ರೋಡೀಕರಿಸುತ್ತ ಹೀಗೆ ಹೇಳಿದ್ದಾರೆ: "ಕನ್ನಡ ಭಾಷೆ ಯಾವಾಗ ಗ್ರಂಥಸ್ಥವಾಯಿತೆಂಬುದನ್ನು ತಿಳಿದುಕೊಳ್ಳಲು ನಿಷ್ಕೃಷ್ಟ ಆಧಾರಗಳಿಲ್ಲ. ಇದುವರೆಗೆ ದೊರೆತಿರುವ ಕನ್ನಡ ಶಾಸನಗಳಲ್ಲಿ ಕ್ರಿ. ಶ. ಸುಮಾರು ೪೫೦ ರಲ್ಲಿ ಲಿಖಿತವಾದ ಹಲ್ಮಿಡಿಯ ಶಿಲಾಶಾಸನವೇ ಅತಿ ಪ್ರಾಚೀನವಾದುದು. ಈ ಕಾಲಕ್ಕಾಗಲೇ ಕನ್ನಡ ನುಡಿಗೆ ಲಿಪಿಯೊಂದನ್ನು ಅಳವಡಿಸಲಾಗಿತ್ತು. . ಕನ್ನಡ ನಾಡಿನ ಅತಿ ಪ್ರಾಚೀನ . . . ಶಾಸನಗಳೆಲ್ಲ ಪ್ರಾಕೃತ ಭಾಷೆಯಲ್ಲಿವೆ. ಇದೇ ಲಿಪಿ ರೂಪಗಳಲ್ಲಿ ಲಿಖಿತವಾದ ಮತ್ತು ಕನ್ನಡ ಭಾಷೆಯನ್ನೊಳಕೊಂಡ ಯಾವ ಲೇಖನವೂ ಇದುವರೆಗೆ ಸಿಕ್ಕಿಲ್ಲ. ಆದರೆ ಕನ್ನಡ ಭಾಷೆ ಆ ಕಾಲದಲ್ಲಿ ಇರಲಿಲ್ಲವೆಂದು ಹೇಳುವುದಕ್ಕಾಗುವುದಿಲ್ಲ; ಇದ್ದಿತೆಂದು ಹೇಳುವುದಕ್ಕೆ ಕೆಲವು ಉಲ್ಲೇಖಗಳಿವೆ. ಬ್ರಹ್ಮಗಿರಿಯ ಶಾಸನದಲ್ಲಿ ಕಾಣುವ ಇಸಿಲ ನಗರದ ಹೆಸರು ಎಸಿಲ್ (=ಕೋಟೆ, ಕೋಟೆಯಿಂದ ಬಳಸಿದ ಊರು) >ಎಯಿಲ್ ಎಂಬ ಶಬ್ದದ ಪ್ರಾಕೃತ ರೂಪವೆಂದು ಹೇಳಬಹುದು; ಇದರಲ್ಲಿ ಕಾಣುವ 'ಸ'ಕಾರ ಆ ಶಬ್ದ ಕನ್ನಡವಿರಬೇಕೆಂಬುದಕ್ಕೆ ಒಂದು ಆಧಾರವಾಗಿದೆ. ಕ್ರಿ. ಶ. ೧೫೦ರಲ್ಲಿದ್ದ ಟಾಲೆಮಿ ಪೌನ್ನತ (Pounnata) ಮೋಡುಗಲ್ಲ (Modougalla) ಕಲ್ಲಗೆರಿಸ್

---

[1] ಶ್ರೀವಿಜಯ ಕವಿರಾಜ ಮಾರ್ಗ, (ಸಂ) ಕೆ. ಬಿ. ಪಾಠಕ್. ಇಲ್ಲಿ ನಾಡು ಮತ್ತು ಭಾಷೆ ಎರಡಕ್ಕೂ ಕನ್ನಡ ಪದ ಅನ್ವಯವಾಗುತ್ತದೆ.

[2] ಆಂಡಯ್ಯ, ಕಬ್ಬಿಗರಕಾವ, ಪದ್ಯ ೧೮

(Kallageris) ಬನವಾಸ್ಸೈ (Banavoausce) ಮುಂತಾದ ಊರ ಹೆಸರುಗಳನ್ನು ಹೇಳಿದ್ದಾನೆ. ಇವು ಕ್ರಮವಾಗಿ ಪುನ್ನಾಟ, ಮುದುಗಲ್, ಕಲ್ಲಿಗೆಜಿತಿ, ಬನವಾಸಿ–ಎಂಬ ಕನ್ನಡದ ಹೆಸರುಗಳಾಗಿವೆ, ಬನವಾಸಿ ತದ್ಭವ ಶಬ್ದವಿರಬಹುದು. ಆದ್ದರಿಂದ ಕನ್ನಡ ನುಡಿ ಕ್ರಿ. ಶ. ಆದಿಭಾಗದಿಂದಲೂ ಇದ್ದಿತೆಂದು ಹೇಳಬಹುದಾಗಿದೆ. ಕ್ರಿ. ಶ. ೨-೩ ನೆಯ ಶತಮಾನಗಳಲ್ಲಿ ಅದಕ್ಕೆ ಲಿಪಿಯೊಂದು ಉಂಟಾಗಿ ಅದು ಗ್ರಂಥಸ್ಥವಾಗುವುದಕ್ಕೆ ಮೊದಲಿಟ್ಟಿರಬಹುದು. ಆ ಕಾಲದಲ್ಲಿ ಕನ್ನಡಿಗರಲ್ಲಿ ಬಾಯಿಂದ ಬಾಯಿಗೆ ಪ್ರಚಾರಗೊಳ್ಳುತ್ತಿದ್ದ ಜಾನಪದ ಸಾಹಿತ್ಯವೂ ಇದ್ದಿರಬಹುದು."[1] ಪ್ರೊ || ಡಿ. ಎಲ್. ಎನ್. ರವರ ಸಂಶೋಧನೆ ಸದೃಢವಾಗಿದೆಯೆಂದು ತೋರುತ್ತದೆ.

ದ್ರಾವಿಡ ಭಾಷೆಗಳು ಪದದ ಆದಿಯಲ್ಲಿ ವ್ಯಂಜನ ವರ್ಣಕ್ಕಿಂತಲೂ ಸ್ವರಾಕ್ಷರವನ್ನೇ ಸಾಮಾನ್ಯವಾಗಿ ಬಯಸುತ್ತವೆ ; ಪದದ ಅಂತ್ಯದಲ್ಲಿ ವ್ಯಂಜನಾಂತಕ್ಕಿಂತಲೂ ಸ್ವರಾಂತ್ಯವೇ, ಅದರಲ್ಲಿಯೂ ಊರಿನ ಹೆಸರಿನಲ್ಲಿ, ಪ್ರಿಯ. ಇಸಿಲ ಪದದಲ್ಲಿ ಎರಡೂ ಇವೆ. ಆದರೆ ಇದಕ್ಕೆ ಇತರ ವಿದ್ವಾಂಸರ ಅಂಗೀಕಾರದ ಮುದ್ರೆ ಬೀಳಬೇಕಾಗಿದೆ, ಅಂತಹ ಇನ್ನೂ ಕೆಲವು ಆಧಾರಗಳೂ ದೊರೆಯಬೇಕಾಗಿವೆ. ಅವರ ವಿಚಾರ ವಿದ್ವಾಂಸ ಪ್ರಪಂಚದಲ್ಲಿ ಅಂಗೀಕಾರವಾದುದೇ ಆದರೆ ಕನ್ನಡ ಭಾಷೆಯ ಪ್ರಾಚೀನತೆ ಒಮ್ಮೆಲೇ ಹಲ್ಮಿಡಿ ಶಾಸನದಿಂದ ಅಶೋಕನ ಶಾಸನಕ್ಕೆ ಹೋಗುತ್ತದೆ. ಅಂದರೆ ಸುಮಾರು ಆರು ನೂರು ವರ್ಷಗಳಷ್ಟು ಪ್ರಾಚೀನತೆ ಹೆಚ್ಚುತ್ತದೆ.

ಇನ್ನು ಜನಪದ ಸಾಹಿತ್ಯ. ವಿದ್ವಾಂಸರು ಈ ಜನಪದ ಸಾಹಿತ್ಯದತ್ತ ಬಹು ಮುಖ್ಯವಾಗಿ ಹರಿಸಬೇಕಾಗಿದ್ದ ಒಂದು ದೃಷ್ಟಿಯನ್ನು ಇದುವರೆಗೂ ಹೆಚ್ಚಿಗೆ ಕೊಟ್ಟಿಲ್ಲ. ಅದೆಂದರೆ ಜನಪದ ಸಾಹಿತ್ಯದ ಕಾಲ ನಿರ್ಧಾರ. ಜನಪದ ಸಾಹಿತ್ಯದ ಭಾಷೆ ಬಹು ಮಟ್ಟಿಗೆ ಅಂದಿನ ಜನರ ಆಡು ಭಾಷೆಯೇ ಆಗಿರುತ್ತದೆ. ಆಡು ನುಡಿಯ ಸೊಗಡನ್ನು ಹೊತ್ತ ಈ ಸಾಹಿತ್ಯ ಎಷ್ಟು ಪ್ರಾಚೀನ ? ಇದರ ಕಾಲವನ್ನು ನಿಷ್ಕರ್ಷಿಸುವುದು ಹೇಗೆ ? ಆಡು ನುಡಿಯನ್ನೂ, ಅದರ ಸ್ವರೂಪ–ಉಚ್ಚಾರಗಳನ್ನೂ ಪತ್ತೆ ಹಚ್ಚಲು ಇರುವ ಆಧಾರಗಳೇನು ? ಹಳಗನ್ನಡ–ಹೊಸಗನ್ನಡವೆಂಬ ವಿಭಾಗ ಕ್ರಮ ಬರವಣಿಗೆಯ ಭಾಷೆಯನ್ನು ಹೊತ್ತ ವಿದ್ವಾಂಸರ, ಕವಿಗಳ ಕೃತಿಗಳಿಗೆ ಅನ್ವಯವಾಗುತ್ತದೆಯೇ ಹೊರತು ಜನತೆ ತಾವು ದಿನ ದಿನವೂ ಮಾತನಾಡುತ್ತಿದ್ದಂತೆ ಬರೆದ ಜನಪದ ಸಾಹಿತ್ಯಕ್ಕೂ ಅದೇ ಅಳತೆಗೋಲನ್ನು ಅನ್ವಯಿಸುವುದು ಸರಿಯೆ ? ಎಲ್ಲ ಚಂಪೂ ಕಾವ್ಯಗಳೂ ಪ್ರೌಢ ಶೈಲಿಯಲ್ಲೇ ಹರಿದು ಬಂದಿರುವುದರಿಂದ ಅವರ ಬೆಂಬಲದಿಂದ ಆಡು ನುಡಿಯ ಜಾಡನ್ನು ಹುಡುಕಿ ಹಿಡಿಯುವ ಕ್ರಮ ಸರಿ ಕಾಣಿಸುವುದಿಲ್ಲ.

ಇನ್ನು ಶಾಸನಗಳ ಭಾಷೆಯೂ ಅಷ್ಟೆ. ಛಂದಸ್ಸಿನ ಆಧಾರದಿಂದ ನೋಡಿದರೆ ಬಹಳ ಪ್ರಾಚೀನವಾದ ತ್ರಿಪದಿಯಲ್ಲಿಯೇ ಜನಪದ ಸಾಹಿತ್ಯ ಹೇರಳವಾಗಿದೆ. ಹಾಗಾದರೆ ಜನಪದ ಸಾಹಿತ್ಯದ ಆದಿ ಭಾಗವನ್ನು ೬–೭ನೆಯ ಶ.ಕ್ಕೆ ಸೇರಿದ್ದೆಂದೂ, ಗ್ರಂಥಸ್ಥ

[1] ಪ್ರೊ || ಡಿ. ಎಲ್. ನರಸಿಂಹಾಚಾರ್, ಕನ್ನಡ ಗ್ರಂಥ ಸಂಪಾದನೆ, ೧೯೬೪, ಪುಟ ೩೧-೩೨.

ವಾದ ಚಂಪೂ-ಷಟ್ಪದಿ-ಸಾಂಗತ್ಯ ಮೊದಲಾದ ಕಾವ್ಯಗಳು ಆ ಕಾಲದ ಜನ ಭಾಷೆಯ ಪ್ರತಿನಿಧಿಯೆಂದು ಒಪ್ಪುವುದೂ ಸಮಂಜಸವಾಗಿಲ್ಲ. ಹೀಗೆ ಹಲವು ಎಡರು ತೊಡರು ಗಳಿರುವುದರಿಂದ ಕನ್ನಡ ನುಡಿಯ ನಿಡಿದಾದ ಬೆಳವಣಿಗೆಯಲ್ಲಿ ಜನಭಾಷೆಯ ಸ್ವರೂಪ ವಿವಿಧ ಶತಮಾನಗಳಲ್ಲಿ ಹೀಗೇ ಇತ್ತೆಂದು ಹೇಳುವುದು ಸಧ್ಯದ ಪರಿಸ್ಥಿತಿಯಲ್ಲಿ ಕಷ್ಟ ಸಾಧ್ಯವಾಗಿದೆ. ನಿಷ್ಕರ್ಷೆಗೆ ಬೇಕಾದ ವ್ಯವಸಾಯ-ಸಂಶೋಧನೆ ನಮ್ಮಲ್ಲಿ ಇನ್ನೂ ನಡೆದಿಲ್ಲವಾಗಿ ಇದು ತೊಡಕಿನ ಬಳ್ಳಿಯಾಗಿಯೇ ಉಳಿದಿದೆ.

ಕನ್ನಡ ಭಾಷೆಯ ಪ್ರಾಚೀನ ಉಲ್ಲೇಖಗಳ ಉದಾಹರಣೆಯನ್ನು ಕೊಡುವ ಇತರ ಆಧಾರಗಳಲ್ಲಿ ವಿವಾದಾಸ್ಪದವಾದರೂ, ಗಮನಾರ್ಹವಾದುದು 'ಆಕ್ಸಿರಿಂಕಸ್ ಪ್ಯಾಪಿರೈ'—ಎಂಬ ಹೆಸರಿನ ಗ್ರೀಕ್ ಪ್ರಹಸನ. ಈಜಿಪ್ಟ್ ದೇಶದ ನೈಲ್ ನದಿಯ ದಕ್ಷಿಣ ಭಾಗದಲ್ಲಿ ಸಂಶೋಧನೆ ನಡಸಿದಾಗ ಸಿಕ್ಕ ಲೇಖನಗಳು, ನಾಟಕಗಳು-ಮುಂತಾದ ಕೆಲವು ಅಪೂರ್ವ ವಸ್ತುಗಳಲ್ಲಿ ಈ ವಲ್ಕ ಲೇಖನ-ಗ್ರೀಕ್ ನಾಟಕವೂ ಒಂದು. ಇದರ ಮೂಲವನ್ನು ಓದಿ ಅಭ್ಯಾಸ ಮಾಡಿದ, ಅದರ ನೇರ ಪರಿಚಯವುಳ್ಳ ವಿದ್ವಾಂಸರು ಬರೆದ ಲೇಖನಗಳೇ ಸುಮಾರು ಏಳೆಂಟು ಇವೆ. ಈ ನಾಟಕವನ್ನು ಕುರಿತು ಕನ್ನಡದ ಕಡೆಗೆ ಓದಲು ಮೊಟ್ಟಮೊದಲು ಪ್ರಯತ್ನಪಟ್ಟವರು ಈ. ಹುಲ್ಷ್ (E. Hultzsch) ಮಹಾಶಯ. ಅಲ್ಲಿಂದ ಮುಂದೆ ಕೆಲವು ಕನ್ನಡ ವಿದ್ವಾಂಸರು ಇತ್ತ ಗಮನ ಹರಿಸಿದರು. ಇವರಲ್ಲಿ ಶಾಮಾಶಾಸ್ತ್ರಿಗಳೂ, ದಿವಂಗತ ಮಂಜೇಶ್ವರ ಗೋವಿಂದ ಪೈ ಅವರೂ, ಬಿ. ಎ. ಸಾಲೆತೊರೆ ಅವರೂ, ಬಾರ್ನೆಟ್ ಮತ್ತು ಎಸ್. ಶ್ರೀಕಂಠಯ್ಯನವರೂ ಪ್ರಯತ್ನಪಟ್ಟು ಆ ಗ್ರೀಕ್ ಪ್ರಹಸನದಲ್ಲಿ ಕನ್ನಡದ ಮಾತುಗಳನ್ನು ಪತ್ತೆ ಹಚ್ಚಲು ಶ್ರಮಿಸಿದ್ದಾರೆ.

ಗ್ರೀಕ್ ಪ್ರಹಸನದಲ್ಲಿ ಸಿಗುವ ಕನ್ನಡ ಮಾತುಗಳನ್ನು ಕುರಿತ ವಿವೇಚಿಸಿದ ಎಂಟು ಬಹು ಮುಖ್ಯ ಲೇಖನಗಳು ಸಿಗುವ ವಿವರಗಳನ್ನು ಇಲ್ಲಿ ತಿಳಿಸುವುದು ಆಗತ್ಯ. ಈ ವಿಷಯವನ್ನು ಕುರಿತ ಲೇಖನಗಳು ;

೧. Egyptian Exploration Found–Graeco–Roman Branch : *The Oxyrhyncus Papyri*, Part III, Ed. B. P. Grenfell and A. S. Hunt, O.V.P. 1903.

೨. ಈ ಹುಲ್ಷ್–E. Hultzsch, ಎರಡು ಲೇಖನಗಳು
(ಅ) Hermes (Berlin) 36, 307 ff
(ಆ) *Journal of the Royal Asiatic Society*, 1934

೩. ಎಲ್. ಡಿ. ಬಾರ್ನೆಟ್—L. D. Barnett, *Journal of the Egyptian Archaeology*, XII–1921
Part I & II, pp. 13–15

೪. *Mysore Archaeological Report* (M.A.R)
1926–27, R. Shama Sastry

೫. *Mythic Society Journal* (J. M. S.) XVIII, 4, April 1928, *294*–341, Kannada Passages in the Oxyrhyncus Papri No. 413, S. Srikantaya.

೬. ಮಂಜೇಶ್ವರ ಗೋವಿಂದ ಪೈ, ಗ್ರೀಕ್ ಪ್ರಹಸನದಲ್ಲಿ ಕನ್ನಡದ ಮಾತುಗಳು, ಪ್ರ. ಕ. XI, ೧, ೨.

೭. ಡಾ॥ ಬಿ. ಎ. ಸಾಲಿ(ಲೆ) ತೊರೆ, *Ancient Karnataka*, Vol. I, 1936.

೮. ಎಲ್. ಡಿ. ಬಾರ್ನೆಟ್, *A Review of S.S. Sastry's Sources of Karnatak History* [of Vol. 1], *BSOS*, p. 1052.

ಈ ಎಂಟೂ ಲೇಖನಗಳನ್ನು ಅಭ್ಯಾಸ ಮಾಡಲು ಆಗದಿದ್ದರೂ ಕನ್ನಡ ಲೇಖಕರಾದ ಡಾ॥ ಬಿ. ಎ. ಸಾಲೆತೊರೆ, ಮಂ. ಗೋ. ಪೈ, ಮತ್ತು ಆರ್. ಶಾಮಾಶಾಸ್ತ್ರಿಗಳ ವಿವರಣೆ ನೋಡಬಹುದು. ದುರ್ದೈವವೆಂದರೆ, ಇವರ ಒಟ್ಟು ವಿವರಣೆಯನ್ನು ಮುಂದೆ ಇಟ್ಟು ಕೊಂಡು ಪರಿಶೀಲಿಸಿದಾಗ ಇವರ ಹೇಳಿಕೆಗಳಲ್ಲೇ ಹೊಂದಾಣಿಕೆ ಕಾಣುವುದಿಲ್ಲ. ಒಮ್ಮೊಮ್ಮೆ ಮೂಲಗ್ರಂಥವನ್ನೇ ತಿದ್ದುವ ಸಾಹಸಕ್ಕೂ ತೊಡಗುವರು ; ಬುದ್ಧಿಯ ಸೆಣಸಾಟ ಮೇಲುಗೈ ಆಗಿ, ವಾಸ್ತವಿಕ ನಿಲುವಿನಿಂದ ದೂರಸರಿಯುವರು. ಉದಾಹರಣೆಗೆ ಮೂಲ ಪ್ರಹಸನದ ಕೆಲವು ಸಾಲುಗಳನ್ನು ಇತ್ತ ಈ ಮೂವರು ಮಹನೀಯರು ಹೇಗೆ ಬಿಡಿಸಿದ್ದಾರೆಂಬುದನ್ನು ಪಕ್ಕದ ಪುಟಗಳಲ್ಲಿ ಕೊಟ್ಟಿರುವ ವಿವರಗಳನ್ನೂ ನೋಡಬಹುದು.

❋

ಆ ಗ್ರೀಕ್ ಪ್ರಹಸನದ ವಸ್ತುವನ್ನು ಸಂಗ್ರಹ ರೂಪದಲ್ಲಿ ಇಲ್ಲಿ ಕೊಡಲಾಗಿದೆ: ಬಹುಶಃ ರಾಜಕುಮಾರಿಯಾಗಿದ್ದ ಒಬ್ಬ ಗ್ರೀಕ್ ಸುಂದರಾಂಗಿಯನ್ನು ದಕ್ಷಿಣ ಭಾರತದ ಕರಾವಳಿ ಪ್ರದೇಶದ ದೊರೆಯೊಬ್ಬನು ಅಪಹರಿಸಿ ತನ್ನ ರಾಜಧಾನಿಗೆ ಕದ್ದೊಯ್ದನು ; ಗ್ರೀಕ್ ತರುಣಿಯ ಬಂಧುಗಳು ಆವನ ರಾಜಧಾನಿಗೆ ಬಂದು ಆ ದೊರೆಗೆ ಮಧುಪಾನ ಮಾಡಿಸಿ ಅವನು ಅದರಲ್ಲಿ ಮೈಮರೆತಿದ್ದಾಗ ರಾಜಕುಮಾರಿಯನ್ನು ಬಿಡಿಸಿಕೊಂಡು ತಮ್ಮ ದೇಶಕ್ಕೆ ಕರೆದುಕೊಂಡು ಹೋದರು.

ಈ ಗ್ರೀಕ್ ಪ್ರಹಸನದ ದೃಶ್ಯ ತುಳುವ ದೇಶದ ಸಮುದ್ರ ತೀರದ್ದೇ ಇರಬೇಕೆಂದೂ, ಮತ್ತು ಇದರಲ್ಲಿ ಬರುವ ದೊರೆ ಬಹುಶಃ ಆಳುಪರ ದೊರೆಯೇ ಇರಬೇಕೆಂದೂ ವಿದ್ವಾಂಸರು ಊಹಿಸಿದ್ದಾರೆ. ಆ ಕಾಲದಲ್ಲಿ, ಗ್ರೀಕರೂ ಅರಬ್ಬಿಯವರೂ ರೋಮನರೂ ಈಜಿಪ್ಟಿನವರೂ ಕನ್ನಡನಾಡಿನೊಡನೆ ವ್ಯಾಪಾರ ವ್ಯವಹಾರವನ್ನು ಇಟ್ಟುಕೊಂಡಿದ್ದುದಕ್ಕೂ ಆಧಾರಗಳಿವೆ. ಆದರೆ ಆ ಪ್ರಹಸನದ ಭಾಷೆಯನ್ನು ಕುರಿತು ಭಿನ್ನಾಭಿಪ್ರಾಯಗಳಿವೆ. ಆ ಕಾಲದಲ್ಲಿ ಪಶ್ಚಿಮ ತೀರದಲ್ಲಿ ಇದ್ದ ಭಾಷೆಗಳಲ್ಲಿ ಮಲೆಯಾಳ ಭಾಷೆ ಪ್ರಬಲವಾಗಿದ್ದಿರಲಿಲ್ಲ; ಇನ್ನು ಅಲ್ಲಿ ಇದ್ದ ತುಳುಭಾಷೆಯಲ್ಲಂತೂ ಗ್ರಂಥಗಳೂ ಇರಲಿಲ್ಲ. ಇದ್ದುದರಲ್ಲಿ ಕನ್ನಡ ಭಾಷೆಯೊಂದೇ ಪ್ರೌಢವಾಗಿದ್ದಿರಬೇಕು. ಗ್ರೀಕ್ ಪ್ರಹಸನದಲ್ಲಿ

| ಮೂಲ ನಾಟಕ | ಡಾ॥ ಸಾಲೆತೊರೆ | ಗೋವಿಂದ ಪೈ | ಶಾಮಾಶಾಸ್ತ್ರಿ |
|---|---|---|---|
| Kraunou | ಕರೆವಾ ನಾಅ್ | — | ಕರೆವನೋ |
| Lalle | — | ಅಲ್ಲೆ | ಲಲ್ಲೆ |
| Laitaliantalalle | ಎಲೆ ತಾಳಿ ಅಂತಾಳಲ್ಲೆ | ಐತ ಎಂತಾಳಲ್ಲೆ | ಲೇ ಎನ್ನುತ ಲೇ ಎನ್ನುತ ಲಲ್ಲೆ |
| Kotokosanabisora | ಅಕೋ ತಕೋ ಸನವತ್ ಈಯೋ ಸರ | ಕೊಡಗೂಸಿನ ಬಳಿಗೆ ಸೇರು | ಕೊಡಗೂಸಿನ ಬೈವಸರ |
| Hail | — | — | — |
| Laspatia | ಈ ಲಾಸಪತಿ ಆ | ಲೇಸು ಪಡೆಯ | ಲೇಸು, ಬಡಿಯ |
| Ah ! Lady, help | — | — | — |
| Alemaka | ಆಳೇಂ ಅಕ್ಕಾ | ಅಲ್ಲ ಎಮ್ಮಕ್ಕ | ಅಲ್ಲೆ ಮ್ಮಕ್ಕ |
| Minei | ಮಿಾಯೋಷೇ ? | ಮಿಾಣೇ ? | — |

ಬರುವ ಕೆಲವು ಪಾತ್ರಗಳು ಗ್ರೀಕ್ ಅಲ್ಲದ ಬೇರೆ ಭಾಷೆಯ ಕೆಲವು ಮಾತುಗಳನ್ನು ನಾಟಕದ ಮಧ್ಯೆ ಮಧ್ಯೆ ಆಡುತ್ತಾರೆ. ಆ ಮಾತುಗಳು ಯಾವ ಭಾಷೆಯ ಮಾತುಗಳು ? ಎಂಬುದೇ ಮುಖ್ಯ ಪ್ರಶ್ನೆ, ಭಿನ್ನಾಭಿಪ್ರಾಯದ ಕೇಂದ್ರ.

ಸಂಶೋಧಕ ಸೂರಿಗಳು ಗ್ರೀಕ್ ಪ್ರಹಸನದಲ್ಲಿ ಬರುವ ಗ್ರೀಕೇತರ ಭಾಷೆಯ ಪದಗಳು ನಿಸ್ಸಂದೇಹವಾಗಿ ಕನ್ನಡ ಭಾಷೆಯ ಮಾತುಗಳೆಂದು ತೋರಿಸುವ ಪ್ರಯತ್ನ ಮಾಡಿದ್ದಾರೆ. ಆ ನಾಟಕ ತೀರ ಚಿಕ್ಕದು ; ಗಾಂಭೀರ್ಯಕ್ಕಿಂತಲೂ ಹಾಸ್ಯವೇ ಪ್ರಧಾನವಾದ ಈ ಪ್ರಹಸನದಲ್ಲಿನ ಅನ್ಯ ಭಾಷೆಯ ಪದಗಳನ್ನು ನಿಸ್ಸಂದೇಹವಾಗಿ ಕನ್ನಡ ಭಾಷೆಗೆ ಸೇರಿದುವೆಂದು ಹೇಳಲು ಸಾಕಷ್ಟು ಸಾಧನ, ಆಧಾರ ಸಾಲವೆಂದು ಕಾಣುತ್ತದೆ. ಭಾರತದ ಪಶ್ಚಿಮ ಕರಾವಳಿಯ ಪಶ್ಚಿಮ ತೀರದಲ್ಲಿ ನಡೆದ ಘಟನೆಯನ್ನು ಕತೆಯಾಗುಳ್ಳ ಈ ಪುಟ್ಟ ಪ್ರಹಸನ ಈಜಿಪ್ಟಿನ ನೈಲ್ ನದಿಯ ದಕ್ಷಿಣ ಭಾಗದಲ್ಲಿ ನಡೆದ ಭೂಶೋಧನೆಯ ಕಾಲದಲ್ಲಿ ದೊರೆತದ್ದೆಂದು ಆಗಲೇ ತಿಳಿಸಿದೆ ; ಆದುದರಿಂದ ಈ ನಾಟಕವನ್ನು ಬರೆದವನಿಗೆ ಕನ್ನಡ ಭಾಷೆಯ ನೇರ ಪರಿಚಯವಿತ್ತೆಂಬುದು ಸಂದೇಹ.

ಅಲ್ಲದೆ ನಾಟಕವನ್ನು ಓದುವಾಗ ಕ್ರಿ. ಶ. ಎರಡನೆಯ ಶತಮಾನದ ಕನ್ನಡಕ್ಕೆ, ಪೂರ್ವದ ಹಳೆಗನ್ನಡಕ್ಕೆ ಹೊಂದಿಕೆಯಾಗುವ ಎಷ್ಟು ಪ್ರಯೋಗಗಳು ಸಿಗುತ್ತವೆಂಬುದನ್ನು ಪರಿಶೀಲಿಸಬೇಕು. ಹಾಗೆ ಮಾಡುವಾಗ ಯಾವ ಪೂರ್ವಾಭಿಪ್ರಾಯದಿಂದಲೂ ಪ್ರೇರಿತರಾಗಿರಬಾರದು ; ನೀಡುವ ವಿವರಣೆ ಸಹಜವಾಗಿರಬೇಕು, ಸುಸಂಬದ್ಧವಾಗಿರಬೇಕು. ಅಕ್ಷರಗಳನ್ನು ಸಂದರ್ಭಕ್ಕೆ ತಕ್ಕಂತೆ, ಹೇಗೆ ಬೇಕೊ ಹಾಗೆ ತಿರುಗಿಸಿಕೊಳ್ಳದೆ ಸಂಗತವಾಗಿರುವಂತೆ ಓದಬೇಕೇ ಹೊರತು ತಮಗೆ ತೋರಿದಂತೆ ಓದಿಕೊಂಡು, 'ಈ ಅಕ್ಷರವನ್ನು ಬಿಡು, ಅದನ್ನು ಸೇರಿಸು' ಎಂಬ ಕ್ರಮ ಸರಿಯಾದುದಲ್ಲ. ಸರಿಯಾಗಿ ಓದಬೇಕಾದರೆ ಪದಚ್ಛೇದ ಸುಸಂಬದ್ಧವಾಗಿರಬೇಕು.

ಮೇಲಿನ ಮೂರು ನಾಲ್ಕು ಕಾರಣಗಳಿಗೆ ದೊರೆಯುವ ಉತ್ತರ ಸರಿಯಾಗಿದ್ದರೆ ಕನ್ನಡ–ಅಥವಾ ಮತ್ತಾವುದೋ ಭಾಷೆ ಈ ಕೃತಿಯಲ್ಲಿ ಇದೆಯೆಂದು ಒಪ್ಪಬಹುದು. ಉದಾಹರಣೆಗೆ ಈ ಸಾಲು ನೋಡಿ : Malpinia–kouroukoukoubj—ಎಂಬುದರ ಪೂರ್ವಾರ್ಧವನ್ನು 'ಮಲ್ಪಿನಾಯಕ' ಎಂದು ಹೇಳಿ ಅದು ಉಡುಪಿಯ ಪಕ್ಕದ ಮಲ್ಪೆ ಎಂಬ ಜಾಗವಾಗಿರಬೇಕೆಂದು ಭಾವಿಸಿದ್ದಾರೆ. ಮಂ. ಗೋ. ಪೈಯವರು ಅದನ್ನು ಒಪ್ಪದೆ 'ಮ್' ಎಂಬುದನ್ನು ಬಿಟ್ಟು 'ಅಲ್ಪಿನಾಯಕ' ಎಂದು ಓದಿ ಅದಕ್ಕೆ ಅಲ್ಪಿ > ಅಲೂಪ > ಆಳುಪ ಎಂದು ಅರ್ಥೈಸಿದ್ದಾರೆ. ಪೈಯವರು ಸ್ವತಃ ಗ್ರೀಕ್ ಅಭ್ಯಾಸ ಮಾಡಿ ಅರಿತವರಾಗಿದ್ದರು. ಅವರ ಲೇಖನ ಸ್ವಾರಸ್ಯವಾಗಿದೆ, ಉಪಾದೇಯವಾಗಿದೆ ; ಡಾ|| ಬಿ. ಎ. ಸಾಲೆತೊರೆಯವರು ಇತಿಹಾಸದಲ್ಲಿ ಹಿರಿಯ ವಿದ್ವಾಂಸರು, ವಿಜಯನಗರ ಕಾಲದ ಇತಿಹಾಸದಲ್ಲಿ ನಿಪುಣರು ; ಶಾಮಾಶಾಸ್ತ್ರಿಗಳು ಒಳ್ಳೆಯ ಸಂಶೋಧಕರು–ಆದರೆ ಮೂವರ ವಿವರಣೆಗಳಲ್ಲೂ ವ್ಯತ್ಯಾಸಗಳಿದ್ದು ಯಾರ ಅಭಿಪ್ರಾಯಗಳನ್ನು ಒಪ್ಪಬೇಕೊ ತಿಳಿಯದಾಗಿದೆ.

ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ನಾವು ಕೂಡ

It is very dobtfull whether these passages are Kanares at all. The attempts of interpretation vary hugely and are most unconvincing to all but their authors.[1]

ಎಂಬ ವಿಮರ್ಶಕರೊಬ್ಬರ ಮಾತುಗಳನ್ನು ಅನುಮೋದಿಸಬೇಕಾಗಿದೆ. ಏಕೆಂದರೆ ಇವರು ಕೊಡುವ ವಿವರಣೆಯನ್ನು ನೋಡಿದರೆ ಪ್ರಹಸನದ ಭಾಷೆ ನಡುಗನ್ನಡ-ಹೊಸಗನ್ನಡದಂತೆ ಭಾಸವಾಗುತ್ತದೆಯೇ ಹೊರತು ಹಳಗನ್ನಡದಂತೆ ಇಲ್ಲ. ಆದರೂ ೨ನೆಯ ಶತಮಾನದ ಆಡು ನುಡಿಯ ಸ್ವರೂಪ ನಮಗೆ ತಿಳಿದುಬಂದಿಲ್ಲವಾಗಿ, ಈ ಪ್ರಹಸನದ ಮಾತುಗಳು ಆ ಆಡುನುಡಿಯನ್ನು ನಿನದಿಸುತ್ತಿವೆಯೆ ?—ಇದ್ದರೂ ಇರಬಹುದು, ಅಷ್ಟು ಹೊರತಾಗಿ ಇನ್ನೇನೂ ಹೇಳಲು ಸಾಧ್ಯವಿಲ್ಲ.

ಕನ್ನಡ ಭಾಷೆಗೆ ಮಾತ್ರವಲ್ಲ ಇತರ ಎಲ್ಲ ದ್ರಾವಿಡ ಭಾಷೆಗಳಿಗೂ, ತಮಿಳು ಭಾಷೆಯ ನಾಲ್ಕೈದು ಅನುಮಾನಾಸ್ಪದ ಶಾಸನಗಳನ್ನು ಬಿಟ್ಟರೆ, ಅತ್ಯಂತ ಪ್ರಾಚೀನ ಶಾಸನ–ಕನ್ನಡ ಪಲ್ಮಿಡಿ ಶಾಸನ. ಗ್ರೀಕ್ ಪ್ರಹಸನ ಇದಕ್ಕೂ ಅನಂತರದ್ದೋ ಅಥವಾ ಹಳೆಯದೊ ತಿಳಿಯದು. ಈ ಶಾಸನದ ಕಾಲ ಸು. ಕ್ರಿ. ಶ. ೪೫೦. ಇದರಲ್ಲಿ ಕನ್ನಡದ ಪದಗಳಿಗಿಂತಲೂ ಸಂಸ್ಕೃತ ಪದಗಳೇ ಹೆಚ್ಚು, ಕರ್ಮಣಿ ಪ್ರಯೋಗವಿದೆ. ಇದರ ತರುವಾಯದ ಶಾಸನ ಬದಾಮಿ ಶಾಸನ—ಮಂಗಳೇಶನ ಶಾಸನ. ಕ್ರಿ. ಶ. ೬–೭ನೆಯ ಶತಮಾನದ ತರುವಾಯ ಕನ್ನಡದಲ್ಲಿ ಬೇಕಾದಷ್ಟು ಶಾಸನಗಳು ಸಿಗುತ್ತವೆ.

ಇಲ್ಲಿ ಇನ್ನೊಂದು ಸಮಸ್ಯೆಯೆಂದರೆ ಕರ್ನಾಟಕ-ಕರ್ಣಾಟಕ ಎಂಬ ಪದಗಳಲ್ಲಿ ಯಾವುದು ಸರಿಯಾದ, ಸಾಧುವಾದ ರೂಪ ? ಅವುಗಳ ಅರ್ಥವೇನು ? ಎಂಬುದು. ಈ ಚರ್ಚೆಗೆ ಸರಿಯಾದ ಉತ್ತರ ಇನ್ನೂ ಸಿಕ್ಕಿಲ್ಲವೆಂದೇ ತೋರುತ್ತದೆ ; ಅಥವಾ ಅನುಮಾನವೇ ಕೊನೆಯ ಮಾತೆಂದು ಹೇಳಬಹುದು.[2] ಕರ್ನಾಟಕ ಸಾಹಿತ್ಯ ಪರಿಷತ್ತು ಎಂದು ಇರಬೇಕೆ ? ಪರಿಷನ್ಮಂದಿರದ ಮೇಲೆ ಎಲ್ಲರಿಗೂ ಕಾಣುವಂತೆ ಹಾಕುವ ನಾಮ ಫಲಕದ ಮೇಲೆ ಇವುಗಳಲ್ಲಿ ಯಾವುದನ್ನು ಬರೆಸಬೇಕು ?—ಎಂಬ ಬಗೆಬಗೆಯ ಪ್ರಶ್ನಾವಳಿ (ಪ್ರಶ್ನೆಯ ಹಾವಳಿ)ಯನ್ನು ವಿದ್ವಾಂಸರು ಎಸೆದರು. ನಕಾರ-ಣಕಾರಗಳ ಚರ್ಚೆ ಈಗ್ಗೆ ೩೦ ವರ್ಷಗಳ ಹಿಂದೆ ಬಹಳ ಬಿರುಸಾಗಿ ನಡೆಯಿತು. ಅನೇಕ ಜನ ಹಿರಿಯ ಕಿರಿಯ ಬರೆಹಗಾರರು ಈ ವಾದ ವಿವಾದಗಳಲ್ಲಿ ತೊಡಗಿದರು. ಒಮ್ಮೊಮ್ಮೆ ಈ ವಾದ ವಿವಾದಗಳು ಸ್ನೇಹ ವಿಶ್ವಾಸದ ಗಡಿಯನ್ನು ದಾಟಿ ಪ್ರಕೋಪಕ್ಕೂ ಹೋಯಿತು. ಮುಖಗಳು ಗಂಟಾದುವು, ಮನಸ್ಸುಗಳು ಬಿಗಿಯಾದುವು—ಮುರಿದುವು. ಏಕೆಂದರೆ ಹಲವರಿಗೆ ಈ ಪ್ರಶ್ನೆ ವೈಯಕ್ತಿಕ ಸ್ಥಾನಮಾನಗಳ ಪ್ರಶ್ನೆಯಾಗಿ ಹಟ ಹೆಚ್ಚಿತು.

[1] L. D. Barnett, *Reveiew of S. Sreekanta Sastry's Sources of Karnatak History*, Vol. I, BSOS, p. 1052.

[2] ಧ್ವನಿ ವಿಜ್ಞಾನದ ದೃಷ್ಟಿಯಿಂದ ಕರ್ನಾಟಕ ಸರಿಯಾದ ರೂಪ.

ಕೊನೆಗೆ ಈ ವಿವಾದಾಸ್ಪದವಾದ ಹೆಸರೇ ಬೇಡವೆಂದು 'ಕನ್ನಡ ಸಾಹಿತ್ಯ ಪರಿಷತ್ತು' ಎಂಬ ಬೇರೆ ಹೆಸರಿಟ್ಟರು.

ಆ ಕಾಲದ ಪತ್ರಿಕೆಗಳ ತುಂಬ ಇದಕ್ಕೆ ಸಂಬಂಧಿಸಿದ ಅನೇಕ ಲೇಖನಗಳು ಕಾಣಿಸಿಕೊಂಡಿವೆ. ಆದರೂ, ನೇರವಾಗಿ ಈ ಸಮಸ್ಯೆಯನ್ನು ಎದುರಿಸಿ ಸಮಂಜಸವಾದ ಉತ್ತರಗಳನ್ನು ಬರೆದವರು ಕಡಮೆ. ಅದು ಕೇವಲ 'ನೊಣ' (ನ/ಣ)ಗಳ ಚರ್ಚೆಯಾಯಿತು. ಬಳ್ಳಾರಿ ಸಾಹಿತ್ಯ ಸಮ್ಮೇಳನದಲ್ಲಿ ತೀರ್ಮಾನವಾದ 'ಕನ್ನಡ ಸಾಹಿತ್ಯ ಪರಿಷತ್ತು' ಎಂಬ ಪದಪುಂಜದಲ್ಲಿ ಅರಿಸಮಾಸದೋಷ ಇದೆಯಲ್ಲಾ—ಎಂದು ಕೆಲವರು ಅಂದುದೂ ಉಂಟು. ಅದಕ್ಕೆ ಭಾಷೆಯ ವಿಚಾರದಲ್ಲಿ ಬರೆಯುವಾಗ ಅರಿಸಮಾಸದೋಷ ತಟ್ಟುವುದಿಲ್ಲವೆಂಬ ಸಮಾಧಾನವೂ ಸೂಚಿತವಾಯಿತು. ಹೀಗೆ ದೋಷವನ್ನೇ ಹುಡುಕುತ್ತಾ ಹೊರಟರೆ ಪರಿಹಾರವೆಲ್ಲಿ ? ಕನ್ನಡವನ್ನು ಕರ್ಣಾಟಕ—ಎಂದು ಪ್ರಾಚೀನ ಸಂಸ್ಕೃತ ಸಾಹಿತ್ಯದಲ್ಲೂ, Canarese, Kanarese ಎಂದು ಪಾಶ್ಚಾತ್ಯ ವಿದ್ವಾಂಸರು ಇಂಗ್ಲಿಷಿನಲ್ಲೂ ನಿರ್ದೇಶಿಸಿರುವರೆಂದು ಹೇಳುವುದನ್ನು ಸಿಕ್ಕುಸಿಕ್ಕಾಗಿ ಮಾಡಿ, ಬಿಡಿಸಲಾಗದ ಗಂಟಿನಂತೆ ಒಂದು ಒಗಟಾಗಿ ಮಾಡಿಟ್ಟರೆಂದು ಹೇಳಬಹುದು.

ಲೂಯಿ ರೈಸ್ ಎಂಬಾತ ಒಂದು ಕಡೆ ಬರೆಯುತ್ತಾ ಹೀಗೆ ಹೇಳಿದ್ದಾನೆ ; ಆದರೆ ಕರ್ನಾಟಕ ಎಂಬ ಶಬ್ದ—ಅದು ಸಾಮಾನ್ಯ ಶಬ್ದವಾಗಿ ಪ್ರಯೋಗವಾದಾಗ—ಕರ್ನಾಟಕದ ಜೊತೆಗೆ ತೆಲುಗನ್ನೂ ಒಳಗೊಳ್ಳುತ್ತದೆ (?) ಏಕೆಂದರೆ ಈ ಎರಡು ಭಾಷೆಗಳ ವರ್ಣಮಾಲೆಯಲ್ಲಿ ಏಕರೂಪವಿದೆ. ಕರ್ನಾಟಕದ ಅನೇಕ ಉಪಭಾಷೆಗಳಿಗೂ ಇದೇ ಲಿಪಿಯನ್ನು ಬಳಸುವರು. ಕನ್ನಡ ಎಂಬ ಹೆಸರು ಬಹುಶಃ ಕರ್ನಾಟಕ ಎಂಬುದರ ತದ್ಭವವಿರಬಹುದು, ಆದರೆ ಇದರ ವ್ಯುತ್ಪತ್ತಿ ಸರಿಯಾಗಿ ತಿಳಿಯದು. ಆದರೂ ಇದರ ಸಂಭವನೀಯ ನಿಷ್ಪತ್ತಿಯನ್ನು ಡಾ|| ಗುಂಡರ್ಟ್ ತೋರಿಸಿದ್ದಾನೆ. ಕರಿನಾಡು (=ಕಪ್ಪುನಾಡು) ಎಂಬುದು ಹತ್ತಿಯನ್ನು ಬೆಳೆಯುವ ಕಪ್ಪು ನೆಲದ ಸಂಕೇತ. ವಾಸ್ತವವಾಗಿ ಈ ಕರಿನಾಡು ಎಂಬುದು ಕನ್ನಡ ಭಾಷೆಯನ್ನು ಆಡುವ ತೆಂಕಣದ ಸೀಮೆಯನ್ನು ನಿರ್ದೇಶಿಸುವ ಹೆಸರು.

ಕರ್ನಾಟಕ ಎಂಬ ಶಬ್ದರೂಪವೂ ವಿಶೇಷಣದಂತೆ ತೋರುತ್ತದೆಯಾದರೂ 'ವಿಶ್ವಗುಣಾದರ್ಶ'ದ ಲೇಖಕ—ಮೂರು ಶತಮಾನಗಳ ಹಿಂದಿನ ಕೃತಿ—ಈ ಪದವನ್ನು ಕರ್ಣ ಹಾಗೂ ಅಟಕ ಎಂಬ ಪದಗಳಿಂದ ಬಂದಿರುವುದಾಗಿ ಉಲ್ಲೇಖಿಸಿದ್ದಾನೆ ; ಮೆಕೆಂಜೀಯವರ ಹಸ್ತಪ್ರತಿಗಳಲ್ಲಿ ಇದನ್ನು ಕಿವಿಗೆ ತಲಪುವುದು ಎಂದು ವಿವರಿಸಲಾಗಿದೆ. ಅಂದರೆ ಎಲ್ಲ ಜನರ ಕಿವಿಗಳಿಗೂ ಮುಟ್ಟುವಷ್ಟು ಈ ನೆಲ ಗೌರವ ಹಾಗೂ ಕೀರ್ತಿಗಳಿಗೆ ಪಾತ್ರವಾಗಿತ್ತೆಂದು ಅರ್ಥ. ಅಂತೂ ಇದರ ವ್ಯುತ್ಪತ್ತಿಯನ್ನು ಕುರಿತ ಈ ಚರ್ಚೆ ಏನೇ ಇರಲಿ ಕರ್ನಾಟಕವೆಂಬ ಈ ರೂಪ (ಪದ) ಕ್ರಿ. ಶ. ೫ನೆಯ ಶತಮಾನದ

ಪೂರ್ವಾರ್ಧದ ವರಾಹಮಿಹಿರದಲ್ಲೇ ಬರುವುದರಿಂದ ಸಾಕಷ್ಟು ಪ್ರಾಚೀನವೆಂಬುದರಲ್ಲಿ ಅನುಮಾನವಿಲ್ಲ.[1]

ಲೂಯಿ ರೈಸನ ಹೇಳಿಕೆಗೆ ಮೂಲವಾದ ಡಾ|| ಗುಂಡರ್ಟ್‌ನ ಮಾತುಗಳನ್ನೂ ಇಲ್ಲಿಯೇ ಉದಾಹರಿಸಬಹುದು—

> "Karṇāṭaka, kar-nāṭ-agam, interior of the black country, from kar (=black) nāṭ (nāḍu) country and agam (interior)–the black cotton soil of the Dekkan, nāḍu means properly the cultivated country, from naḍu, to plant.

ಕರ್ + ನಾಟ್ + ಅಗಂ = ಕಪ್ಪು + ನಾಡಿನ + (ಜಾಗ) ಪ್ರದೇಶ (ದೇಶ) ಎಂಬ ಡಾ|| ಗುಂಡರ್ಟ್‌ನ ನಿಷ್ಪತ್ತಿಯನ್ನು ಕಾಲ್ಡ್‌ವೆಲ್ಲನೂ ಅನುಮೋದಿಸಿದ್ದಾನೆ.[2] ಬಿ.ಎಂ. ಶ್ರೀಯವರೂ ಇದನ್ನೇ ಅಂಗೀಕರಿಸಿದ್ದಾರೆ.

ಕನ್ನಡದ ಕರ್ನಾಟ ತಮಿಳಿನಲ್ಲಿ ಕರುನಾಡರ್ ಎಂದು ಆಗುತ್ತದೆ. ಆದರೆ ಕರುನಾಡು ಎಂದರೆ ದೊಡ್ಡ ದೇಶ, ಹರವಾದನಾಡು ಎಂಬ ಅಭಿಪ್ರಾಯವೂ ಮೂಡಿತು. ಕರು (=ದೊಡ್ಡ, ವಿಸ್ತೀರ್ಣವಾದ, ಮಹತ್) + ನಾಡ + ಅ = ಕರ್ನಾಟ ; ಕರು + ನಾಡು + ಅಕ = ಕರ್ನಾಟಕ ಆಯಿತೆಂದೂ ಕೆಲವರು ವಿವರಿಸಿದರು. ಇಲ್ಲಿ ಇರುವ ಪದಗಳೆಲ್ಲವೂ ಕನ್ನಡ ಪದಗಳು, ಕನ್ನಡ ಪ್ರತ್ಯಯಗಳು (-ಅ, -ಅಕ). ಇವೆಲ್ಲಾ ಶುದ್ಧ ದೇಶ್ಯವೇ ಆಗಿವೆ. ಡಕಾರ ಟಕಾರವಾಗಿದೆ, ಅಷ್ಟೆ. ಆದರೆ-ಡ > -ಟ ಆಗುವುದು ಕನ್ನಡಕ್ಕೆ ಸಹಜವೇ ಅಲ್ಲವೆ ? ಕನ್ನಡದ ಡಕಾರಾಂತ ಧಾತುಗಳು ಕೃದಂತ ಭಾವನಾಮಗಳಾಗುವಾಗ ಡ > ಟ ಆಗುವುದಕ್ಕೆ ಹತ್ತಾರು ಉದಾಹರಣೆಗಳು ನಮ್ಮಲ್ಲಿ ಇವೆ.

ಆಡು > ಆಟ : ಮಾಡು > ಮಾಟ
ಓಡು > ಓಟ : ಕಾಡು > ಕಾಟ
ನೋಡು > ನೋಟ : ಕೂಡು > ಕೂಟ
ಕಡಿ > ಕಟಕ : ನೋಡು > ನೋಟಕ [ಶಂ. ಬಾ. ೬-೬]

ಆದುದರಿಂದ ಕರ್ನಾಟಕ ಪದವೇ ಸರಿ, ಅದಕ್ಕೆ ಹರವಾದನಾಡು—ಎಂಬುದೇ ಅರ್ಥವೆಂದು ಒಬ್ಬಿಬ್ಬರು ವಿವರಿಸಿದರು.

ಕರ್ನಾಡು (ಟು) > ಕರ್ನಾ (ಣ್ಣಾ) ಟ > ಕನ್ನಡ
ಇದು, ಪುನ್ನಾಡು (ಕ) > ಪುನ್ನಾಟ (ಸಂ)—ಆದಂತೆ.

---

[1] Nagavarma's *Karnataka Bhasha-Bhushana*, Ed. L. Rice, 1884, p. V and VI.

[2] *ACGODLS*, 1956, p. 577.

ಆದರೆ ಇನ್ನೊಬ್ಬ ಮಹಾನುಭಾವರು ಕುರು (=ಬಯಲು)+ನಾಡು> ಕುರ್ನಾಡು>ಕರ್ನಾಡು>ಕನ್ನಡ—ಆಯಿತೆಂದು ಒಂದು ವಿಲಕ್ಷಣವಾದ ಒಪ್ಪಲು ಕಷ್ಟವಾದ ವಾದವನ್ನು ಮುಂದಿಟ್ಟರು.[1]

ಮಹಾಭಾರತದ ಕರ್ಣನು ಈ ನಾಡಿ (ಕಾಡಿ)ಗೆ ಆಟಬೇಟೆಗಳಿಗಾಗಿ ವಿಹರಿಸಲು ಬರುತ್ತಿದ್ದುದರಿಂದ ಇದನ್ನು ಕರ್ಣಾಟ (ಕರ್ಣನ ಅಟನ ಪ್ರದೇಶ) ವಾಯಿತೆಂದು ಹೇಳಿದವರೂ ಉಂಟು. ಜಯಂಗೊಂಡಾರ್ ಎಂಬ ತಮಿಳು ಕವಿ—ಕ್ರಿ.ಶ. ೧೧ನೆಯ ಶ.—ಕನ್ನಡ ಭಾಷೆಯ ವಿಚಾರವಾಗಿ ಬರೆಯುತ್ತಾ "ಶಿಲವಡಗು ಪಲತಮಿಟುಂ ಕಲಟಿಜಾತ್ತರು ಕರುನಾಡಿಯರ್"—ಅಂದರೆ ಹಲವು ತೆಲುಗು ಪದಗಳೂ, ಅನೇಕ ತಮಿಳು ಪದಗಳೂ ಸೇರಿ ಕನ್ನಡ ಭಾಷೆ ಉಂಟಾಗಿದೆ—ಎಂದು, ನಗೆ ಮೂಡುವಂತೆ, ಬರೆದಿದ್ದಾನೆ.[2]

ಪ್ರಾಚೀನ ಲೇಖಕರಲ್ಲಿ ನಾಗವರ್ಮ ತನ್ನ ಭಾಷಾಭೂಷಣದಲ್ಲಿ ಹಲವು ಕಡೆ ಕರ್ಣಾಟ—ಎಂದು ಉಪಯೋಗಿಸಿದ್ದಾನೆ. ಉದಾಹರಣೆಗಾಗಿ ಮೂರು ನಾಲ್ಕು ಪ್ರಯೋಗಗಳನ್ನು ನೋಡಬಹುದು: (೧) ಅಥ ಕರ್ಣಾಟಕ ಶಬ್ದ ಸಿದ್ಧಿ, (೨) ಅಸ್ಮಿ ಕರ್ಣಾಟಕ ವಿಷಯೇ ವರ್ಗಾಣಾಂ...., (೩) ಇತಿ ಕರ್ಣಾಟ ವ್ಯಾಕರಣೇ ಸಂಜ್ಞಾ ವಿಧಾನಂ, (೪) ಕರ್ಣಾಟ ಶಬ್ದಸೂತ್ರಾಣಿ ಲೋಕ ವ್ಯುತ್ಪತ್ತಿ ಇತ್ಯಾದಿ. ಕೇಶಿರಾಜ ತನ್ನ ಶಬ್ದಮಣಿದರ್ಪಣದಲ್ಲಿ

ಗುಣಮುಮರೆ ಶಬ್ದಮಣಿದ
ರ್ಪಣ ನಾಮುವನಿಟ್ಟು ನೆಱೆಯೆ ಕರ್ಣಾಟಕ ಲ।
ಕ್ಷಣ ಶಬ್ದಶಾಸ್ತ್ರಮಂ ಲಾ
ಕ್ಷಣಿಕರ್ಪೇೞೆಂದು ಬೆಸಸೆ ಬಗೆವುಗೆ ಪೇೞ್ದಂ ॥

ಎಂದು ಗ್ರಂಥಾರಂಭದಲ್ಲಿಯೇ ಘೋಷಿಸಿರುವುದಲ್ಲದೆ,

ವೇದಸಮನಾಗಿ ಭೀಮನಿ
ನಾದುದು ಸಂಸ್ಕೃತದ ಧಾತುಪಾಠೆಱದಿಂದಂ
ಯಾದವ ಕಟಕಾಚಾರ್ಯನಿ
ನಾದುದು ಕರ್ಣಾಟ ಧಾತು ಕವಿಕೇಶವನಿಂ ॥

ಎಂಬುದಾಗಿಯೂ ತಿಳಿಸುವಾಗ, ಮತ್ತು ಇನ್ನೂ ಒಂದೆರಡು ಕಡೆ ಕರ್ಣಾಟ ಎಂದೇ ಉಪಯೋಗಿಸಿದ್ದಾನೆ. ಅಲ್ಲದೆ ಪ್ರತಿಯೊಂದು ಸಂಧಿಯ ಮುಕ್ತಾಯದಲ್ಲೂ "ಕರ್ಣಾಟಕ ಲಕ್ಷಣ ಶಿಕ್ಷಾಚಾರ್ಯ ಸುಕವಿ ಕೇಶಿರಾಜ" ಎಂದೇ ಬರೆದಿದ್ದಾನೆ. ಇನ್ನು ಕವಿಗೆ

---

[1] ಕ ಸಾ ಪ ಪ, ॥ ೯–೪, ಪುಟ ೪೨೧.

[2] ಕಲಿಂಗತ್ತುಪ್ಪರಣಿ, ಜಯಗೊಂಡಾರ್, (ತ). ಇತ್ತೀಚೆಗೆ ತಮಿಳುನಾಡಿನ ರಾಜಕಾರಣಿಯೊಬ್ಬರು ಇಂತಹುದೇ ಅಭಿಪ್ರಾಯವೊಂದನ್ನು ವ್ಯಕ್ತಪಡಿಸಿದ್ದುಂಟು.

ಇಂಪಾದ ದೇಶ ಕರ್ಣಾಟಕ—ಕರ್ಣಯೋಃ ಅಟತೀತಿ ಕರ್ಣಾಟಃ (ಅಟಗತೌ ಇತಿಧಾತೋಃ ನಿಷ್ಪನ್ನಶ್ಶಬ್ದಃ) ಎಂಬ ವಿಚಾರವಾಗಿ ವೆಂಕಟಾಧ್ವರಿಯ ವಾಕ್ಯಗಳನ್ನು ಉದಾಹರಿಸಬಹುದು.

> ಕರ್ಣಾಟದೇಶೋ ಯಃ ಪೂರ್ವಂ ಕರ್ಣದೇಶಮಭೂಷಯತ್ ।
> ಸಏಷ ಸಾಂಪ್ರತಂ ಪಶ್ಯ ಚಕ್ಷುಷೋರ್ಭೂಷಣಾಯತೇ ॥[1]

ಈ ರೀತಿಯಲ್ಲಿ ನಾಗವರ್ಮ (ಛಂದೋಂಬುಧಿ), ನಾಗವರ್ಮ II (ಭಾಷಾಭೂಷಣ) ಕೇಶಿರಾಜ, ಭಟ್ಟಾಕಲಂಕ (ಶಬ್ದಾನುಶಾಸನ) ವರಾಹಮಿಹಿರ (೫ನೆಯ ಶ.) ಮೊದಲಾದವರೆಲ್ಲಾ ಕರ್ನಾಟಕ, ಕರ್ಣಾಟಕ—ಎಂದು ಉಪಯೋಗಿಸಿದ್ದಾರೆ ; ಮತ್ತು ಕೇಶಿರಾಜ—ಭಟ್ಟಾಕಳಂಕರಿಬ್ಬರೂ ಸಂಸ್ಕೃತ ಭಾಷೆಯ ಕರ್ಣಾಟಕ ಶಬ್ದವೇ 'ಕನ್ನಡ' ಶಬ್ದವಾಯಿತೆಂದು ಅಭಿಪ್ರಾಯಪಟ್ಟಿದ್ದಾರೆ.

ಇವರ ಜೊತೆಗೆ ಕಾಕಿನಾಡದ ಪಾಠಿ ವೆಂಕಟನಾರಾಯಣ ಪಂಡಿತರು 'ಆಂಧ್ರ ಭಾಷಾತತ್ತ್ವ'ವೆಂಬ ತೆಲುಗು ಗ್ರಂಥದಲ್ಲಿ 'ಕರ್ಣಾಟ' ಪದವನ್ನೇ ಇಟ್ಟುಕೊಂಡು ಕರ್ಣಾಟರೆಂದರೆ ಕಾಡು ಜನರೆಂದು ಅರ್ಥ ಮಾಡಿದ್ದಾರೆ—ಕರ್ಣ (=ಪರ್ವತ+ ಅಟ (ಭ್ರಮಣೇ). ಆದರೆ ಕರ್ಣ ಎಂಬ ಶಬ್ದಕ್ಕೆ ಸಂಸ್ಕೃತದಲ್ಲಿ ಪರ್ವತವೆಂಬ ಅರ್ಥ ವಿದ್ದಂತೆ ತೋರುವುದಿಲ್ಲ. ಇನ್ನು ಶಾಸನಗಳಲ್ಲಿ ಕರ್ನಾಟ, ಕರ್ಣಾಟ—ಎಂಬ ಎರಡು ರೂಪಗಳೂ ಸಿಗುತ್ತವೆ. ನಿದರ್ಶನವಾಗಿ ಹೆಸರಿಸುವುದಾದರೆ ಶ್ರವಣಬೆಳಗೊಳದ ೨೪೯, ೨೫೨, ೩೫೪ನೆಯ ಸಂಖ್ಯೆಯೇ ಮೊದಲಾದ ಶಾಸನಗಳಲ್ಲಿ ಕರ್ನಾಟವೆಂಬ ಪದವಿದ್ದರೆ ಅದೇ ಶ್ರವಣಬೆಳ್ಗೊಳದ ೨೨೧ನೆಯ ಶಾಸನದಲ್ಲಿ ಕರ್ಣಾಟವೆಂಬ ಪದದ ಪ್ರಯೋಗ ವಿದೆ. ಆದುದರಿಂದ ಶಾಸನಗಳಿಂದ ಈ ಸಮಸ್ಯೆಗೆ ಪರಿಹಾರ ದೊರಕುವುದಿಲ್ಲ.

ಕರ್ನಾಟ ಎಂಬ ದಂತ್ಯವರ್ಣದ ರೂಪ ಸರಿಯೆ ?—ಕರ್ಣಾಟ ಎಂಬ ಮೂರ್ಧನ್ಯಾಕ್ಷರದ ರೂಪ ಸರಿಯೆ ? ಎಂಬ ಈ ಚರ್ಚೆ ಅನವಶ್ಯಕವಾಗಿ ನಡೆಯಿತೆಂದು ತೋರುತ್ತದೆ. ಈ ಪರಿಚ್ಛೇದದ ಪ್ರಾರಂಭದಲ್ಲಿಯೇ ಹೇಳಿದಂತೆ ಕನ್ನಡ—ಕರ್ನಾಟಕ ಪದಗಳು ಇಂಗ್ಲಿಷ್—ಸಂಸ್ಕೃತಗಳಿಗೆ ಹೋದಾಗ ಅವರು ಅವರ ಉಚ್ಚಾರಣೆಗೆ ತಕ್ಕಂತೆ ಈ ಪದಗಳನ್ನು ಪರಿವರ್ತಿಸಿಕೊಂಡಿದ್ದಾರೆ. ಆ ಪರಿವರ್ತನೆಯ ಫಲವಾಗಿ ಕನ್ನಡ ಇಂಗ್ಲಿಷರ ಬಾಯಲ್ಲಿ C(k)anarese ಆಯಿತು ; ಕರ್ನಾಟಕ ಸಂಸ್ಕೃತ ಲೇಖಕರ ಕೈಯಲ್ಲಿ ಕರ್ನಾಟಕ ಆಯಿತು. ಬೇರೆ ಭಾಷೆಯ ಪದಗಳನ್ನೂ, ಹೆಸರುಗಳನ್ನೂ ಸಂಸ್ಕೃತ ಲೇಖಕರು ಪರಿವರ್ತಿಸಿಕೊಳ್ಳುವ ಪದ್ಧತಿ ಹೊಸದೇನೂ ಅಲ್ಲ.

ಕೆಲವು ದೃಷ್ಟಾಂತಗಳನ್ನು ಕೊಡಬಹುದು—ಕಂದಹಾರ್ > ಗಾಂಧಾರ, ಗುಜರಾತ್ > ಗುರ್ಜಕ, ಕನೂಜ್ > ಕನ್ಯಾಕುಬ್ಜ, ಮರಾಠ > ಮಹಾರಾಷ್ಟ್ರ ತಮಿೞ್ > ದ್ರಮಿಡ, ತೆಲುಂಗು > ತ್ರೈಲಿಂಗ—ಹೀಗೆಯೇ ಕರ್ನಾಟ(ಕ) >

[1] ವಿಶ್ವಗುಣಾದರ್ಶ, ೨೪೯ನೆಯ ಶ್ಲೋಕ.

ಕರ್ಣಾಟ(ಕ) ಆಗಿರುವುದರಲ್ಲಿ ಅನುಮಾನವಿಲ್ಲ. ಆದರೆ ಕರ್ಣ್ಣಾಟ (—ಕರ್ಣ್ಣ, ವರ್ಣ್ಣ, ಸ್ವರ್ಣ್ಣ, ಸುವರ್ಣ್ಣ, ಅರ್ಣ್ಣವಗಳಂತೆ—ಣಕಾರದ ಮುಂದಿನ ನಕಾರದ ದ್ವಿತ್ವ ಅನವಶ್ಯಕವಾದುದರಿಂದ) ಎಂಬುದು ತಪ್ಪು ರೂಪ. "....ಈ ಮಾತಿನ ಮೂಲರೂಪ ಕನ್ನಾಡು ಇರಬೇಕು. ಹೆಸರುಗಳನ್ನೆಲ್ಲ ಸಂಸ್ಕೃತ ರೂಪಕ್ಕೆ ತಿರುಗಿಸುವ ಸರ್ವ್ವವ್ಯಾಪಕ ವಾದ ಆಗಿನ ಸಂಪ್ರದಾಯುದ ಫಲವಾಗಿ ಆ ಮಾತನ್ನು ಕರ್ನಾಟ, ಮತ್ತು ಕರ್ನಾಟಕ ವೆಂದು ತಿರುಗಿಸಿರಬೇಕು"[1] ಎಂಬ ಸಂಶೋಧಕರ ಮಾತುಗಳನ್ನು ಗಮನಿಸುತ್ತಾ ಕೊನೆಯ ಪದಗಳ ಪಟ್ಟಿಗೆ ಕರ್ಣಾಟ, ಕರ್ಣಾಟಕ ಎಂದೂ ಸೇರಿಸಿದರೆ ಹೆಚ್ಚು ಸಮಂಜಸವಾಗಿ ತೋರುತ್ತದೆ. ಏಕೆಂದರೆ ಸಂಸ್ಕೃತದಲ್ಲಿ ರೇಫೆಯ ಮುಂದೆ ನಕಾರ ಬಂದರೆ ಆಗ ಅದು ಣಕಾರವಾಗಬೇಕೆಂಬುದು ಸೂತ್ರ ನಿಯಮವಿದೆ. ಪಾಣಿನಿ ಮಹಾಶಯನ ಎರಡು ಸೂತ್ರಗಳು ಇಂತಿವೆ :

ರಷಭ್ಯಾಂ ನೋಃಣಃ ಸಮಾನಪದೇ[2]

ಮತ್ತು

ಅಟ್ ಕುಪ್ವಾಙ್ ನುಮ್ ವ್ಯವಾಯೇಽಪಿ[3]

ಪ್ರಾಧ್ಯಾಪಕ ತೀ. ನಂ. ಶ್ರೀ. ಯವರು ಈ ವಾದಕ್ಕೆ ಸಮಂಜಸವಾದ ಉತ್ತರ ಕೊಡುತ್ತಾ ಹೇಳಿದ ಮಾತುಗಳು ಬೆಲೆಯುಳ್ಳವಾಗಿವೆ—"ಒಂದು ಶಬ್ದರೂಪವು ಸಾಧುವೇ, ಅಸಾಧುವೇ ಎಂದು ನಿರ್ಣಯಿಸುವುದರಲ್ಲಿ ಶಿಕ್ಷಾಶಾಸ್ತ್ರ, ಭಾಷಾಗತಿ, ಶಿಷ್ಟಸಮ್ಮತಿ, ಇವೆಲ್ಲವನ್ನೂ ಗಮನಕ್ಕೆ ತಂದುಕೊಳ್ಳಬೇಕು. 'ಕರ್ಣಾಟಕ'ವೆಂಬ ಮೂರ್ಧನ್ಯ ಸಹಿತ ರೂಪವು ಪಾಣಿನಿ ಸಮ್ಮತವಾದುದ್ದು, ಕನ್ನಡನಾಡಿನ ಒಂದು ಭಾಗದಲ್ಲಿ (ಮುಖ್ಯವಾಗಿ ಮೈಸೂರಿನಲ್ಲಿ) ಬಹುಮಟ್ಟಿಗೆ ಬಳಕೆಯಲ್ಲಿರತಕ್ಕದ್ದು. ಆದ ಕಾರಣ ಅದರ ಉಚ್ಚಾರಣೆ ಕಠಿಣವಾದರೂ, ಶಿಕ್ಷಾಶಾಸ್ತ್ರದ ಬೆಂಬಲವು ಅದಕ್ಕಿಲ್ಲದೇ ಹೋದರೂ ಅದು ಸರ್ವಥಾ ತ್ಯಾಜ್ಯವೆಂದು ಹೇಳಲಾಗುವುದಿಲ್ಲ. ಕರ್ನಾಟಕ ಎಂಬ ರೂಪವಾದರೋ ಹೆಚ್ಚು ಯುಕ್ತಿಯುಕ್ತವಾದದ್ದು, ಉಚ್ಚಾರಣೆಗೆ ಸುಲಭವಾದದ್ದು, ಕನ್ನಡನಾಡಿನ ಉತ್ತರ ಭಾಗದಲ್ಲೆಲ್ಲಾ ರೂಢಿಯಾಗಿರತಕ್ಕದ್ದು. ಇದನ್ನು ಅಸಾಧು ವೆಂದು ಹೊರದೂಡುವುದು ಹಾಗಿರಲಿ ; ಮೂರ್ಧನ್ಯ ಸಹಿತ ರೂಪಕ್ಕಿಂತ ಹೆಚ್ಚು ಉಪಾದೇಯವೆಂದು ಹೇಳಲು ಮನಸ್ಸಿಲ್ಲದಿದ್ದರೆ ಅದರಷ್ಟೇ ಸಾಧುವೆಂದಾದರೂ ಒಪ್ಪಲೇ ಬೇಕು. ಸದ್ಯಕ್ಕೆ ಎರಡು ರೂಪಗಳನ್ನು ಅಂಗೀಕರಿಸೋಣ. ಸಂಸ್ಕೃತದಲ್ಲೇ ಕೋಷ-ಕೋಶ, ಪೃಥ್ವೀ-ಪೃಥಿವೀ, ಮೊದಲಾದ ಜೋಡಿಗಳಿಲ್ಲವೆ ? ಕರ್ಣಾಟಕ-ಕರ್ನಾಟಕ

[1] ಡಾ॥ ಬಿ. ಎ. ಸಾಲೆತೊರೆ, ಕನ್ನಡನಾಡಿನ ಚರಿತ್ರೆ, ೧೯೪೧, ಪು ೬

[2] ಪಾಣಿನಿ, ಅಷ್ಟಾಧ್ಯಾಯಿ, ೮-೪-೧

[3] ಅದೇ, ೮-೪-೨

ಗಳಲ್ಲಿ ಕೊನೆಗೆ ಯಾವುದು ನಿಲ್ಲಬೇಕೆಂಬುದನ್ನು ಕಾಲಪುರುಷನು ನಿರ್ಣಯಿಸಲಿ."[1]

ಈ ಸಮಸ್ಯೆ ಇಲ್ಲಿಗೆ ಮುಗಿಯಲಿಲ್ಲ. ಕರ್ನಾಡು, ಕರ್ + ನಾಡು, ಕರುನಡಂ, ಕಮ್ಮಿತು + ನಾಡು—ಹೀಗೆ ಇರುವ ರೂಪಗಳಲ್ಲಿ ಯಾವುದು ಸರಿ ? ಯಾವುದರ ಅರ್ಥವಿವರಣೆ ಸಮಂಜಸ ? ರೆವೆರೆಂಡ್ ಎಫ್ ಕಿಟೆಲ್, ಗುಂಡರ್ಟ್, ಕಾಲ್ಡ್‌ವೆಲ್ ಮೊದಲಾದವರು ಕರ್ನಾಡು > ಕನ್ನಡ ಆಯಿತೆಂದು ಭಾವಿಸಿದ್ದಾರೆ; ಕನ್ನಡಿ, ಕನ್ನಡು—ಎಂಬ ರೂಪಾಂತರಗಳನ್ನೂ ಅವರು ತಮ್ಮ ವಾದದ ಬಲಕ್ಕಾಗಿ ಉಪಯೋಗಿಸಿಕೊಂಡಿದ್ದಾರೆ. ಕನ್ನಡ, ಕನ್ನಡಿ, ಕನ್ನಡು ಈ ರೂಪಗಳಲ್ಲಿ ರೇಫ ಇಲ್ಲವಲ್ಲಾ ಎಂದು ಕೇಳಿದರೆ, ಕರ್ನೆಯ್ದಿಲ್ > ಕನ್ನೆಯ್ದಿಲ್ (ಲೆ) ಆದಂತೆ ಇಲ್ಲಿಯೂ ರೇಫ ಲೋಪವಾಗಿದೆಯೆಂದು ತಿಳಿಸುವರು.

ಕರ್ + ನಾಡು, ಎಂಬ ಪದಚ್ಛೇದದಲ್ಲಿ ಕರ್ ಎಂಬುದು ಮೂಲಧಾತು. ಕರ್ ಧಾತುವಿಗೆ ಕಪ್ಪು ಎಂದು ಅರ್ಥ – ಕರ್ಪು > ಕಪ್ಪು – ಆದದ್ದು ಹೀಗೆ.[2] ಕರ್ನಾಡು ಎಂದರೆ ಕರಿಯನೆಲ, ಅದು ಕ್ರಮೇಣ ವಿಕಾಸಗೊಂಡು ಕನ್ನಡ ಆಯಿತು. ಕನ್ನಡ ಶಬ್ದವೇ ಸಂಸ್ಕೃತದಲ್ಲಿ ಕರ್ನಾಟ ಎಂದಾಯಿತು. ಕನ್ನಡ ಎಂಬ ಶಬ್ದವೇ ಪ್ರಾಚೀನ. ಏಕೆಂದರೆ ಕವಿರಾಜಮಾರ್ಗದಲ್ಲಿ ಕನ್ನಡ, ಪಟಿಗನ್ನಡ ಎಂದಿದೆಯೇ ಹೊರತು ಕರ್ಣಾಟ(ಕ) ಎಂದು ಪ್ರಯೋಗವಾಗಿಲ್ಲ. ಆಂಡಯ್ಯನೂ,

> ಕನ್ನಡದೊಳ್ಪಿನ ನುಡಿಯಂ
> ಮುನ್ನಿದಱಿಕೊಳೆ ನೋಡಿ ತಿಳಿದುಕೊಳ್ಳುದು ಚದುರಂ ।
> ರನ್ನದ ಕನ್ನಡಿಯಂ ನಲ
> ವಿನ್ನೋಡಿದವಂಗೆ ಕೂದದೇನಾದಪುದೇ ॥[3]

ಮತ್ತೆ ಕೆಲವರು 'ಕರುನಡಂ'-ಪದವೇ ಮೂಲವೆಂದು ಹೇಳಿ ಅದಕ್ಕೆ ಬೇರೆ ವಿವರಣೆಗಳನ್ನಿತ್ತಿದ್ದಾರೆ. ತಮಿಳು ಭಾಷೆಯಲ್ಲಿ ಕರು ಎಂದರೆ ಬೆಟ್ಟ, ಎತ್ತರ ಎಂಬರ್ಥ. ಕನ್ನಡನಾಡು ಎತ್ತರದಲ್ಲಿದೆ, ತಮಿಳುನಾಡು ತಗ್ಗಿನಲ್ಲಿದೆ. ಹೀಗಾಗಿ ಅವರಿಗಿಂತಲೂ ಎತ್ತರದಲ್ಲಿ ಇರುವ ದೇಶವನ್ನು ಕುರಿತು ಹೇಳಬೇಕಾದರೆ ಈ ಕರು ಪದವನ್ನು ಉಪಯೋಗಿಸಲೇಬೇಕಲ್ಲವೆ ? ಹಾಗೆ ಏನಾದರೂ ತಮಿಳು ಕಾವ್ಯಗಳಲ್ಲಿ ಉಲ್ಲೇಖವಿದೆಯೇ ನೋಡೋಣ. ಆಧಾರಗಳಿಲ್ಲದಿದ್ದರೆ ವಾದಕ್ಕೆ ಬೆಂಬಲ ಬರುವುದಿಲ್ಲ.

ತೊಲ್ಕಾಪ್ಪಿಯಮ್—ಹಳೆಯ ವ್ಯಾಕರಣದಲ್ಲಿ ಸೊಲ್ಲಧಿಕಾರಂ ವಿಭಾಗದಲ್ಲಿನ ೪೦೦ನೆಯ ಸೂತ್ರದ ವೃತ್ತಿಯಲ್ಲಿ ತಮಿಳುನಾಡಿನ ಸುತ್ತಮುತ್ತಲೂ ಇರುವ ೧೨ ನಾಡುಗಳ ಹೆಸರುಗಳು—ತುಳುವಂ, ಕೊಂಕಣಮ್, ಕುಡುಗಮ್, ಕೊಲ್ಲಮ್, ಕೂಪಮ್, ಕರುನಡಮ್, ವಡಗು, ತೆಲುಂಗು, ಕೂಡಂ; ಇದೇ ರೀತಿಯಲ್ಲಿ ನನ್ನೂಲ್ ಎಂಬ

---

[1] ಪ್ರೊ॥ ತೀ. ನಂ. ಶ್ರೀ, ಕಸಾಪಪ, ೨೩–೩, ೧೯೩೮, ಪು. ೧೬೨.

[2] ಹಂಪನಾ, ಕರ್ಪು ಎಂದರೇನು ? ಗುರುದೇವ, ಆಗಸ್ಟ್ ೧೯೬೪.

[3] ಆಂಡಯ್ಯ, ಕಬ್ಬಿಗರ ಕಾವ.

ಇನ್ನೊಂದು ವ್ಯಾಕರಣ ಗ್ರಂಥದಲ್ಲಿಯೂ ೨೭೩ನೆಯ ಸೂತ್ರಕ್ಕೆ ಬರೆದ ವೃತ್ತಿಯಲ್ಲಿ ತಮಿಳುನಾಡಿನ ಸುತ್ತಲೂ ಇದ್ದ ೧೭ ನಾಡುಗಳನ್ನು ಹೇಳಿದ್ದು ಅವುಗಳಲ್ಲಿ ಕನ್ನಡಮ್ ಎಂಬ ಉಲ್ಲೇಖವಿದೆ. ಇವು ಮೂರು ಉಲ್ಲೇಖಗಳಲ್ಲದೆ ೧೯ನೆಯ ಶತಮಾನದ (೧೮೪೦) ಮುರುಗುದಾಸನ ಪುಲವರ್ ಪುರಾಣದಲ್ಲಿ (ಕುಮಾರದೇವರ ಪರಿಚ್ಛೇದ) ಕರುನಾಡದೇಯ ಮುಟಿದುಂ ಪುರಂದು—ಕರುನಾಡದೇಶವಷ್ಟನ್ನೂ ಪೊರೆದು—ಎಂದಿದೆ. ತಮಿಳಿನ ಉದಾಹರಣೆಗಳಲ್ಲಿ ರೇಫವಿದೆ. ರೇಫರಹಿತ ನಿಷ್ಪತ್ತಿ ಯಾವುದೇ ಇರಲಿ, ಯಾರೇ ಹೇಳಿರಲಿ ಅದು ತೀರ ತಿರಸ್ಕೃತವಾಗುವ ಸಂಭವವಿದೆ.

ಕರುನಾಡು ಎಂಬುದು ಮೂಲ ರೂಪವಿದ್ದು (> ಕರ್ನಾಡು > ಕನ್ನಡ), ಮೇಲಣ ಸೀಮೆ, ಕಣಿವೆಯ ಮೇಲಣ ಭಾಗ (ಕರುಮಾಡ ಎಂಬ, ಕನ್ನಡ ಕಾವ್ಯಗಳಲ್ಲಿ ಬರುವ ಪದದೊಡನೆ ಹೋಲಿಸಿ) ಎಂಬ ಅರ್ಥವೂ ಇದ್ದಿರಬಹುದು. ಕರುನಾ(ಟು)ಡು ಪದದ ತದ್ವಿರುದ್ಧವಾದ ಪದವೇ, ಈ ಅರ್ಥದಲ್ಲಿ ಕೀಳ್ನಾಡು > ಕೀಟ್ನಾಟು.[1] ಆದರೆ ಕರ್ನಾಡು ಪದಕ್ಕೆ ಕಪ್ಪು (ನೆಲದ) ನಾಡು ಎಂಬುದೇ ಮೂಲಾರ್ಥವಿರಬೇಕು. ಮತ್ತೊಂದು ವಾದವೆಂದರೆ ಕಮ್ಮಿತು + ನಡೆ (ನಾಡು) > ಕನ್ನಡ—ಎಂಬುದು; ಕನ್ನಡ ಶಬ್ದದ ಮೊದಲರ್ಧವಾದ ಕಂ(=ಕಂಪು) ಭಾವನಾಮ. ಇದಕ್ಕೆ ನಡೆ ಎಂಬುದು ಸೇರಿ ಕನ್ನಡ ಆಯಿತೆಂದು ಕೆಲವರ ಹೇಳಿಕೆ. ಅಗಸ್ತ್ಯಮುನಿ ಅಮೃತ, ಅಮೃತ, ಅಮೃತ ಎಂಬುದನ್ನು 'ಅಮಿಟ್ದಮಿಟ್ದಮಿಟ್ದು' ಎಂದು ಉಚ್ಚರಿಸಿದುದರಿಂದ ತಮಿಟ್‌ಪದ ಬಂತೆಂದೂ ತಮಿಟು ಜೇನ್ಪಾತು-ತೇನ್‌ಮೊಟಿ—ಎಂದೂ ಹೇಳಿದ್ದಾರೆ. ಕನ್ನಡವೂ ಇದರಂತೆ ಕಂಪಿನನಾಡು ಎಂದು ಇವರ ವಿವರಣೆ.

ಭಾಷೆಗಳಿಗೆ ಒಳ್ಳೆಯ ಹುಟ್ಟನ್ನು ಹೇಳಬೇಕೆಂಬ ಸದ್ಭಾವನೆ ಈ ಅಭಿಪ್ರಾಯಗಳಿಗೆ ಪ್ರೇರಣೆ. ಆದರೆ ಕಮ್ಮಿತು + ನಾಡು > ಕಂನಾಡು > ಕನ್ನಡ—ಆಯಿತೆಂಬ ವಾದದ ಬಿರುಕು ರೇಫ ಹೇಗೆ ಬಂತೆಂಬುದಕ್ಕೆ ಉತ್ತರಿಸಲು ಅಸಮರ್ಥವಾಗಿರುವುದರಲ್ಲಿ ಅಡಗಿದೆ. ದಿವಂಗತ ಹ. ನಾರಾಯಣರಾಯರು 'ಕರ್ + ನಾಡು – ಕಪ್ಪು + ನೆಲ' ಎಂಬ ವ್ಯುತ್ಪತ್ತಿಯನ್ನು, 'ಕರಿಯ ಭೂಮಿಯ ಸೀಮೆಗೆ ಎರೆ ನಾಡೆಂದು ಹೇಳುವರು, ಕರಿಯ ನಾಡೆಂದಲ್ಲ' ಎಂಬ ಕಾರಣದಿಂದ ನಿರಾಕರಿಸಿ, 'ಕರುನಾಡು = ಎತ್ತರದಲ್ಲಿರುವ ನಾಡು' ಎಂಬ ಅಭಿಪ್ರಾಯವನ್ನು ಮುಂದಿಟ್ಟರು. ಕನ್ನಡನಾಡು ಎತ್ತರದಲ್ಲಿ ಇರುವ ನಾಡೆಂಬುದು ನಿಜ. ಸಮುದ್ರಮಟ್ಟಕ್ಕಿಂತಲೂ ಸು. ೧೫೦೦ ಅಡಿಗಳಿಗಿಂತಲೂ ಇನ್ನೂ ಹೆಚ್ಚಿನ ಎತ್ತರದಲ್ಲಿರುವ ಭಾಗಗಳೂ ಇವೆ, ದಕ್ಷಿಣ ಕನ್ನಡ ಜಿಲ್ಲೆಯ ಭಾಗವನ್ನು ಬಿಟ್ಟು. ಆದುದರಿಂದಲೇ ಘಟ್ಟದಮೇಲೆ, ಘಟ್ಟದ ಕೆಳಗೆ ಎಂಬ ಹೆಸರುಗಳು ಇಂದಿಗೂ ಬಳಕೆಯಲ್ಲಿರುವುದು.

"....ಉಪ್ಪರಿಗೆಯ ಮನೆಗೆ ಕರುಮಾಡ ಅನ್ನುವಂತೆ ದೇಶೀಯರು ತಮ್ಮ ನಾಡಿಗೆ

---

1 ಕಾರ್‌ನಾಡು, ಪೂನಾಡು, ಸೀರನಾಡು, ಬಡಗನಾಡು, ಮಲೆನಾಡು ಮುಂತಾದ ಶಬ್ದಗಳನ್ನು ಗಮನಿಸಬಹುದು.

'ಕರುನಾಡು' ಎಂದು ನಾಮಕರಣವನ್ನು ಮಾಡಿ, ಇದು ದ್ರಾವಿಡ ಭಾಷೆಗಳಲ್ಲಿ 'ಕನ್ನಡ' ಎಂಬಂತೆಯೂ, ಸಂಸ್ಕೃತದಲ್ಲಿ ಕರ್ಣಾಟ ಎಂಬುದಾಗಿಯೂ ಪರಿವರ್ತಿಸಿರಬಹುದು"[1] ಎಂಬುದು ಹತ್ತಂಗಡಿ ನಾರಾಯಣರಾಯರ ಸೂಚನೆ. ಆದರೆ ಕರುನಾಡು ಪದದ ಪ್ರಯೋಗ ತಮಿಳು ಕಾವ್ಯಗಳಲ್ಲಿ ದೊರೆತಿದೆಯೇ ಹೊರತು ಹಳೆಯ ಕನ್ನಡ ಗ್ರಂಥ ಗಳಲ್ಲಾಗಲಿ—ಶಾಸನಗಳಲ್ಲಾಗಲಿ ಪ್ರಯೋಗವಾದಂತೆ ಕಾಣುವುದಿಲ್ಲ. ತಮಿಳು ಭಾಷೆಯ ವರ್ಣಮಾಲೆಯ-ಧ್ವನಿಯ ರಚನೆಯಲ್ಲಿ ಕರ್ನಾಟ—ಕರ್ನಾಡು > ಕರುನಾಟ- ಕರುನಾಡು ಆಗುವುದು ಸಾಧ್ಯವಿದೆ ; ಸಂಯುಕ್ತಾಕ್ಷರಗಳನ್ನು—ಅದು ಸಂಸ್ಕೃತದಿಂದ ಅಥವಾ ಬೇರೆ ಭಾಷೆಯಿಂದ ಬಂದಿರಲಿ—ಬಿಡಿಸಿ ಬರೆಯುವ ಹಾಗೂ ಉಚ್ಚರಿಸುವ ಪದ್ಧತಿ ತಮಿಳು ಭಾಷೆಯಲ್ಲಿದೆ. ಹೀಗಾಗಿ ಕರುನಾಡು ( > ಕನ್ನಡ) ವ್ಯುತ್ಪತ್ತಿ ದುರ್ಬಲವಾಗಿ ಪರಿಣಮಿಸಿತು. ಮುಂದೆ ಸ್ವತಃ ಹ. ನಾರಾಯಣರಾಯರೆ ಈ ನಿರುಕ್ತ ದಲ್ಲಿನ ನಂಬುಗೆಯನ್ನು ತೊರೆದರು.

ಕನ್ನಡ ಎಂಬ ಶಬ್ದ ಕೂಡು ನುಡಿಯೇ ಹೊರತು ಅಖಂಡ ಪದವಲ್ಲವೆಂಬುದನ್ನು ಬಹುಮಟ್ಟಿಗೆ ಎಲ್ಲ ವಿದ್ವಾಂಸರೂ ಒಪ್ಪಿದ್ದಾರೆ. ಆದರೆ ಈ ಸಮಾಸ ಪದವನ್ನು ನಿರ್ಧರಿಸುವಲ್ಲಿ ಎಲ್ಲ ವಾದ ವಿವಾದಗಳೂ ಕೇಂದ್ರೀಕೃತವಾಗಿವೆ. ಕರುನಾಡು ಎಂಬ ಪದವನ್ನೇ ತೆಗೆದುಕೊಂಡರೆ ಅದಕ್ಕೆ ಎತ್ತರದ ನಾಡು ಎಂದು ಒಬ್ಬಿಬ್ಬರು ಅರ್ಥೈಸಿದ್ದರೆ ಇನ್ನೊಬ್ಬರು ಕರುನಾಡು=ಮಹಾರಾಷ್ಟ್ರ ಎಂದು ತಿಳಿಸಿದ್ದಾರೆ: ಆಲ್‌ಫ್ರೆಡ್ ಮಾಸ್ಟರ್ ಮತ್ತು ರಾ. ಹ. ದೇಶಪಾಂಡೆ—ಇವರು ಈ ವಿವರಣೆಯನ್ನು ಅನುಮೋದಿಸಿ ದ್ದಾರೆ. ಈ ವಿಚಾರಸರಣಿಯನ್ನು ವಿಸ್ತರಿಸುತ್ತಾ ಮಂ. ಗೋವಿಂದಪೈಯವರು ಕರಂ, ಕರು ಮತ್ತು ಕಡು ಎಂಬೀ ಮೂರು ಪದಗಳಿಗೂ ದೊಡ್ಡ, ವಿಸ್ತೀರ್ಣ, ಮಹಾ ಎಂಬ ಅರ್ಥವೆಂದೂ, ಕರು (ಕರ್) + ನಾಡು = ಕರ್ನಾಡು = ಮಹಾರಾಷ್ಟ್ರ ಎಂಬುದು ಸರಿಯಾದ ನಿಷ್ಪತ್ತಿಯೆಂದೂ ಭಾವಿಸಿದ್ದಾರೆ. ಕರ್ನಾ(ರ್ಣಾ)ಟಕ ಹಾಗೂ ಮಹಾರಾಷ್ಟ್ರ ಎಂಬ ಪದಗಳು ಏಕಾರ್ಥಕವಾದ ಭಿನ್ನ ನಾಮಗಳೆಂಬುದನ್ನು ಸೋದಾಹರಣ ಪೂರ್ವಕ ವಾಗಿ ಸಮರ್ಥಿಸುತ್ತಾ '....ಮಹಾರಾಷ್ಟ್ರವೂ ಕರ್ನಾಟಕವೂ ಒಂದೇ ರಾಜ್ಯದ ಭಿನ್ನ ನಾಮಗಳೇ ಸರಿ....ಕರ್ಣಾಟ=ಕರುನಾಡು (ಮಹಾರಾಷ್ಟ್ರ) ಎಂಬುದು ನಿಶ್ಚಿತ"[2]— ಎಂದು ಹೇಳಿದ್ದಾರೆ.

ಆದರೆ ಹ. ನಾರಾಯಣರಾಯರ ವಾದಕ್ಕೆ ಎದ್ದ ಅದೇ ಆಕ್ಷೇಪಗಳು ಇಲ್ಲಿಯೂ ಕಾಣುತ್ತವೆ. ಪೈಗಳವರ ವಾದದ ಮೂಲಾಧಾರವಾದ ಕರುನಾಟು ಪದವೇ ಕನ್ನಡ ಪದದ ತಮಿಳಿನ ರೂಪಾಂತರವೆಂದು ತೋರುತ್ತಿರುವುದರಿಂದ ಅವರ ನಿರುಕ್ತಿಯ ಬುಡ ಸಡಿಲವಾಗಿ ಕುಸಿಯುತ್ತದೆ. "ಶ್ರೀಮಾನ್ ಪೈಗಳವರ ಸುಂದರವಾದ ಈ ವಿಚಾರ

---

[1] *Bombay Branch of the Royal Asiatic Society Journal*, L xxi.

[2] ಮಂ. ಗೋ. ಪೈ ಕಂಠೀರವ, ದಸರಾ ವಿಶೇಷ ಸಂಚಿಕೆ, ೧೯೩೪.

ಸರಣಿಯು ಬಹಳ ಮೋಹಕವಾಗಿದೆ ಒಪ್ಪಿಕೊಂಡುಬಿಡಬೇಕೆಂದೂ ಮನಸಾಗುತ್ತದೆ. ಆದರೆ....ನಾರಾಯಣರಾಯರ 'ಕರುನಾಡು' ಎಂಬ ನಿರುಕ್ತವನ್ನು ಕುರಿತು ಹೇಳಿದ ಆಕ್ಷೇಪಣೆಗಳೇ ಇಲ್ಲಿಯೂ ಎದ್ದು ನಿಲ್ಲುತ್ತಲಿವೆ, ಕರುನಾಡು ಎಂಬ ಪದವು ಕೇವಲ ತಮಿಳರದು. ತಮಿಳರ ಹೊರಗೆ ಯಾರ ಬಾಯಿಯಲ್ಲೂ ಈ ಮಾತಿಗೆ ಎಡೆಯಿಲ್ಲ! ತೆಲುಗು, ಮರಾಠಿ, ತುಳು, ಕೊಡಗು ಭಾಷೆಗಳಲ್ಲಿ ಒಂದರಲ್ಲಿಯೂ ಕರುನಾಡು ಪದವು ಕೇಳಲಿಕ್ಕೆ ಸಿಕ್ಕುವುದಿಲ್ಲ. ಸುಮಾರು ೧೦೦೦ ವರುಷಗಳ ಕನ್ನಡ ಸಾಹಿತ್ಯದಲ್ಲಿ ಎಲ್ಲಿ ಒಂದೆಡೆಗಾದರೂ 'ಕರುನಾಡು' ಬಂದಿದ್ದರೆ ಆಣೆ. (ಕರುನಾಡ > ಕರ್ನಾಟ > ಕನ್ನಡ ಆಯಿತೆಂದು ಒಪ್ಪುವುದರಿಂದ) ಕನ್ನಡದ ನಾಮಕರಣ ವಿಧಿಯು ಕೇವಲ ತಮಿಳರಿಂದಲೇ ಆಯ್ತೆಂದು ಊಹಿಸಬೇಕಾಗುತ್ತದೆ" ಎಂದು ಶಂ. ಬಾ. ಜೋಶಿಯವರು ಹೇಳಿದ್ದಾರೆ.[1]

ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್‌ಬಹಾದುರ್ ರಾ. ನರಸಿಂಹಾಚಾರ್ಯರು ಕನ್ನಡ ಶಬ್ದದ ವ್ಯುತ್ಪತ್ತಿಯನ್ನು ಕುರಿತು ತಮಿಳು ತೆಲುಗುಗಳಂತೆ ಕನ್ನಡದಲ್ಲಿ ಗ್ರಂಥರಚನೆ ಯಾವುದಾದರೂ ಒಬ್ಬ ಋಷಿಯಿಂದ ಆರಂಭವಾದಂತೆ ಪ್ರತೀತಿಯಿಲ್ಲವೆಂದೂ, ಕನ್ನಡ ಎಂಬ ಪದದ ಮೊದಲರೂಪ ಕನ್ನಾಡು, ಬಳಿಕ ಇದು ಕನ್ನಡು ಎಂದೂ ತರುವಾಯ ಕನ್ನಡ ಎಂದೂ ಆಗಿರಬೇಕೆಂದು ತಿಳಿಸಿದ್ದಾರೆ. ಮುಂದುವರಿದು ಈ ಬಗ್ಗೆ ಅವರು ಹೇಳಿದ ವಿವರಣೆ: "ಕರಿಯನಾಡು ಎಂಬ ವ್ಯುತ್ಪತ್ತಿ ಹೊರಗಣವರಿಗೆ ಉಚಿತವಾಗಿ ತೋರಬಹುದು. ಆದರೆ ಕನ್ನಡಿಗರು ತಮ್ಮ ಭಾಷೆಯನ್ನು 'ಕರಿಯನಾಡಿನ ಭಾಷೆ' ಎಂದು ಕರೆದಿರಲಾರರು. ತಮಿಳರೂ ತೆಲುಗರೂ ತಂತಮ್ಮ ಭಾಷೆಗಳ ಹೆಸರುಗಳು ಮಾಧುರ್ಯವಾಚಿಯಾದ ಪದಗಳಿಂದ (ತಮಿಳ್: ತೇನೆ) ಹುಟ್ಟಿದುವೆಂದು ಹೇಳುತ್ತಾರೆ. ಕನ್ನಡಿಗರೂ ತಮ್ಮ ಭಾಷೆಯ ಹೆಸರು ಒಂದು ಸುಗುಣವಾಚಿಯಾದ ಶಬ್ದದಿಂದ ಹುಟ್ಟಿದೆ ಎಂದು ಭಾವಿಸಿದರೆ ಆಕ್ಷೇಪಣೆಗೆ ಕಾರಣವಿಲ್ಲ. ಈ ಶಬ್ದವು ಪರಿಮಳವಾಚಿಯಾದ ಕಮ್ಮಿತು ಎಂಬುದು. ಕಮ್ಮಿತು, ನಾಡು ಎಂಬ ಪದಗಳು ಸೇರಿ ಕನ್ನಾಡು ಎಂದು ಆಗಿವೆ. ಕನ್ನಾಡು ಎಂಬುದು ಕನ್ನಡು ಎಂದಾಗಿ ಕೊನೆಗೆ ಕನ್ನಡ ಎಂಬ ರೂಪವನ್ನು ಹೊಂದಿತು. ಅಂತು ಕನ್ನಡ ಎಂಬ ಪದಕ್ಕೆ 'ಪರಿಮಳ ವಿಶಿಷ್ಟವಾದ ದೇಶದ ಭಾಷೆ'—ಎಂದು ಅರ್ಥವಾಗುವುದು. ಕನ್ನಡ ದೇಶವು ಗಂಧದ ಮರದ ಕಾಡುಗಳಿಗೂ, ಪದ್ಮಾಕರಗಳಿಗೂ ಪ್ರಸಿದ್ಧಿಯನ್ನು ಪಡೆದಿರುವುದರಿಂದ ಈ ವಿಶೇಷಣವು ಅದಕ್ಕೆ ಅನುರೂಪವಾದುದು ಎಂಬುದರಲ್ಲಿ ಸಂಶಯವಿಲ್ಲ."[2]—ಹೀಗೆಂದು ನುಡಿದು

ಕಮ್ಮಿತ್ತಾದುದು ನಾಡು ನುಡಿಯಿಂ । ಕಮ್ಮಿತಾದು ನಾಡು ನುಡಿಯಿಂ
ಕಮ್ಮಿತ್ತಾದುದು ಚಂದನೋರ್ವೀರುಹದಿನೀ ನಾಡು ॥

---

[1] ಶಂ. ಬಾ. ಜೋಶಿ ಕನ್ನಡದ ನೆಲೆ, ೧೯೫೨, ಪು. ೮೩.
[2] ಕರ್ನಾಟಕ ಕವಿಚರಿತೆ, ಮೂರನೆಯ ಸಂಪುಟ, ೧೯೨೯, ಮುನ್ನುಡಿ, ಪುಟ xvi.

ಕಮ್ಮಿತಾದುದುಕಮ್ಮಯಿಸುವಾ । ಕಮ್ಮರಲ್ಗಳಿನಿನಿತುಕಂಪಿಂ
ಕಮ್ಮಿತಲ್ಲದೆ ಕರ್ಪು ಕನ್ನಡಕೆಂತು ಸಮನಿಸಿತು ॥[1]

ಎಂಬ ಪದ್ಯವನ್ನು ಉದಾಹರಿಸಿದ್ದಾರೆ.

ಆದರೆ ತಮಿಳು-ತೆಲುಗು ಭಾಷೆಯವರು ತಮ್ಮ ಭಾಷೆಗಳಿಗೆ ಯಾವ ಬಗೆಯ ಹುಟ್ಟು ಹೇಳಿರುವರೋ ಅದೇ ರೀತಿಯ ಮೂಲವನ್ನು ಕನ್ನಡಕ್ಕೂ ಏಕೆ ಹುಡುಕಬೇಕು? ಋಷಿಗಳಿಂದ ಭಾಷೆ ಹುಟ್ಟಿತೆಂಬುದು ಋಷಿಗೆ ಹೇಳಿದ ಕುಶಾಲು ಮಾತೇ ಹೊರತು ಸತ್ಯಸಂಗತಿಯಲ್ಲ. ಯಾವ ಭಾಷೆಯೂ ಒಬ್ಬನಿಂದ ಹುಟ್ಟಿ ಬೆಳೆಯಲು ಸಾಧ್ಯವಿಲ್ಲ. ತೆಲುಗು-ತಮಿಳು ಪದಗಳು ಭಾಷಾವಾಚಕವೆಂದು ಭಾವಿಸಿದುದೇ ಮೊದಲು ಮಾಡಿದ ತಪ್ಪು. ಆ ಪದಗಳು ಭಾಷಾವಾಚಕ ಪದಗಳಾಗಿರದೆ ದೇಶವಾಚಕಗಳಾಗಿರಬಹುದು. "ಶ್ರೀಮಾನ್ ಆರ್. ನರಸಿಂಹಾಚಾರ್ಯರು ತೆಲುಗು-ತಮಿಳಿನ ಅಭಿಮಾನಿಗಳು ಹೇಳುವ ವ್ಯುತ್ಪತ್ತಿಯನ್ನು ನೆರೆನಂಬಿ ಅವುಗಳ ಜಾಡುಹಿಡಿದು ನಡೆದುದರಿಂದ ಇವರ ನಿರುಕ್ತವು ಕೂಡ, ಅಭಿಮಾನಯುಕ್ತವಾಗಿದ್ದರೂ ದಾರಿ ತಪ್ಪಿದೆ"[2] ಎಂದು ಶಂ. ಬಾ. ಜೋಶಿ ಯವರ ಅಭಿಪ್ರಾಯ. ಆದರೂ ನರಸಿಂಹಾಚಾರ್ಯರ, [ಕಮ್ಮಿತು + ನಾಡು > ಕನ್ನಾಡು > ಕನ್ನಡು > ಕನ್ನಡ] ವಾದ ಪರಿಭಾವಿಸಲು ಅರ್ಹವಾಗಿದೆ ಅಷ್ಟೆ. ಇತರ ವಾದಗಳು :

೧. ಕನ್ (= ಒಡಮೂಡು) + ಅಳ್ (= ಉಳ್ಳುದು) > ಕನ್ನಳ್ > ಕನ್ನಡ್ > ಕನ್ನಡ

೨. ಕನ್ ಕಣ್ (= ಕನ್ನರೆ) + ನಾಡು > ಕನ್ನಾಡು > ಕನ್ನಾಡ > ಕನ್ನಡ

೩. ಸಿ. ಪಿ. ಬ್ರೌನ್ ಎಂಬಾತ ಉತ್ತರ ಅಮೆರಿಕದ ಕೆನಡ (Canada) ದಿಂದ ಕನ್ನಡಬಂದಿದೆಯೆಂದೂ, ಕೆ (ಕ) ನಡ-ಎಂದರೆ ನಮ್ಮಲ್ಲಿ ಏನೂ ಇಲ್ಲ (We have nothing) ಎಂಬ ಅರ್ಥವೆಂದೂ ಬರೆದನು![3]

ಇದುವರೆಗಿನ ಈ ಎಲ್ಲ ವಿವರಣೆಗಳೂ-ಕೇವಲ ಒಂದೆರಡು ನಿರೂಪಣೆಗಳ ಹೊರತಾಗಿ ಬಹುಮಟ್ಟಿಗೆ ಅಸಮರ್ಪಕ, ಅಸಾಧುವೆಂದು ತೋರುತ್ತವೆ. ಕರ್ನಾಡು (ಕಪ್ಪುದೇಶ) > ಕನ್ನಡ ಆಗಿದೆಯೆಂಬುದೇ ಸರಿಯಾದ ನಿಷ್ಪತ್ತಿಯೆಂದು ಭಾವಿಸಬಹುದು. ಕರು ಎಂಬ ಪದಕ್ಕೆ ಕಪ್ಪು, ದೊಡ್ಡ, ಕ್ರೂರ, ಬಲಿಷ್ಠ, ಎತ್ತರ, ಪುಷ್ಟಿ—ಎಂಬ ಅರ್ಥ ಗಳಿವೆ, 'ಗುಣಕರುಗೊಂಡಂ' (ಅಚ್ಚೊತ್ತುಕೊಂಡ) ತಾಯ್ಗರು (= ಮೂಲ ಅಚ್ಚು) ಎಂಬ ಪ್ರಯೋಗಗಳನ್ನು ಬಿಟ್ಟರೆ ಅಚ್ಚು ಅಥವಾ ಎರಕ ಎಂಬ ಅರ್ಥ ಈ ಪದಕ್ಕೆ ಇತರ ಕಡೆಗಳಲ್ಲಿ ಇಲ್ಲ. ಕರು ಎಂಬ ಪದ ಕಪ್ಪು ಎಂಬ ಅರ್ಥದಲ್ಲಿಯೇ ಕನ್ನಡದಲ್ಲಿ ಹೆಚ್ಚಾಗಿ ಪ್ರಯೋಗದಲ್ಲಿರುವುದು. ಕರುನಾಡು > ಕರ್ನಾಡು > ಕನ್ನಡ—ಇದು ಸತ್ಯಕ್ಕೆ ಸರಿಯೆಂದು ತೋರುವ ವಾದ.

---

[1] ಉದ್ಗಾಯನ ಚರಿತೆ, ತಾತಾಚಾರ್ಯ

[2] ಕನ್ನಡದ ನೆಲೆ, ಶಂಬಾ. ಜೋಶಿ, ೧೯೫೭, ಪು. ೮೪

[3] ನಾಗವರ್ಮನ ಕರ್ನಾಟಕ ಭಾಷಾ ಭೂಷಣ, ೧೮೮೪, ಪು.V , ಅಡಿಟಿಪ್ಪಣಿ

# ಕನ್ನಡ ವರ್ಣಮಾಲೆ

ಅಕ್ಷರ ಎಂಬ ಶಬ್ದದ ವ್ಯುತ್ಪತ್ತಿಯನ್ನು ಕುರಿತು ಪ್ರಾಚೀನ ಗ್ರಂಥಗಳಲ್ಲಿ ಬಗೆಬಗೆಯ ಜಿಜ್ಞಾಸೆ ನಡೆದಿದೆ. ಪತಂಜಲಿ ಮಹರ್ಷಿಯ ಮಹಾಭಾಷ್ಯದಲ್ಲೂ ಅಕ್ಷರದ ಪ್ರಸ್ತಾಪವಿದೆ. ಕ್ಷರ ಎಂದರೆ ನಷ್ಟವಾಗುವುದು, ಕ್ಷೀಣ ಅಥವಾ ನಾಶವಾಗುವುದು; ಅಕ್ಷರ ಎಂದರೆ ನಷ್ಟವಾಗದುದು, ಕ್ಷೀಣಿಸದುದು, ನಾಶವಾಗದ್ದು. ನಶ್ವರವಾದುದು ಕ್ಷರ, ಅನಶ್ವರವಾದುದು ಅಕ್ಷರ 'ಯದ್ ಅಕ್ಷರತ್ ತಸ್ಮಾದ್ ಅಕ್ಷರಮ್.'[1]

ಅಕ್ಷರ ಎಂಬ ಶಬ್ದವನ್ನು ಪ್ರಣವ, ಬ್ರಹ್ಮ ಎಂಬ ಅರ್ಥದಲ್ಲೂ ಪ್ರಯೋಗ ಮಾಡಿದ್ದಾರೆ. ಕ್ರಮೇಣ ವಿಭಜಿಸಲಾಗದುದು 'ಅಕ್ಷರ' ಎಂಬ ಅರ್ಥದಲ್ಲಿ ಇದು ರೂಢಿಗೆ ಬಂದಿತು. ಇಡಿ ಒಂದು ಪದಕ್ಕೆ ಅಕ್ಷರ ಎಂದು ಕರೆದಿರುವುದೂ ಉಂಟು. ಅಕ್ಷರ ಎಂಬುದು ಅನಂತರ ಶಬ್ದ, ಧ್ವನಿ—ಎಂಬ ಅರ್ಥದಲ್ಲಿ ಬಳಕೆಗೆ ಬಂದಿತು. ಹೀಗಾಗಿ ಅಕ್ಷರ ಮತ್ತು ವರ್ಣಗಳು ಸಮಾನಾರ್ಥಕ ಪರ್ಯಾಯ ಪದಗಳಾಗಿ ಪರಿಣಮಿಸಿದುವು—ಅಕ್ಷರವೆಂದರೆ ವರ್ಣ ಎಂಬ ಅರ್ಥವೇ ಇಂದಿಗೂ ಪ್ರಚಾರದಲ್ಲಿ ನಿಂತಿತು. ಅಕ್ಷರದ ತದ್ಭವವೇ ಅಕ್ಕರ ಎಂಬ ಪದ; ಅಕ್ಷರ ಸಮಾಮ್ನಾಯವೆಂದರೆ ವರ್ಣ ಸಮಾಮ್ನಾಯ.

ಸಾಮಾನ್ಯಾರ್ಥದಲ್ಲಿ ಅಕ್ಷರ ಮತ್ತು ವರ್ಣ ಪದಗಳನ್ನು ಸಮಾನಾರ್ಥಕವಾಗಿ ಬಳಸುತ್ತಿದ್ದೇವೆ, ಸರಿಯೆ. ಆದರೆ ಭಾಷಾವಿಜ್ಞಾನದ, ಅದರಲ್ಲಿಯೂ ಧ್ವನಿವಿಜ್ಞಾನದ ದೃಷ್ಟಿಯಿಂದ ಈ ಎರಡು ಪದಗಳನ್ನು ಪ್ರತ್ಯೇಕ ಅರ್ಥವುಳ್ಳ ಪ್ರತ್ಯೇಕ ಪದಗಳನ್ನಾಗಿಯೇ ಪರಿಗಣಿಸುವುದು ಅಗತ್ಯ. ಇಂಗ್ಲಿಷಿನ alphabet ಎಂಬ ಅರ್ಥದಲ್ಲಿ ವರ್ಣ ಎಂಬ ಪದವನ್ನೂ, syllable ಎಂಬ ಅರ್ಥದಲ್ಲಿ ಅಕ್ಷರ ಎಂಬ ಪದವನ್ನೂ ಬಳಸಬಹುದು. ಕೆಲವು ವಿದ್ವಾಂಸರು ಈಗಾಗಲೇ ಇದನ್ನು ಈ ಅರ್ಥದಲ್ಲಿ ಉಪಯೋಗಿಸುತ್ತಿದ್ದಾರೆ.

ಇನ್ನು ಈ ಅಕ್ಷರದಲ್ಲಿ ಎರಡು ವಿಧ—ಬದ್ಧಾಕ್ಷರ, ಮುಕ್ತಾಕ್ಷರ—ಎಂದು. ವ್ಯಂಜನಾಂತವಾಗಿ ನಿಲ್ಲುವುದು ಬದ್ಧಾಕ್ಷರ (closed syllable); ಸ್ವರಾಂತವಾಗಿ

[1] ಶತಪಥ ಬ್ರಾಹ್ಮಣ, VI. 1. 3. 6.

ನಿಲ್ಲುವುದು ಮುಕ್ತಾಕ್ಷರ (open syllable). ಕೆಲವು ಉದಾಹರಣೆಗಳನ್ನು ಗಮನಿಸಿದರೆ ಇದು ಖಚಿತವಾಗಿ ತಿಳಿಯುತ್ತದೆ.

ಬದ್ಧಾಕ್ಷರಗಳು :
ಕಲ್, ನಿಲ್, ಕೇಳ್, ಪೇಳ್

ಮುಕ್ತಾಕ್ಷರಗಳು :
ಕಲ್ಲು, ನಿಲ್ಲು, ಕೇಳು, ಪೇಳು > ಹೇಳು

ಕನ್ನಡ ಭಾಷೆಯ ವರ್ಣಮಾಲೆ ಇಂದಿನ ಶಾಲಾ ಕಾಲೇಜುಗಳ ಪುಸ್ತಕಗಳಲ್ಲಿ ಅಚ್ಚಾಗಿರುವಂತೆ—೧೪ ಸ್ವರಗಳು, ೨೫ ವರ್ಗೀಯ ವ್ಯಂಜನಗಳು, ಮತ್ತು ೯ ಅವರ್ಗೀಯ ವ್ಯಂಜನಗಳನ್ನು ಒಳಗೊಂಡಿದೆ.

ಈಗ ರೂಢಿಯಲ್ಲಿ ಇರುವಂತೆ ಕನ್ನಡ ವರ್ಣಮಾಲೆ ಇಂತಿದೆ :

### ಸ್ವರಗಳು

ಅ ಆ, ಇ, ಈ, ಉ ಊ, ಋ ೠ,
ಎ ಏ, ಐ ಒ, ಓ ಔ,

### ವರ್ಗೀಯ ವ್ಯಂಜನಗಳು

| | | | | |
|---|---|---|---|---|
| ಕ | ಖ | ಗ | ಘ | ಙ |
| ಚ | ಛ | ಜ | ಝ | ಞ |
| ಟ | ಠ | ಡ | ಢ | ಣ |
| ತ | ಥ | ದ | ಧ | ನ |
| ಪ | ಫ | ಬ | ಭ | ಮ |

### ಅವರ್ಗೀಯ ವ್ಯಂಜನಗಳು

ಯ ರ ಲ ವ ಶ
ಷ ಸ ಹ ಳ

| | | | | | |
|---|---|---|---|---|---|
| ಆ | ಾ | ತಲೆಕಟ್ಟು | ಊ | ೂ | ಕೊಂಬಿನಿಳಿ (ಕೊಂಬಿನ ದೀರ್ಘ) |
| ಆ | ಾ | ಇಳಿ | ಋ | ೃ | ವಟ್ಟೆಸುಡಿ (ಒಟ್ಟೆಸುಡಿ) |
| ಇ | ಿ | ಗುಡಿಸು | ೠ | ೄ | ವಟ್ಟೆಸುಡಿ ಇಳಿ |
| ಈ | ೀ | ಗುಡಿಸುದೀರ್ಘ | ಎ | ೆ | ಎತ್ವ |
| ಉ | ು | ಕೊಂಬು | ಏ | ೇ | ಏತ್ವ, ಎತ್ವದ ದೀರ್ಘ |
| ಐ | ೈ | ಐತ್ವ | ಔ | ೌ | ಔತ್ವ |
| ಒ | ೊ | ಒತ್ವ | ಕ | ್ಕ | ಕ ಒತ್ತು |
| ಓ | ೋ | ಓತ್ವ | | | |

## ವರ್ಗೀಯ ವ್ಯಂಜನಗಳು

| ವರ್ಗೀಕರಣ | ಪರುಷ | | ಸರಳ | | ಅನುನಾಸಿಕ |
|---|---|---|---|---|---|
| | ಅಲ್ಪ ಪ್ರಾಣ | ಮಹಾ ಪ್ರಾಣ | ಅಲ್ಪ ಪ್ರಾಣ | ಮಹಾ ಪ್ರಾಣ | |
| ಕಂಠ್ಯ ವರ್ಣಗಳು | ಕ್ | ಖ್ | ಗ್ | ಘ್ | ಙ್ |
| ತಾಲವ್ಯ ವರ್ಣಗಳು | ಚ್ | ಛ್ | ಜ್ | ಝ್ | ಞ್ |
| ಮೂರ್ಧನ್ಯ ವರ್ಣಗಳು | ಟ್ | ಠ್ | ಡ್ | ಢ್ | ಣ್ |
| ದಂತ್ಯ ವರ್ಣಗಳು | ತ್ | ಥ್ | ದ್ | ಧ್ | ನ್ |
| ಓಷ್ಠ್ಯ ವರ್ಣಗಳು | ಪ್ | ಫ್ | ಬ್ | ಭ್ | ಮ್ |

## ಅವರ್ಗೀಯ ವ್ಯಂಜನಗಳು

ಮಧ್ಯ ವರ್ಣಗಳು : ಯ, ರ, ಲ, ವ, ಳ

ಊಷ್ಮ ವರ್ಣಗಳು : ಶ, ಷ, ಸ, ಹ

ಇಪ್ಪತ್ತಾರು ಅಕ್ಷರಗಳ ಇಂಗ್ಲಿಷಿನ ವರ್ಣಮಾಲೆ ಕಲಿಯುವುದು ಸುಲಭ, ಅವುಗಳ ಸಂಖ್ಯೆ ಕಡಿಮೆ ; ತಮಿಳಿನಲ್ಲೂ ಅಷ್ಟೆ ; ಆದರೆ ಕನ್ನಡ ವರ್ಣಮಾಲೆ ಕಲಿಯುವುದು ಕಷ್ಟ, ಇಲ್ಲಿ ಅಕ್ಷರಗಳು ಅಧಿಕ, ಇದು ಶೀಘ್ರ ಲಿಪಿಗೂ ಮುದ್ರಣಕ್ಕೂ ತೊಡಕಾಗಿದೆ— ಇತ್ಯಾದಿಯಾದ ಅಭಿಪ್ರಾಯಗಳನ್ನು ಕೇಳುತ್ತಿರುತ್ತೇವೆ. ಆದರೆ ಈ ಹೇಳಿಕೆಗಳಲ್ಲಿ ಹುರುಳೂ ಇಲ್ಲ, ತಿರುಳೂ ಇಲ್ಲವೆಂದು ಹೇಳದೆ ವಿಧಿಯಿಲ್ಲ.

ಇಂಗ್ಲಿಷ್ ವರ್ಣಮಾಲೆಯನ್ನು ಕಲಿಯುವ ಎಳೆಯ ಮಗು ಇಂಗ್ಲಿಷ್ ಲಿಪಿಯ ಮೂರು ಬೇರೆ ಬೇರೆ ಪರಿಗಳನ್ನು ಕಲಿಯಬೇಕಾಗುತ್ತದೆ. ಅಂದರೆ ಪ್ರತಿಯೊಂದು ಇಂಗ್ಲಿಷ್ ವರ್ಣಕ್ಕೂ ದೊಡ್ಡಕ್ಷರ, ಎರಡು ಬಗೆಯ ಸಣ್ಣಕ್ಷರ, ಹೀಗೆ ಈ ಮೂರು ತೆರನಾದ ವರ್ಣಗಳನ್ನು ಆ ಚಿಕ್ಕ ಮಗು ಕಲಿಯಬೇಕು.

ಉದಾ :

(ಅ) ದೊಡ್ಡಕ್ಷರಗಳು : A, B, G, F, R....etc.

(ಇ) ಸಣ್ಣಕ್ಷರಗಳು : a, b, g, f, r....etc.

(ಉ) ,, *a, b, g, f, r*....etc.

ಹೀಗೆ ಬಗೆಬಗೆಯಾಗಿ ಇರುವ ಈ ವರ್ಣಮಾಲೆಯ ತಿರುವು ಮುರುವುಗಳನ್ನು ಕಲಿಯುವುದರಲ್ಲೇ ಆ ಪುಟ್ಟ ಮಗುವಿನ ಎಷ್ಟೊ ಅಮೂಲ್ಯ ವೇಳೆ ವೃಥಾ ಕಳೆದು ಹೋಗುತ್ತದೆ.

ಇನ್ನು ಇಂಗ್ಲಿಷ್ ವರ್ಣಮಾಲೆಯಿಂದ ಈ ನಾಡಿನ ಶಾಲಾ ಮಕ್ಕಳಲ್ಲಿ ಮೂಡುವ ಕೆಲವು ತೊಡಕುಗಳನ್ನು ಗಮನಿಸಬಹುದು. ಇಂಗ್ಲಿಷಿನ ಕೆಲವು ಅಕ್ಷರಗಳಿಗೆ ಒಂದೊಂದು ಅಕ್ಷರಕ್ಕೂ ಎರಡು ಅಥವಾ ಮೂರು-ನಾಲ್ಕು ಧ್ವನಿಗಳು, ವಿವಿಧ ಉಚ್ಚಾರಗಳು ಇರುತ್ತವೆ. 'C' ಎಂಬುದನ್ನು 'ಸಿ' ಎಂದು, ವರ್ಣಮಾಲೆಯನ್ನು ಕಲಿಸುವ ಕಾಲದಲ್ಲಿ ಶಾಲೆಯಲ್ಲಿ ಹೇಳಿಕೊಟ್ಟಿರುತ್ತಾರೆ.[1] ಆದರೆ ಆ ಕಾಲದಲ್ಲಿ ಚಿಕ್ಕ ಮಕ್ಕಳಿಗೆ ಈ ಧ್ವನಿಗೆ ಕೆಲವು ಪರಿಸರಗಳಲ್ಲಿ ಬೇರೆ ಉಚ್ಚಾರ ಉಂಟೆಂದು ತಿಳಿಸಿರುವುದಿಲ್ಲ—ಸಾಮಾನ್ಯವಾಗಿ. ಆದರೆ ಈ ಕೆಳಗಿನ ಉದಾಹರಣೆಗಳನ್ನು ನೋಡಿ :

Cat, Cinema, Cook, Cricket, Cap
Cycle, Cigaratte, Calender, Court
Psychology, Psysiology, Pen, Park
Milk, Bill, Will, Walk, Talk.

ಈ ಪದಗಳಲ್ಲಿ ಇರುವ ಕಾಗುಣಿತಕ್ಕೂ ಉಚ್ಚಾರಕ್ಕೂ ಇರುವ ಏರು ಪೇರುಗಳನ್ನು ಕುರಿತು ಯೋಚಿಸಿ. ಇಲ್ಲಿ ಕಾಣುವ ಅಸ್ತವ್ಯಸ್ತ ಸ್ಥಿತಿಯು ಗೊಂದಲ ತೊದಲುನುಡಿಯನ್ನು ಆಡುವ, ಎಳೆತನದಿಂದಲೂ ಇಂಗ್ಲಿಷ್ ಕಲಿಯತೊಡಗುವ ಕಾನ್ವೆಂಟ್ ಕಂದನಿಗೂ ಗಾಬರಿಯನ್ನು ಮೂಡಿಸಿದರೆ ಆಶ್ಚರ್ಯವಲ್ಲ. ಕನ್ನಡ ವರ್ಣಮಾಲೆಯಲ್ಲಿ ಈ ಗೊಂದಲ-ಗಾಬರಿಗಳು ಉಂಟೆ ?

ತಮಿಳಿನಲ್ಲಿ க [ಕ] ವರ್ಣ ಕ, ಗ ಗಳಿಗೂ, ப [ಪ] ವರ್ಣ ಪ, ಬ ವರ್ಣಗಳಿಗೂ, ட [ಟ] ವರ್ಣ ಟ, ಡ ಗಳಿಗೂ த [ತ] ವರ್ಣ ತ, ದ—ಗಳಿಗೂ ಸಂಕೇತಗಳಾಗಿವೆ. ಒಂದೇ ಲಿಪಿ ಬೇರೆ ಬೇರೆ ಧ್ವನಿಗಳಿಗೆ ಪ್ರತಿನಿಧಿಯಾಗಿದೆ. ಅವರು ಬರೆಯುವುದೇ ಒಂದು, ಓದುವುದೇ ಬೇರೊಂದು; காந்தி ಎಂದು [ಕಾಂತಿ] ಬರೆದು ಅದನ್ನೇ ಗಾಂಧಿ ಎಂದು ಓದಬೇಕು ಎಂಬಂತೆ ಪರಭಾಷೆಯವರಿಗೆ ತೋರಬಹುದು. ಆದರೆ ಅವರ ಬರವಣಿಗೆಯ ವ್ಯವಸ್ಥೆಯಲ್ಲಿ ಒಂದು ಚಿಹ್ನೆ ನಾಲ್ಕು ಧ್ವನಿಗಳನ್ನು ಪ್ರತಿನಿಧಿಸುತ್ತದೆ. ಇದು ಹೊಸದಾಗಿ ಭಾಷೆ ಕಲಿಯುವವರಿಗೆ ತೊಡಕಾಗಿ ತೋರಬಹುದು.

ಪ್ರತಿಯೊಂದು ವರ್ಣವೂ ಒಂದೊಂದು ಧ್ವನಿಯ ಸಂಕೇತವಾಗಿರಬೇಕು. ಅಥವಾ ಕೆಲವೊಮ್ಮೆ ಎರಡು ಮೂರು ಧ್ವನಿಗಳ ಸಂಕೇತವೂ ಆಗಿರಬಹುದು. ಈ ದೃಷ್ಟಿಯಿಂದ ಜಗತ್ತಿನ ವರ್ಣಮಾಲೆಗಳಲ್ಲಿ ಸಂಸ್ಕೃತ ವರ್ಣಮಾಲೆ ಧ್ವನ್ಯಾತ್ಮಕವಾಗಿದೆಯೆಂದು ವಿದ್ವಾಂಸರ ಅಭಿಪ್ರಾಯ. ಸಂಸ್ಕೃತದಲ್ಲಿ ಪ್ರತಿಯೊಂದು ವರ್ಣವೂ ಒಂದೊಂದು ಧ್ವನಿಯ ಪ್ರತಿನಿಧಿ. ಹಾಗಿರುವುದರಿಂದ ಅಲ್ಲಿ ಅಸ್ಪಷ್ಟತೆಗಾಗಲಿ, ಅರಾಜಕತೆಗಾಗಲಿ ಅವಕಾಶವಿಲ್ಲ. ಕನ್ನಡ ವರ್ಣಮಾಲೆ, ತೆಲುಗು ವರ್ಣಮಾಲೆಯಂತೆ,

[1] ಈ ಎರಡು ಪುಟಗಳಲ್ಲಿ ಬರುವ ಇಂಗ್ಲಿಷ್ ಹಾಗೂ ತಮಿಳು ಭಾಷೆಗಳ ಬರವಣಿಗೆಯ ವ್ಯವಸ್ಥೆಯನ್ನು ಕುರಿತ ವಿವರ ಟೀಕಿಸಲೆಂದು ನೀಡಿಲ್ಲ.

ಸಂಸ್ಕೃತ ವರ್ಣಮಾಲೆಯ ಆಧಾರದಿಂದ ರಚಿತವಾಗಿದೆ. ಈ ಎರಡು ಭಾಷೆಗಳ ವರ್ಣಮಾಲೆಯೂ ಸಂಸ್ಕೃತದ ಮಾದರಿಯನ್ನೇ ಬಹುವಾಗಿ ಅನುಸರಿಸಿವೆ. ಆದರಿಂದಾಗಿ ಇಲ್ಲಿಯೂ ಪ್ರತಿಯೊಂದು ವರ್ಣವೂ ಪ್ರತ್ಯೇಕ ಧ್ವನಿಯನ್ನು ಪ್ರತಿನಿಧಿಸುತ್ತದೆ. ಒಂದು ವರ್ಣ ಒಂದು ಧ್ವನಿಯ ಪ್ರತಿನಿಧಿ.

ಮೂಲ ದ್ರಾವಿಡ ಭಾಷೆಯ ಧ್ವನಿ ವ್ಯವಸ್ಥೆಯ ದೃಷ್ಟಿಯಿಂದ ವಿವೇಚಿಸುವಾಗ ಕೇಶಿರಾಜ ಸಂಸ್ಕೃತ ವರ್ಣಮಾಲೆಯನ್ನು ಕನ್ನಡಕ್ಕೂ ಅನ್ವಯಿಸಿ ಹೇಳಿದುದು ತಪ್ಪೆಂದು ಸಾಧಿಸೋಣ, ಸರಿಯೆ. ಆದರೆ ಅವನ ಕಾಲದ ಕನ್ನಡ ಭಾಷೆಯ ಧ್ವನಿ ವ್ಯವಸ್ಥೆಯ ಹಾಗೂ ಇಂದಿನ ಕನ್ನಡ ಭಾಷೆಯಲ್ಲಿರುವ ಧ್ವನಿ ವ್ಯವಸ್ಥೆಯ ದೃಷ್ಟಿಯಿಂದ ವಿಮರ್ಶಿಸುವಾಗ ಕೇಶಿರಾಜನ ವಿವರಣೆ ತಪ್ಪು ಎಂದು ಹೇಳುವುದು ಸರಿಯೆ ? ಹಾಗೆ ನೋಡುವುದಾದರೆ ಕೇಶಿರಾಜ ಕೊಟ್ಟ ವರ್ಣಮಾಲೆಯ ಲೆಕ್ಕದ ಪಟ್ಟಿಗೆ ಇನ್ನೂ ಎರಡು ಧ್ವನಿಮಾಗಳನ್ನು–ಫ ಮತ್ತು ಜ–ಸೇರಿಸಬೇಕಾಗುತ್ತದೆ ![1] ಆದುದರಿಂದ ಕೇಶಿರಾಜ ಕೊಟ್ಟಿರುವ ವರ್ಣಮಾಲೆ ಪಟ್ಟಿ ಉಚಿತವಾಗಿದೆ, ಗ್ರಾಹ್ಯವಾಗಿದೆ ಎನ್ನಬಹುದು. ಸಂಸ್ಕೃತದಿಂದ ಸಹಸ್ರಾರು ಸಂಖ್ಯೆಯ ಪದಗಳನ್ನು ತೆಗೆದುಕೊಂಡರೆ ತಪ್ಪೇನು ? ಕೇಶಿರಾಜನ ಈ ನಿರೂಪಣೆ ತಪ್ಪಾಗಿ ತೋರುವುದರ ಬದಲು ಅವನ ವಿವೇಕವನ್ನು ಸಾರುತ್ತದೆ, ಅವನ ಬುದ್ಧಿವಂತಿಕೆಯತ್ತ ಬೆರಳುಮಾಡಿ ತೋರಿಸುತ್ತದೆ.

ಕನ್ನಡದಲ್ಲಿ ೪೭ ವರ್ಣಗಳಿವೆಯಲ್ಲಾ ? ಈ ಸಂಖ್ಯೆ ದೊಡ್ಡದಾಯಿತಲ್ಲವೆ ? ಎಂದು ಕೆಲವರ ಪ್ರಶ್ನೆ. ಈ ಸಂಖ್ಯೆ ಅಷ್ಟೇನೂ ದೊಡ್ಡದಲ್ಲವೆಂದೇ ತಿಳಿಯಬೇಕು, ಏಕೆಂದರೆ ಚೀನೀ ಭಾಷೆಯಲ್ಲಿ ಸುಮಾರು ಹತ್ತು ಲಕ್ಷಕ್ಕಿಂತ ಹೆಚ್ಚಿನ ಅಕ್ಷರಗಳಿವೆಯಂತೆ ! ಈ ಅಕ್ಷರಗಳನ್ನು ಚೀನೀಯರು ಚಿತ್ರಲಿಪಿಯೆಂದು ಕರೆಯುವರು. ಚೀನೀ ಭಾಷೆಯ ಒಂದೊಂದು ಮಾತೂ ಒಂದೊಂದು ಅಕ್ಷರವಾಗಿರುತ್ತದೆ. ಹೀಗಾಗಿ ಆ ಭಾಷೆಯಲ್ಲಿ ಪಾಂಡಿತ್ಯ ಪಡೆಯುವುದು ಬಹು ಕಷ್ಟ. ಹೊಸಬರಿಗಂತೂ ಅವರ ಬಾಳಿನ ಬಹುಕಾಲ ಈ ಭಾಷೆಯ ಲಿಪಿ ಪರಿಚಯ ಪಡೆಯುವುದರಲ್ಲೇ ಪರ್ಯವಸಾನವಾಗುತ್ತದೆ. ಇದೇನೇ ಇರಲಿ ಕಾಲಕಾಲಕ್ಕೆ ವರ್ಣಮಾಲೆಯ ಸಂಸ್ಕರಣ—ಪರಿಷ್ಕಾರಗಳು ಅತ್ಯಗತ್ಯವಲ್ಲದಿದ್ದರೂ ಅಗತ್ಯವೆಂದು ತೋರುತ್ತದೆ. ಮೂಲ ದ್ರಾವಿಡದಲ್ಲಿ ಇಲ್ಲದಿದ್ದ ಕೆಲವು ವರ್ಣ (ಧ್ವನಿ)ಗಳನ್ನು ಕನ್ನಡದಲ್ಲಿ ಅಗತ್ಯವೆಂದು ತನ್ನ ಕಾಲಕ್ಕೆ ಕೇಶಿರಾಜ ಸೇರಿಸಿಕೊಂಡು ಹೇಳಿದ್ದರಲ್ಲಿ ತಪ್ಪಿಲ್ಲ.

ಕನ್ನಡ ವರ್ಣಮಾಲೆ, ತೆಲುಗು ವರ್ಣಮಾಲೆಯಂತೆ, ಸಂಸ್ಕೃತ ವರ್ಣಮಾಲೆಯನ್ನು ಅನುಕರಿಸಿವೆಯೆಂದು ಹಿಂದೆ ಹೇಳಿದೆ. ಕೇಶಿರಾಜ ಕನ್ನಡದಲ್ಲಿ ಒಟ್ಟು ೫೭ ವರ್ಣಗಳನ್ನು ಮೊದಲು ಹೇಳಿ, ಅನಂತರ ಅವುಗಳಲ್ಲಿ ಹತ್ತು ವರ್ಣಗಳನ್ನು, ಕನ್ನಡದಲ್ಲಿ

---

[1] ಹಂಪನಾ, ಕೇಶಿರಾಜ ಮತ್ತು ಶಬ್ದಮಣಿದರ್ಪಣ, ವೀರಭಾರತಿ, ೩–೯, ೧೯೬೧.

ರೂಢಿಯಲ್ಲಿ ಇಲ್ಲವೆಂದು ಅವನೇ ಕಳೆದುಬಿಡುತ್ತಾನೆ. ಹೀಗಾಗಿ ೨೫ ವರ್ಗೀಯ ವ್ಯಂಜನಗಳು, ೧೪ ಸ್ವರಗಳು, ೯ ಅವರ್ಗೀಯ ವ್ಯಂಜನಗಳು, ೪ ಯೋಗವಾಹಗಳು ಮತ್ತು ೫ ದೇಸೀಯ ವರ್ಣಗಳು—ಒಟ್ಟು ೫೭ ವರ್ಣಗಳಲ್ಲಿ ಹತ್ತು ವರ್ಣಗಳನ್ನು—ಮೂರು ಯೋಗವಾಹಗಳು ಮತ್ತು ನಾಲ್ಕು ಸ್ವರಗಳು ಹಾಗೂ ಮೂರು ವ್ಯಂಜನಗಳು—ತೆಗೆದು ಬಿಡುವುದರಿಂದ ಉಳಿಯುವ ೪೭ ವರ್ಣಗಳೇ ಅಚ್ಚಗನ್ನಡ ವರ್ಣಗಳೆಂಬುದು ಅವನ ಅಭಿಪ್ರಾಯ.

ದ್ರಾವಿಡ ಭಾಷೆಗಳಿಗೆ ಸೇರಿದಂತೆ ಮೂಲ ಕನ್ನಡ ಭಾಷೆಯ ಸಹಜ ಧ್ವನಿಗಳು ಎಷ್ಟು ?—ಎಂದು ಧ್ವನಿ ವಿಜ್ಞಾನದ ದೃಷ್ಟಿಯಿಂದ ವಿಮರ್ಶಿಸುವುದಾದರೆ ಕೇಶಿರಾಜ ಕೊಟ್ಟ ವಿವರಣೆ ಅಸಾಧುವಾಗಿ ತೋರುತ್ತದೆ. ಅವನು ಹೇಳಿದ ಎಲ್ಲ ಶುದ್ಧಗೆಗಳು ಬೇಡವಾದರೂ ಬಹುಮಟ್ಟನವು ಇಂದಿಗೂ ಉಳಿದಿವೆ; ಕನ್ನಡದ ಬೆಳವಣಿಗೆಗೆ ಅಗತ್ಯ ಬೇಕಾಗಿವೆ. ಆಗಲೇ ಹೇಳಿರುವಂತೆ, ಸಂಸ್ಕೃತ ಭಾಷೆಯ ಶಬ್ದ ಸಂಪತ್ತನ್ನು ಪಡೆದ ನಾವು ಅದರ ವರ್ಣಮಾಲೆಯನ್ನೂ ಸ್ವೀಕರಿಸುವುದು ಸಮಂಜಸವೇ ಆಗಿದೆ. ಆದರೆ ಸಂಸ್ಕೃತದಲ್ಲಿ ಇರುವ ವರ್ಣಗಳೆಲ್ಲವೂ ಕನ್ನಡದಲ್ಲೂ ಇರಬೇಕೆಂಬ ನಿಯಮ–ನಿರ್ಬಂಧ ಏನೂ ಇಲ್ಲ. ಸಂಸ್ಕೃತದಲ್ಲಿನ ಎಲ್ಲ ಸ್ವರಗಳನ್ನು ಪಡೆದಿರುವ ಪಾಲಿ ಭಾಷೆಯೂ, ಋ, ಌ, ಐ, ಔ—ವರ್ಣಗಳನ್ನು ಹೊಂದಿಲ್ಲ. ಹಾಗೆಯೇ ವ್ಯಂಜನಗಳಲ್ಲೂ ಪಾಲಿ, ಸಂಸ್ಕೃತದ ಎಲ್ಲ ವ್ಯಂಜನಗಳನ್ನೂ ಉಳಿಸಿಕೊಂಡಂತಿದ್ದರೂ ಷ, ಶ ವರ್ಣಗಳು ಪಾಲಿಯಲ್ಲಿ ಇಲ್ಲ. ಸಂಸ್ಕೃತದ ತೀರ ನಿಕಟವರ್ತಿಯಾದ ಒಂದು ಭಾಷೆಯಲ್ಲೇ ಹೀಗಿರುವಾಗ ಇನ್ನು ಬೇರೊಂದು ಬುಡಕಟ್ಟಿಗೆ ಸೇರಿದ ಕನ್ನಡದ ಮಾತೇನು ?

ಭಾಷಾ ವಿಜ್ಞಾನದ ದೃಷ್ಟಿಯಿಂದ ವಿವೇಚಿಸುತ್ತಾ ವಿದ್ವಾಂಸರು ಕನ್ನಡಕ್ಕೆ ಸಂಸ್ಕೃತದ ಕೆಲವು ವರ್ಣಗಳು ಬೇಕಿಲ್ಲ ಅಥವಾ ಪೂರ್ವದ ಹಳಗನ್ನಡ ಕಾಲಕ್ಕೆ ಇರಲಿಲ್ಲವೆಂದು ತಿಳಿಸಿದ್ದಾರೆ. ಚಾರಿತ್ರಿಕ ಮತ್ತು ತೌಲನಿಕ ಮಾರ್ಗವನ್ನು ಚೆನ್ನಾಗಿ ಅನ್ವಯಿಸಿ ದ್ರಾವಿಡ ಭಾಷೆಗಳ ಧ್ವನಿ ವ್ಯವಸ್ಥೆಯನ್ನು ವಿಮರ್ಶಿಸಿ ಈ ತೀರ್ಮಾನವನ್ನು ಕೈಗೊಂಡಿದ್ದಾರೆ. ಕನ್ನಡಕ್ಕೆ ಸಂಸ್ಕೃತದ ಋ, ೠ, ಌ, ೡ, ಐ, ಔ—ಸ್ವರಗಳು ಬೇಕಾಗಿಲ್ಲವೆಂದುದು ಮೊದಲನೆಯ ವಿವರಣೆ. ಇವುಗಳಲ್ಲಿ ಋ, ೠ, ಌ, ೡ ಗಳು ಕನ್ನಡದಲ್ಲಿ ಬಳಕೆಯಲ್ಲಿ ಇಲ್ಲವೆಂದು ಕೇಶಿರಾಜನೇ ವಿವರಿಸಿದ್ದಾನೆ. ಇವು ಕನ್ನಡದಲ್ಲಿ ರ್ ಮತ್ತು ಲ್ ಗಳ ಧ್ವನಿ ಸ್ಥಾನವನ್ನು ಪಡೆದಿವೆ. ಇದರಂತೆ ಜಿಹ್ವಾಮೂಲೀಯ, ಉಪಾಧ್ಮಾನೀಯ, ಮತ್ತು ವಿಸರ್ಗಗಳೂ ಕನ್ನಡಕ್ಕೆ ಸೇರಿದ್ದಲ್ಲವೆಂದು ಕೇಶಿರಾಜನೇ ಒಪ್ಪಿಕೊಂಡಿದ್ದಾನೆ. ನಾಗವರ್ಮನೂ ತನ್ನ ಕರ್ನಾಟಕ ಭಾಷಾಭೂಷಣದಲ್ಲಿ ಇದನ್ನು ಸ್ಪಷ್ಟಪಡಿಸಿದ್ದಾನೆ.

"ಐ ಔ ಎಂಬುವು ಕನ್ನಡದ ಸಹಜ ಸ್ವರಗಳಲ್ಲ; ಅವುಗಳ ನಿಜವಾದ ಉಚ್ಚಾರಣೆ ಹಳಗನ್ನಡದಲ್ಲಿ ಎಯ್ (ಅಥವಾ ಅಯ್), ಅವ್—ಎಂದು."[1] ಐ ಮತ್ತು ಔ ಎಂಬ

[1] ಕನ್ನಡ ಕೈಪಿಡಿ, ಭಾಗ–೧, ಮೂರನೆಯ ಮುದ್ರಣ, ೧೯೫೫, ಪುಟ–೫.

ಸಂಧ್ಯಕ್ಷರಗಳು ಕನ್ನಡದಲ್ಲಿ ಇರಲಿಲ್ಲವೆಂಬುದು ಈಚೆಗೆ ನಡೆದ ಸಂಶೋಧನೆಯ ಫಲವಾಗಿ ಕೈಗೊಂಡ ತೀರ್ಮಾನ. ಕೆಲವು ಉದಾಹರಣೆಗಳನ್ನಿತ್ತು ಇದನ್ನು ಸ್ಪಷ್ಟಪಡಿಸಬಹುದು.

ಅಂಗೈ : ಅಂಗೆಯ್
ಔತಣ : ಅವುತಣ
ಐದು : ಅಯ್ದು
ಕೈ : ಕಯ್
ರೈಯೊದವಿತ್ತು : ರಯ್ಯೊದವಿತ್ತು
ಕೌಂಕುಳ್ : ಕವುಂಕಳ್
ಐಕಿಲ್ : ಅಯ್ಕಿಲ್
ಐಗಡಲ್ : ಅಯ್ಗಡಲ್
ಐಗಣೆಯ : ಅಯ್ಗಣೆಯ
ಐಗಳ : ಅಯ್ಗಳ
ಐಗೇಣು : ಅಯ್ಗೇಣು
ಐಗೊಳಗ : ಅಯ್ಗೊಳಗ
ಐತಂಡ : ಅಯ್‌ತಂಡ
ಐತಾಳಿ : ಅಯ್‌ತಾಳಿ
ಐದಕ್ಕರ : ಅಯ್ದಕ್ಕರ
ಐಮೂಲೆ : ಅಯ್ಮೂಲೆ
ಐಮೆ : ಅಯ್ಮೆ
ಕೌಂಗು : ಕವುಂಗು
ಮೈ : ಮೆಯ್
ಕೈ ಗೈ : ಕಯ್ ಗಯ್
ಔಂಡು : ಅವುಂಡು
ತೌಡು : ತವುಡು
ಎಯ್ದು : ಐದು
ಎಯ್ದಿಸು : ಐದಿಸು
ಎಯ್ದೆ : ಐದೆ
ಎಯ್ದೆವರ್ : ಐದೆವರ್
ಎಯ್ತರ್ : ಐತರ್.

ಇಲ್ಲಿ ಇನ್ನೊಂದು ವಿಚಾರವನ್ನು ತಿಳಿಯುವುದು ಅಗತ್ಯ. ಏ ಮತ್ತು ಓ ಗಳು ಸಂಸ್ಕೃತದಲ್ಲಿ ಇರುವಂತೆ ಕನ್ನಡದಲ್ಲಿಯೂ ಇವೆ, ಆದರೆ ಏ-ಓ ಗಳು ಸಂಸ್ಕೃತದಲ್ಲಿ ಸಂಧ್ಯಕ್ಷರಗಳು ; ಉದಾ : ತವ + ಇದಮ್ < ತವೇದಮ್. ಏ, ಓ ಗಳಿಗೆ ಒಂದು ಮಾತ್ರೆಯ ಬೆಲೆ, ಐ, ಔ-ಗಳಿಗೆ ಎರಡು ಮಾತ್ರೆಯ ಬೆಲೆ—ಹೀಗೆಂದು ಪತಂಜಲಿಯ ಮಹಾಭಾಷ್ಯದಲ್ಲಿ ಹೇಳಿದೆ. ಕನ್ನಡದಲ್ಲಿ ಈ ಏ-ಓ, ಎಂಬ ವರ್ಣಗಳು ಸಂಸ್ಕೃತದಲ್ಲಿರುವಂತೆ ಇಲ್ಲ ; ಅವು ಇಲ್ಲಿ ದೀರ್ಘ ಸ್ವರಗಳೇ ಹೊರತು ಸಂಧ್ಯಕ್ಷರಗಳಲ್ಲ. ಕನ್ನಡದಲ್ಲಿ ಸಂಸ್ಕೃತದಿಂದ ಎರಡು ತೆರನಾದ ಸ್ವೀಕರಣಕಾರ್ಯ ನಡೆದಿದೆ : ತದ್ಭವ, ತತ್ಸಮ. ತದ್ಭವಗಳು ಕನ್ನಡದಲ್ಲಿ ಸಮಾವೇಶವಾದ ಸ್ವೀಕರಣಗಳು. ತತ್ಸಮಗಳು ಅಸಮಾವೇಶ ಸ್ವೀಕರಣಗಳು (Unassimilated loans). ಸಂಸ್ಕೃತ ಸಂಧ್ಯಕ್ಷರಗಳಾದ ಐ ಔ ಗಳು ಕನ್ನಡದಲ್ಲಿ ಸಂಸ್ಕೃತದಿಂದ ಬಂದ ಸ್ವೀಕರಣ ಶಬ್ದಗಳಲ್ಲಿ ಪ್ರಯೋಗವಾಗುತ್ತದೆ. ಐ ಔ ಗಳು ಅಲ್ಲಿ ದೀರ್ಘ ಸ್ವರಗಳು ಮತ್ತು ಏಕಾಕ್ಷರಿಗಳು. ಇಲ್ಲಿ ಅವು ದ್ವ್ಯಕ್ಷರಿಗಳು (ಅಯಿ : ಅವು).

ಸ್ವರಕ್ಕೂ ವ್ಯಂಜನಕ್ಕೂ ನಡುವೆ ನಿಲ್ಲುವ ಕಾರಣದಿಂದ ಅಯೋಗವಾಹಗಳೆನ್ನಿಸಿಕೊಂಡ ಅನುಸ್ವಾರ (ಬಿಂದು) ಮತ್ತು ವಿಸರ್ಗಗಳೂ (ಃ), ಜಿಹ್ವಾಮೂಲೀಯ (ೱ), ಮತ್ತು ಉಪಧ್ಮಾನೀಯ (ೲ) ಗಳೂ ಕನ್ನಡದಲ್ಲಿ ಇಲ್ಲ. ಅನುಸ್ವಾರದ ಕೆಲಸವನ್ನು ವರ್ಗೀಯ ವ್ಯಂಜನಗಳ ಕೊನೆಯ ಅನುನಾಸಿಕ ವ್ಯಂಜನ ಧ್ವನಿಯೇ ನಿರ್ವಹಿಸುತ್ತಿತ್ತು. ಸಂಸ್ಕೃತ ವಿಸರ್ಗ [ಃ] ವನ್ನೂ ಇದರಲ್ಲೇ ಸೇರಿಸಬಹುದು. ಕನ್ನಡದಲ್ಲಿ ವಿಸರ್ಗ ಇಲ್ಲ. ಸಂಸ್ಕೃತದಿಂದ ಬಂದ ಸ್ವೀಕರಣ ಪದಗಳಲ್ಲಿ ಮಾತ್ರ ಇದರ ಪ್ರಯೋಗವಿದೆ. ವಿಸರ್ಗ ಶಬ್ದಾಂಶದಲ್ಲಿ-ಇಲ್ಲ. ಶಬ್ದಾಂತರ್ಯದಲ್ಲಿ (ಉದಾ : ದುಃಖ) ಸಮಾಸದಲ್ಲಿ (ತಪಃಫಲ, ಪ್ರಾತಃಕಾಲ) ಮಾತ್ರ ಬರುತ್ತದೆ. ೲ ಮತ್ತು ೱ ಗಳು | ಹ್ | ಧ್ವನಿಮಾದ ಉಪಧ್ವನಿಗಳು (Allophones). ಇವೂ ಕನ್ನಡದಲ್ಲಿ ಇಲ್ಲ. ಇವಲ್ಲದೆ ಶ, ಷ, ಸ, ಹ—ಎಂಬ ನಾಲ್ಕು ವರ್ಣಗಳೂ ಕನ್ನಡಕ್ಕೆ ಹೊಸದಾಗಿ ಹೊರಗಿನಿಂದ, ಸಂಸ್ಕೃತದಿಂದ ಬಂದಿವೆ. ಶ-ಷಕಾರಗಳು ಕನ್ನಡಕ್ಕೆ ಬೇಕಿಲ್ಲವೆಂದು ಕೇಶಿರಾಜ[1] ನಾಗವರ್ಮರು[2] ಹೇಳಿದ್ದಾರೆ. ಹಿಂದಿನ ಕನ್ನಡದಲ್ಲಿ ಶ, ಷ, ಸ, ಹ—ವರ್ಣಗಳು ಇರಲಿಲ್ಲವೆಂದರೆ ಇದರಲ್ಲಿ ಆಶ್ಚರ್ಯಪಡುವಂತಹುದು ಏನೂ ಇಲ್ಲ. ತಮಿಳಿನಲ್ಲೂ ಈ ಧ್ವನಿಗಳು ಇಲ್ಲ.

ಇನ್ನು ಕನ್ನಡ ನುಡಿಯ ಹಿಂದಿನ ಸ್ಥಿತಿಯನ್ನು ವಿವೇಚಿಸುತ್ತಾ ವಿದ್ವಾಂಸರು ಮಹಾಪ್ರಾಣ ವರ್ಣಗಳು—ಖ, ಘ, ಛ, ಝ, ಠ, ಢ, ಭ, ಥ, ಧ—ಇರಲಿಲ್ಲವೆಂದು ನಿರೂಪಿಸಿದ್ದಾರೆ. ಕೇಶಿರಾಜನೇನೋ ಧೈರ್ಯವಾಗಿ,

> ಒಳವು ಮಹಾ ಪ್ರಾಣಂಗಳ್
> ವಿಳಸತ್ಕರ್ನಾಟ ಭಾಷೆಯೊಳ್ ಪಲವು ನಿಜೋ |
> ಜ್ವಳಮಾಗಿ ವರ್ಗದುತ್ಕಂ
> ಗಳನಱಯನುನಾಸಿಕಾಖ್ಯೆಯಂ ತಳೆದಿರ್ಕುಂ ||[3]

ಎಂದು ಹೇಳಿಬಿಟ್ಟಿದ್ದಾನೆ. ಅಷ್ಟೇ ಅಲ್ಲದೆ ಕನ್ನಡದೊಳ್ ಸ್ವಭಾವದಿಂ, ಮಹಾಪ್ರಾಣಂಗಳೊಳವು ಎಂದು ಹೇಳಿ, ಹಲವು ಶಬ್ದಗಳನ್ನು ಉದಾಹರಿಸಿದ್ದಾನೆ. ಮತ್ತು ಮುಂದೆ (ಸೂತ್ರ ೨೪) ಇದನ್ನು ಮಾರ್ಗವಿದರು ಸಂಖ್ಯೆಯಲ್ಲೂ, ಅನುಕರಣದಲ್ಲಿಯೂ ಬಳಸುವರೆಂದು ತಿಳಿಸಿದ್ದಾನೆ. ಆದರೆ ಆತ ಕೊಟ್ಟ ಉದಾಹರಣೆಗಳೇ ಅವನ ವಿರುದ್ಧ ಸಾಕ್ಷಿ ಹೇಳುತ್ತವೆ. ಮಹಾಪ್ರಾಣ ವರ್ಣ [ಧ್ವನಿ]ಗಳು ಅನ್ಯ ಭಾಷೆಯಿಂದ—ಸಂಸ್ಕೃತದಿಂದ—ಕನ್ನಡಕ್ಕೆ ಬಂದಿರಬೇಕೆಂದು ತೋರುತ್ತದೆ. ತದ್ಭವಗಳನ್ನು ಮಾಡಿಕೊಳ್ಳುವಾಗ ಸಂಸ್ಕೃತದ ಮಹಾಪ್ರಾಣ ವರ್ಣಗಳನ್ನಾಗಿ ತಿರುಗಿಸಿದುದನ್ನು ಗಮನಿಸಬೇಕು.

---

[1] ಕೇಶಿರಾಜ, ಶಮದ, ಸೂತ್ರ ೪೩

[2] ನಾಗವರ್ಮ, ಕಭಾಭೂ, ಸೂತ್ರ ೧೨

[3] ಕೇಶಿರಾಜ, ಶಮದ, ಸೂತ್ರ ೨೫, ಪುಟ ೨೦

ಅಚ್ಚಗನ್ನಡದ ಕೆಚ್ಚು ಹೊತ್ತ ಆಂಡಯ್ಯನ ಕಬ್ಬಿಗರಕಾವ ಉದಾಹರಣೆ. ದ್ರಾವಿಡ ಭಾಷೆಗಳು ಸುಶ್ರಾವ್ಯವಾದ ಮಾಧುರ್ಯ ಹೊತ್ತ ಭಾಷೆಗಳೆಂದು ಖ್ಯಾತಿಪಡೆದಿವೆಯಲ್ಲವೆ? ಈ ಇಂಪು ಇಲ್ಲಿ ಇದ್ದುದಕ್ಕೆ ಮಹಾಪ್ರಾಣಾಕ್ಷರಗಳು ಇರದಿರುವುದೂ ಒಂದು ಪ್ರಮುಖ ಕಾರಣವಿರಬೇಕು. ಕೇಶಿರಾಜನಿಗಿಂತಲೂ ನೂರು ವರುಷ ಹಿಂದಿನವನಾದ ನಾಗವರ್ಮ ಕನ್ನಡದಲ್ಲಿ ಮಹಾಪ್ರಾಣ ಪ್ರಾಯಶಃ ಇಲ್ಲವೆಂದು ಅನುಮಾನಿಸಿದ್ದಾನೆ. "ನಾತ್ರ ಪ್ರಾಯೇಣ ವರ್ಗಾಣಾಂ ದ್ವಿತೀಯ ಚತುರ್ಥಾಃ। ಪ್ರಾಯೇಣೇತಿ ವಚನಾತ್ ಸಂಖ್ಯಾನುಕರಣಾ ದೌ ದೃಶ್ಯಂತೇ॥"

"ಕನ್ನಡದಲ್ಲಿ ಮಹಾಪ್ರಾಣಾಕ್ಷರಗಳು ಸ್ವಭಾವದಿಂದಿರುವುವೆಂಬುದಕ್ಕೆ ಉದಾಹರಣೆಯಾಗಿ, ಕೇಶಿರಾಜನು ಕೊಟ್ಟಿರುವ ಶಬ್ದಗಳು ಕನ್ನಡದ ಶಬ್ದಗಳಲ್ಲ; ಪ್ರಾಕೃತ ಅಥವಾ ಮರಾಠಿ ಭಾಷೆಯಿಂದ ಕನ್ನಡಕ್ಕೆ ಸೇರಿದ ಶಬ್ದಗಳ ಹಾಗೆ ಕಾಣುತ್ತದೆ"[1] ಉದಾಹರಣೆಯಾಗಿ ಕೇಶಿರಾಜ ಹೇಳುವ ಕೆಲವು ಶಬ್ದಗಳನ್ನು ತೆಗೆದುಕೊಂಡು ಪರಿಶೀಲಿಸಬಹುದು.

ಭಾಷಾ (ಸಂ) > ಭಾಸೆ (ಪ್ರಾ) > ಭಾಸೆ (ಕ) > ಭಾಸ
ಸ್ಕಂಭ (ಸಂ) > ಕಂಭ (ಪ್ರಾ) > ಕಂಭ (ಕ) > ಕಂಬ
ಸ್ಥಾನ (ಸಂ) > ಠಾಣ (ಪ್ರಾ) > ಠಾಣ (ಕ) > ತಾಣ
ಸ್ಥಾಪನೆ (ಸಂ) > ಥಾಪನೆ (ಪ್ರಾ) > ಥಾಪನೆ (ಕ)
ಠೋಕರ (ಮರಾಠಿ) > ಠೊಕ್ಕರ (ಕ)
ವ್ಯಾಖ್ಯಾನಮ್ (ಸಂ) > ವಖ್ಖಾಣಂ (ಪ್ರಾ) > ವಖ್ಖಾಣಂ (ಕ)
ಪ್ರಕ್ಷಾಲನಮ್ (ಸಂ) ಪಖ್ಖಾಳಂ (ಪ್ರಾ) > ಪಖ್ಖಾಳಂ (ಕ)

ಅಲ್ಲದೆ ಕೆಲವು ಕಡೆ ಅಲ್ಪಪ್ರಾಣವನ್ನು ಕೇಶಿರಾಜ ಮಹಾಪ್ರಾಣವೆಂದು ಭ್ರಮಿಸಿ ತಪ್ಪಾಗಿ ಉದಾಹರಿಸಿದ್ದಾನೆ. [ಉದಾ : ಭಂಗಾರ > ಬಂಗಾರ.] ಈ ವಿಷಯದಲ್ಲಿ ನಾಗವರ್ಮ ಸರಿಯಾಗಿ ಊಹಿಸಿದ್ದಾನೆ. ಆದುದರಿಂದ ಸಂಸ್ಕೃತ ಪ್ರಾಕೃತಗಳ ಸಾಹಚರ್ಯದಿಂದ ಬಂದ ಮಹಾಪ್ರಾಣಗಳಿಗೆ ಕನ್ನಡ ವರ್ಣಸಮಾಮ್ನಾಯದಲ್ಲಿ ಸ್ಥಾನವಿಲ್ಲ.

ತಮಿಳಿನಲ್ಲಿ ವರ್ಗೀಯ ವ್ಯಂಜನಗಳಲ್ಲಿ ವರ್ಗದ್ವಿತೀಯ ವರ್ಣವಾಗಲಿ, ವರ್ಗ ಚತುರ್ಥ ವ್ಯಂಜನವಾಗಲಿ ಇಲ್ಲ. ಅಂದರೆ ಮಹಾಪ್ರಾಣ ವರ್ಣಗಳೇ ಇಲ್ಲ. ದ್ರಾವಿಡ ಭಾಷೆಗಳಲ್ಲಿ ಹಳೆಯ ಹಾಗೂ ಪೂರ್ವ ದ್ರಾವಿಡ ಸ್ಥಿತಿಯನ್ನು ಸಾಕಷ್ಟು ಪ್ರತಿನಿಧಿಸುವ ತಮಿಳಿನಲ್ಲಿ ಮಹಾಪ್ರಾಣಧ್ವನಿಮಾಗಳು ಇಲ್ಲದಿರುವುದು ಪೂರ್ವ ದ್ರಾವಿಡದ ಧ್ವನಿ ವ್ಯವಸ್ಥೆಯನ್ನು ಊಹಿಸಲು ಇರುವ ಒಂದು ಪ್ರಬಲವಾದ ಆಧಾರ. ಕನ್ನಡದಲ್ಲಿಯೂ ಇದರಂತೆಯೇ ಹಿಂದೆ ಇದ್ದಿರಬೇಕೆಂದು ಹೇಳಬಹುದು. ಅನುಕರಣ ಶಬ್ದಗಳು ಅವಶ್ಯ ಮಹಾಪ್ರಾಣಗಳೇ ಆಗಿರಬೇಕಾದುದಿಲ್ಲ. ಅಲ್ಲದೆ ಕೆಲವು ಮಹಾಪ್ರಾಣದ ಅನುಕರಣ

---

1 ಬಿ. ಎಂ. ಶ್ರೀಕಂಠಯ್ಯ, ಟಿ. ಎಸ್. ವೆಂಕಣ್ಣಯ್ಯ, ಕನ್ನಡ ಕೈಪಿಡಿ, ಭಾಗ-೧, ೧೯೫೫, ಪು. ೩೧೭.

ಶಬ್ದಗಳಿಗೆ ಧಾತುಗಳೂ ಇದ್ದಂತೆ ಕಾಣುವುದಿಲ್ಲ. ಇರ್ + ಸಾಸಿರ[1] > ಇರ್ಛಾಸಿರ ಎಂಬಲ್ಲಿ ಸಕಾರಕ್ಕೆ ಆದೇಶವಾಗಿ ಮಹಾಪ್ರಾಣ ವರ್ಣವಾದ ಛಕಾರ ಬರಬೇಕೆಂಬ ನಿಯಮ ಸರಿಯಲ್ಲ ; ಚ-ಕಾರ ಅಲ್ಪಪ್ರಾಣವೇ ಸಾಕು.

ಉದಾ : ಅಲರ್ಚು

ಉದಿರ್ಚು

ಸಾರ್ಚು

ಈ ಮಹಾಪ್ರಾಣಾಕ್ಷರಗಳು ತಮಿಳಿನಲ್ಲಿ ಇಲ್ಲದೆ ಕನ್ನಡದಲ್ಲಿ ಮಾತ್ರ ಅಧಿಕವಾಗಿ ಬರಲು ಕನ್ನಡದ ನೆರೆನಾಡಾದ ಮಹಾರಾಷ್ಟ್ರದ ಸಂಪರ್ಕವೇ ಬಹುಮಟ್ಟಿಗೆ ಕಾರಣವಿರಬೇಕು. ಏಕೆಂದರೆ ಮರಾಠಿಯಲ್ಲಿ ಮಹಾಪ್ರಾಣ ವರ್ಣದ ಪ್ರಯೋಗ ಹೆಚ್ಚು.

ಇದುವರೆಗಿನ ಈ ಎಲ್ಲ ವಿಚಾರದ ಫಲವಾಗಿ ಭಾಷಾವಿಜ್ಞಾನದ ದೃಷ್ಟಿಯಿಂದ ಕನ್ನಡದಲ್ಲಿ ಹಿಂದೆ, ಧ್ವನಿ ವ್ಯವಸ್ಥೆ ಹೀಗಿದ್ದಿರಬಹುದೆಂದು ಊಹಿಸಬಹುದು. ಪೂರ್ವದ ಹಳಗನ್ನಡ ಮತ್ತು ಹಳಗನ್ನಡ ಕಾಲದ ಧ್ವನಿ ವ್ಯವಸ್ಥೆ ಹೇಗಿತ್ತೆಂಬುದು ಖಚಿತವಾಗಿ ತಿಳಿಯದು. ಉಪಲಬ್ಧ ಶಾಸನ ಹಾಗೂ ಸಾಹಿತ್ಯ ಸಾಮಗ್ರಿಯ ಆಧಾರದಿಂದ ಅಂದಿನ ಧ್ವನಿಮಾಗಳ ಸ್ವರೂಪವನ್ನು ಪುನರ್‌ರಚಿಸಲು ಸಾಧ್ಯವಿದೆ.

ಸ್ವರಗಳು—೧೦

ಹ್ರಸ್ವ ಸ್ವರಗಳು—೫ : ಅ ಇ ಉ ಎ ಒ

ದೀರ್ಘ ಸ್ವರಗಳು—೫ : ಆ ಈ ಊ ಏ ಓ

ವ್ಯಂಜನಗಳು—೨೦

ವರ್ಗೀಯ ವ್ಯಂಜನಗಳು—೧೫

ಅವರ್ಗೀಯ ವ್ಯಂಜನಗಳು—೫

ಕ ಗ ಙ

ಚ ಜ ಞ

ಟ ಡ ಣ

ತ ದ ನ

ಪ ಬ ಮ

ಯ ರ ಲ ವ ಳ

ಸ್ವರಗಳು, ವ್ಯಂಜನಗಳು : ೧೦ + ೨೦ = ೩೦ } ೩೨
ಹಿಂದೆ ಇದ್ದು ಇಂದು ಇಲ್ಲದ ಧ್ವನಿಗಳು—೨ : ೞ, ಱ. }

ಕನ್ನಡದಲ್ಲಿ ಐದು ಅನುನಾಸಿಕ ಧ್ವನಿಗಳಿವೆ : [ಮ್, ನ್, ಣ್, ಙ್, ಞ್] ಎಂಬ ಐದು. ಈ ಧ್ವನಿಗಳನ್ನು ಪ್ರಧಾನ ಅನುನಾಸಿಕಗಳೆಂದೂ, ಗೌಣ ಅನುನಾಸಿಕ

[1] ಇಲ್ಲಿ ಈ ಸಾಸಿರ ಎಂಬುದೂ ಕನ್ನಡ ಪದವಲ್ಲ. ಇದು ಸಂಸ್ಕೃತದ ಸಹಸ್ರ ಪದದ ತದ್ಭವ.

ಗಳೆಂದೂ ಎರಡು ವಿಧವಾಗಿ ವಿಂಗಡಿಸಬಹುದು. /ಮ್/ /ನ್/ ಮತ್ತು /ಣ್/ ಗಳು ಪ್ರಧಾನ ಅನುನಾಸಿಕ ಧ್ವನಿಮಾಗಳು; ಉಳಿದ ಎರಡು ಅನುನಾಸಿಕ ಧ್ವನಿಗಳನ್ನು /ನ್/ ಧ್ವನಿಮಾದ ಉಪಧ್ವನಿಗಳೆನ್ನಬಹುದು. ಉಚ್ಚಾರಣಾಸ್ಥಾನದ ದೃಷ್ಟಿಯಿಂದ ಈ ಅನುನಾಸಿಕಗಳನ್ನು ಹೀಗೆ ತೋರಿಸಬಹುದು:

[ಮ್] ಉಭಯೋಷ್ಠ್ಯ Bilabial
[ನ್] ದಂತ್ಯ Dental
[ಣ್] ಮೂರ್ಧನ್ಯ Retroflex
[ಞ್] ತಾಲವ್ಯ Palatal
[ಙ್] ಕಂಠ್ಯ ಅಥವಾ ಮೃದುತಾಲವ್ಯ Velar.

/ನ್/ ಧ್ವನಿಮಾಕ್ಕೆ ಇರುವ ಮೂರು ಉಪಧ್ವನಿಗಳನ್ನು ಹೀಗೆ ತೋರಿಸಬಹುದು:

/ನ್/ { [ಞ್] ತಾಲವ್ಯ ವ್ಯಂಜನಗಳ ಹಿಂದೆ.
[ಙ್] ಕಂಠ್ಯ ವ್ಯಂಜನಗಳ ಹಿಂದೆ.
[ನ್] ಉಳಿದ ಕಡೆಗಳಲ್ಲಿ.

ಈ ಧ್ವನಿಗಳಲ್ಲಿ ಮ್, ನ್—ಗಳು ಪದದ ಆದಿಯಲ್ಲೂ ಪದದ ಕೊನೆಯಲ್ಲೂ, ಪದ ಮಧ್ಯದಲ್ಲೂ ಬರುತ್ತವೆ: ಣ್—ಧ್ವನಿಮಾ ಪದದ ಪ್ರಾರಂಭದಲ್ಲಿ ಬರುವುದಿಲ್ಲ. ಪದ ಮಧ್ಯೆ ಅಥವಾ ಪದಾಂತ್ಯದಲ್ಲಿ ಮಾತ್ರ ಬರುತ್ತದೆ.[1] ಇನ್ನು ಬಿಂದುವಿನ ವಿಚಾರ. ಬಿಂದು ಸ್ವತಂತ್ರ ಧ್ವನಿಯಲ್ಲ. ಅದು ಮೇಲೆ ಹೇಳಿದ [ಮ್, ನ್, ಣ್, ಙ್, ಞ್] ಐದು ಅನುನಾಸಿಕ ಧ್ವನಿಗಳನ್ನು ಪ್ರತಿನಿಧಿಸುವ ಒಂದು ಚಿಹ್ನೆ ಅಷ್ಟೆ. ಇದರ ಉಚ್ಚಾರವೇನಿದ್ದರೂ ಇದರ ಮುಂದಿನ ವ್ಯಂಜನವನ್ನು ಅನುಸರಿಸುತ್ತದೆ. ಆದುದರಿಂದ ಬಿಂದು (ಅನುಸ್ವಾರ) ವನ್ನು ಸ್ವತಂತ್ರ ಧ್ವನಿಮಾವಾಗಿ ಪರಿಗಣಿಸುವುದು ಕಷ್ಟ. ಅದಕ್ಕೆ ಕೇವಲ ಲಿಪಿ ಮೌಲ್ಯವೇ ಹೊರತು ಧ್ವನಿಮೌಲ್ಯವಿಲ್ಲವೆಂದು ತೋರುತ್ತದೆ. "ಅನುಸ್ವಾರಕ್ಕೆ ಕನ್ನಡದಲ್ಲಿ ಒಂದು ನಿಯತವಾದ ಉಚ್ಚಾರವಿಲ್ಲ. ಪದಾಂತ್ಯದಲ್ಲಿ ಇದರ ಉಚ್ಚಾರವು ಮ್. ಪದಮಧ್ಯದಲ್ಲಿ ಬರಹದ ಸೌಲಭ್ಯಕ್ಕಾಗಿ ಅನುಸ್ವಾರವನ್ನು ಬರೆದರೂ ಅದರ ನಿಜವಾದ ಉಚ್ಚಾರಣೆ ತನ್ನ ಮುಂದಿರುವ ವ್ಯಂಜನದ ವರ್ಗಕ್ಕೆ ಸೇರಿದ ಅನುನಾಸಿಕದ್ದು."[2]

ಕೆಲವು ಉದಾಹರಣೆಗಳು:

ಅಂಕ ⌝ ಅಙ್ಕ | ಅಂಚೆ ⌝ ಅಞ್ಚೆ
ಉಂಟು ⌝ ಉಣ್ಟು | ಕಂಡು ⌝ ಕಣ್ಡು
ಬಂದು ⌝ ಬನ್ದು | ಕಂಬ ⌝ ಕಮ್ಬ

---

[1] H. S. Biligiri, *The Nasal Phonemes of Kannada* IL. Vol, 16, 1255.
[2] ಕನ್ನಡ ಕೈಪಿಡಿ, ೧೯೩೫, ಪು. ೫.

ಆದುದರಿಂದ ಮೂಲ ಕನ್ನಡಕ್ಕೆ ನಿರ್ದೇಶಿಸುವ ಧ್ವನಿಗಳಲ್ಲಿ ಜ್ ಮತ್ತು ಇ್ ಗಳನ್ನು ಬಿಟ್ಟರೆ ಮೂವತ್ತು ಧ್ವನಿಗಳು ಮಾತ್ರ ನಿಲ್ಲುತ್ತವೆ.

## ಇಂದಿನ ತಮಿಳು ವರ್ಣಮಾಲೆ

ಸ್ವರಗಳು :

அ (ಅ) ஆ (ಆ) இ (ಇ) ஈ (ಈ) உ (ಉ) ஊ (ಊ) எ (ಎ) ஏ (ಏ) ஐ (ಐ) ஒ (ಒ) ஓ (ಓ) ஔ (ಔ) ஃ (ಅಃ)

ವ್ಯಂಜನಗಳು : ವರ್ಗೀಯ

க (ಕ) ங (ಙ) ச (ಚ) ஞ (ಞ) ட (ಟ) ண (ಣ) த (ತ) ந (ನ) ப (ಪ) ம (ಮ)

ಅವರ್ಗೀಯ :

ய (ಯ) ர (ರ) ல (ಲ) வ (ವ) ழ (ೞ) ள (ಳ) ற (ಱ) ன (ನ) ஜ (ಜ) ஸ (ಸ) ஷ (ಶ) ஹ (ಹ) க்ஷ (ಕ್ಷ)

# ತಮಿೞ್ > ತಮಿಳು

ಸಂಸ್ಕೃತ ಭಾಷೆಯೊಂದನ್ನು ಬಿಟ್ಟರೆ ಭಾರತೀಯ ಭಾಷೆಗಳಲ್ಲೆಲ್ಲಾ ತಮಿಳು ಬಹಳ ಪ್ರಾಚೀನ ಕೃತಿಗಳನ್ನು ಪಡೆದ ಭಾಷೆ. ತಮಿಳು ಹಳೆಯ ಭಾಷೆಯಾಗಿರುವುದರ ಜೊತೆಗೆ ಸಂಪನ್ನ ಭಾಷೆಯೂ ಹೌದು. ಅದರ ಸಾಹಿತ್ಯ ಕೃತಿಗಳಂತೆ ಹಳೆಯ ಶಾಸನಗಳೂ ದೊರೆತಿವೆ. ದ್ರಾವಿಡ ಭಾಷಾ ಪರಿವಾರಕ್ಕೆ ಸಂಬಂಧಿಸಿದಂತೆ ಅತ್ಯಂತ ಪ್ರಾಚೀನತಮ ಉಲ್ಲೇಖಗಳು ಸಿಗುವುದು ಈ ಭಾಷೆಯಲ್ಲೇ. ಸುಮಾರು ಎರಡು ಸಾವಿರ ವರುಷದ ಒಂದು ನಿರಂತರವಾದ ಇತಿಹಾಸವಿರುವ ಈ ಭಾಷೆ ತನ್ನ ಹಿಂದಿನ ವೈಶಿಷ್ಟ್ಯವನ್ನು ಇಂದಿಗೂ ಬಹಳ ಮಟ್ಟಿಗೆ ಕಾಪಾಡಿಕೊಂಡು ಬಂದಿದೆ. ಹೆಚ್ಚುಕಡಮೆ ಕ್ರಿ. ಪೂ.ದ ಕೊನೆಯ ಕಾಲದಿಂದಲೇ ತಮಿಳಿನ ಉಗಮ ಗೋಚರಿಸುತ್ತದೆ. ಪತ್ತುಪ್ಪಾಟ್ಟು, ಎಟ್ಟುತ್ತೊಗೈ, ಅಹನಾನೂರ್—ಮೊದಲಾದ ಸಂಘಂ ಕಾಲದ ಕೃತಿಗಳು ಆದಷ್ಟೂ ಪ್ರಾಚೀನ ರೂಪಗಳನ್ನು ಉಳಿಸಿಕೊಂಡಿವೆ. ಕನ್ನಡದ ಕೆಲವು ಪದಗಳಲ್ಲಿ ಱ-ರ ಗಳಲ್ಲಿ ಯಾವುದು ಇರಬೇಕು? ೞ-ಳ ಗಳಲ್ಲಿ ಯಾವುದಿರಬೇಕು—ಎಂಬುದನ್ನು ನಿರ್ಧರಿಸಲು ತಮಿಳಿನ ರೂಪಗಳು ನೆರವಾಗುತ್ತವೆ.

ಹೀಗಾಗಿ ತಮಿಳು ಸ್ವಲ್ಪಮಟ್ಟಿಗೆ ದ್ರಾವಿಡಭಾಷೆಗಳ ಪರಿವಾರಕ್ಕೆ ಒಡೆಯ ಎನ್ನಬಹುದು. ಏಕೆಂದರೆ ದ್ರಾವಿಡ ಗುಂಪಿನ ಪದಗಳ ಹಳೆಯ ರೂಪಗಳು ತಮಿಳಿನಲ್ಲಿ, ಸಾಮಾನ್ಯವಾಗಿ ತಪ್ಪದೆ ದೊರೆಯುತ್ತವೆ. ಇದಕ್ಕೆ ಕಾರಣ ಸಂಸ್ಕೃತದ ಪ್ರಭಾವ ಉಳಿದ ದ್ರಾವಿಡ ಭಾಷೆಗಳಿಗಿಂತ ತಮಿಳಿನಲ್ಲಿ ಕಡಮೆ. ತಮಿಳು ಭಾಷೆಯಲ್ಲಿ ಎರಡು ಮುಖ್ಯವಾದ ವಿಭಾಗಗಳೆಂದರೆ ಶೆಂದಮಿೞ್ (Classical Tamil) ಮತ್ತು ಕೊಂಡುದಮಿ(ವಿ)ೞ್ (Colloquial Tamil) ಎಂಬುವು. ಇವೆರಡಕ್ಕೂ ತುಂಬಾ ವ್ಯತ್ಯಾಸವಿದೆ. ತಮಿಳಿನ ಹಳೆಯ ಗ್ರಂಥಗಳಲ್ಲಿ ಒಂದಾದ, ಸು. ಕ್ರಿ. ಶ. ೫ನೆಯ ಶತಮಾನದ ಕುಱಳ್ ಕಾವ್ಯ ಇಂದಿಗೂ ತಮಿಳುನಾಡಿನಲ್ಲಿ ಜನಪ್ರಿಯ ಕಾವ್ಯ. ಶಿವನ ಡಮರುವಿನ ಬಲಪಕ್ಕದಿಂದ ಸಂಸ್ಕೃತವೂ, ಎಡಗಡೆಯಿಂದ ತಮಿಳೂ ಹುಟ್ಟಿದುವೆಂಬ ಹೇಳಿಕೆ, ಶಂಭು ರಹಸ್ಯವೆಂಬ ಗ್ರಂಥದಲ್ಲಿದೆ. ಶಿವನು ಸಂಸ್ಕೃತವನ್ನು ಪಾಣಿನಿಗೂ ತಮಿಳನ್ನು ಅಗಸ್ತ್ಯನಿಗೂ ಅನುಗ್ರಹಿಸಿದನಂತೆ. ಅಗಸ್ತ್ಯ ತಮಿಳರಿಗೂ ಕಣ್ವತೆಲುಗಿಗೂ ಆಚಾರ್ಯರು.

ತಮಿಳು ಭಾಷೆಯಲ್ಲಿ ಬಹಳ ಹಿಂದಿನಿಂದಲೂ ಒಳ್ಳೆಯ ವ್ಯಾಕರಣಗಳು ಅಧಿಕ ಸಂಖ್ಯೆಯಲ್ಲಿ ರಚಿತವಾಗಿದ್ದು ಆ ಭಾಷೆಯ ಅಭ್ಯಾಸಕ್ಕೆ ಅನುಕೂಲವಾಗಿವೆ. ಉದಾಹರಣೆಗೆ ತೊಲ್ಕಾಪ್ಪಿಯಮ್ (-ತೊಲ್ಕಾಪ್ಪಿಯರ್ ಬರೆದದ್ದು), ವೀರಸೋಳಿಯಂ (-ಬುದ್ಧಮಿತ್ರ), ನನ್ನೂಲ್ (ಭವಣಂದಿ ಮುನಿವರ ರಚಿತ), ನೇಮಿನಾದಮ್, ಇಳಂಬೂರಣರ್, ಚೇನಾವರೈಯರ್, ನಾಚ್ಚಿನಾರ್ಕ್ಕಿನಿಯರ್, ಚೂಡಾಮಣಿ— ಮೊದಲಾದ ಇನ್ನೂ ಕೆಲವು ತಮಿಳು ವ್ಯಾಕರಣಗಳಿವೆ. ಈ ಹಳೆಯ ಮತ್ತು ಮಧ್ಯ ಕಾಲದ ತಮಿಳು ವ್ಯಾಕರಣಗಳಲ್ಲಿ ಕ್ರಮಬದ್ಧವಾದ ಒಂದು "ಐತಿಹಾಸಿಕ ಮತ್ತು ತುಲನಾತ್ಮಕ ಮಾರ್ಗಗಳನ್ನು ಕಾಣಬಯಸಲಾಗದು. ಆದರೆ ಅವುಗಳಲ್ಲಿ ಆಧುನಿಕ ಭಾಷಾಶಾಸ್ತ್ರಜ್ಞರಿಗೂ ಆಶ್ಚರ್ಯವಾಗುವಂಥ ನುಡಿಸೂಕ್ಷ್ಮಗಳ ಮತ್ತು ನಯಗಳ ದರ್ಶನ ಕಂಡುಬರುತ್ತದೆ. (ಉದಾಹರಣೆಗೆ) ತೊಲ್ಕಾಪ್ಪಿಯವು ತಮಿಳಿನ ಸ್ವನಲಕ್ಷಣ, ಪದನಿಷ್ಪತ್ತಿ, ವಾಕ್ಯವಿನ್ಯಾಸ—ಮುಂತಾದುವುಗಳ ವೈಶಿಷ್ಟ್ಯಗಳನ್ನು ಸ್ಪಷ್ಟಪಡಿಸುವ ಒಂದು ವಿಷಯ ವರ್ಗೀಕರಣಮಾರ್ಗವನ್ನು ಅನುಸರಿಸಿದೆ."[1] ಡಾ|| ವಿ. ಸ್ವಾಮಿನಾಥ ಅಯ್ಯರ್, ಬೆಸ್ಚಿ, ಪೋಪ್, ವಿನ್ಸ್ಲ, ಕಾಲ್ಡ್‌ವೆಲ್, ಶೇಷಗಿರಿಶಾಸ್ತ್ರಿ—ಮೊದಲಾದವರು ತಮಿಳು ಭಾಷೆ ಮತ್ತು ತಮಿಳು ವ್ಯಾಕರಣಗಳ ದೃಷ್ಟಿಯಿಂದ ಹೆಚ್ಚಾಗಿ ದುಡಿದವರು. ಕಾಲ್ಡ್‌ವೆಲ್ಲನಂತೂ ಈ ದಿಕ್ಕಿನಲ್ಲಿ ಪ್ರಾತಃಸ್ಮರಣೀಯ.

೧೯ನೆಯ ಶತಮಾನದಲ್ಲಿ ಯೂರೋಪಿನಿಂದ ಬಂದವರು ತಮಿಳನ್ನು ತಮಿಳು, ಟ್ಯಾಮಿಲ್/ಳ್ (ಇಂ)—ಎಂದು ಕರೆದಿದ್ದಾರೆ. ಆದರೆ ಇವರಿಗಿಂತಲೂ ಹಿಂದೆ ಭಾರತಕ್ಕೆ ಬಂದಿದ್ದ ಪೋರ್ಚುಗೀಸರು ಮೊದಮೊದಲಲ್ಲಿ ತಮಿಳನ್ನು ಮಲಬಾರ್ ಎಂದು ಕರೆದಿದ್ದಾರೆ. ಕನ್ನಡಿಗರು, ಮುಸಲ್ಮಾನರು, ತಮಿಳರನ್ನು ಅರವರೆಂದೂ, ತಿಗಳರೆಂದೂ, ತಮಿಳನ್ನು ಅರವ-ತಿಗಳ/ಳು ಎಂದೂ ಕರೆದಿದ್ದಾರೆ.[2] ಆದರೆ ವಿಶೇಷವಾದ ಚರ್ಚೆಯೆಲ್ಲಾ ಇರುವುದು 'ದ್ರಾವಿಡ' ಎಂಬ ಪದದ ವಿಚಾರವಾಗಿ. ದ್ರಾವಿಡ ಎಂಬ ಶಬ್ದದ ವ್ಯುತ್ಪತ್ತಿ ಅತ್ಯಂತ ತೊಡಕಿನದಾಗಿ ತೋರುತ್ತಿದೆ. ಅದು ತಮಿಳಿಗೆ ಇರುವ ಸಂಸ್ಕೃತ ಸಂವಾದಿ ಪದವೆಂದೂ, ತಮಿಳು ಭಾಷೆ ಮತ್ತು ಜನ ಇಬ್ಬರಿಗೂ ಅನ್ವಯವಾಗುತ್ತದೆಂದೂ ಒಂದು ವಾದ; ದ್ರಾವಿಡ > ತಿರಾವಿಡ > ತಮಿಳು-ಆಯಿತೆಂದೂ ಇನ್ನೊಂದು ವಾದ. ಈ ವಾದ ಹಲವು ದೃಷ್ಟಿಗಳಿಂದ ದ್ರಾವಿಡ ಭಾಷೆಗಳ ಅಭ್ಯಾಸದಲ್ಲಿ ಪ್ರಮುಖ ಪಾತ್ರವಹಿಸುವುದರಿಂದ ಇದನ್ನು ಸ್ವಲ್ಪ ವಿವರವಾಗಿ ಪರಿಶೀಲಿಸಬೇಕಾಗುತ್ತದೆ. ಮೊದಲು ದ್ರಾವಿಡ, ದ್ರವಿಡ, ದ್ರಮಿಳ—ಮುಂತಾದ ಪದಗಳ ಪ್ರಾಚೀನ ಪ್ರಯೋಗಗಳು ಎಲ್ಲೆಲ್ಲಿ ಸಿಗುತ್ತವೆಂಬುದನ್ನು ಅವಲೋಕಿಸಬೇಕು.

---

[1] ಪ್ರ. ಕ, ಬೆಳ್ಳಿಸಂಚಿಕೆ, ಪುಟ ೮೭

[2] ತಿಜಮೀಡ > ತಿವುಡ > ತಿಗುಡ > ತಿಗುಳ ಆಗಿರಬಹುದೆ ?

ಕುಮಾರಿಲಭಟ್ಟನ ತಂತ್ರವಾರ್ತಿಕದಲ್ಲಿ ದ್ರಾವಿಡ ಪದವಿದೆ.[1] ಮನುಧರ್ಮಶಾಸ್ತ್ರದಲ್ಲಿಯೂ ದ್ರಾವಿಡ ಎಂಬ ಪದವಿದೆ.[2] ಮಹಾಭಾರತದಲ್ಲಿಯೂ ದ್ರಾವಿಡ ಎಂಬ ಪದದ ಉಲ್ಲೇಖವಿದೆ. ವರಾಹಮಿಹಿರನ ಬೃಹತ್ ಸಂಹಿತೆಯಲ್ಲಿ—ಅದರ ಕೆಲವು ಪ್ರತಿಗಳಲ್ಲಿ ಮಾತ್ರ-ದ್ರವಿಡ ಪದಕ್ಕೆ ಬದಲು ದ್ರಮಿಡ ಎಂಬ ಅನುನಾಸಿಕದ ಉಚ್ಚಾರ ಪಡೆದ ಪದವಿದೆ. ೧೬ನೆಯ ಶತಮಾನದ ತಾರಾನಾಥನ (೧೫೭೫) ಟಿಬೆಟ್ ಭಾಷೆಯಲ್ಲಿ ಬರೆದ 'ಬೌದ್ಧಧರ್ಮ ಪ್ರಸಾರದ ಇತಿಹಾಸ' ಎಂಬ ಗ್ರಂಥದಲ್ಲಿ 'ದ್ರಮಿಟ' ಎಂಬ ಪದದ ಉಲ್ಲೇಖವಿದೆ; ಮಲೆಯಾಳ ಭಾಷೆಯ ಒಂದೆರಡು ಪುರಾಣಗಳಲ್ಲಿ ದ್ರಮಿಡಿ ಎಂಬ ಪ್ರಯೋಗವಿದೆ. ಪಾಲಿ (ಳಿ) ಭಾಷೆಯ ಮಹಾವಂಶೋ (ಕ್ರಿ.ಶ. ೫ನೆಯ ಶ.) ಎಂಬ ಕೃತಿಯಲ್ಲಿ ದ್ರಮಿಳೋ ಎಂದು ಇದೆ. ಕ್ರಿ.ಶ. ೨ನೆಯ ಶತಮಾನ ಗ್ರೀಕ್ ಭಾಷೆಯಲ್ಲಿ ಬರೆದ ಟಾಲೆಮಿ (Ptolemy) ದಮರಿಕೆ ಎಂದು ಉಪಯೋಗಿಸಿದ್ದಾನೆ.

ವಿದ್ವಾಂಸರು ಈ ಆಧಾರಗಳನ್ನಿತ್ತು ದ್ರವಿಡ > ದ್ರಮಿಡ > ತಿರಮಿಡ > ದ್ರಮಿಳ > ದಮಿಳ > ತಮಿಳ/ಳು ಆಗಿದೆಯೆಂದೂ, ದ್ರಮಿಳ > *ದಮಿೞ್ > ತಮಿೞ್ ಆಗಿದೆಯೆಂದೂ, ತಿಱವೀಡು > ತಿಱಮಿಡ > ತಿಱಮಿಳ > ತಮಿಳು ಆಗಿದೆಯೆಂದೂ ವಿವರಿಸುವರು. ಅವರಿಗೆ ಈ ತೀರ್ಮಾನಕ್ಕೆ ತಮಿಳಿನಲ್ಲಿ ಇರುವ ಡ > ಟ ಮತ್ತು ಳ > ಡ ಆಗುವ ಪದ್ಧತಿ, ಇದ್ದ ಆಧಾರಗಳಿಗೆ ಪೋಷಕವಾಗಿದೆ: ನಾಡಿ > ನಾೞಿ; ಚೋಳ > ಚೋಡ ಕಾಲ್ಡ್‌ವೆಲ್ ಕೂಡ ದ್ರಮಿಡ/ಟ ಶಬ್ದದಿಂದಲೇ ತಮಿೞ್ ಶಬ್ದ ಬಂದಿರಬೇಕೆಂದು ಭಾವಿಸುವಂತೆ ತೋರುತ್ತದೆ. ಉದಾಹರಣೆಗೆ ಪ್ರಾಧ್ಯಾಪಕ ಜೂಲ್ಸ್‌ಬ್ಲಾಕ್ ಕೂಡ ಇದೇ ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ.

> ...There survives to us one word which supplies direct proof of the existence of a parent compound consonant, and that is the word Tamil itself. If its modern form is Tamil, it was adopted into Sanskrit in early times as Dravida...Tamil men ...transliterated it into their own characters as tiramida.[1]

ಮಂಗಳೇಶನ ಮಹಾಕೂಟದ ಶಾಸನದಲ್ಲಿ-ಕಾಲ ಕ್ರಿ. ಶ. ಸು. ೬೦೦-ದ್ರಮಿಡಿ ಎನ್ನುವ ರೂಪ ಸಿಗುತ್ತದೆ. ತಮಿಳಿಗೆ ದ್ರವಿಡಭಾಷೆ ಎಂಬ ಹೆಸರು ತೀರ ಇತ್ತೀಚಿನ ಗ್ರಂಥ

---

[1] ಕುಮಾರಿಲಭಟ್ಟ, ತಂತ್ರವಾರ್ತಿಕ, ಸು. ಕ್ರಿ. ಶ. ೭ನೆಯ ಶತಮಾನ, ಅಧ್ಯಾಯ ೧, ಅಧಿಕರಣ ೬, ಪಾದ ೩.

[2] ಮನುಧರ್ಮಶಾಸ್ತ್ರ, X—೪೩—೪೪, ಯುಕ್ತ ಕರ್ಮ ಮಾಡದೆ ಜಾತಿಭ್ರಷ್ಟರಾದ ಚಂಡಾಲರ ಪಟ್ಟಿಯಲ್ಲಿ ದ್ರಾವಿಡರ ಹೆಸರೂ ಇದೆ.

[3] Jules Bloch, *The Intervocalic Consonants in Tamil*, IA, Vol. xlviii, 1919, p. 194.

ಗಳಲ್ಲೂ ಸಿಗುತ್ತದೆ. ಹೊಸಗನ್ನಡ ನುಡಿಗನ್ನಡದಲ್ಲಿ ತಮಿಳಿಗೆ ಪ್ರವಿಮಿಡವೆಂದೇ ಸಂಬೋಧಿಸಿದೆ. ಹೆಚ್ಚಿನ ವಿವರಗಳನ್ನು ಹಿಂದೆ ಒಂದು ಅಧ್ಯಾಯದಲ್ಲಿ ನೋಡಿದ್ದೇವೆ.

ತಮಿಳುನಾಡಿಗೆ ತಮಿಳಗಮ್ ಎಂದು ಪುರಾತನ ತಮಿಳು ಕೃತಿಗಳಲ್ಲಿ ಹೇಳಿದೆ. ಕ್ರಿ. ಶ. ೪-೫ನೆಯ ಶತಮಾನದ ಶಿಲಪ್ಪದಿಗಾರಮ್‌ನಲ್ಲಿ ತಮಿಟ್ಬ್ ಎಂಬ ಪದ, ಬಹುಶಃ ನೊಟ್ಟಮೊದಲಬಾರಿಗೆ, ಪ್ರಯೋಗವಾಗಿದೆ. ಈ ತಮಿಳಗ ಪದವೇ ಗ್ರೀಕ್ ಭಾಷೆಯಲ್ಲಿ ದಮರಿಕೆ ಆಗಿದೆಯೆಂದು ತೋರುತ್ತದೆ. ಇಲ್ಲಿ ಒಂದೆರಡು ಸಮಸ್ಯೆಗಳು ಏಳುತ್ತವೆ. ತಮಿಟ್ಬ್ ಎಂಬ ಈ ಪದ ಪ್ರಾರಂಭ ವರ್ಣವನ್ನು ತ-ದಗಳಲ್ಲಿ ಹೇಗೆ ಉಚ್ಚರಿಸುತ್ತಿದ್ದರು ? ಪರುಷವರ್ಣ-ತ, ಆಗಿಯೆ ? ಅಥವಾ ಸರಳವರ್ಣ-ದ, ಆಗಿಯೆ ? ಕೊನೆಯಲ್ಲಿ ಟ/ಳ ವರ್ಣ ಡ ಹೇಗಾಯಿತು ? ಅಥವಾ ಡ ಕಾರದಸ್ಥಾನದಲ್ಲಿ ಟಕಾರ ಹೇಗೆ ಬಂತು ? ಇದೂ ಅಲ್ಲದೆ ಪೂರ್ವ ದ್ರಾವಿಡದಲ್ಲಿ ಪದದ ಆದಿಯಲ್ಲಿ ಪರುಷ ವರ್ಣವೇ ಇದ್ದಿತಾದುದರಿಂದ 'ತ' ಎಂಬುದೇ ಮೊದಲಿಗೆ ಇದ್ದು ಉಚ್ಚಾರವಾಗುತ್ತಿದ್ದು, ಳ > ಡ ಆಗುವುದು ತಮಿಳಿನ ಮತ್ತು ಕನ್ನಡದ ವೈಶಿಷ್ಟ್ಯವೆಂದೂ ಹೇಳಬಹುದು.

ಅಂತೂ ಈ ಎಲ್ಲ ಪದ-ಪ್ರಯೋಗಗಳನ್ನೂ ಪರಿಶೀಲಿಸಿದಾಗ ಮಕಾರದ ಪ್ರಾಚೀನತೆ ಮತ್ತು ಅಸ್ತಿತ್ವದ ಬಗ್ಗೆ ಅನುಮಾನವೇನೂ ತೋರುವುದಿಲ್ಲ. ಇದರಂತೆ— ಟಕಾರದ ಪ್ರಾಚೀನತೆಯ ವಿಚಾರದಲ್ಲೂ ಸಂದೇಹವಿಲ್ಲ. ಅನುಮಾನ ಉಳಿಯುವುದು ಪದದ ಆದಿಯ ದ್ರ/ದ-ದ ವಿಚಾರದಲ್ಲಿ. ದ-ಎಂಬ ಧ್ವನಿ ಘೋಷ ಸ್ಪರ್ಶಧ್ವನಿ. ಮೂಲದ್ರಾವಿಡದ ಪದದ ಆದಿಯಲ್ಲಿ ಘೋಷ ಸ್ಪರ್ಶ ವ್ಯಂಜನಗಳು ನಿಲ್ಲುವುದೇ ದ್ರಾವಿಡ ಭಾಷಾ ಧ್ವನಿ ವ್ಯವಸ್ಥೆಯ ನಿಯಮಕ್ಕೆ ವಿರುದ್ಧ.

ಇದೇ ಸಂದರ್ಭದಲ್ಲಿ ತಮಿಳು ಭಾಷೆಯನ್ನು ಕುರಿತು ಇರುವ ಒಂದೆರಡು ತಪ್ಪು ಕಲ್ಪನೆಗಳನ್ನು ಸರಿಪಡಿಸಿಕೊಳ್ಳುವುದು ಅಗತ್ಯ. ತಮಿಳು ಭಾಷೆಯಿಂದಲೇ ಕನ್ನಡ ಬಂದಿದೆಯೆಂದು ಕೆಲವರು ಭಾವಿಸಿದ್ದರು. ಆದರೆ ಆ ಭಾವನೆ ತೀರ ತಪ್ಪು. ತಿರುತ್ತಕ್ಕದೇವರ್ ಬರೆದ ಜೀವಕ ಚಿಂತಾಮಣಿಯಲ್ಲೂ,[1] ಶ್ರೀ ವರ್ಧದೇವರ್ ಬರೆದ ಶೂಲಾಮಣಿಯಲ್ಲೂ ಕನ್ನಡ ನುಡಿಯ ಪ್ರಭಾವ, ಪ್ರಯೋಗ ನಿಚ್ಚಳವಾಗಿದೆ. ತಮಿಳಿನ ಕಿಟ್ಟು, ಕಿಚ್ಚು, ನೀವ್, ಕಟು > ಗಡು, ಕುಟ್ಟು > ಗುಟ್ಟು, ಕೂಳಿ > ಗೂಳಿ, ಚಿಲ್ಲರೈ (?) ಎಂಬ ಪದಗಳು ಕನ್ನಡದಿಂದ ತಮಿಳಿಗೆ ಹೋಗಿವೆ. ಇದರಿಂದ ತಮಿಳು ಕನ್ನಡದಿಂದ ಬಂದಿತೆಂದು ಹೇಳಲು ಸಾಧ್ಯವೆ ? ಆದುದರಿಂದ ತಮಿಳು-ಕನ್ನಡ ಒಂದು ಸಮಾನ ಮೂಲದಿಂದ, ಮೂಲ ದ್ರಾವಿಡದಿಂದ ಬಂದ ಬಂಧುಗಳೇ ಹೊರತು ಒಂದು ಇನ್ನೊಂದರಿಂದ ಹುಟ್ಟಿಲ್ಲ. "ತಮಿಳು ಎರಡನೆಯ ಅಕ್ಷರವನ್ನು ಮೃದು ಮಾಡಿದ ಕಡೆ ಕನ್ನಡ ಈಗಲೂ ಮೊದಲಿನ ಧ್ವನಿಯನ್ನೇ ನಿಲ್ಲಿಸಿಕೊಂಡಿದೆ. ಉದಾಹರಣೆಗೆ

---

[1] Dr. N. R. R. Dixitur, Proceedings and Transactions of Oriental Conference, Vol. x, *Karnataka in Ancient Tamil Literature*.

ನಿಲುಕು, ಬಾಚು, ಒರಟು, ನಡತೆ, ಸುಣುಪು ಈ ಕುರುಹುಗಳು, ಉಳಿಕೆಗಳು ಕನ್ನಡ ತಮಿಳಿನಿಂದ ಹುಟ್ಟಿಲ್ಲ, ಕನ್ನಡವೇ ಮೊದಲೆಂದು ತೋರಿಸುತ್ತವೆ."[1] ಎಂಬ ಹೇಳಿಕೆಯನ್ನು ಅವಧಾರಿಸಬೇಕು.

ಮೂಲ ದ್ರಾವಿಡ ಭಾಷೆಯಿಂದ ಮೊದಲು ತೆಲುಗು, ಅನಂತರ ಕನ್ನಡ, ತರುವಾಯ ತಮಿಳು, ಅಲ್ಲಿಂದ ಮಲೆಯಾಳ—ಹೀಗೆ ಬೇರೆಯಾಗಿ ಬೆಳೆದುಬಂದಿವೆ ಎನ್ನಬಹುದು. ತಮಿಳು ಭಾಷೆಯ ಮೇಲೆ ಬೇರೆ ಯಾವ ಭಾಷೆಯ ಪ್ರಭಾವವೂ ಆಗಿಲ್ಲವೆಂದೂ, ಹೊರಗಿನ ಪ್ರಭಾವಗಳಿಗೆ ಅತೀತವಾಗಿ ನಿಂತು ದ್ರಾವಿಡ ಭಾಷೆಯ ಪೂರ್ವ ಸ್ವರೂಪವನ್ನು ಪ್ರತಿನಿಧಿಸುವ ಏಕೈಕ ಭಾಷೆ ಈ ತಮಿಳೊಂದೇ ಎಂದೂ ಕೆಲವರು ಸಾರಿದ್ದಾರೆ. ಇದರ ವಾಸ್ತವಾಂಶ ಬಹುಮಟ್ಟಿಗೆ ನಿಜವಾದರೂ, ಇದು ಸಂಪೂರ್ಣ ಸತ್ಯವಲ್ಲ.

> "...Neither Tamil nor any other single dialect, ancient or modern can be implicitly adopted as a faithful representative of the primitive Dravidian tongue"

ಎಂಬುದಾಗಿ ಕಾಲ್ಡ್‌ವೆಲ್ಲೇ ತಿಳಿಸಿರುವುದನ್ನು ಗಮನಿಸಬಹುದು. ತಮಿಳುಭಾಷೆಯಲ್ಲೂ ಸಂಸ್ಕೃತ, ಪೋರ್ಚುಗೀಸ್, ಅರಬ್ಬಿ, ಪಾರಸಿ, ಮರಾಠಿ—ಮೊದಲಾದ ಭಾಷೆಯ ಪದಗಳು ಸೇರಿಹೋಗಿವೆ ಎಂಬುದನ್ನು ವಿದ್ವಾಂಸರು ಆಧಾರಗಳಿಂದ ನಿರೂಪಿಸಿದ್ದಾರೆ.

ತಮಿಳು ಭಾಷೆಯಲ್ಲಿ ಸಂಘಂ ಕಾಲದ ಸಾಹಿತ್ಯ ಕೃತಿಗಳಲ್ಲೇ ಸಂಸ್ಕೃತ ಪದಗಳು ಸೇರಿಹೋಗಿವೆ. ಷಣ್ಮುಗಮ್, ಮೀನಾಕ್ಷಿ ಸುಂದರಮ್‌ಪಿಳ್ಳೈ—ಇವರು ತಮಿಳು ಭಾಷೆಯಲ್ಲಿರುವ ಪೋರ್ಚುಗೀಸ್ ಪದಗಳನ್ನು,[1] ಹುಸೇನ್ ನಾಯಿನಾರ್ ಎಂಬವರು ತಮಿಳಿನಲ್ಲಿ ಸೇರಿರುವ ಅರಬ್ಬಿ ಮತ್ತು ಪಾರಸಿ ಪದಗಳನ್ನೂ,[2] ತಮಿಳು ಭಾಷೆಯಲ್ಲಿ ಹರಡಿಕೊಂಡಿರುವ ಮರಾಠಿ ಪದಗಳನ್ನು ಕುರಿತು ಸುಬ್ರಹ್ಮಣಿಯಮ್ ಅವರೂ[3] ಲೇಖನಗಳನ್ನು ಬರೆದು ಆಧಾರಗಳನ್ನು ಒದಗಿಸಿದ್ದಾರೆ. ಯಾವುದೇ ಜೀವಂತಭಾಷೆ ತನ್ನ ಸಂಪರ್ಕ ಭಾಷೆಗಳ ಪ್ರಭಾವದಿಂದ ಹೇಗೆ ತಾನೆ ದೂರವಿರಲು ಸಾಧ್ಯ ?

> "...It can be taken as a well established fact that modern Tamil has absorbed the influence of many a language"[4]

---

[1] ೧೯೪೦ರ ಮಾರ್ಚಿಯಲ್ಲಿ ತಿರುಪತಿಯಲ್ಲಿ ಜರುಗಿದ ಅಖಿಲಭಾರತ ಪ್ರಾಚ್ಯ ಸಮ್ಮೇಳನದ ಕನ್ನಡ ವಿಭಾಗದ ಅಧ್ಯಕ್ಷರಾಗಿ ಶ್ರೀಯವರು ಮಾಡಿದ ಇಂಗ್ಲಿಷ್ ಭಾಷಣದ ಅನುವಾದ.

[2] Portugese influence as revealed by Tamil words, *Journal of Annamalai University*, 1951.

[3] Arabic and persian words in the Tamil language! Pro and tran of the 10th All India *OC*, March 1940.

[4] *Marathi Loans in Tamil*, IL, Vol. 14.

[5] S. Vaidyanathan. *A Study of Semantics of Sanskrit Loan words in Modern Tamil*, IL, T. J. Vol. 1.

ಆದುದರಿಂದಲೇ ತಮಿಳು ವ್ಯಾಕರಣಗಳಲ್ಲಿ ದೇಶ್ಯಪದಗಳನ್ನು ಇಯರ್ ಶೊಲ್ ಎಂದೂ ವಿದೇಶೀಯ ಪದಗಳನ್ನು ತಿಶೈಶೊಲ್ ಎಂದೂ ಕರೆದಿದ್ದಾರೆ.

ಎಲ್ಲ ವೇಳೆಗಳಲ್ಲೂ ತಮಿಳು ಭಾಷೆ ಪ್ರಾಚೀನರೂಪಗಳನ್ನು ಕಾಪಾಡಿಕೊಂಡಿದೆ ಯೆಂದೂ, ಅದೊಂದೇ ದ್ರಾವಿಡ ಕುಟುಂಬದ ಏಕೈಕ ಪ್ರತಿನಿಧಿಯೆಂದೂ ಹೇಳುವುದು ಸರಿಯಲ್ಲ. ಕೆಲವು ಸಂದರ್ಭಗಳಲ್ಲಿ ಕನ್ನಡನುಡಿಯೇ ಮೂಲದ್ರಾವಿಡದ ಸ್ವರೂಪವನ್ನು ಉಳಿಸಿಕೊಂಡಿರುವುದು ಕಾಣುತ್ತದೆ. ಉದಾಹರಣೆಗೆ ಹೇಳುವುದಾದರೆ, ಭಾಷಾ ವಿಜ್ಞಾನದ ವಿವೇಚನೆಯ ದೃಷ್ಟಿಯಿಂದ, ಕ್/ಚ್ ಎರಡೂ ಧ್ವನಿಗಳಿರುವ ಶಬ್ದರೂಪ ಗಳಲ್ಲಿ ಚಕಾರಕ್ಕಿಂತಲೂ ಪ್ರಾಚೀನವೆಂಬುದು ನಿರ್ವಿವಾದ. ಈ ವಿಚಾರದಲ್ಲಿ, ತಮಿಳು ಭಾಷೆಗಿಂತಲೂ ಕನ್ನಡ ಹೆಚ್ಚು ಹಳೆಯ ರೂಪಗಳನ್ನು ಉಳಿಸಿಕೊಂಡಿದೆ :

ಉದಾ :

| ಕನ್ನಡ | ತಮಿಳು |
|---|---|
| ಕಿೞಿದು | ಶಿೞಿದು |
| ಕೆದಱು | ಶಿದಱು |
| ಕೀ | ಶೀ |
| ಕೆಸಱು(ರು) | ಶೇಱು |

ಆದುದರಿಂದ, ದ್ರಾವಿಡ ಭಾಷೆಗಳಲ್ಲಿ ಭಾಷಾಶಾಸ್ತ್ರದ ಪ್ರಕಾರ ಏಳುವ ಪ್ರಶ್ನೆ ಗಳಿಗೆಲ್ಲ ತಮಿಳೊಂದರ ಸಹಾಯದಿಂದಲೆ ಉತ್ತರ ಹೇಳಲಾಗುವುದಿಲ್ಲ. "ಅದಕ್ಕೆ ಆ ವರ್ಗದ ಎಲ್ಲ ಮುಖ್ಯ ಭಾಷೆಗಳ ಅರಿವೂ ಅತ್ಯಗತ್ಯ. ಒಂದೊಂದು ಭಾಷೆಯ ಆಧಾರದ ಮೇಲೆಯೇ ವಿಮರ್ಶಿಸ ಹೊರಟರೆ ಹಲವು ಅಪಸಿದ್ಧಾಂತಗಳು ಹುಟ್ಟು ವುದರಲ್ಲಿ ಸಂಶಯವಿಲ್ಲ"[1] ಎಂಬ ಅಭಿಪ್ರಾಯ ಸಾಧುವಾಗಿದೆ.

ಇವಲ್ಲದೆ ಹಳಗನ್ನಡಕ್ಕೂ ತಮಿಳಿಗೂ ಇರುವ ನಿಕಟವಾದ ನಂಟು ನೋಡಬೇಕಾ ದುದು. ವ್ಯಾಕರಣ ಪ್ರಕ್ರಿಯೆಗಳಿಂದ ಮೊದಲುಗೊಂಡು, ಭಾಷಾ ಮರ್ಯಾದೆಯಿಂದ ಹಿಡಿದು ಪದ ಪ್ರಯೋಗಗಳವರೆಗೆ ಸಂಬಂಧ, ಸಾದೃಶ್ಯಗಳು ಸಮಾನವಾಗಿವೆ. ಕನ್ನಡ ಮತ್ತು ತಮಿಳು ಭಾಷೆಗಳು ಅನೇಕ ದೃಷ್ಟಿಗಳಿಂದ ತುಂಬ ಸಮೀಪವರ್ತಿಯಾಗಿವೆ. ಆದರೆ ಇ/ಎ ಹಾಗೂ ಉ/ಒ ಆಗಿರುವ ಧ್ವನಿವ್ಯತ್ಯಾಸದಲ್ಲಿ ಮಾತ್ರ ಕನ್ನಡ ಮತ್ತು ತೆಲುಗು ಭಾಷೆಗಳು ತೀರ ನಿಕಟವರ್ತಿಯಾಗಿ ನಿಲ್ಲುತ್ತವೆ. ಕನ್ನಡ ತಮಿಳು ಭಾಷೆ ಗಳಲ್ಲಿ ಇರುವ ಸಮಾನ ಪದಗಳನ್ನು ಎರಡು ಮೂರು ಬಗೆಯುಲ್ಲಿ ವರ್ಗೀಕರಿಸಬಹುದು. (೧) ರೂಪಭೇದವಾಗಲಿ, ಅರ್ಥಭೇದವಾಗಲಿ ಇಲ್ಲದ ಪದಗಳು (೨) ಅರ್ಥಭೇದ ವಿದ್ದು, ಆದರೆ ರೂಪಭೇದವಿಲ್ಲದ ಪದಗಳು. (೩) ರೂಪಭೇದವಿದ್ದು, ಆದರೆ ಅರ್ಥ ಭೇದವಿಲ್ಲದ ಪದಗಳು. ಇವುಗಳಿಗೆ ಕ್ರಮವಾಗಿ ಉದಾಹರಣೆಗಳು :

[1] ಎಲ್. ಗುಂಡಪ್ಪ, ಸಂಭಾವನೆ, ಕನ್ನಡ-ತಮಿಳು, ಪುಟ ೭೭೦.

(೧) ಅಡಿ, ಅಱಂ, ಅಱಿವು, ಕಣ್, ಕಾಲ್, ಪೆಣ್, ಮಣ್—ನಾಮವಾಚಕಗಳು.
ಅದು, ಇದು, ನಾನ್, ನೀನ್—ಸರ್ವನಾಮಗಳು.
ಇನಿಯ, ಕರಿಯ, ಕುಱು, ತಣ್, ನಲ್; ನೇರ್—ಗುಣವಾಚಕಗಳು.
ಅಡು, ಅಱಿ, ಓಡು, ಕುಡಿ, ತಣಿ—ಧಾತುಗಳು.
ಆಱು, ಏಳ್, ಪತ್ತು, ನೂಱು—ಸಂಖ್ಯಾವಾಚಕಗಳು.
ಅಮ್, ಇನ್, ಉಳ್, ಪು, ವು—ಪ್ರತ್ಯಯಗಳು.
ಉಮ್, ಪಿನ್, ಪೋಲ್, ಮುನ್—ಅವ್ಯಯಗಳು.

(೨) ಪಾರ್ { (ತಮಿಳು) ನೋಡು / (ಕನ್ನಡ) ಹಾರೈಸು : ಕಱು (> ಕುತ್ತು) { (ತ) ದೋಷ / (ಕ) ರೋಗ

(೩) ಒಂದು ~ ಒನ್ರು, ಎರಡು ~ ಇರಂಡು, ಪೊಸ ~ ಪುದು, ಅವ್ವ ~ ಅವ್ವೈ

ತಮಿಳಿನಲ್ಲಿ ಕೈಕಾಡಿ (Kaikadi), ಕೊರ್ವೀ (Korvi) ಮತ್ತು ಯೆರುಕಲ (Yerukala) ಮುಂತಾದ ಉಪಭಾಷೆಗಳಿವೆ. ಧ್ವನಿ ವ್ಯತ್ಯಾಸವನ್ನು ಮೂಲದ್ರಾವಿಡ ಮಾತೃಭಾಷೆಯಿಂದ ತರುವಾಯದ ಭಾಷೆಯಲ್ಲಿ ಹೇಗೆ ನಡೆದಿದೆಯೆಂದು ನೋಡುವುದು ಸರಿಯಾದ ಕ್ರಮ. ಆದರೂ ತಮಿಳು ಮತ್ತು ಕನ್ನಡ ಭಾಷೆಗಳ ಸಾಹಿತ್ಯಕೃತಿಗಳ ಪ್ರಯೋಗಗಳನ್ನು ಗಮನಿಸಿದಾಗ ಕೆಲವು ಧ್ವನಿ ವ್ಯತ್ಯಾಸಗಳು ನಡೆದಿರುವುದು ಎದ್ದು ಕಾಣುತ್ತದೆ. ಅಂಥ ಕೆಲವು ಧ್ವನಿ ವ್ಯತ್ಯಾಸಗಳನ್ನು ಉದಾಹರಣೆಗಳೊಡನೆ ಗುರುತಿಸಬಹುದು.

| ತಮಿಳು | ಕನ್ನಡ |
|---|---|
| ಉಯಿರ್ | ಉಸಿರ್ > ಉಸಿರು |
| ಎಯ್ | ಎಸು/ಎಸೆ > ಇಸು |
| ಎಯಿಲ್ | ಎಸಿಲ್ > ಇಸಿಲ |
| ಪೆಯರ್ | ಪೆಸರ್ > ಹೆಸರು |
| ವಯಿಱ್ | ಬಸಿಱ್ > ಬಸಿರು |
| ವೆಯಿಲ್ | ಬಿಸಿಲ್ > ಬಿಸಿಲು |

ತ. – ಯ – : ಕ. – ಸ –

ಉದಡು : ಒಸಡು

ಮೊದಲೈ : ಮೊಸಳೆ

ತ. – ದ – : ಕ. – ಸ –

ಇದೞ್ : ಎಸೞ್

ನುದಲ್ : ನೊಸಲು

ಕಾಲ್ಡ್‌ವೆಲ್ ಈ ಪರಿವರ್ತನೆಯನ್ನು ಕುರಿತು ಹೇಳುವ ಮಾತುಗಳು ಮನನೀಯ ವಾಗಿವೆ:

It seems unsafe, however, to assume that in these cases y was the original and s the corruption. It may as well be that s was the original and y the corruption. The Tamil Peyar may therefore be a softned form of the Canarese hesar (Tulu pudar), and what renders this more likely is that the Tamil is Peyar itself still further softened into Per.[1]

ಆದುದರಿಂದ ಮೇಲಿನ ಉದಾಹರಣೆಗಳನ್ನಿತ್ತು ನಿರೂಪಿಸಿದ ಧ್ವನಿ ನಿಯಮದಲ್ಲಿ ಯಾವುದು ಯಾವುದರಿಂದ ಬಂದಿತೆಂಬುದನ್ನು ತೋರಿಸುವ ಗೋಜಿಗೆ ಹೋಗಿಲ್ಲ. ಅಲ್ಲದೆ ಇವು ಸಾರ್ವತ್ರಿಕ ನಿಯಮಗಳೇನೂ ಅಲ್ಲ. ಕೆಲವೊಮ್ಮೆ ಅಪವಾದಗಳೂ ಇರುತ್ತವೆಯೆಂಬುದನ್ನು ಮರೆಯಲಾಗದು.

| ತಮಿಳು | ಕನ್ನಡ |
|---|---|
| ಯಾನೈ | ಆನೆ |
| ಯಾಟ್ಟು | ಆಡು |
| ಯಾಮೈ | ಆಮೆ |
| ಯೆರುಮೈ | ಎಮ್ಮೆ |

ತ. ವಸವ– : ಕ. ಸವ–; ಯಾ– : ಆ–; ಯ– : ಎ–.

ಪದದ ಆದಿಯಲ್ಲಿ

| ತಮಿಳು | ಕನ್ನಡ |
|---|---|
| ಕ– | ಕ– : ಗ– |
| ಚ– | ಚ– : ಸ– : ಜ– |
| ತ– | ದ– : ತ– / ಚ–; ಸ್ |
| ಪ– | ಪ– : ಹ– : ಬ– / ವ– |
| ವ– | ಬ– |
| ಶ– | ಕ– |
| ಇ– | ಎ– |
| ಉ– | ಒ– |
| ಎ– | ಏ– |
| ಎ– / ಒ– | ಇ– / ಉ– |

[1] *ACGODLS*, 1956, p. 153.

ಮೂಲದ್ರಾವಿಡದ ಸ್ವರಗಳಾದ ಇ ಮತ್ತು ಉ ಗಳು ತಮಿೞಿನಲ್ಲಿ ಇ, ಉ ಆಗಿ ಉಳಿದಿವೆ, ಕನ್ನಡದಲ್ಲಿ ಎ, ಒ ಆಗಿವೆ. (ಇದಕ್ಕೆ ಅಪವಾದಗಳೂ ಇರಬಹುದು).

ಈ ವ್ಯತ್ಯಾಸಗಳಿಗೆ ಕೆಲವು ಅಪವಾದಗಳೂ ಉಂಟು.

| ಕನ್ನಡ | ತಮಿಳು |
|---|---|
| ಪಿರಿಯ | ಪೆರಿಯ |
| ಇಲಿ | ಎಲಿ (?) ಎಲುಕ (ತೆಲುಗು) |
| *ಇೞಿದು | ಎೞಿದು (?) |

| ತಮಿಳು | ಕನ್ನಡ | ತಮಿಳು | ಕನ್ನಡ |
|---|---|---|---|
| ಇಟ್ಟಿ | ಎಟ್ಟಿ | ಉಡಲ್ | ಒಡಲ್ |
| ಇಡರ್ | ಎಡರು | ಉಡೈ(ಯ) | ಒಡೆ(ಯ) |
| ಇಡೈ | ಎಡೆ | ಉಣರ್ | ಒಣರ್ |
| ಇಣೈ | ಎಣೆ | ಉಣಂಗು | ಒಣಗು |
| ಇದೞ್ | ಎಸೞ್ | ಉದಱು | ಒದರು |
| ಇರೈ | ಎರೆ | ಉರಂಗು | ಒರ(ಱ)ಗು |
| ಇಲವಂ | ಎಲವ | ಉರಲ್ | ಒರಲ್ |
| ಇಲೈ | ಎಲೆ | ಉರೈ | ಒರೆ |
| ಇಳೈ | ಎಳೆ (=ಭೂಮಿ) | ಉೞೈ | ಒೞೆ |
| ಇರಂಡು | ಎರಡು | ಕುಡೈ | ಕೊಡೆ |
| ಇೞೈ | ಎೞೆ (ಸೆಳೆ) | ಕುರಲ್ | ಕೊರಲು |
| ಕಿಡ | ಕೆಡೆ | ಕುಲೈ | ಕೊಲೆ |
| ತಿರಳ್ | ತೆರಳು | ಕುೞಡು | ಕೊೞಡು |
| ನಿರೈ | ನೆರೆ | ಕುೞಲ್ | ಕೊೞಲು |
| ನಿಲಂ | ನೆಲ | ಕುಳಂ | ಕೊಳಮ್ |
| ನಿೞಲ್ | ನೆೞಲ್ | ತುಡಂಗು | ತೊಡಗು |
| ಪಿಣಮ್ | ಪೆಣ | ತುಡೈ | ತೊಡೆ |
| ಪಿಣೈ | ಪೆಣೆ | ನುಗಂ | ನೊಗ |
| ಪಿರಗು | ಪೆರಗು (> ಹೆರಗು) | ನುದಲ್ | ನೊಸಲ್ |
| ಪಿೞಾ | ಪೆೞ | ಪುಗೈ | ಪೊಗೆ (> ಹೊಗೆ) |
| ಮತುವೈ | ಮದುವೆ | ಪುಗರ್ | ಪೊಗರ್ (> ಹೊಗರು) |

* ಕನ್ನಡದ ಹಳೆಯ ಶಾಸನದಲ್ಲಿ ಎೞಿದು ರೂಪವಿದೆ. (ಉದಾ: *MAR*, 1939, No. 22)

ವಿಳಕ್ಕು ಬೆಳಕು
ವಿಳ್ಳೈ ಬೆಳೆ
ಶಿಱಪ್ಪು ಸೆಱಪು
ವಿೞಿ ಪಿಳಿ (ಪಿಳಿಪಿಳಿ)
ತ. ಇ – : ಕ. ಎ –
– ಇ – : – ಎ –
ಇದೞ್ ಎಸೞ್
ನುದಲ್ ನೊಸಲ್
ಪುದು ಪೊಸ
(ತ) – ದ – : – ಸ – (ಕ)
ಉದಡು ಒಸಡು
ಮೊದಲ್ಲೈ ಮೊಸಳೆ
ಮುೞಂಗು ಮೊಳಗು
ಮುಳ್ಳೈ ಮೊಳೆ
ಸುಡರ್ ಸೊಡರು
ಸುಂಡಲ್ ಸೊಂಡ(ಡಿ)ಲು
ಉ – (ತ) : ಒ – (ಕ)
– ಉ – : – ಒ –
ಇಡು ಇಡು
ಇೞಿ ಇೞಿ
ಉಡು ಉಡು
ಕಿಳಿ ಕಿಳಿ > ಗಿಳಿ
ಸಿಮಿೞ್ ನಿಮಿೞ್
ಪಿಡಿ ಪಿಡಿ
ಕುಳಿರ್ ಕುಳಿರ್
ಪುರಿ ಪುರಿ
ಪುಲಿ ಪುಲಿ
ಮಿಗು ಮಿಗು
ಇಲ್ ಇಲ್
ಉಯರ್ ಉಯರ್ (> ಒಯ್ಯು)
ನಿಲ್ ನಿಲ್
ಪಿನ್ ಪಿನ್

ಪುದು ಪೊಸ (> ಹೊಸ)
ಪುನಲ್ ಪೊನಲ್ (> ಹೊನಲ್)
ಪುನ್ನೈ ಹೊನ್ನೆ
ಪುಱಳ್ ಪೊರಳ್ (> ಹೊರಳು)
ಪುಲಮ್ ಪೊಲಮ್ (> ಹೊಲಂ)
ಪುೞಲ್ ಪೊೞಲ್ (> ಹೊಳಲು)
ಪುಂಗಂ ಪೊಂಗೆ (> ಹೊಂಗೆ)
ಮುಗ ಮೊಗ
ಮುದುಲ್ಲೈ ಮೊದಲು
ಮುನ್ನೈ ಮೊನೆ
ಮುಱ್ಱೈ ಮೊಱೆ
ಮುಲ್ಲೈ ಮೊಲೆ
ಅಱ್ಱೈ ಅಱೆ (> ಅರೆ)
ಉಱ್ಱೈ ಉಱೆ (> ಉರೆ)
ಕಱ್ಱೈ ಕಱೆ (> ಕರೆ)
ನಗ್ಗೈ ನಗೆ
ಪೊಱ್ಱೈ ಪೊಱ್ಱೈ > ಪೊರೆ > ಹೊರೆ
ವಗ್ಗೈ ಬಗೆ
ವಱ್ಱೈ ಬಱೆ > ಬರೆ
ವಾಗ್ಗೈ ಬಾಗೆ
– ಐ (ತ) : – ಎ (ಕ)
ವಗ್ಗೈ ಬಗೆ
ವಱ್ಱೈ ಬಱೆ
ವಶಿ ಬಸಿ
ವಾಗ್ಗೈ ಬಾಗೆ
ವಾೞ್ ಬಾೞ್
ವಿಡು ಬಿಡು
ವಿಲ್ಲೈ ಬೆಲೆ
ವೀಡು ಬೀಡು
ವೀಶು ಬೀಸು
ವ – (ತ) : ಬ – (ಕ)
(ಸಂ) > ಕನ್ನಡ ತಮಿೞ್

| | |
|---|---|
| ಪುಣ್ | ಪುಣ್ > ಹುಣ್ಣು |
| ಪುಲ್ | ಪುಲ್ > ಹುಲ್ಲು |

ಮೇಲಿನ ಉದಾಹರಣೆಗಳು,

ಇ – : ಎ –,

ಮತ್ತು

ಉ – : ಒ – ಆಗುವ

ನಿಯಮಕ್ಕೆ ಅಪವಾದಗಳು

| | |
|---|---|
| ಶಿವಜು | ಕೆದಜು |
| ಬಿಜಿತು | ಕಿಜಿದು |
| ಚಿಲ | ಕೆಲ |

(ಶೆ) ಚೆಯ್ ಕೆಯ್

(ತ) ಚ್ – : (ಕ) ಕ್ –

| | |
|---|---|
| ಶರಣ್ | ಅರಣ್ |
| ಶ್ರಾವಣ | ಓಣಮ್ (ತಿರುವೋಣ) |
| ಸಾಸಿರ | ಆಯಿರ |

(ಕ)ಸ –, ಶ – : –ಸ್ವರ (ತ)

| | |
|---|---|
| ಜ್ಯೋತಿ | ಶೋದಿ |
| ಆಷಾಢ | ಆಡಿ |
| ಹಾಸ್ಯ | ಆರಚಿಯಮ್ |

# ಮಲೆಯಾಳ(ಮ್)

ದಕ್ಷಿಣ ಸಮುದ್ರ ತೀರದ ಪ್ರದೇಶ ಹಾಗೂ ಅಲ್ಲಿನ ಭಾಷೆಯನ್ನು ಪ್ರತಿನಿಧಿಸುವ ಮಲೆಯಾಳಂ ಎಂಬ ಹೆಸರು ಅತ್ಯಂತ ಹಳೆಯ ಹೆಸರಾಗಿರದೆ ಹೊಸ ಹೆಸರಿರಬೇಕೆಂದು ಬಲ್ಲಿದರು ಭಾವಿಸಿದ್ದಾರೆ. ಏಕೆಂದರೆ ಹದಿನೇಳನೆಯ ಶತಮಾನಕ್ಕಿಂತಲೂ ಹಿಂದಿನ ಶಾಸನಗಳಲ್ಲಾಗಲಿ, ಅಥವಾ ಇತರ ಸಾಹಿತ್ಯ ಕೃತಿಗಳಲ್ಲಾಗಲಿ ಮಕಾರಾಂತವಾದ ಮಲೆಯಾಳಂ ಎಂಬ ಪದದ ಪ್ರಯೋಗ ದೊರೆತಿಲ್ಲ. ೧೭ನೆಯ ಶತಮಾನಕ್ಕಿಂತಲೂ ಹಿಂದೆ ಇದ್ದ ಪದಗಳೆಂದರೆ ಮಲನಾಟ್ಟು ಮತ್ತು ಮಲೆಯಾಳಿ ಹಾಗೂ ಮಲೆಯಾಣ್ಮ ಎಂಬುವು. ಇವುಗಳಲ್ಲಿ ಮಲನಾಟ್ಟು ಎಂಬುದು ಆ ಜಾಗಕ್ಕೆ ಬಳಸುತ್ತಿದ್ದ ಹೆಸರು ; ಮಲೆಯಾಳರ್ ಅಥವಾ ಮಲೆಯಾಳಿ ಎಂಬುದು ಅಲ್ಲಿನ ಜನರಿಗೆ ಅನ್ವಯವಾಗುತ್ತಿದ್ದ ಹೆಸರು ; ಮಲೆಯಾಣ್ಮ ಎಂಬುದು ಅವರು ಆಡುವ ಭಾಷೆಗೆ ಇದ್ದ ಹೆಸರು.[1] ಇವೆಲ್ಲ ಪದಗಳಿಗಿಂತಲೂ ಹಿಂದೆ ತಮಿಳ್ ಎಂಬ ಪದವನ್ನೇ ಈ ಭಾಷೆಗೂ ಬಳಸುತ್ತಿದ್ದಿರಬೇಕೆಂಬ ಮತ್ತೊಂದು ಊಹೆಯೂ ಇದೆ.

ಮಲೆ (=ಬೆಟ್ಟ) > ಮಲೆಯ + ಆಳಮ್ > ಮಲೆಯಾಳಮ್

ಮಲೆಯಾಣ್ಮ > ಮಲೆಯಾಟ್ಮ : ಮಲೆಯಾಯ್ಮ

ಹೀಗೆ ಈ ಪದಗಳ ನಿಷ್ಪತ್ತಿಯನ್ನು ಬುದ್ಧಿಯೊಡೆಯರು ನಿರೂಪಿಸಿದ್ದಾರೆ. ಮಲೆಯಾಯ್ಮ ಎಂಬ ರೂಪ ಅಪರೂಪ.

ಇನ್ನು ಇಲ್ಲಿನ ಎಲ್ಲ ಪದಗಳ ಮೊದಲಲ್ಲಿ ಕಾಣುವ ಮಲೆ ಎಂಬ ಶಬ್ದದ ವಿಚಾರ. ಈ ಮಲೆ ಎಂಬ ಪದ ಸಂಸ್ಕೃತದ ಭಾಷೆಯ ಮಲೆಯ ಪದಕ್ಕೆ ಸಂಬಂಧಪಟ್ಟಿದಲ್ಲ ಎಂದು ಕೆಲವರು ಹೇಳುವಂತೆ ವಿವರಿಸುವುದಕ್ಕಿಂತಲೂ ಈ ಸಂಸ್ಕೃತದ ಮಲೆಯ ಪದಕ್ಕೆ ಮೂಲವಾದ ದ್ರಾವಿಡ ಭಾಷೆಯ ಮಲೈ > ಮಲೆ > ಮಲೆಯ—ಎಂಬ ಪದಕ್ಕೆ ಸಂಬಂಧಪಟ್ಟಿದೆಯೆಂದು ಹೇಳುವುದು ಸಮಂಜಸವಾಗಿದೆ. ಮಲೆಯಾಳಂ ಎಂಬುದು ಮಲೆಯಾಟಂ ಆಗಿ ಅನಂತರ ಮಲೆಯಾಟ್ಮ (– ಆಳಂ < – ಆಟಂ > – ಆಟ್ಮ ) ಎಂದು ಆಗಿದೆಯೆಂಬುದು ತಿಳಿದವರ ವಿವರಣೆ. ಸಾಮಾನ್ಯವಾಗಿ ಚಾಕ್ಷುಷ ದ್ರಾವಿಡ

[1] L. V. R. Iyyer, *What is in a Name?*

ಭಾಷೆಗಳಲ್ಲಿ ಟ>ಳ ಆಗುವುದಕ್ಕೆ ನಿದರ್ಶನಗಳಿವೆ. ಆದರೂ ಬಹಳ ಕಡಮೆಯಾಗಿ ಳ>ಟ ಆಗಿರುವುದೂ ಕಂಡುಬರುತ್ತದೆ. ಆ 'ಟ' ಎಂಬ ಧ್ವನಿ ಮತ್ತೆ ಮೃದುವರ್ಣವಾಗಿ ಯಕಾರವಾಗಿ ಪರಿಣಮಿಸುವುದೂ ಉಂಟು. ಳ>ಟ>ಯ. ಈ ನಿಯಮಕ್ಕೆ ನಿದರ್ಶನವಾಗಿ ತಮಿಳು ಭಾಷೆಯಲ್ಲಿ ಫಲ>ಫಳಂ>ಫಟಿಂ>ಪಯನ್—ಎಂದು ವ್ಯತ್ಯಾಸಗೊಂಡಿರುವುದನ್ನು ನೋಡಬಹುದು. ಇವೇ ರೀತಿಯಲ್ಲಿ ಇಲ್ಲಿನ ಈ ಮಲೆಯಾಳಂ ಎಂಬುದು ಮಲೆಯಾಟಿಂ ಆಗಿ, ಅನಂತರ ಮಲೆಯಾಟ್ಮ ಎಂದು ಉಚ್ಚಾರಗೊಂಡು ಅಲ್ಲಿಂದ ಅದೇ ಮಲೆಯಾಯ್ಮ ಎಂದು ಆಗಿರಬೇಕು.

ಮಲೆಯಾಳದ ಮೊಟ್ಟಮೊದಲನೆಯ ಶಾಸನವೆಂದರೆ ಸ್ಥಾಣುರವಿಯ ಕೊಟ್ಟಾಯಂ ಶಾಸನ.[1] ಮಲೆಯಾಳ ಭಾಷೆಯ ಮೇಲೆ ಸಂಸ್ಕೃತ, ತಮಿಳು ಭಾಷೆಗಳು ಬಹಳವಾದ ಪ್ರಭಾವ ಬೀರಿವೆ.[2] ವ್ಯಾಕರಣದ ದೃಷ್ಟಿಯಿಂದ ನಾವು ತುಲನಾತ್ಮಕವಾಗಿ ವಿವೇಚಿಸುವಾಗ ವಿಶೇಷವಾಗಿ ತಮಿಳು ಮತ್ತು ಇತರ ದ್ರಾವಿಡ ಭಾಷೆಗಳೊಡನೆ ಮಲೆಯಾಳ ಭಾಷೆಗೆ ಇರುವ ನಿಕಟ ಬಾಂಧವ್ಯ ಎದ್ದು ಕಾಣುತ್ತದೆಯಾದರೂ, ಶೈಲಿಯ ದೃಷ್ಟಿಯಿಂದ ಮಲೆಯಾಳ ಭಾಷೆಯ ಮೇಲೆ ಸಂಸ್ಕೃತ ಭಾಷೆಯು ಆಳವಾದ ಪ್ರಭಾವ ಒಡೆದು ನಿಲ್ಲುತ್ತದೆ. ಇದರ ಶೈಲಿಯನ್ನು, ಬರವಣಿಗೆಯ ಬಂಧವನ್ನು ಗಮನಿಸಿದರೆ, ಸಂಸ್ಕೃತ ಭಾಷೆಯಲ್ಲಿ ವಿದ್ವಾಂಸರಾಗಿರುವವರು ತೀರ ಅಲ್ಪ ಸ್ವಲ್ಪ ಪ್ರಯತ್ನದಿಂದ ಮಲೆಯಾಳ ಭಾಷೆಯ ಮೇಲೆ ಒಳ್ಳೆಯ ಪ್ರಭುತ್ವವನ್ನು ಬೇಗನೆ ಪಡೆಯಬಹುದೆನ್ನಿಸುತ್ತದೆ. ಇತರ ದ್ರಾವಿಡ ಭಾಷೆಗಳಿಗೆ ಹೋಲಿಸಿದಾಗ ಸಂಸ್ಕೃತ ಭಾಷೆಯ ಪದಗಳು ಕನ್ನಡ-ತೆಲುಗು ಭಾಷೆಗಳಲ್ಲೂ ಸಮೃದ್ಧವಾಗಿ ಸೇರಿವೆಯಾದರೂ ಮಲೆಯಾಳದ ಒಂದು ವಿಶಿಷ್ಟ ಶೈಲಿಯಲ್ಲಿ ಕಾಣುವಷ್ಟು ಮತ್ತೆಲ್ಲಿಯೂ ಕಂಡುಬರುವುದಿಲ್ಲ.

ಸಂಸ್ಕಾರ ಹಾಗೂ ಸಾಹಿತ್ಯ ಸಂಪನ್ನ ದ್ರಾವಿಡ ಭಾಷೆಗಳಲ್ಲಿ ಸಂಸ್ಕೃತದ ಪ್ರಭಾವ ಮಲೆಯಾಳದಲ್ಲೇ ಹೆಚ್ಚು.[3] ತೆಲುಗು ಭಾಷೆ ಅದರ ತರುವಾಯವೂ, ಕನ್ನಡ ಅನಂತರವೂ, ತಮಿಳು ತರುವಾಯವೂ ಬರುತ್ತವೆ. ಸಂಸ್ಕೃತದ ಪದಗಳು ಅತ್ಯಂತ ಕಡಮೆ ಇರುವುದು ತಮಿಳು ಭಾಷೆಯಲ್ಲಿ. ಸಂಸ್ಕೃತ ಭೂಯಿಷ್ಠವಾದ ಮಲೆಯಾಳದ ಶೈಲಿಗೆ 'ಮಣಿ ಪ್ರವಾಳ ಶೈಲಿ'ಯೆಂದು ಹೆಸರು. ಇದು ಇತರ ದ್ರಾವಿಡ ಭಾಷೆಗಳಲ್ಲಿ ಇಲ್ಲದ, ಮಲೆಯಾಳ ಭಾಷೆಯಲ್ಲಿ ಮಾತ್ರ ಕಾಣುವ ವಿಶೇಷ ಅಂಶ, ಒಂದು ವಿಶಿಷ್ಟ ಶೈಲಿ. ಆದರೆ ಪಾರ್ಶ್ವಪಂಡಿತ ಕವಿ ತನ್ನ ಪಾರ್ಶ್ವನಾಥ ಪುರಾಣದಲ್ಲಿ, ಕನ್ನಡದಲ್ಲಿ ಅಗ್ಗಳ ಕವಿ ಈ ಶೈಲಿಯಲ್ಲಿ ಕೃತಿ ರಚನೆಮಾಡಿ ಅಗ್ಗಳನೆನಿಸಿಕೊಂಡನೆಂದು ಕೊಂಡಾಡಿದ್ದಾನೆ (೧-೬೨). ಇದು ಪರಿಭಾವನಾರ್ಹ ವಿಚಾರ. ಹದಿನಾಲ್ಕನೆಯ ಶತಮಾನದ ಕೃತಿಯಾದ ಲೀಲಾವತಿ ತಿಲಕಂ ಎಂಬ ಕೃತಿಯಲ್ಲಿ ಈ ಮಣಿಪ್ರವಾಳ ಶೈಲಿಯ

---

[1] *Kottayam Plates*, A. D. 820.

[2] A. C. Sekhar, *The Evolution of Malayalam*.

[3] Rev. Dr. H.Gundert, *Malayalam Dictionary*, 1872, Mangalore.

ನಿದರ್ಶನಗಳನ್ನೂ, ಹಾಗೂ ಇವಕ್ಕೆ ಸಂಬಂಧಪಟ್ಟ ಇತರ ವಿಮರ್ಶೆಯ ವಿಚಾರಗಳನ್ನೂ ನೋಡಬಹುದು.

ಮೂಲ ಸಂಸ್ಕೃತ ಭಾಷೆಯ ಸ್ವಪ್ನವಾಸವದತ್ತ ನಾಟಕವನ್ನು ಆಧರಿಸಿ ಬರೆದ ಮಲೆಯಾಳದ ಒಂದು ಗ್ರಂಥದಿಂದ ಎತ್ತಿಕೊಂಡ ವಾಕ್ಯದ ಈ ಒಂದು ತುಣುಕನ್ನು ನೋಡಿ: 'ಬಹುಶೋಪ್ಯಮಿಚೇಟುಟ್ಟು ಯಯಾಮೂಂನೋಕ್ಕ ಮಾಣಯಾ। ಹಸ್ತೇನ ಪ್ರಸ್ತ ಶೂರ್ಪೇಣ ಕೃತಮಾಕಾಶ ಚೇಟುತವು॥' ಸಂಸ್ಕೃತ ಭಾಷೆಯನ್ನು ಕಲಿಸಲು ಸಹಾಯವಾಗಲೆಂದು ರಚಿತವಾಗಿರುವ ಬಾಲ ಪ್ರಭೋಧ ಎಂಬ ಪದ್ಯರೂಪ ದಲ್ಲಿರುವ ಜನಪ್ರಿಯ ಮಲೆಯಾಳ ವ್ಯಾಕರಣ ಗ್ರಂಥದಲ್ಲಿ ಸತಿ ಸಪ್ತಮಿಾ ಭಾವೇ ಪ್ರಯೋಗಗಳಿಗೆ ಮಲೆಯಾಳ ಭಾಷೆಯಿಂದಲೇ ಉದಾಹರಣೆಗಳನ್ನು ಎತ್ತಿಕೊಡಲಾಗಿದೆ. ಕೇವಲ ಸಂಸ್ಕೃತ ನಿಷ್ಪನ್ನರೂಪಗಳನ್ನೇ ಅಲ್ಲದೆ ಸಂಸ್ಕೃತದ ವಿಭಕ್ತ್ಯಂತ್ಯ ರೂಪ ಗಳು, ಮಲೆಯಾಳದ ವಿಭಕ್ತ್ಯಂತ್ಯ ರೂಪಗಳು—ಇವೆರಡೂ ಮಿಶ್ರಣಗೊಂಡು ರಚಿತ ವಾಗಿರುವ ಹೊಂದಾಣಿಕೆಯ ಶೈಲಿಯೇ ಈ ಮಣಿಪ್ರವಾಳ ಶೈಲಿ.[1]

ಹಾಗೆಂದ ಮಾತ್ರಕ್ಕೆ ದ್ರಾವಿಡದ ಅಂಶ ಮಲೆಯಾಳ ಭಾಷೆಯಲ್ಲಿ ಇಲ್ಲವೇ ಇಲ್ಲವೆಂದು ತಿಳಿಯಬಾರದು.

| | | |
|---|---|---|
| ಞಾನ್ | ಪೋಕುನ್ನು | ನಾನು ಹೋಗುತ್ತೇನೆ. |
| ನೀ | ,, | ನೀನು ಹೋಗುತ್ತೀಯೆ. |
| ಅವನ್ | ,, | ಅವನು ಹೋಗುತ್ತಾನೆ. |
| ಅವಳ್ | ,, | ಅವಳು ಹೋಗುತ್ತಾಳೆ. |
| ಅದು | ,, | ಅದು ಹೋಗುತ್ತದೆ. |
| ಞಙ್ಙಳ್ | ,, | ನಾವು ಹೋಗುತ್ತೇವೆ. |
| ನಿಙ್ಙಳ್ | ,, | ನೀವು ಹೋಗುತ್ತೀರಿ. |
| ಅವರ್ | ,, | ಅವರು ಹೋಗುತ್ತಾರೆ. |
| ಅವ | ,, | ಅವು ಹೋಗುತ್ತವೆ. |

ಮಲೆಯಾಳದಲ್ಲಿ ವಚನ ಪುರುಷ ಲಿಂಗಭೇದಗಳಿಲ್ಲದೆ ಕ್ರಿಯಾಪದ ಒಂದೇ ರೂಪ ದಲ್ಲಿ ವ್ಯವಹಾರವಾಗುತ್ತದೆ. ಇದು ಮುಖ್ಯವಾದ ಅಂಶ. ದ್ರಾವಿಡ ಭಾಷೆಗಳಲ್ಲಿ ಲಿಂಗ ವ್ಯವಸ್ಥೆ ಮೂಲಕಾಲದಲ್ಲಿ ಇರಲಿಲ್ಲವೆಂಬ ಅಭಿಪ್ರಾಯವಿದೆ. ಅಂದರೆ ಅರ್ಥ ಸಂದರ್ಭಾನುಸಾರವಿರುತ್ತಿತ್ತು. ಕ್ರಮೇಣ ನಾಮಪದಗಳಲ್ಲಿ ಲಿಂಗಭೇದ ತಲೆದೋರಿ ಅನಂತರ ಕ್ರಿಯಾಪದಗಳಲ್ಲೂ ಈ ವ್ಯತ್ಯಾಸ ಕಾಣಿಸಿಕೊಂಡಿತೆಂದು ಹೇಳುವರು. ಈ ಹೇಳಿಕೆಯನ್ನು ಮಲೆಯಾಳ ಭಾಷೆಯ ಮೇಲಿನ ವ್ಯವಸ್ಥೆ ಸಮರ್ಥಿಸುತ್ತದೆ. ಇದು

[1] Rev. Dr. H. Gundert, *Malayalam Grammar*, 1869, Mangalore

ನಿಜವಿದ್ದಲ್ಲಿ ಈ ಭಾಷೆ ಮೂಲ ದ್ರಾವಿಡ ಸ್ವರೂಪವನ್ನು ಉಳಿಸಿಕೊಂಡು ಬಂದಿದೆ ಯೆಂದು ಹೇಳಬಹುದು.

ಮಲೆಯಾಳ ಭಾಷೆಯ ಹಳೆಯ ಹೊತ್ತಗೆಗಳು ತಮಿಳು ಗ್ರಂಥಗಳಂತೆಯೇ ಇವೆ. ಈ ಕಾರಣದಿಂದಲೇ ಮಲೆಯಾಳ ಭಾಷೆಯನ್ನು ಸ್ವತಂತ್ರವಾದ ಅಥವಾ ಪ್ರತ್ಯೇಕವಾದ ಭಾಷೆ ಎನ್ನದೆ, ಒಮ್ಮೊಮ್ಮೆ ತಮಿಳು ಭಾಷೆಯ ಉಪಭಾಷೆ ಎಂದು ಕರೆಯುವರು. ಆದುದರಿಂದ ಈ ಸಂಸ್ಕೃತ ಏನಿದ್ದರೂ ಅನಂತರ ಮಣಿಪ್ರವಾಳ ಶೈಲಿಯಲ್ಲಿ ಕಾಣಿಸಿ ಕೊಂಡಿದೆ. ಪೂರ್ವ-ಪಶ್ಚಿಮ ಎಂಬ ದಿಕ್ಕುಗಳನ್ನು ಹೇಳುವ ಅರ್ಥದಲ್ಲಿ ತಮಿಳು ಭಾಷೆಯಲ್ಲಿರುವ ಮೇಲ್-ಕಿಟಕ್ಕು ಪದಗಳು ಮಲೆಯಾಳ ಭಾಷೆಯಲ್ಲೂ ಬಳಕೆ ಯಲ್ಲಿವೆ. ಇಂಥ ಪದಗಳು, ಸಮಾನ ರೂಪಗಳು ಅನಂತ. ಸಂಸ್ಕೃತ ಪದಗಳನ್ನು ಬಿಟ್ಟರೆ ಮಲೆಯಾಳ ಭಾಷೆ ಉಳಿದ ದ್ರಾವಿಡ ಭಾಷೆಗಳಲ್ಲಿ ತಮಿಳು ಭಾಷೆಗೆ ತೀರ ಸಮಿಾಪವಾಗಿದೆ. ಹೀಗಾಗಿ ಕೆಲವು ಸಂಸ್ಕೃತ ಗ್ರಂಥಕಾರರು ಮಲೆಯಾಳ ಭಾಷೆ ಯನ್ನು ತಮಿಳಿಗಿಂತ ಬೇರೆಯೆಂದು ಭಾವಿಸಿಲ್ಲ.

ಮಲೆಯಾಳದ ಬಹುಭಾಗ ಸಮುದ್ರತೀರದಲ್ಲೂ, ಸಮುದ್ರತೀರಕ್ಕೆ ಹತ್ತಿರವಾಗಿಯೂ ಇರುವುದರಿಂದ ಕ್ರಿ.ಪೂ. ದಿಂದಲೂ ಹೊರನಾಡಿನ ವರ್ತಕರ ಸಂಪರ್ಕಕ್ಕೆ ಪಕ್ಕಾಗಿದೆ. ಒಬ್ಬರಾದಮೇಲೆ ಒಬ್ಬರಂತೆ ಫೊನಿಷಿಯನ್ನರೂ, ಗ್ರೀಕರೂ, ಯೆಹೂದ್ಯರೂ, ಸಿರಿಯನ್ನರೂ, ಅರಬ್ಬರೂ ವಾಣಿಜ್ಯ ವ್ಯವಹಾರಗಳಿಗಾಗಿ ಈ ನೆಲದಲ್ಲಿ ಕಾಲಿಟ್ಟದ್ದಾರೆ. ಆದರೂ ಮಲೆಯಾಳ ಮಾತ್ರ ತನ್ನ ಮೂಲ ಸ್ವರೂಪವನ್ನು ವಿರೂಪಗೊಳ್ಳಲು ಬಿಡದೆ ಹೆಚ್ಚು ಕಡಮೆ ಮೊದಲಿನಂತೆಯೇ ಇದೆ. ಕ್ರಿ. ಶ. ಳಳ೫ರ ಕ್ರೈಸ್ತ ಕೃತಿಯೊಂದರಲ್ಲಿ ಸಿಲೋನಿನ ನೆರೆನಾಡುಗಳನ್ನು ಕುರಿತು ಹೇಳುತ್ತಾ 'ಮಲೆ' ಎಂಬ ಪ್ರದೇಶವನ್ನು ಹೆಸರಿಸಿ ಅಲ್ಲಿಂದ ಮೆಣಸು ಹೊರಗಡೆಗೆ ಹೋಗುತ್ತಿತ್ತೆಂದು ಹೇಳಿದೆ. ಮಲೆಯಾಳ ಭಾಷೆಯನ್ನು ಆಡುವ ಭಾಗಕ್ಕೆ ಸಂಸ್ಕೃತದಲ್ಲಿ ಕೇರಳ ಪ್ರದೇಶವೆಂದು ಕರೆದಿರುವುದಕ್ಕೆ ಬಹಳ ಹಿಂದಿನಿಂದಲೂ ಉಲ್ಲೇಖಗಳು ಸಿಗುತ್ತವೆ. ಈ ನಾಡಿನ ಅರಸನನ್ನು 'ಕೇರಳ ಪುತ್ರ'ನೆಂದು ಕ್ರಿ. ಪೂ. ಮೂರನೆಯ ಶತಮಾನದ ಅಶೋಕನ ಶಾಸನಗಳಲ್ಲಿ ಕರೆದಿದೆ.

ಮಲೆಯಾಳ ಭಾಷೆಯನ್ನು ಆಡುವ ಪ್ರದೇಶಕ್ಕೆ ಕೇರಳಮ್, ಕೇರಳ ಎಂಬ ಹೆಸರು ಸಂಸ್ಕೃತದಲ್ಲೇ ಅಲ್ಲದೆ ಇತರ ದ್ರಾವಿಡ ಭಾಷೆಗಳಲ್ಲೂ ಬಹಳ ಹಿಂದಿನಿಂದಲೂ ಬಳಕೆಯಲ್ಲಿದೆ; ಇದನ್ನು ಚೇರಳಮ್, ಶೇರಳಮ್, ಶೇರಮ್—ಎಂದು [ಕ- > ಚ- (ಶ-)] ತಮಿಳಿನಲ್ಲಿ ಕರೆದಿದೆ. ಇವಲ್ಲದೆ ಕೇರಮ್, ಚೇರಮ್ ಎಂಬುದಾಗಿಯೂ, ಕೇರಳದವನಿಗೆ ಕೇಲನ್, ಕೇಳು, ಕೇರಳನ್ ಎಂದೂ ಬೇರೆ ಬೇರೆ ರೂಪಗಳುಂಟು. ಪ್ಲಿನಿ ಹೇಳುವ ಕೆಲಬೊತ್ರಸ್ (celabotras) ಮತ್ತು ಟಾಲೆಮಿ ಹೇಳುವ ಕೆರೊ ಬೊಥ್ರೊಸ್ (kerobothros) ಎಂಬ ಪದಗಳು ಮೇಲೆ ಹೇಳಿದ ಪದಗಳಿಗೆ ಸಂಬಂಧ ಪಟ್ಟ ಪದಗಳೆಂದು ವಿದ್ವಾಂಸರ ಅಭಿಪ್ರಾಯ. ಟಾಲೆಮಿಯ paroliasoration khaberos ಎಂಬ ಮಾತು ಗಮನಾರ್ಹವಾಗಿದೆ. Parolia ಎಂದರೆ ಸಮುದ್ರತೀರ

ಪ್ರದೇಶ khaberos—ಅಂದರೆ ಕಾವೇರಿನದಿಯ ಮುಖ ಇತ್ತು ಎಂದು ಅರ್ಥ. ಆದುದರಿಂದ ಇದು ಮಲೆಯಾಳ ಪ್ರದೇಶಕ್ಕೆ, ಅಂದರೆ ಈಗ ಮಲಬಾರ್ ಮತ್ತು ಕೇರಳ ಎಂದು ಹೇಳುವ ಪ್ರದೇಶಕ್ಕೆ ಸಂಬಂಧಪಟ್ಟ ಹೇಳಿಕೆ ಎಂಬುದರಲ್ಲಿ ಸಂದೇಹವಿಲ್ಲ. ಮಲಬಾರ್ ಎಂಬುದು ಒಂದು ಕಲಬೆರಕೆಯ ಅಥವಾ ಅರಿಸಮಾಸದ (Hybrid word) ಶಬ್ದ. ಮಲೆ > ಮಲ (ದ್ರಾವಿಡ ಪದ) + ಬಾರ್ [ < (ಪರ್ಷಿಯನ್ ಪದ) = ದೇಶ] > ಮಲಬಾರ್ ಆಗಿದೆ. ಜಿಂಜಿ (= ಹಸಿಶುಂಠಿ) ಬೆಳೆಯುವ ಜಾಗ ಜಾಂಜಿಬಾರ್ ಆದಂತೆ.

ಸಂಸ್ಕೃತ ಮತ್ತು ಕನ್ನಡ ಕಾವ್ಯಗಳಲ್ಲಿ ಪಾಂಡ್ಯ ಚೇರ—ಮುಂತಾದ ದೊರೆಗಳ ಹಾಗೂ ರಾಜ್ಯಗಳ ಹೆಸರುಗಳು ಸರ್ವೇಸಾಮಾನ್ಯವಾಗಿ ಬರುತ್ತವೆ. ಇವುಗಳಲ್ಲಿನ ಈ ಚೇರ—ಎಂಬ ಪದ ಕೇರಳಕ್ಕೆ ಸಂಬಂಧಪಟ್ಟಿರಬೇಕು, ಅಥವಾ ಕೇರಳವೇ ಆಗಿರಬೇಕು. ಹರಿಹರ ಕವಿಯ ನಂಬಿಯಣ್ಣನ ರಗಳೆಯಲ್ಲಿ 'ಚೇರಮಾಂಕ' ಎಂದಿದೆ.[1] ಕೇರ(ಲ) > ಚೇರ ಆಗಿರಬಹುದು ; ಕೆದಱು > ಚೆದಱು ಪದ ಗಮನಿಸಬಹುದು. ದ್ರಾವಿಡ ಭಾಷೆಗಳಲ್ಲಿ ಪದದ ಆದಿಯ ಅಘೋಷ ಸ್ಪರ್ಶ ಧ್ವನಿಯಾದ 'ಕ' ಸ್ಪೃಷ್ಟೋಷ್ಮ ಧ್ವನಿಯಾದ 'ಚ' ಆಗುವುದು ಸಾಮಾನ್ಯ. ಅಶೋಕನ ಶಾಸನದಲ್ಲಿ ಈ ಪದ ನಾಲ್ಕು ಕಡೆ ನಾಲ್ಕು ಬೇರೆಬೇರೆ ರೂಪಗಳಲ್ಲಿ—ಅಲ್ಪಸ್ವಲ್ಪ ವ್ಯತ್ಯಾಸಗಳೊಡನೆ ಸಿಗುತ್ತದೆ ; ಕೇತಲ ( > ಕೇರಲ) ಪುತೋ, ಕೇರಡ ಪುತ್ರೋ, ಕೇರಲಪುತ್ರ, ಮತ್ತು ಕೇ(ರಲ) ಪುತೋ—ಎಂಬ ಪದಗಳನ್ನು ಗಮನಿಸಿ. ಬಹುಶಃ ಬೇರೆಬೇರೆ ಉಚ್ಚಾರಗಳನ್ನು ಇವು ಬಿಂಬಿಸುತ್ತವೆಂದು ತೋರುತ್ತದೆ, ಅಥವಾ ಶಾಸನಗಳನ್ನು ಕೊರೆಯುವವನ ಕೈವಾಡ ವಿದ್ದರೂ ಇರಬಹುದು. ಕೇರಳ, ಚೇರಳ ಇತ್ಯಾದಿ ಪದಗಳ ಜೊತೆಗೆ ಮಲೆಯಾಳ ಭಾಷೆಯನ್ನು ಆಡುವ ಅಗಲವಾದ ಜಾಗದ ಒಂದು ಭಾಗಕ್ಕೆ ಕೊಂಗು ಎಂಬ ಹೆಸರಿದೆ. ಕೇರಳ ಎಂದರೆ ಮಲೆಯಾಳದಲ್ಲಿ ತೆಂಗು ಎಂಬ ಅರ್ಥವಿದೆ. ಇದೇ ರೀತಿಯಲ್ಲಿ ತೆಂಗಿಗೆ ಕೇರಳ ಫಲ ಎಂಬ ಹೆಸರೂ ಇದೆ.

ಉಳಿದ ಎಲ್ಲ ದ್ರಾವಿಡ ಭಾಷೆಗಳಂತೆ ಮಲೆಯಾಳ ಭಾಷೆಗೂ ಕ್ರೈಸ್ತ ಪಾದ್ರಿಗಳೇ ಆರಂಭದ ದಾರಿ ತೆರೆದವರು. ಮಲೆಯಾಳ ಭಾಷೆಯ ನಿಘಂಟನ್ನು ಒಳಗೊಂಡ ಪೋರ್ಚುಗೀಸ್ ವ್ಯಾಕರಣವೊಂದು ೧೭೩೮ರಲ್ಲೇ ರಚಿತವಾಯಿತು. ಇದಾದ ತರುವಾಯ ೧೭೪೬ರಲ್ಲಿ ಜರ್ಮನಿ ಹಾಗೂ ಇಟಲಿ ದೇಶಗಳ ಮಿಷನರಿಗಳ ಸಹಕಾರ ದಿಂದ ಮಲೆಯಾಳ ಭಾಷೆಯ ಶಬ್ದಕೋಶ ಸಿದ್ಧವಾಯಿತು. ಮಲೆಯಾಳ ಭಾಷೆಯ ವ್ಯಾಕರಣವನ್ನು ಮೊದಲು ೧೭೮೪ರಲ್ಲಿ ಪೀಟರ್ ಕ್ಲೆಮೆನ್ಸ್ ಎಂಬುವನು ಬರೆದನು. ಆದಾದ ಹದಿನೈದು ವರ್ಷಕ್ಕೆ, ೧೭೯೯ರಲ್ಲಿ ರಾಬರ್ಟ್ ಡ್ರುಮೋಲ್ಡ್ ಎಂಬಾತ ಇನ್ನೊಂದು 'ಮಲೆಯಾಳ ಭಾಷೆಯ ವ್ಯಾಕರಣ' ಪ್ರಕಟಿಸಿದ. ಚೆನ್ನಾದ ಪದಕೋಶ

[1] ಸಂಪಾದಕರು : ತೀ.ನಂ.ಶ್ರೀ, ನಂಬಿಯಣ್ಣನ ರಗಳೆ.

ವನ್ನು—ಇಂಗ್ಲಿಷ್—ಮಲೆಯಾಳ, ಮಲೆಯಾಳ—ಇಂಗ್ಲಿಷ್—ಹೀಗೆ ಎರಡು ಬಗೆಯಲ್ಲಿ—ಸಿದ್ಧಪಡಿಸಿದ ಶ್ರೇಯಸ್ಸು ರೆ|| ಬೆಯ್ಲಿಯದು. ಆದರೆ ಇವೆಲ್ಲವನ್ನೂ ಇಕ್ಕಿಮೆಟ್ಟದ ನಿಘಂಟು ಮತ್ತು ಇತರ ಕಾರ್ಯಗಳನ್ನು ಮಲೆಯಾಳ ಭಾಷೆಗೆ ನಡಸಿಕೊಟ್ಟ ನಿಸ್ಸೀಮನೆಂದರೆ ಡಾ|| ಗುಂಡರ್ಟ್. ಅವನ ಕೃತಿಗಳ ವಿಚಾರ ಆಗಲೇ ಹೇಳಿದ್ದಾಗಿದೆ. ಆದರೂ ಕಾಲ್ಡ್‌ವೆಲ್, ಗುಂಡರ್ಟ್ ಬರೆದ ನಿಘಂಟನ್ನು ಕುರಿತು 'The truly Scientific Dictionary' ಎಂದು ಕರೆದಿರುವುದನ್ನು ಉಲ್ಲೇಖಿಸಬೇಕು. ಏಕೆಂದರೆ ಭಾಷೆಯ ತಿರುಳನ್ನು ಅರಿತ ಹಿರಿಯ ಭಾಷಾ ವಿದ್ವಾಂಸನ ನುಡಿಗಳವು. ಈ ಶತಮಾನದ ಪ್ರಾರಂಭದಲ್ಲಿ ಮಲೆಯಾಳ ಭಾಷೆಯನ್ನು ಕುರಿತ ವಿಶೇಷ ವ್ಯಾಸಂಗವನ್ನು ಎಲ್. ವಿ. ರಾಮಸ್ವಾಮಿ ಅಯ್ಯರ್ ನಡಸಿರುವುದನ್ನು ಮರೆಯಲಾಗದು. ಡ್ರುಮ್ಮಂಡ್, ಸ್ಪ್ರಿಂಗ್, ಪೀಟ್, ನೆದುಗಾಂಡಿ ಮಾಥೆನ್, ಶೇಷಗಿರಿಪ್ರಭು—ಮೊದಲಾದ ಇತರ ಮಹನೀಯರು ಮಲೆಯಾಳ ಭಾಷೆ, ವ್ಯಾಕರಣ ಮತ್ತು ಶಬ್ದಕೋಶಗಳ ರಚನೆಗೆ ಶ್ರಮಿಸಿದ ಹಿರಿಯ ವಿದ್ವಾಂಸರು.

ಮೂಲ ದ್ರಾವಿಡ ಭಾಷೆಯ ಧ್ವನಿಗಳನ್ನು ಉಳಿಸಿಕೊಂಡು ಬಂದಿರುವ ಭಾಷೆಗಳಲ್ಲಿ ತಮಿಳು ಭಾಷೆಯನ್ನು ಬಿಟ್ಟರೆ ಎರಡನೆಯ ಸ್ಥಾನ ಮಲೆಯಾಳ ಭಾಷೆಗೆ ಸಲ್ಲುತ್ತದೆ. ತಮಿಳು ಮತ್ತು ಮಲೆಯಾಳಗಳಲ್ಲಿ ಇರುವ ಇಕಾರ ಮತ್ತು ಉಕಾರಗಳು ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಕ್ರಮವಾಗಿ ಎಕಾರ ಮತ್ತು ಒಕಾರಗಳಾಗಿ ಪರಿಣಮಿಸಿವೆಯೆಂಬ ಹೇಳಿಕೆಯನ್ನು ವಿದ್ವಾಂಸರು ಇತ್ತೀಚೆಗೆ ಅಂಗೀಕರಿಸುತ್ತಿಲ್ಲ. ಆದರೆ ೞ ಮತ್ತು ಱ ಧ್ವನಿಮಾಗಳು ತಮಿಳಿನಂತೆ ಮಲೆಯಾಳದಲ್ಲಿ ಉಳಿದುಕೊಂಡಿವೆ. ಕನ್ನಡ–ತಮಿಳು, ಕನ್ನಡ–ತೆಲುಗು ಭಾಷೆಗಳನ್ನು ಹೋಲಿಸಿ ನೋಡಿರುವಂತೆ ಕನ್ನಡ–ಮಲೆಯಾಳ ಭಾಷೆಗಳ ಧ್ವನಿವ್ಯತ್ಯಾಸ ಅಥವಾ ಸಾದೃಶ್ಯಗಳನ್ನು ಕುರಿತ ಅಭ್ಯಾಸ ಸಾಲದು. ವಿದ್ವಾಂಸರು ಆಕಡೆ ಗಮನ ಕೊಡಬೇಕು.

೬

# ತೆಲುಗು ಭಾಷೆ

ತೆಲುಗು ಭಾಷೆಯ ಹೆಸರಿನ ವಿಚಾರದಲ್ಲೂ, ಕನ್ನಡ ಎಂಬ ಪದದ ನಿಷ್ಪತ್ತಿಯನ್ನು ಕುರಿತು ಇರುವಂತೆ, ಕೆಲವು ತೊಡಕುಗಳೂ, ಸಮಸ್ಯೆಗಳೂ ಇವೆ. ಆಂಧ್ರ–ತೆಲುಗು ಎಂಬ ಎರಡು ಹೆಸರುಗಳಲ್ಲಿ ಹಳೆಯದು ಯಾವುದು, ಹೊಸದು (ಅನಂತರದ್ದು) ಯಾವುದು ? ಇವುಗಳ ಪರಸ್ಪರ ಸಂಬಂಧ ಹೇಗೆ ?—ಎಂಬ ವಿಚಾರದಲ್ಲಿ ಅನೇಕ ವಾದವಿವಾದಗಳಾಗಿವೆ. ತೆಲುಗು ಎಂಬ ಪದಕ್ಕಿಂತಲೂ ಆಂಧ್ರ ಎಂಬ ಪದವೇ ಪ್ರಾಚೀನ ಪ್ರಯೋಗವೆಂದು ಕೆಲವರ ಅಭಿಪ್ರಾಯ. ಇವರ ಅಭಿಪ್ರಾಯಗಳನ್ನು ಅನುಮೋದಿಸುವ ಆಧಾರಗಳೂ ಅಧಿಕವಾಗಿಯೇ ಇವೆ. ಋಗ್ವೇದಕ್ಕೆ ಸೇರಿದ ಐತ್ತರೇಯ ಬ್ರಾಹ್ಮಣದಲ್ಲಿ ಆಂಧ್ರರ ಉಲ್ಲೇಖವಿರುವುದಲ್ಲದೆ, ಕೆಲವು ಪುರಾಣಗಳಲ್ಲಿಯೂ ಆಂಧ್ರ ರಾಜವಂಶದ ಪ್ರಸ್ತಾಪವಿದೆ. ಆಂಧ್ರಭೃತ್ಯವೆಂಬ ರಾಜವಂಶವೊಂದು ಇತ್ತೆಂದೂ, ಕ್ರಿಸ್ತಾಬ್ದದಲ್ಲಿ ಆಳಿದ ಶಾತವಾಹನರಿಗೆ ಆಂಧ್ರಭೃತ್ಯರೆಂಬ ಹೆಸರು ಇದ್ದಿತೆಂದೂ ತಿಳಿದುಬಂದಿದೆ.[1]

ಇದೂ ಅಲ್ಲದೆ ಮೆಗಸ್ಥಾನೀಸನ ಅನಂತರದ ಪ್ಲಿನಿ ಎಂಬ ಲೇಖಕ Andare ಎಂದು ಹೇಳಿರುವುದು 'ಆಂಧ್ರ' ಎಂಬುದಕ್ಕೆ ಸಂಬಂಧಿಸಿದ್ದೆಂದೂ ಭಾವಿಸಲಾಗಿದೆ. ಪ್ರವಾಸಿ ಹೂಯನ್‌ತ್ಸಾಂಗನೂ ಆಂಧ್ರರ ಭಾಷೆ ಮಧ್ಯಭಾರತದ ಭಾಷೆಗಿಂತ ಭಿನ್ನವಾಗಿತ್ತೆಂದು ಹೇಳುತ್ತಾನೆ. ಕುಮಾರಿಲಭಟ್ಟ ಆಂಧ್ರದ ಭಾಷೆ 'ದ್ರಾವಿಡ' ಎಂದು ಹೇಳುತ್ತಾನೆ.[2] ಹಳೆಯ ತಮಿಳು ಕೃತಿಗಳಲ್ಲಿ ಆಂಧ್ರ ದೇಶವನ್ನು 'ವಡಗು' ನಾಡು ಎಂದು ಕರೆದಿದೆ. ಆದರೆ ಆಂಧ್ರ ಎಂಬ ಹೆಸರಿಗಿಂತಲೂ ತೆಲುಗೇ ಮೊದಲೆಂದೂ ಮತ್ತೊಂದು ವಾದವಿದೆ ; ಅಲ್ಲದೆ ಮೊದಲು ಇಲ್ಲಿ ಇದ್ದವರು ತೆಲುಗರೆಂದೂ ಅನಂತರ

---

[1] ಆದರೆ ಇದು ಸುಳ್ಳೆಂದು ಸುಕ್ತಂಕರರು ಅಭಿಪ್ರಾಯಪಟ್ಟಿದ್ದಾರೆ. ನೋಡಿ: *Annals of Bhandarkar Oriental Research Institute*, 1922.

[2] ಈ ಹೇಳಿಕೆಯ ವಿಚಾರದಲ್ಲೂ ಭಿನ್ನಾಭಿಪ್ರಾಯವಿದೆ. ಕುಮಾರಿಲಭಟ್ಟ ಹೇಳುವ 'ಅಥಃ ದ್ರಾವಿಡ ಭಾಷಾ' ಎಂಬುದು ಕೆಲವು ಪ್ರತಿಗಳಲ್ಲಿ 'ಯಥಾ ದ್ರಾವಿಡ ಭಾಷಾ' ಎಂಬುದಾಗಿ ಇರುವಂತೆ ತೋರುತ್ತದೆ.

ಒಂಡವರು ಆಂಧ್ರರೆಂದೂ ಇನ್ನೊಂದು ವಿವರಣೆಯಿದೆ. ಕನ್ನಡದ ಮೂಲ ಪ್ರವರ್ತಕರು ಹಟ್ಟಿಕಾರ ವೃತ್ತಿಯವರೆಂದೂ, ಇವರು ಕರ್ಣಾಟ—ಮಹಾರಾಷ್ಟ್ರಗಳಲ್ಲೆಲ್ಲಾ ಹಬ್ಬಿಕೊಂಡು ಇದ್ದುದೇ ಅಲ್ಲದೆ ಆಂಧ್ರರೆಂಬವರೂ ಇದೇ ಜನಾಂಗವೆಂದೂ ಮಾನ್ಯ ಶಂ. ಬಾ. ಜೋಶಿಯವರು ನಿರೂಪಿಸಿದ್ದಾರೆ.[1] ಇನ್ನು ತೆಲುಗು ಎಂಬ ಪದದ ಪ್ರಾಚೀನತೆ ಮತ್ತು ಹಳೆಯ ರೂಪಗಳಲ್ಲಿನ ಸ್ವೈವಿಧ್ಯವೂ, ವಿವಾದಕ್ಕೆ ಎಡೆಮಾಡಿಕೊಡುವಂತೆಯೇ ಬಗೆಬಗೆಯಾಗಿ ಇವೆ.

ತೆಲುಗ(ರ)ನ್ನು ಕುರಿತು ತೆಲಙ್ಗ (> ತೆಲುಂಗು), ತ್ರೈಲಙ್ಗ, ತೆನುಙ್ಗ (ತೆನುಂಗು) ತೆನುಗು, ತೆಲುಗು, ತೆಲಗು, ತ್ರಿಕಲಿಂಗ, ತ್ರಿಲಿಂಗ, ತ್ರೈಲಿಂಗ, ತೆಲಿಂಗ, ತೆಲುಗು ಹೀಗೆ ಹತ್ತಾರು ರೂಪಗಳು ಸಿಗುತ್ತವೆ. ಇವುಗಳ ಆಧಾರದ ಬೆಂಬಲದಿಂದ ಬಲ್ಲಿದರು ಬಗೆಬಗೆಯಾಗಿ ಬರೆದಿದ್ದಾರೆ. ಇವುಗಳಲ್ಲಿ ಯಾವುದು ಹಳೆಯ ರೂಪವಿರಬೇಕೆಂದು ವಿವೇಚಿಸಿ ವಿವರಿಸಿದ್ದಾರೆ. ತ್ರಿಕಲಿ(ಳಿ)ಂಗ ಎಂಬ ಪದ ಪ್ರಾಚೀನವಿರುವಂತೆ ಕಾಣುತ್ತದೆ. ಕನ್ನಡದ ಆದಿಕವಿಯಾದ ಪಂಪನ ವಿಕ್ರಮಾರ್ಜುನ ವಿಜಯದಲ್ಲಿ ಬರುವ ಒಂದು ಕಂದಪದ್ಯದಲ್ಲಿ ಈ ಪದವಿದೆ:

ನಿರುಪಮ ದೇವನ ರಾಜ್ಯದೊ
ಳರಿಕೇಸರಿ ವೆಂಗಿವಿಷಯಮುಂ ತ್ರಿಕಳಿಂಗಂ ।
ಚಿರಸೊತ್ತಿಕೊಂಡು ಗರ್ವದೆ
ಬರೆಯಿಸಿದಂ ಪೆಸರನಖಿಳ ದಿಗ್ಭಿತ್ತಿಗಳೊಳ್ ॥[2]

ಇದಾದಮೇಲೆ ಕ್ರಿ. ಶ. ೧೦೩೦ರ 'ಸೋಮಲದೇವೀ ಮಹಾಮಾನಸೇ . . .' ಎಂದು ಆರಂಭವಾಗುವ ಒಂದು ಶಾಸನದಲ್ಲಿ ತ್ರಿಕಲಿಂಗ ಎಂಬ ಪದ ದೊರೆಯುತ್ತದೆ. ಇದನ್ನು

ತ್ರಿಕಳಿಂಗ > ತ್ರಿಲಿಂಗ { ತಿರಿಲಿಂಗ > ತ್ರೈರಿಲಿಂಗ > ತ್ರೈಲಿಂಗ
ತಿಲಿಂಗ > ತೆಲಿಂಗ > ತೆಲಂಗ > ತೆಲುಗು }

ಎಂಬಂತೆ ಈ ಪದಗಳು ವಿಕಾಸಗೊಂಡ ಪರಿಯನ್ನು ತೋರಿಸಬಹುದು. ಸಂಸ್ಕೃತ ಸಾಹಿತ್ಯದಲ್ಲಿ ತ್ರೈಲಿಂಗ, ತ್ರೈರಿಲಿಂಗ, ತ್ರಲಿಂಗ ಮುಂತಾದ ರೂಪಗಳು ಸಿಗುತ್ತವೆ. ಈ ತ್ರಿಕಳಿಂಗವೆಂಬ ಮೂರು (> ಮೂನುಜು) ಕಳಿಂಗಗಳಾವುವು? ಎಂಬ ಪ್ರಶ್ನೆ ಮೂಡುತ್ತದೆ. ಮಧ್ಯಕಳಿಂಗ, ಮಧುಕಳಿಂಗ ಮತ್ತು ಕಳಿಂಗ—ಎಂಬುವೇ ಅವು ಇರಬೇಕು.

ತ್ರಿಲಿಂಗ ಎಂಬುದಕ್ಕೆ ಮೂರು ಲಿಂಗಗಳು—ಸೊಡುಗುಲಿಂಗ(> ಮುಡುಗುಲಿಂಗಂ—ಎಂಬ ರೂಪಗಳೂ ಇವೆ), ಎಂದು ಮೂರು ಲಿಂಗಗಳನ್ನು ವಿವರಿಸುವರು. ಟಾಲೆಮಿ ತ್ರಿಗಲಿಪ್ಟೋನ್ ಅಥವಾ ತ್ರಿಲಿ(ಂ)ಗೋನ್ ಎಂಬ ಪದವನ್ನು, ಗಂಗಾನದಿಯ ಪೂರ್ವ

[1] ಕರ್ನಾಟಕ ವೀರಕ್ಷತ್ರಿಯರು, ೧೯೩೬.

[2] ವಿಕ್ರಮಾರ್ಜುನ ವಿಜಯ (ಪಂಪ ಭಾರತ), ೧–೨೦, ಪಾಠಾಂತರವೂ ಇದೆ.

ದಿಕ್ಕಿನ ಪ್ರದೇಶವೆಂದು ನಿರ್ದೇಶಿಸುತ್ತಾ, ಉಲ್ಲೇಖಿಸಿದ್ದಾನೆ. ಟಿಬೆಟ್ಟಿನ ಲೇಖಕನಾದ ಹದಿನಾರನೆಯ ಶತಮಾನದ ತಾರಾನಾಥನು ಬೌದ್ಧ ಗ್ರಂಥಗಳಿಂದ ವಿಷಯ ಸಂಗ್ರಹಣೆ ಮಾಡುತ್ತಾ ಬರೆಯುವ ಒಂದು ಸಂದರ್ಭದಲ್ಲಿ ತ್ರಿಲಿಂಗಕ್ಕೆ ಕಳಿಂಗವೂ ಸೇರಿತ್ತೆಂದೂ, ಕಳಿಂಗಪುರ ರಾಜಧಾನಿಯೆಂದೂ ಬರೆದಿದ್ದಾನೆ.[1] ತ್ರಿಲಿಂಗ ಎಂಬ ಹೆಸರು ರಾಜ-ಮಹೆಂದ್ರಿಯಿಂದ ದಕ್ಷಿಣದವರೆಗೂ ಬಳಕೆಯಲ್ಲಿ ಇದ್ದಿರಬಹುದು. ತ್ರಿಕಳಿಂಗ ಎಂಬ ಹೆಸರು ಅದರ ಉತ್ತರಕ್ಕೆ, ವಾಲತೇರು (> ವಾಲ್ಟೇರ್) ಭಾಗಗಳಿಗೆ ರೂಢಿಯಲ್ಲಿ ಇದ್ದಿರಬಹುದು.

ತೆಲುಂಗು > ತೆನುಂಗು ಆಗಿದೆಯೆಂದು ಕಾಣುತ್ತದೆ. - ಲ - > - ನ -ಾತೆನ್ > ತೆಂಕಣ (=ದಕ್ಷಿಣ) : ಇದರಂತೆ ಇರುವ ಇತರ ಪದಗಳು ತೂರ್ಪು – < ತೂರ್ (> ದೂರ್) + ಪು (ಪ್ರತ್ಯಯ) = ಪೂರ್ವ : ಪಡಮರ – ಪಡುವರ್ಕೈ > ವಡಮರ್ಕೈ > ಪಡಮರ > ಪಡಮಟ, - ವ - > - ಮ-, - ರ > - ಟ = ಪಶ್ಚಿಮ. ಇವುಗಳಿಗೆಲ್ಲಾ ಶಾಸನ ಪ್ರಯೋಗಗಳೂ ಇವೆ. ಈ ಸಂದರ್ಭದಲ್ಲಿ ರಾಮಕೃಷ್ಣಯ್ಯನವರ ಅಭಿಪ್ರಾಯ ಪರಿಶೀಲನಾರ್ಹವಾಗಿದೆ. ಆಂಧ್ರರು ಮೊದಲಿಗೆ ಪ್ರಾಕೃತ ಭಾಷೆಯನ್ನಾಡುವ ಉತ್ತರದ ಜನಾಂಗವಾಗಿದ್ದು ತೆಂಕಣಕ್ಕೆ ತರುವಾಯ ವಲಸೆಬಂದಿರಬಹುದು. ಹೀಗೆ ತೆಂಕಣದತ್ತ ಹೊರಗಿನಿಂದ ಬಂದ ಜನಾಂಗ ಅಲ್ಲಿ ಮೊದಲೇ ನೆಲಸಿದ್ದ ಜನಾಂಗದೊಡನೆ ಬೆರೆತು ಗೋದಾವರಿ ಮತ್ತು ಕೃಷ್ಣಾ ನದಿಗಳ ನಡುವಿನ ಪ್ರದೇಶದಲ್ಲಿ ಸ್ಥಾಯಿಯಾಗಿ ನಿಂತರು, ಅಲ್ಲಿನ ಭಾಷೆಯನ್ನೂ ಕಲಿತರು.

ಆದರೆ ಸಾಹಿತ್ಯ—ಸಂಸ್ಕೃತಿಗಳಲ್ಲಿ ಮುಂದುವರಿದ ಇವರು ತಮ್ಮ ಅಧಿಕಾರ ಮುಪ್ರೆಯ ಗುರುತಾಗಿ ಆ ದೇಶ, ಭಾಷೆ, ಮತ್ತು ಜನತೆಗೆ ತಮ್ಮ ದೇಶ ಭಾಷೆಯ ಹೆಸರನ್ನೇ ಕೊಟ್ಟರು. ಹಾಗಾದರೆ ಉತ್ತರದ ಪ್ರಾಕೃತ ಜನಾಂಗ ಬರುವ ಮೊದಲು ಇಲ್ಲಿ ಕೃಷ್ಣಾ ಮತ್ತು ಗೋದಾವರಿ ನದಿಗಳ ನಡುವೆ ನೆಲಸಿದ್ದ ಪೂರ್ವರು ಯಾರು ? ಎಂಬ ಪ್ರಶ್ನೆಗೆ ಉತ್ತರ ಇಂತಿದೆ : ಇಲ್ಲಿನ ಮೂಲನಿವಾಸಿಗಳು ಬಹುಶಃ ತೆಲಂಗರು. ಅವರು ಮೂಲ ದ್ರಾವಿಡ ಮತ್ತು ಅನಂತರದ ದ್ರಾವಿಡರ ಮಿಶ್ರಜನಾಂಗಕ್ಕೆ ಸೇರಿದವ ರಿರಬೇಕು. ಅವರ ಭಾಷೆ ದ್ರಾವಿಡ ಭಾಷೆಗಳಲ್ಲಿ ಒಂದಾದ ತೆಲುಗು. ಈ ತೆಲುಗು ಎಂಬ ಅಭಿದಾನ ಅವರ ಜನಾಂಗದ ಹೆಸರನ್ನು ಅನುಸರಿಸಿ ಹುಟ್ಟಿರಬೇಕು. ಈ ವಿವರಣೆ ಚಿಂತನೀಯವಾಗಿದೆ.[1]

ತೆಲುಗು ಎಂಬ ಶಬ್ದದ ಹಾಗೂ ಭಾಷೆಯ ಉತ್ಪತ್ತಿಯನ್ನು ಕುರಿತು ಬೇರೆ ಬಗೆಯ ವಿವರಣೆಯೂ ಇದೆ. ತೇನ್ ಎಂಬ ಮೂಲಶಬ್ದದಿಂದ, ಅಂದರೆ ಜೇನಿನಿಂದ ತೆಲುಗು ಎಂಬ ಶಬ್ದ ಬಂದಿದೆಯಂತೆ : ತೇನ್, ತೇನೆ, ಜೇನು—ಮುಂತಾದ ಶಬ್ದಗಳಲ್ಲಿ ಕಸರತ್ತು ನಡಸಿದ್ದಾರೆ, ಈ ಜೇನುಪ್ರಿಯರು.

---

[1] K. Ramakrishnaiah, *Telugu Language of the First Millanium, A. D.*, 1951–52

ತೆನುಗು > ತೆನ್ + (ಉ) ಗು : ತೆನ್ < ತೇನ್ (=ಜೇನು).

ತೆನ್ ಎಂಬ ಪದ ತೇನ್‌ಗೆ ಸೇರಿದುದಕ್ಕಿಂತಲೂ (ತೆನ್ > ತೆಂಕಣ=) ದಕ್ಷಿಣ ದಿಕ್ಕಿಗೆ ಸಂಬಂಧಪಟ್ಟಿದೆಯೆಂಬ ಹೇಳಿಕೆಯಲ್ಲಿ ಹೆಚ್ಚು ಹುರುಳು ಇರುವಂತೆ ತೋರುತ್ತದೆ. ಇದಕ್ಕೆ ಸೇರಿದಂತೆ ತೆಂಬೆರಿಲ್, ತೆಂಕಣ—ಪದಗಳನ್ನು ಗಮನಿಸಬಹುದು. ತೆಲಿಂಗಾಣ ಎಂಬುದು ತೆಲುಗು ಭಾಷೆಯ ಪ್ರದೇಶಕ್ಕೆ ಮುಸಲ್ಮಾನರು ಕೊಟ್ಟ ಹೆಸರೆಂದು ಕಾಣುತ್ತದೆ. ಸಂಸ್ಕೃತ ಭಾಷೆಯ 'ದಕ್ಷಿಣ' ಪದದಿಂದ ಇದು ಬಂದಿತೆಂಬ ವಾದವೂ ಇದೆ; ದಕ್ಷಿಣ > ತೆಚ್ಚಣಂ > ತೆಕ್ಕಣ . . . ಇತ್ಯಾದಿ. ಸಂಸ್ಕೃತದ ದಕ್ಷಿಣಾಪಥ ಎಂಬುದು ಈ ತೆಂಕಣ ದಿಕ್ಕಿನ ತೆಲಂಗಾಣವೇ ಇರಬೇಕೆಂಬ ಹೇಳಿಕೆಯೂ ವ್ಯಕ್ತಪಟ್ಟಿದೆ.

ಈ ವ್ಯುತ್ಪತ್ತಿವಾದದ ತಿರುಳು ಏನೇ ಇರಲಿ ಸದ್ಯಕ್ಕಂತೂ ಕುಡ (=ಪಶ್ಚಿಮ)+ ಗು > ಕೊಡಗು (- ಉ > - ಒ -) ಆದಂತೆ ತೆನ್ (=ದಕ್ಷಿಣ) + (ಉ) ಗು > ತೆನುಗು > ತೆಲುಗು ಪದವೂ ರೂಪಗೊಂಡಿರಬಹುದೆಂದು ಹೇಳಲಡ್ಡಿಯಿಲ್ಲ. ಹಾಗೆಯೇ ತ್ರಿಕಳಿಂಗ ⟍ ತ್ರಿಕಲಿಂಗ ಪದಗಳ 'ಲಿಂಗ' ಎಂಬ ಶಬ್ದ ಮುಂಡಾವರ್ಗದ ಭಾಷೆಯಿಂದ ಬಂದಿರಬೇಕೆಂಬ ಅಭಿಪ್ರಾಯವನ್ನೂ ಅನುಮೋದಿಸಬಹುದು. ಆದರೆ ಪಿಶಾಚ ಭಾಷೆಯಿಂದ ತೆಲುಗು ಭಾಷೆ ಬಂದಿತೆಂಬುದೂ ಕಣ್ವಋಷಿಯಿಂದ ತೆಲುಗು ಭಾಷೆ ಹುಟ್ಟಿತೆಂಬುದೂ ಅವೈಜ್ಞಾನಿಕ.

ತೆಲುಗು ಭಾಷೆ ಲಿಪಿಯುಳ್ಳ ಸಾಹಿತ್ಯ ಸಂಪನ್ನ ಭಾಷೆ. ಸಂಸ್ಕೃತ–ಪ್ರಾಕೃತ ಭಾಷೆಗಳ ಪ್ರಭಾವಕ್ಕೆ ಬಹಳವಾಗಿ ಒಳಗಾಗಿದ್ದರೂ ತನ್ನ ದ್ರಾವಿಡದ ಚೌಕಟ್ಟನ್ನು ಅಳಿಯಲೀಯದೆ ಉಳಿಸಿಕೊಂಡು ಬಂದಿದೆ.

> In spite of these powerful influences of Prakrit and Sanskrit exerted on Telugu for many centuries, the Telugu Language is still able to preserve its basic integrity, as the original population was not wiped off the country by the north Indian incomers, but was allowed to live peacefully under their sway, speaking its own language in its own way.[1]

ಕನ್ನಡ, ತಮಿಳು ಭಾಷೆಗಳನ್ನು ಬಿಟ್ಟರೆ ಮಲೆಯಾಳದ ಸರಿಸಮನಾಗಿ ಅಥವಾ ಇನ್ನೂ ಹಳೆಯ ಐತಿಹಾಸಿಕ ಆಧಾರಗಳನ್ನು ಹೊತ್ತ ಹಿರಿಮೆಯ ಭಾಷೆ ತೆಲುಗು. ಅತ್ಯಂತ ಹಳೆಯ ತೆಲುಗು ಭಾಷೆ ಹಾಗೂ ತೆಲುಗು ಲಿಪಿಯ ಶಾಸನವೆಂದರೆ ಚೋಳರಾಜನಾದ

---

[1] K. Ramakrishnaiah, *Studies in Dravidian Philology*, 1935, p. 23.

ಪುಣ್ಯಕುಮಾರನ ಆಡಳಿತ ಕಾಲದ—ಅಂದರೆ ಕ್ರಿ. ಶ. ೬-೭ನೆಯ ಶತಮಾನದ—ಕಡಪ ಜಿಲ್ಲೆಯ ತಿಪ್ಪಲೂರು ಶಾಸನ.[1]

ಹಳಗನ್ನಡಕ್ಕೂ—ಹೊಸಗನ್ನಡಕ್ಕೂ ಇರುವಷ್ಟೇ ವ್ಯತ್ಯಾಸ ಈ ತಿಪ್ಪಲೂರು ಶಾಸನದ ತೆಲುಗು ಭಾಷೆಗೂ ಇಂದಿನ ತೆಲುಗಿಗೂ ಅಂತರವಿದೆ. ಈ ಶಾಸನದ ಲಿಪಿ ಪಲ್ಲವರ ಕಾಲದ ಗ್ರಂಥ ಲಿಪಿಗೆ ಸದೃಶವಾಗಿದೆ. ಇದಕ್ಕಿಂತಲೂ ಹಳೆಯ, ತೆಲುಗು ಭಾಷೆಯ ಶಾಸನಗಳು ಇರಬೇಕೆಂಬ ಭಾವನೆ ಇದೆಯಾದರೂ, ಶಾಸನಗಳಾವುವೂ ಸಿಕ್ಕಿಲ್ಲ. ತಿಪ್ಪಲೂರು ಶಾಸನದಲ್ಲಿನ 'ತರಕ್ಕಪುೞಿರೊಲು' ಎಂಬ ರೂಪಕ್ಕೂ ಇಂದಿನ ತೆಲುಗು ರೂಪವಾದ ಪ್ರೋಲು ರೂಪಕ್ಕೂ ಇರುವ ವ್ಯತ್ಯಾಸ ಎದ್ದು ಕಾಣುತ್ತದೆ: ಪುೞಿಲ್ > ಪೊೞಿಲ್ > ಪೊಳಲು > ಪ್ರೋಲು — ಹೀಗೆ ಇದು ವಿಕಾಸವಾಗಿದೆ.

ಏಳನೆಯ ಶತಮಾನದ ತರುವಾಯ ತೆಲುಗು ಭಾಷೆಯ ಅನೇಕ ಶಾಸನಗಳು ದೊರೆತಿವೆ. ಅವುಗಳಲ್ಲಿ ಭೈರವಕೊಂಡ ಗವಿಯ ಶಾಸನಗಳು ಮುಖ್ಯ. ಇಲ್ಲಿನ ಮೂರು ಗುಹಾ ಶಾಸನಗಳಲ್ಲಿ ಭಾಷಾವಿಜ್ಞಾನ, ಅದರಲ್ಲಿಯೂ ಧ್ವನಿವಿಜ್ಞಾನದ ದೃಷ್ಟಿಯಿಂದ ಗಮನಿಸಬೇಕಾದ ಹಲವು ರೂಪಗಳು ಪ್ರಯೋಗವಾಗಿವೆ. ಉದಾಹರಣೆಗಾಗಿ ಒಂದೆ ರಡು ರೂಪಗಳನ್ನು ನೋಡಬಹುದು :

೧. ಪನಿಕೇಸಿರಿ—ಇದು ಮುಂದೆ ಪನಿ (=ಕೆಲಸ) ಚೇಸಿರಿ ಎಂದು ಆಗಿದೆ. ದ್ರಾವಿಡ ಭಾಷೆಗಳ ಇಂಥ ರೂಪಗಳಲ್ಲಿ ಅಘೋಷಸ್ಪರ್ಶ ಧ್ವನಿ ಹಳೆಯದು; ಸ್ಪೃಷ್ಟೋಷ್ಮಧ್ವನಿ ತರುವಾಯದ್ದು.

೨. ಕೇಸಿನ—ಈ ರೂಪವೂ ಮೇಲಿನ ಹೇಳಿಕೆಗೆ ಪೋಷಕವಾಗಿದೆ. ಇವೆರಡು ರೂಪಗಳನ್ನು ಗಮನಿಸಿ ಧ್ವನಿನಿಯಮವನ್ನು ಹೀಗೆ ವಿವರಿಸಬಹುದು : ಪದದ ಆದಿಯಲ್ಲಿ ಕಕಾರವಿದ್ದು ಅದರ ಮುಂದೆ ಏ ಎಂಬ ಸ್ವರವಿದ್ದು ಕೊನೆಯಲ್ಲಿ ಇಕಾರಾಂತ ವ್ಯಂಜನವಿದ್ದರೆ ಆಗ ಆದಿಯ ಕ > ಚ ಆಗುವಂತೆ ತೋರುತ್ತದೆ.

೩. ಚೆಱುವು—ಈ ಪದದ ಆದಿಯಲ್ಲಿ ಚಕಾರವಿದೆ. ಆದರೆ ಕನ್ನಡದಲ್ಲಿ ಮತ್ತು ಇತರ ಜ್ಞಾತಿಭಾಷೆಗಳಲ್ಲಿ 'ಕ'ಕಾರವಿರುವುದರಿಂದ ಇದರ ಹಿಂದಿನ ರೂಪ *ಕೆಱುವು ಇದ್ದಿರಬಹುದು.

ಧ್ವನಿಪರಿವರ್ತನೆ ಹಂತಹಂತವಾಗಿ ಕ್ರಮೇಣ ನಡೆಯುವ ಕ್ರಿಯೆಯೆಂಬುದು ಈ ಮೂರು ಮಾತುಗಳಿಂದ ಮನದಟ್ಟಾಗುತ್ತದೆ.

ತೆಲುಗು ಭಾಷೆಯಲ್ಲಿ ಱಕಾರ, ೞಕಾರಗಳೂ ಬಳಕೆಯಲ್ಲಿದ್ದುವೆಂಬುದಕ್ಕೆ ಶಾಸನಾಧಾರಗಳಿವೆ. ಱಕಾರ ಬಹಳಕಾಲ ಬಳಕೆಯಲ್ಲಿತ್ತು, ೞಕಾರ ಮಾತ್ರ ಬಹಳ ಹಿಂದೆಯೇ ಹೊರಟುಹೋಯಿತು. ಕನ್ನಡಕ್ಕೂ ಮೊದಲೇ ತೆಲುಗು ೞ ಧ್ವನಿಮಾವನ್ನು ಕಳೆದು

---

[1] ಈ ಪುಣ್ಯಕುಮಾರ ಕ್ರಿ. ಶ. ೬ನೆಯ ಶತಮಾನದಿಂದ ಒಂಬತ್ತನೆಯ ಶತಮಾನದವರೆಗೂ ಆಳಿದ ಪೂರ್ವಕಾಲದ ಚೋಳರ (Early Cholas) ವಂಶಕ್ಕೆ ಸೇರಿದವನಿರಬೇಕು. ಆದರೆ ಈ ವಿಚಾರದಲ್ಲಿ ಬಹಳವಾದ ಭಿನ್ನಾಭಿಪ್ರಾಯವೂ ಇದೆ.

ಕೊಂಡಿತ್ತು. ಆದರೆ ತೆಲುಗು ಭಾಷೆಯಲ್ಲಿ ಟಿಕಾರ ಇರಲೇ ಇಲ್ಲವೆಂದು ಕೆಲವರು ಹೇಳುವುದು ತೀರ ತಪ್ಪು ಅಭಿಪ್ರಾಯ. ಏಕೆಂದರೆ ತೆಲುಗು ಭಾಷೆಯ ಹಳೆಯ ಶಾಸನಗಳಲ್ಲಿ ದೀನಿಬಿಚ್ಚಿನವಾನಿಕಿ, ಬಿಚ್ಚಿನ ಪಾಪಂಬುಗು—ಎಂಬ ಪ್ರಯೋಗಗಳು ಇವೆ. ಬಿಚ್ಚಿನ (=ಕೆಡಿಸಿದ) ಎಂಬುದು <ಅಬಿಚ್ಚಿನ ಎಂಬುದರ ಅನಂತರದ ರೂಪ.

ಶಾಸನಗಳನ್ನು ಬಿಟ್ಟರೆ ತೆಲುಗು ಭಾಷೆಯಲ್ಲಿ ೧೧ನೆಯ ಶತಮಾನದಲ್ಲಿ ರಚಿತವಾದ ನನ್ನಯ್ಯ ಕವಿಯ ಭಾರತವೇ ಹಳೆಯ ಕಾವ್ಯ, ಮೊದಲ ಹಿರಿಯ ಕಾವ್ಯ. ಕನ್ನಡ ಭಾಷೆಗೆ ಸಂಬಂಧಿಸಿದಂತೆ ಈ ಕಾವ್ಯದ ಒಂದು ಹೆಚ್ಚಳವೆಂದರೆ, ನನ್ನಯ್ಯಭಾರತದ ಮೂಲಸ್ಫೂರ್ತಿ ಕನ್ನಡದ ಪಂಪಭಾರತ ಎಂಬುದು. ಇದರಿಂದ ಕನ್ನಡ ಮತ್ತು ತೆಲುಗು ಸಾಹಿತ್ಯಗಳ ಸಂಬಂಧ ಪ್ರಾಚೀನವೆಂದು ಚೆನ್ನಾಗಿ ಕಾಣುತ್ತದೆ. ಇದಲ್ಲದೆ ಈ ಎರಡು ಭಾಷೆಗಳ ಲಿಪಿಯ ಸಾದೃಶ್ಯವಂತೂ ಸವಿಾಪತರವಾದುದು. ಕನ್ನಡ-ತೆಲುಗುಗಳಲ್ಲಿ ಭಾಷಾಭೇದವಿದೆಯೇ ಹೊರತು ಲಿಪಿಭೇದ ಬಹಳ ಕಡಮೆ. ಆದರೆ ಕನ್ನಡ—ತಮಿಳು ಭಾಷೆಗಳಲ್ಲಿ ಲಿಪಿಭೇದ ಹೆಚ್ಚು, ಭಾಷಾಭೇದ ಕಡಮೆ. ಕನ್ನಡ—ಮಲೆಯಾಳ ಭಾಷೆಗಳಲ್ಲಿ ಲಿಪಿಭೇದ—ಭಾಷಾಭೇದಗಳೆರಡೂ ಸಮನಾಗಿವೆ. ಭಾಷಾವಿಜ್ಞಾನದ ಅಭ್ಯಾಸ ಕಾಲದಲ್ಲಿ ಇಂಥ ಸ್ವಾರಸ್ಯಗಳು ಅನೇಕ ವೇಳೆ ಕಂಡುಬರುತ್ತಿರುತ್ತವೆ.

ದ್ರಾವಿಡ ಭಾಷೆಗಳಲ್ಲಿ ಸಾಮಾನ್ಯವಾಗಿ ಕಾಣುವ ಅಕ್ಷರಗಳೇ ತೆಲುಗು ವರ್ಣಮಾಲೆಯಲ್ಲೂ ಇವೆ, ಅಲ್ಪ ಸ್ವಲ್ಪ ವ್ಯತ್ಯಾಸಗಳೊಡನೆ. ತೆಲುಗು ವರ್ಣಮಾಲೆಯಲ್ಲಿ ೩೬ ವರ್ಣಗಳಿವೆ. ದ್ವಿವಿಧ ವರ್ಣಗಳಾದ ಅ, ಆ, ಇ, ಈ, ಉ, ಊ, ಗಳನ್ನು ಅತ್, ಇತ್, ಉತ್ ಎಂದೂ ; ಏ, ಓ—ಗಳನ್ನು ವಕ್ರವೆಂದೂ ; ಐ, ಔ—ಗಳನ್ನು ವಕ್ರತಮವೆಂದೂ ಕೆಲವರು ಕರೆದಿದ್ದಾರೆ. ಆದರೆ ತೆಲುಗು ಭಾಷೆಯ ವರ್ಣಮಾಲೆಯ ವೈಶಿಷ್ಟ್ಯವಿರುವುದು ಅರ್ಧಾನುಸ್ವಾರವಿರುವುದರಲ್ಲಿ. ಉಳಿದ ಭಾಷೆಗಳಲ್ಲಿ ಇಂದು ಕಾಣದ ಅಥವಾ ಕಂಡರೂ ಪ್ರತ್ಯೇಕವಾಗಿ ಪರಿಗಣಿಸದಿರುವ ಈ ಅರ್ಧಾನುಸ್ವಾರ ತೆಲುಗು ಭಾಷೆಗೆ ವಿಶಿಷ್ಟವಾದುದು. ಇತ್ತೀಚೆಗೆ ಇದರ ಬಳಕೆ ತೆಲುಗು ಭಾಷೆಯಲ್ಲೂ ಕಡಮೆಯಾಗುತ್ತಲಿದೆ. ಅರ್ಧಾನುಸ್ವಾರದ ವಿಚಾರವನ್ನು ಸಂಗ್ರಹರೂಪದಲ್ಲಿ ಮುಂದೆ ತಿಳಿಸುವ ಮೊದಲು ಕೆಲವು ತೆಲುಗು ವ್ಯಾಕರಣಗಳ ಹೆಸರುಗಳನ್ನು ಗಮನಿಸಬಹುದು :

೧. ನನ್ನಯ್ಯ ಭಟ್ಟೀಯವೆಂಬ ಆಂಧ್ರಶಬ್ದ ಚಿಂತಾಮಣಿ. ಇದು ನನ್ನಯ್ಯ ಕವಿ (ಕ್ರಿ. ಶ. ೧೧೨೨) ರಚಿತವೆನ್ನುವರು.
೨. ತ್ರಿಲಿಂಗ ಶಬ್ದಾನುಶಾಸನ ಅಥವಾ ಅಥರ್ವಣ ವ್ಯಾಕರಣ ಕಾರಿಕಾವಳಿ. ಅಥರ್ವಣಾಚಾರ್ಯ : ೧೨ನೆಯ ಶತಮಾನ.

ಇವೆರಡು ಪ್ರಸಿದ್ಧ ವ್ಯಾಕರಣಗಳಲ್ಲದೆ ಅಪ್ಪಕವೀಯ, ಆಂಧ್ರಕೌಮುದಿ, ಚಿನ್ನ ಸೂರಿಯ ಬಾಲವ್ಯಾಕರಣ—ಇವು ಜನಪ್ರಿಯವಾಗಿವೆ. ಇವುಗಳಲ್ಲಿ ಬಾಲವ್ಯಾಕರಣ ಆಧುನಿಕ.

ಈ ವ್ಯಾಕರಣಗಳ ಆಧಾರದಿಂದ ತೆಲುಗು ಭಾಷಾ ಸ್ವರೂಪದ ಜೊತೆಗೆ ಅರ್ಧಾನು ಸ್ವಾರದ ಸರಿಯಾದ ಪರಿಕಲ್ಪನೆಯೂ ದೊರೆಯುತ್ತದೆ. ತೆಲುಗು ಭಾಷೆಯಲ್ಲಿ ಅನು ಸ್ವಾರ ಅಥವಾ ಬಿಂದುವನ್ನು ನಾಲ್ಕು ವಿಧವಾಗಿ ವಿಭಾಗಿಸಿದ್ದಾರೆ. ನನ್ನಯ್ಯ ಭಟ್ಟೀಯದ ವಿವರಣೆಯೊಂದು ಇಂತಿದೆ :

ಸಿದ್ಧಸ್ಸಾಧ್ಯಶ್ಚಾನುಸ್ವಾರಃ । ಪೂರ್ಣಾರ್ಧಭೇದತೋ ದ್ವಿವಿಧಃ ।
ಹ್ರಸ್ವಾತ್ಪೂರ್ಣೋಽಪಿ ಭವೇತ್ । ದೀರ್ಘಾಚ್ಚೇತ್ಖಂಡಏವ ಸಜ್ಞೇಯಃ ॥

ಅಂದರೆ ಅನುಸ್ವಾರ ಸಿದ್ಧಪೂರ್ಣ—ಸಿದ್ಧಖಂಡ ; ಸಾಧ್ಯಪೂರ್ಣ—ಸಾಧ್ಯಖಂಡ ಗಳೆಂದು ಚತುರ್ವಿಧ. ಸಿದ್ಧವೆಂದರೆ ಪದದ ಜೊತೆಯಲ್ಲಿ ಕೂಡಿಕೊಂಡಂತೆ ಬರುವುದು, ಸಾಧ್ಯವೆಂದರೆ ಶಾಸ್ತ್ರದಿಂದ ಬರತಕ್ಕದ್ದು. ಅರ್ಧಾನುಸ್ವಾರ ಇವಕ್ಕಿಂತಲೂ ಬೇರೆ ಯಾದುದು. ತೆಲುಗು ಎಂಬ ಈ ಪದವನ್ನು ಹಿಂದಿನ ಗ್ರಂಥಗಳಲ್ಲಿ ತೆಲುಗು ಎಂದು ಬರೆದಿದ್ದಾರೆ. ಹೀಗೆಯೇ ಮೂಡು<ಮೂಣ್ಡು (=ಮೂರು) ಎಂಬ ಸಂಖ್ಯಾವಾಚಿ ಮತ್ತು ವಾಡು (=ಅವನು) ಎಂಬ ಸರ್ವನಾಮಪದ—ಇವೆರಡು ಪದಗಳ ಬೆಳವಣಿಗೆ ಯಲ್ಲಿ ಅರ್ಧಾನುಸ್ವಾರ ಬಂದು ಹೋಗಿರುವುದಾಗಿ ವಿದ್ವಾಂಸರು ಹೇಳುವರು. ಅವರ ವಿವರಣೆ ಇಂತಿದೆ:

ಮೂಣ್ಡು >ಮೂಣ್‌ಡು> ಮೂ$_c$ಡು > ಮೂಡು
ವಾಣ್ಡು > ವಾಣ್‌ಡು > ವಾ$_c$ಡು > ವಾಡು

ಇಲ್ಲಿ ಈ ಪದಗಳ ಬೆಳವಣಿಗೆಯ ಕ್ರಮದಲ್ಲಿ ಅರ್ಧಾನುಸ್ವಾರವಿದೆ. ಅನುನಾಸಿಕದ ಸಂಕೇತವಾದ ಅನುಸ್ವಾರವನ್ನು 'ಕನ್ನಡ ಭಾಷೆಯಲ್ಲಿ ತೋರಿಸುವಂತೆ ಸೊನ್ನೆಯ (೦) ಚಿಹ್ನೆಯಿಂದಲೂ, ಅರ್ಧಾನುಸ್ವಾರವನ್ನು ಅರ್ಧಚಂದ್ರಾಕೃತಿಯಲ್ಲಿ, ಅಂದರೆ ಇಂಗ್ಲಿಷ್ ವರ್ಣಮಾಲೆಯ ಸಿ (c) ವರ್ಣದಂತೆಯೂ ತೋರಿಸುವರು.

ಅರ್ಧಾನುಸ್ವಾರವನ್ನು ಅರ್ಧಬಿಂದುವೆಂದೂ ಮತ್ತು ಕೆಲವೊಮ್ಮೆ ಇದನ್ನು ಬೇಕಾದರೆ ಬಳಸಬಹುದು, ಇಲ್ಲವಾದರೆ ಬಿಡಬಹುದಾದುದರಿಂದ ವಿಕಲ್ಪಾರ್ಧಬಿಂದುವೆಂದೂ ಕರೆಯಬಹುದು.[1] ತೆಲುಗು ವ್ಯಾಕರಣಗಳಲ್ಲಿ ಈ ಅರ್ಧಾನುಸ್ವಾರವನ್ನು 'ಅರ್ಧ ಚಂದ್ರೋಪಮಬಿಂದುಃ' ಎಂದು ನಿರ್ದೇಶಿಸಿದ್ದಾರೆ. ಐತಿಹಾಸಿಕವಾಗಿ ಹೇಳುವುದಾದರೆ ಅರ್ಧಾನುಸ್ವಾರ ತೆಲುಗು ಭಾಷೆಯಲ್ಲಿ ಹಿಂದಿನಿಂದಲೂ ಇದ್ದಿತೆಂದೂ, ಕ್ರಮೇಣ ಅದನ್ನು ಬೇಕಾದರೆ ಬಳಸಬಹುದೆಂಬ ವಿಕಲ್ಪಸ್ಥಿತಿ ಉಂಟಾಯಿತೆಂದೂ ಕಾಣುತ್ತದೆ.

ವಿಸರ್ಗದ ಬಳಕೆ ತೆಲುಗು ಭಾಷೆಯಲ್ಲಿ ಅಷ್ಟಾಗಿ ಇಲ್ಲ ; ಪದ ಮಧ್ಯೆ ಅಪರೂಪ ವಾಗಿ ವಿಸರ್ಗ ಬರುತ್ತದೆ. ಇದು ಬಹುಶಃ ಎಲ್ಲ ದ್ರಾವಿಡ ಭಾಷೆಗಳಲ್ಲೂ ಹೀಗೇ ಇದೆ.

ಅ$_c$ಟ, ಇ$_c$ಕ, ಚು$_c$ಡು

1 ಉದಾ : ಕೋಂತಿ > ಕೋ$_c$ತಿ—ಪದವನ್ನು ಕೋತಿ ಎಂದು ಬೇಕಾದರೆ ಬರೆಯಬಹುದು.

ಎಂಬ ಈ ಪದಗಳ ಹೊರತು ಪದದ ಆದಿಯ ಹ್ರಸ್ವಸ್ವರದ ಮೇಲೆ ಅರ್ಧಾನುಸ್ವಾರವಾಗಲಿ, ನಕಾರಲೋಪವಾಗಲಿ ಬರುವುದಿಲ್ಲ. ಆದರೆ ಹ್ರಸ್ವಕ್ಕೆ ಪರವಾದ ಅರ್ಧಾನುಸ್ವಾರ ಕೆಲವೊಮ್ಮೆ ಪೂರ್ಣಾನುಸ್ವಾರವಾಗುವುದೂ ಉಂಟು. ದೀರ್ಘಕ್ಕೆ ಪರವಾದ ಅರ್ಧಾನುಸ್ವಾರ ಮಾತ್ರ ಮಾರ್ಪಾಟು ಪಡೆಯದೆ ಅರ್ಧಾನುಸ್ವಾರವಾಗಿಯೇ ಉಳಿಯುತ್ತದೆ. ಅರ್ಧಾನುಸ್ವಾರದಿಂದ ಕೆಲವು ಪ್ರಯೋಜನಗಳೂ ಇವೆ. ಉದಾಹರಣೆಗೆ ಒಮ್ಮೊಮ್ಮೆ ಅರ್ಧಾನುಸ್ವಾರದಿಂದ ಪದಗಳ ಅರ್ಥ ನಿಷ್ಕರ್ಷೆಯಾಗುತ್ತದೆ. ಇಲ್ಲಿ ಕೊಟ್ಟಿರುವ ಕೆಲವು ಪದಗಳನ್ನೂ, ಅರ್ಧಾನುಸ್ವಾರದಿಂದ ಅರ್ಥನಿರ್ಧಾರಕ್ಕೆ ಆಗಿರುವ ಅನುಕೂಲವನ್ನೂ ಗಮನಿಸಬಹುದು. ಜೊತೆಗೆ ವೈದೃಶ್ಯ ತೋರಿಸಲು ಈ ನಾಲ್ಕು ಅಲ್ಪ ವಿರೋಧೀಯುಗ್ಮಗಳು (mininal pairs) ಸಾಕು.

| ಅರ್ಧಾನುಸ್ವಾರ ಸಹಿತ | ಅರ್ಥ | ಅರ್ಧಾನುಸ್ವಾರ ಅಹಿತ | ಅರ್ಥ |
|---|---|---|---|
| ಊc ಚು | ತೊಟ್ಟಿಲು ತೂಗು | ಊಚು | ರೋಗದಿಂದ ಕೂದಲು ಬಿದ್ದು ಹೋಗುವುದು |
| ಏc ಡು | ವರುಷ | ಏಡು | ಏಳು (ಸಂಖ್ಯಾವಾಚಿ) |
| ಕಲc ಗು | ಗುಹೆ | ಕಲಗು | ಆಗು : ಹುಟ್ಟು |
| ಕಾc ಪು | ಒಕ್ಕಲಿಗ : ಕಾಪೋಳ್ಳು | ಕಾಪು | ರಕ್ಷಣೆ ೨ ಕಾ (ಕನ್ನಡ) ಕಾಪು ವೇಟ್ಟು |

ಆದುದರಿಂದ ಹಳೆಯ ತೆಲುಗು ಭಾಷೆಯಲ್ಲಿ ಅರ್ಧಾನುಸ್ವಾರವನ್ನು ಒಂದು ಪ್ರತ್ಯೇಕ ಧ್ವನಿಮಾ ಎಂದೇ ಪರಿಗಣಿಸಬೇಕು. ಆದರೆ ಆಧುನಿಕ ತೆಲುಗಿನಲ್ಲಿ ಅರ್ಧಾನುಸ್ವಾರ ಧ್ವನಿಮಾ ಇಲ್ಲ.

೧೭ನೆಯ ಶತಮಾನದ ಪೋರ್ಚುಗೀಸರೂ, ಅನಂತರ ಆಗಮಿಸಿದ ಯೂರೋಪಿಯನ್ನರೂ ಈ ತೆಲುಗರನ್ನು Gentoo ಎಂದು ಕರೆದಿದ್ದಾರೆ. ಗೆಂಟು ಎಂದರೆ ಪೋರ್ಚುಗೀಸಿನಲ್ಲಿ–ಇಂಗ್ಲಿಷಿನ Heathen, ಹಿಂದೂಗಳು ಹೇಳುವ ಮ್ಲೇಚ್ಛ ಇದ್ದಂತೆ–ಅಸಂಸ್ಕೃತ ಸ್ಥಿತಿಯಲ್ಲಿರುವ ಅನಾಗರಿಕರೆಂದೂ, ವಿಧರ್ಮಿ ಎಂದೂ ಅರ್ಥವಿದೆ ; ಈ ಎರಡನೆಯ ಅರ್ಥದಲ್ಲಿ ಗೆಂಟೂ ಪದ ಬಳಕೆಯಾಗಿರಬಹುದು. ತೆಲುಗು ಭಾಷೆಯ ಅಭ್ಯಾಸವನ್ನು ಸಶಾಸ್ತ್ರೀಯವಾಗಿ, ಸಮಗ್ರವಾಗಿ ಆರಂಭಿಸಿದವನು 'ಡೇನಿಷ್'ನ

ಷೂಲ್ಜ್ ಎಂಬಾತ. ಅನಂತರ ಅನೇಕ ಪಾದ್ರಿಗಳು ಸೇವೆ ಸಲ್ಲಿಸಿದರು. ಈಸ್ಟ್ ಇಂಡಿಯಾ ಕಂಪನಿಗೆ ಸೇರಿದ ಎ. ಡಿ. ಕ್ಯಾಂಪ್ ಬೆಲ್,[1] ಅನಂತರ ಮಾರಿಸ್ ಎಂಬುವರು ತೆಲುಗು ಭಾಷೆಯ ನಿಘಂಟನ್ನು[2] ಪ್ರಕಾಶಪಡಿಸಿದರು.

ಇವರೆಲ್ಲರ ಸೇವೆಗಿಂತಲೂ ಮಹತ್ತರವಾದುದು ಮುಂದೆ ಬಂದ ಬ್ರೌನ್ ಮಹಾಶಯನದು. ಚಾರ್ಲ್ಸ್ ಫಿಲಿಪ್ ಬ್ರೌನ್ ಎಂಬಾತ ತೆಲುಗು ಭಾಷೆ, ಛಂದಸ್ಸು, ವ್ಯಾಕರಣಗಳಿಗೆ ಸಂಬಂಧಿಸಿದಂತೆ ದುಡಿದನು, ಶಾಸ್ತ್ರೀಯ ವಿವೇಚನೆಯ ಸಾರ ತಿಳಿಸುವ ಹೊತ್ತಗೆಗಳನ್ನು ಹೊರತಂದನು.[3] ಈ ಶತಮಾನದ ಪೂರ್ವಾರ್ಧಕ್ಕಿಂತಲೂ ಉತ್ತರಾರ್ಧದಲ್ಲಿ ಭಾಷಾವಿಜ್ಞಾನದ ದೃಷ್ಟಿಯಿಂದ ತೆಲುಗು ಭಾಷೆಯಲ್ಲಿ ಒಳ್ಳೆಯ ಕೆಲಸ ನಡೆಯುತ್ತಿದೆ. ಅದರಲ್ಲಿ ಕೆ. ರಾಮಕೃಷ್ಣಯ್ಯ, ಪ್ರಾ|| ಸೋಮಯಾಜಿ, ಡಾ|| ಭ. ಕೃಷ್ಣಮೂರ್ತಿ—ಉಲ್ಲೇಖನೀಯರು. ಇತ್ತೀಚೆಗೆ ತೆಲುಗು ಭಾಷೆಯ ಧಾತು ಪ್ರಕರಣಕ್ಕೆ ಸೇರಿದಂತೆ ಭದ್ರಿರಾಜು ಕೃಷ್ಣಮೂರ್ತಿಯವರು ನಡಸಿದ ತೌಲನಿಕ ವ್ಯಾಸಂಗ ತೆಲುಗು ಭಾಷೆಗೆ ಮಾತ್ರವಲ್ಲದೆ ದ್ರಾವಿಡ ಭಾಷೆಗಳ ವರ್ಗಕ್ಕೇ ಒಂದು ಮಹತ್ತರ ಕೊಡುಗೆಯಾಗಿದೆ.[4]

ಅ. *Telugu-English Dictionary*
ಆ. *English-Telugu Dictionary*
ಇ. *An Analysis of Telugu Prosody*
ಈ. *Telugu Grammar*

ದ್ರಾವಿಡ ಭಾಷೆಯಲ್ಲಿ ಸ್ವರಾಘಾತದ ವಿಚಾರವಾಗಿ ವಿವೇಚಿಸುತ್ತಾ ವಿದ್ವಾಂಸರು ಮೂಲ ದ್ರಾವಿಡದಲ್ಲಿ ಪದದ ಮೊದಲನೆಯ ಸ್ವರದ ಮೇಲೆ ಸ್ವರಾಘಾತ ಆಗುತ್ತಿದ್ದು ಕ್ರಮೇಣ ಅದು ವ್ಯತ್ಯಾಸಗೊಳ್ಳುತ್ತಾ ಬಂದಿದೆಯೆಂದು ಅಭಿಪ್ರಾಯಪಟ್ಟಿದ್ದಾರೆ. ತೆಲುಗು ಭಾಷೆಯಲ್ಲಿ ಎರಡನೆಯ ಸ್ವರದ ಮೇಲೆ ಸ್ವರಾಘಾತ ಬೀಳತೊಡಗಿದುದರಿಂದ ಮೊದಲನೆಯ ಸ್ವರ ಬಿದ್ದುಹೋಯಿತೆಂದು ಧ್ವನಿ ವಿಜ್ಞಾನಿಗಳ ವಿವರಣೆ. ಆದರೆ ಇಲ್ಲಿ ಕೆಲವು ಸಂದೇಹಗಳೂ ಇವೆ. ಅವುಗಳಲ್ಲಿ ಮುಖ್ಯವಾದ ಒಂದು ಅನುಮಾನವೆಂದರೆ ಪದದ ಎರಡನೆಯ ಸ್ವರದ ಮೇಲೆ ಆಘಾತ ಬಿದ್ದರೆ, ಆ ಎರಡನೆಯ ಸ್ವರ ಉಳಿದು ಮೊದಲನೆಯ ಸ್ವರ ಹೊರಟು ಹೋಗುವುದು ಸರಿ ; ಆದರೆ, ತೆಲುಗು ಭಾಷೆಯಲ್ಲಿ, ಕೆಲವು ಕಡೆಗಳಲ್ಲಿ ಸ್ವರಾಘಾತ ಬೀಳುವ ಎರಡನೆಯ ಸ್ವರವೇ ಹೊರಟು ಹೋಗಿ ಮೊದಲನೆಯ ಸ್ವರ ಬಂದು ಆ ಸ್ಥಾನವನ್ನು ತೆಗೆದುಕೊಳ್ಳುವುದಕ್ಕೆ ಕಾರಣವೇನು ?

---

[1] A. D. Campbell, *A Grammar of Telugu Language Commonly called Gentoo*, 1819.

[2] Morris, *Telugu Dictionary*, 1835.

[3] C. P. Brown ಬರೆದ ಪ್ರಮುಖ ಪುಸ್ತಕಗಳು.

[4] Bhadriraju Krishnamurti, *Telugu Verbal Bases*.

ವಿದ್ವಾಂಸರು ಈ ಸಂದೇಹಕ್ಕೆ ಆದಷ್ಟೂ ಸಮಂಜಸವಾದ ಉತ್ತರ ಕೊಡಲು ಪ್ರಯತ್ನಿಸಿದ್ದಾರೆ. ಅವುಗಳಲ್ಲಿ ಗಮನಾರ್ಹ ವಿವರಣೆಯೆಂದರೆ, ತೆಲುಗು ಭಾಷೆಯಲ್ಲಿ ಮೂಲ ದ್ರಾವಿಡದ, ಪದದ ಆದಿಯ, ಮೂಲ ಸ್ವರಗಳು ಪರಿವರ್ತಿತವಾಗಿವೆ ಎಂಬುದು.

ತಮಿಳು–ಕನ್ನಡ ಭಾಷೆಗಳೊಡನೆ ಹೋಲಿಸಿದಾಗ ತೆಲುಗು ಭಾಷೆಯ ಕೆಲವು ಪದಗಳಲ್ಲಿನ ಮಾರ್ಪಾಟು, ಅದರಲ್ಲಿಯೂ ಆ ಧ್ವನಿ ವ್ಯತ್ಯಾಸ, ಸ್ವಾರಸ್ಯವಾದುದು. ಸಾಮಾನ್ಯವಾಗಿ ತಮಿಳು ಅಥವಾ ಕನ್ನಡದ ಪದಗಳಲ್ಲಿನ ಮೊದಲನೆಯ ಸ್ವರ, ಆ ಪದಗಳು ತೆಲುಗಿಗೆ ಬರುವಾಗ, ಎರಡನೆಯ ಸ್ವರವನ್ನು ಆಕ್ರಮಿಸುವುದು ಕಾಣುತ್ತದೆ. ಇದಲ್ಲದೆ ಎರಡು ಸ್ವರಗಳ ಮಧ್ಯೆ ಒಂದೇ ಒಂದು ವ್ಯಂಜನವಿದ್ದು ಆ ಎರಡನೆಯ ಸ್ವರ ಆಕಾರವಾಗಿದ್ದರೆ ಆಗ ಅಲ್ಲಿ ಮೊದಲನೆಯ ಸ್ವರ ಎರಡನೆಯ ಸ್ವರದ ಸ್ಥಾನಕ್ಕೆ ಬಂದು ದೀರ್ಘಸ್ವರವಾಗಿ ಪರಿಣಮಿಸಿ ನಿಲ್ಲುವುದೂ ಉಂಟು. ಅಂಥ ಹಲವು ಗಮನಾರ್ಹ ಪದಗಳನ್ನು, ಧ್ವನಿ ವ್ಯತ್ಯಾಸಗಳೊಡನೆ ಇಲ್ಲಿ ಮುಂದೆ ಉದಾಹರಿಸಿದೆ. ಈ ಉದಾಹರಣೆಗಳಿಂದ ತೆಲುಗು ಭಾಷೆಯಲ್ಲಿ ಹೇಗೆ ವರ್ಣಪಲ್ಲಟ ಉಳಿದೆಲ್ಲ ದ್ರಾವಿಡ ಭಾಷೆಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ನಡೆದಿದೆಯೆಂಬುದನ್ನು ಗಮನಿಸಬಹುದು.

*ಅದನ್ (< ಅದ್) + ಇ > ದಾನಿ, ಹೋ : ಕ. ಅದಳ್

ಇದನ್ (< ಇದ್) + ಇ > ದೀನಿ, ಹೋ : ಕ. ಇದಳ್

ಅಟುಚ್ಚಿನ > ಟಿಚ್ಚಿನ, ಹೋ : ಕ. ಅಟುಸಿದ

ಅತರಿ > *ಅದರಿ > ದಾರಿ > ದಾವ (ಗ್ರಾಮ್ಯ) : ಕನ್ನಡ 'ದಾರಿ' ಎರವಲು ಪದ

ಅವರ್ > ವಾರು, ವಾಳ್ಳು : ಕ. ಅವರು

ಇಱಂಡು > *ಎಱಂಡು > ರೆಂಡು ; ಕ. ಎರಡು, ತ. ಇರಂಡು, ಮ. ರಂಡು, ತುಳು. ರೆಡ್ಡು

ಇರಾ (=ರಾತ್ರಿ) > ರೇ

*ಅವನ್ಱು > ವಾನ್ಱು > ವಾಂಡು > ವಾ ಂಡು > ವಾಡು

ಅವನ್ > ಅವನ್ > ವಾನ್ > ವಾನು

ಆಗಾದು > ಆಗದು > ಕಾದು : ಹೋ : ಕ. ಆಗದು

ಇವನ್ > ಇವನ್ > ವೀನ್

*ಇಲದು > *ಎಲದು > ಲೇದು. (ಪೂರ್ವ ದ್ರಾವಿಡದಲ್ಲಿ ಲ–ಕಾರದಿಂದ ಆರಂಭವಾಗುವ ಪದಗಳಿಲ್ಲ. ಅಂಥ ಪದಗಳು ತರುವಾಯ ಬಂದಿವೆ)

ಇವರ್ > ಇವರ್ > ವೀರು : ಇಲ್ > ಲೇ

—ಇಲ್ + ಏ + ಇರುಂಡು > —ಲೇಂದು/ಲೇಸ್ದು

*ಎಱಪು > ಇಱಪ್ಪು > ರೆಪ್ಪ > ಕ. ರೆಪ್ಪೆ

ಇಱಂಕೆ > ಎಱಂಕೆ > *ಎಱಕೆ > ಱೆಂಕೆ > ರೆಕ್ಕ > ಕ. ರೆಕ್ಕೆ

ಇರವು > *ಎರವು > ರೇವು > ಕ. ರೇವು

ಉಗಿರ್ > ಉಗುರ್ > ಗೋರು

ಉಳ್ > ಒಳ > ಲೋ (ಲೋಪುಲ=ಒಳಗೆ) ; ತ. ಕ. ಉಳ್, ಕ. ಒಳ

ಇೞಿಗು < *ೞಿಗು > ಡಿಗು > ದಿಗು. ಹೋ. ಕೋೞಿ > ಕೋಡಿ

ಎಱಗು > ಎರಗು > ರೇಗು > ಕ. ರೇಗು

*ಎರಕು > ರೇಕು > (ಕ) ರೇಕು. ಹೋ. ಡಬ್ಬಾರೇಕು

ಉಱಂಗು > ಉಱಗು > ಒಱಗು > ಒರಗು > ತೆ ರುಗ್ಗು

ಉರುವನ್ (ತ) > ಉರು ಕ. > ರುವು ತೆ.

ಉಱಲ್ > ಒಱಲ್ > ರೋಲು. ಆದರೆ ಇದು,–

–(ಕ) ಒಱಲ್ > ರೋಲು (ತೆ) / ಉಱಲ್ (ತ) ಏಕೆ ಆಗಿರಬಾರದು ?

ಓರ್ (=ಆಲೋಚಿಸು, ಪರೀಕ್ಷಿಸು) : ಓರು ತೆ. ರೋಯು†

ಇದುವರೆಗೂ ಸ್ವರಾದಿ ಪದಗಳು ತೆಲುಗು ಭಾಷೆಯಲ್ಲಿ ಹೊಂದುವ ಧ್ವನಿ ವ್ಯತ್ಯಾಸಗಳನ್ನು ನೋಡಿದೆವು. ಇನ್ನು ವ್ಯಂಜನಾದಿ ಪದಗಳು ಪಡೆಯುವ ಧ್ವನಿ ಪರಿವರ್ತನೆಗಳನ್ನು ನೋಡಬಹುದು.

ಕುೞಲ್ (ತ) > ಕೊೞಲ್ (ಕ) > ಕ್ರೋವಿ (ತೆ) > (ಗ್ರೋವಿ) > ಕೋವಿ > (ಕ) ಹೋ. ಪಿಳ್ಳಂಗೋವಿ

ಕೊೞುಂದು (ತ) > ಕೊೞುತ್ತು > ಕೊೞುತ (ಕ) > ಕ್ರೊತ್ತ (ತೆ) > ಕೊತ್ತ

ಪೊೞ್ತು > ಪೊೞುದು > ಪ್ರೊದ್ದು > ಪೊದ್ದು

ಕೊೞುವು > ಕೊಬ್ಬು > ಕ್ರೊವ್ವು

ಪೊೞಿಲ್ > ಪೊೞಿಲ್ > ಪ್ರೋಲ್

ಕುೞಿ > ಕೊರ್ವು > ಗ್ರೋಯಿ

ಪೞ > ಪ್ರಾತ > ಪಾತ

ಕಿೞಿಂದ > ಕ್ರಿಂದ > ಕಿಂದ

–ೞ– > –ರೇಫ– > ಶೂನ್ಯ, ø

ಕರುಡು > ಗ್ರುಡ್ಡು > ಗುಡ್ಡು

ವರಯು > ವ್ರಾಯು > ರಾಯು

ವರೆ > ವ್ರಾಯಿ > ರಾಯಿ.

---

† ತುಳುವಿನ ಉಪಭಾಷೆಯಾದ ಸಪಲಿಗರ ತುಳುವಿನಲ್ಲೂ ಈ ಬಗೆಯ ವ್ಯತ್ಯಾಸವನ್ನು ಗುರುತಿಸಬಹುದು. ಉದಾಹರಣೆ :

ಅಡೆಂಗುಣ (=ಅಡಗು < ಅಡಂಗು) ಡೆಂಗಿ

ಅಳಪ್ಪುಣ (=ಅಳೆಯುವುದು) ಲಪ್ಪು

ಈ ಕನ್ನಡ ಭಾಷೆಯ ಪದಗಳ ಆದಿಯಲ್ಲಿ ಎಲ್ಲೆಲ್ಲಿ ಕ ವ್ಯಂಜನ ಇರುತ್ತದೆಯೋ ಅಲ್ಲೆಲ್ಲಾ, ಸಾಮಾನ್ಯವಾಗಿ, ತೆಲುಗು ಭಾಷೆಯಲ್ಲಿ ಗಕಾರವೇ ಇರುತ್ತದೆ. ಪದದ ಆದಿಯ ಅಘೋಷ ಸ್ಪರ್ಶ ಧ್ವನಿ ಘೋಷ ಸ್ಪರ್ಶವಾಗಿ ಪರಿಣಮಿಸುತ್ತದೆ.

(ಕ) ಕಟಿತ್ತು > ಗಾಡದಿ (ತೆ) : ಕುಜು > ಗೊಜ್ಜು

ಕುಳಿ > ಗುಳಿ : ಕುರುಡಿ > ಗುಡ್ಡಿ

ಕುರುಡ > ಗುಡ್ಡಿವಾಡು : ಕುದುರೆ > ಗುರ್ರಮು

(ಕ) ಕ– : (ತೆ) ಗ–

ಕನ್ನಡ ತೆಲುಗು ಭಾಷೆಗಳಲ್ಲಿ ಸ್ವೀಕರಣಕಾರ್ಯ ಸಾಕಷ್ಟು ವ್ಯಾಪಕವಾಗಿಯೇ ನಡೆದಿದೆ. ವಿಜಯನಗರ ಸಾಮ್ರಾಜ್ಯದ ಆಡಳಿತಾವಧಿಯಲ್ಲಂತೂ ಇವರ ಸಂಪರ್ಕ ಅತ್ಯಂತ ನಿಕಟತಮವಾಗಿತ್ತು. ತೆಲುಗು ಭಾಷೆಯಲ್ಲಿ ಪದಾದಿಯ ಬ್—ರೂಪಗಳೂ (< ಕ.* ವ್— > ಬ್), ಸ್—ರೂಪಗಳೂ (< ಕ.* ಚ್– > ಸ್–) ಮತ್ತು ಇ ಅಥವಾ ಎ ಸ್ವರಗಳ ಮೊದಲು ಬರುವ ಕ್—ರೂಪಗಳೂ ಬಹುಮಟ್ಟಿಗೆ ಕನ್ನಡ ಭಾಷೆಯಿಂದ ಬಂದಿವೆ.

---

ಉಜುಂಬುಣ (=ಹೀರು) ಜುಂಬು

ಉಂಪು (=ಅನ್ನ) ಸುಪ್ಪು – ಹೋ: ಉಣ್ಣು

ಎಳತ್ತಿ (=ಎಳೆಯ) ಲತ್ತಿ

ಎಳಂಚಿ (=ಏಣಿ) ಲೆಂಚಿ

ಒರೆಂಕುಣ (=ಬಳಿ) ರೆಂಕಿ

# ಕೊಡಗು ಭಾಷೆ

೧೯೬೧ರ ಪ್ರಜಾಗಣತಿಯ ಅನುಸಾರವಾಗಿ ಕೊಡಗು ಭಾಷೆಯನ್ನು ಆಡುವವರು ೭೮,೨೦೨. ಕೊಡಗು ಭಾಷೆಯನ್ನು ಆಡುವವರು ನೂರಕ್ಕೆ ತೊಂಬತ್ತು ಜನ ಕೊಡಗಿನಲ್ಲೇ ಇರುವರಾದರೂ ಸುಮಾರು ಹನ್ನೆರಡು ಇತರ ಸಂಸ್ಥಾನಗಳಲ್ಲೂ ಇವರು ಇದ್ದಾರೆ. ಕೊಡಗು ಭಾಷೆ ದಕ್ಷಿಣ ದ್ರಾವಿಡ ಭಾಷೆಗಳಾದ ಕನ್ನಡ, ತಮಿಳು, ಮಲೆಯಾಳ, ತೊದ, ಕೋತ ಭಾಷೆಗಳ ಗುಂಪಿಗೆ ಸೇರುತ್ತದೆ; ನೀಲಗಿರಿಯ ಬಡಗ, ಕುರುಂಬ, ಇರುಳ, ಕೇರಳದ ಕಾಡಾರ್, ದಕ್ಷಿಣ ಕನ್ನಡ ಜಿಲ್ಲೆಗಳ ಹವ್ಯಕರ ಕನ್ನಡ—ಇವು ಈ ಗುಂಪಿಗೆ ಸೇರಿದ ಉಪ ಭಾಷೆಗಳು. ಕುಡ ಎಂದರೆ ಪಶ್ಚಿಮ ಎಂದು ಅರ್ಥ; ಪಶ್ಚಿಮಕ್ಕೆ ಇರುವುದು ಕೊಡಗು. ಕುಡ (=ಪಶ್ಚಿಮ)>ಕೊಡಗು>(ಇಂ) ಕೂರ್ಗ್—ಇದು ಈ ಪದದ ವಿಕಾಸಕ್ರಮ. ಆದರೆ ಯಾವುದರ ಪಶ್ಚಿಮಕ್ಕೆ? ಎಂಬುದು ಸ್ಪಷ್ಟವಾಗಿಲ್ಲ. ಕುಡು ಎಂದರೆ ಕೊಂಕು (ಕುಡುಗೋಲು) ಎಂಬ ಅರ್ಥವೂ ಇದೆ, ಆದರೆ ಈ ಅರ್ಥ ಕೊಡಗು ಪದದೊಡನೆ ಸಂಬಂಧಿಸಿದುದಲ್ಲ.

ಕೊಡವರು ಎಂಬ ಹೆಸರು ಹುಣಸೂರು ಶಾಸನದಲ್ಲಿ—ಶಾಸನ ಸಂಖ್ಯೆ ೨೦—'ಎಲ್ಲಾನಾಡ ಕೊಡಗರು ಕೂಡಿ' ಎಂದು ಇದೆ. ಇದರ ಕಾಲ ಕ್ರಿ. ಶ. ೧೧೭೪. ಕೊಡಗನ್ನು ಕುರಿತು ಬಹುಶಃ ಇದೇ ಮೊದಲ ಉಲ್ಲೇಖವಿರಬಹುದು. ಆದರೆ ಕ್ರಿ.ಶ. ಹತ್ತನೆಯ ಶತಮಾನದ ಶಾಸನದಲ್ಲಿಯೂ ಕೊಡಗರ ಪ್ರಸ್ತಾಪವಿದೆಯೆಂದು ಹೇಳುವರು. ಹುಣಸೂರು ಶಾಸನ

> . . .records that the changāḷva ruler Pemma Vīrappa, aided by the Koḍagas of all the Nādus, attacked Beṭṭarasa, the general of the Hoysaḷa King Ballāḷa II, sent to put down the Changāḷva King Mahādēva whom he killed in battle, but was defeated.[1]

ಕೊಡಗು ಭಾಷೆಯ ವ್ಯಾಕರಣವನ್ನು ಕುರಿತು ಕಳೆದ ಶತಮಾನದಲ್ಲೇ ಕೋಲ್

[1] *History of Kannada Language*, 1932, p. 38

ಎಂಬಾತ ಪುಸ್ತಕ ರಚಿಸಿದ್ದನು.[1] ಅನಂತರ ಕೊಡಗಿನ ವ್ಯಾಕರಣದ ಜೊತೆಗೆ ಕೊಡಗು ಭಾಷೆಯ ಕೆಲವು ಹಾಡುಗಳನ್ನೂ ಕೂಡಿಸಿ ಗ್ರೇಟರ್ ಎಂಬುವನು ಒಳ್ಳೆಯ ಹೊತ್ತಗೆಯೊಂದನ್ನು ಸಿದ್ಧಪಡಿಸಿದನು.[2] ಒಂದೆರಡು ಕೊಡಗಿನ ಹಾಡುಗಳನ್ನು, ಕೊಡಗು ಮತ್ತು ಕನ್ನಡ ಭಾಷೆಗಳಿಗೆ ಇರುವ ಸಾದೃಶ್ಯ—ವೈದೃಶ್ಯಗಳ ಹೋಲಿಕೆಯ ಸೌಕರ್ಯಕ್ಕಾಗಿ ಇಲ್ಲಿ ಉದಾಹರಿಸಿದೆ :

ನಲ್ಲೋರಾಜಿ ನಾಳಾಯಿ ತಾಯವ್ವ
ಅಂದಿಮುಂದಿ ನೇರತ್ ತಾಯವ್ವ
ಒರ್‌ರೆತೊ ತಳಿಚಿತೊ ತಾಯವ್ವ
ನಂದ ದೀಪ ಬೆಚ್ಚದೋ ತಾಯವ್ವ
ಜೋಡ್ ದೀಪ ಕಂಡಿರೋ ತಾಯವ್ವ
ಸೂರ್ಯನ ತೊತ್ತಿತ್ ತಾಯವ್ವ
ಕಾಲೂಮೂಡೂ ಕತ್ತಿತ್ ತಾಯವ್ವ
ಅಂದಲ್ಲ ಪಿನಿಯಾಂದ್ ತಾಯವ್ವ
ಪೊಂಬೋಲೆ ಪೊಲವಕ ತಾಯವ್ವ
ನಂದದೀಪ ನೋಟಣಿ ತಾಯವ್ವ
ಬೇಲನೋಟಿ ಪೋಯಿತ್ ತಾಯವ್ವ
ಕನ್ನಡಿಯು ನೇಕತ್ ತಾಯವ್ವ
ಮುಂದ್ ಸುತ್ತ ಬಂದಿತೋ ತಾಯವ್ವ
ಕೈ ಮುಲಂಗಿ ತೊತ್ತಿತ್ ತಾಯವ್ವ
ಚಿಮ್ಮರಂಜಿ ಒಕ್ಕಣಿ ತಾಯವ್ವ
ಬಲತ್ ಕಣ್ ಪಾರ್‌ಚಿ ತಾಯವ್ವ

ಇನ್ನೊಂದು ಕೊಡಗರ ಹಾಡು ರಾಗವಾಗಿ ಹಾಡಲು ಅನುಕೂಲವಾಗಿರುವಂತೆ ಪ್ರಸಿದ್ಧಿಯಾಗಿಯೂ ಇದೆ. ಕೊಡಗರು ಹಾಡುಗಳನ್ನು ಪಾಟ್ (ಹೋ. ಕ. ಪಾಡು, ತು. ಪಾಡ್ದನೆ, ತೆ. ಪಾಟ) ಎನ್ನುವರು. ಇವಲ್ಲದೆ ಪುತ್ತರಿಯಾಟ, ವಾಲಗತ್ತಾಟ, ಬೊಳಕಾಟ, ಉಮ್ಮತ್ತಾಟಗಳಲ್ಲಿ ಈ ಪಾಟ್‌ಗಳನ್ನು ಕೇಳಬಹುದು.

ಕೊಡಗು ಭಾಷೆಯ ಮತ್ತೊಂದು ಹಾಡು ಹೀಗಿದೆ :

ಲೇಲಾಲೇ, ಲಾಲೇಲ, ಲೇಲೇಲ, ಲೇಲೊ
ಲೇಲೆಲೊ ಪಾಡಿತರಕೊವ್ವ ಎಂಗ
ತಪ್ಪತ್ತೆನಾವ್ ತರಕೋಡೆ ಬಾರೊ
ಏಂಗಂಡು ತೊಂಡೆ ಕೊರತಂಡು ನಾವು
ಉದ್ದ ತೊಡಿಯತ್ ಉದ್ದಿಯ ಮಾವು

[1] Major R. A. Cole, *Coorg Grammar*, Bangalore, 1867

[2] Rev. A. Grater, *Coorg Songs, with Outlines of Coorg Grammar*, Mangalore, 1870

ಉದ್ದಿಯ ಮೂವುಲ್ ತೇದಿ ಕೊಡಾಯೊ
ನೀರ್‌ಲ್ ತಾವರೆ ರೂಪ ಬರಂದ
ಕೆತ್ತುವ ಕತ್ತಿರ ರೂಪ ಬರಂದ
ಕೆಂಬತ್ತಿ ಪೂವ್‌ರ ರೂಪ ಬರಂದ
ನಂದಿಯ ಕಾಳೆರ ರೂಪ ಬರಂದ
ತನ್ನಡ ದೇವಂಡ ರೂಪ ಬರಂದ
ಕಾವಳ ಪೂ ಇತೆರ ರೂಪ ಬರಂದ
ಕೂವಳ ಕೋಳಿರ ರೂಪ ಬರಂದ
ನಾದತ್ತ ದೇವಂಡ ರೂಪ ಬರಂದ
ತೂಡನ್ನೆ ತಾಂಡೋರ್ ರೂಪ ಬರಂದ
ಸೂರಿಯ ದೇವಂಡ ರೂಪ ಬರಂದ

ಕೊಡಗು ಭಾಷೆಯನ್ನು ಗ್ರಾಂಥಿಕ ದ್ರಾವಿಡ ಭಾಷೆಗಳ ಪರಿವಾರಕ್ಕೆ ಸೇರಿಸುವುದು ಇಂದಿನ ವಾಡಿಕೆ. ಆದರೂ ಹಿಂದೆ ಕಾಲ್ಡ್‌ವೆಲ್ ಹೀಗೆ ಮಾಡಲು ಹಿಂಜರಿದಿದ್ದಾನೆ:

'. . . . . though I have thought it best to give this language a place amongst the cultivated members of the family, the propriety of doing so seems to me still more doubtful than that of placing Tulu in the list.[1]

ಆದುದರಿಂದ ತನ್ನ ಗ್ರಂಥದ ಪ್ರಥಮ ಮುದ್ರಣ ಕಾಲದಲ್ಲಿ ಕಾಲ್ಡ್‌ವೆಲ್ ಕೊಡಗು ಭಾಷೆಯನ್ನು ಕನ್ನಡ ಭಾಷೆಯ ವಿವರಣೆಯೊಳಗೇ ಅಡಕಮಾಡಿಬಿಟ್ಟಿದ್ದನು. ಅಂದಿನ ವಿದ್ವಾಂಸರ ಅಭಿಪ್ರಾಯದಂತೆ ಕೊಡಗು ಭಾಷೆ ಕನ್ನಡದ ಒಂದು ಅಸಂಸ್ಕಾರ ಉಪಭಾಷೆಯಾಗಿತ್ತು.

ಇದಲ್ಲದೆ ತುಳು ಭಾಷೆಗೆ ಈ ಭಾಷೆ ಸಮೀಪತರವಾಗಿದ್ದುದರಿಂದ ಕೊಡಗು ಭಾಷೆ ತುಳು ಭಾಷೆಯಿಂದ ಪರಿವರ್ತನಗೊಂಡಿತೆಂದು ಮತ್ತೆ ಕೆಲವರ ಭಾವನೆ ವ್ಯಕ್ತಪಟ್ಟಿದೆ. ಇನ್ನೂ ಸ್ವಾರಸ್ಯವೆಂದರೆ ಡಾ|| ಮೋಗ್ಲಿಂಗ್ ಎಂಬ ಜರ್ಮನಿಯ ಮಿಶನರಿಯೊಬ್ಬಾತ ಕೊಡಗು ಭಾಷೆ ಕನ್ನಡಕ್ಕಿಂತಲೂ ತಮಿಳು ಮತ್ತು ಮಲೆಯಾಳ ಭಾಷೆಗಳಿಗೆ ಹೆಚ್ಚು ಹೋಲುತ್ತದೆಯೆಂದು ತಿಳಿಸಿರುವುದು. ಆದರೆ ಈ ಹೇಳಿಕೆ ಮಾನ್ಯವಾಗಲಿಲ್ಲ. ಈ ಕಾರಣದಿಂದಲೇ ತನ್ನ ಹಿರಿಯ ಹೊತ್ತಗೆಯ ಎರಡನೆಯ ಮುದ್ರಣದಲ್ಲಿ ಕೊಡಗು ಭಾಷೆ ಹಳಗನ್ನಡ ಮತ್ತು ತುಳು ಭಾಷೆಗಳ ನಡುವೆ ನಿಲ್ಲುವುದೆಂದು ರಾಬರ್ಟ್ ಕಾಲ್ಡ್‌ವೆಲ್ ಅಭಿಪ್ರಾಯಪಟ್ಟದ್ದು:

Kodagu may be regarded as standing about midway between old Kannada, and Tulu.[2]

---

[1] *ACGODLS*, ಪು. ೩೨
[2] ಅದೇ, ಪುಟ ೩೩

ಕೊಡಗು ಭಾಷೆಯ ಧ್ವನಿ ವ್ಯವಸ್ಥೆಯನ್ನು ಕುರಿತು ಇನ್ನು ವಿವೇಚಿಸಬಹುದು.

ಕೊಡಗು ಭಾಷೆಯಲ್ಲಿ ಒಟ್ಟು ೩೨ ಧ್ವನಿಮಾಗಳು ಇರುವಂತೆ ತೋರುತ್ತದೆ: ೧೨ ಸ್ವರಗಳು ಮತ್ತು ಉಳಿದುವು ವ್ಯಂಜನಗಳು. ಆದರೆ ಈ ವ್ಯಂಜನಗಳಲ್ಲಿ ಮಹಾಪ್ರಾಣವರ್ಣ (ಧ್ವನಿ) ಗಳಿಲ್ಲ.

ಸ್ವರಗಳು : ಅ ಆ ಇ ಈ ಉ ಊ ಎ ಏ ಒ ಓ ಐ ಔ

| | | | | |
|---|---|---|---|---|
| ವ್ಯಂಜನಗಳು : | ಕ | ಗ | ಙ | |
| | ಚ | ಜ | ಞ | |
| | ಟ | ಡ | ಣ | |
| | ತ | ದ | ನ | |
| | ಪ | ಬ | ಮ | |
| | ಯ | ರ | ಲ | ವ |

ಕನ್ನಡ ಭಾಷೆಯಲ್ಲಿ ಪ>ಹ ಆದಂತೆ ಕೊಡಗು ಭಾಷೆಯಲ್ಲಿ ಆಗಿಲ್ಲ, ಅಲ್ಲಿ ಪಕಾರ ಇನ್ನೂ ಅಬಾಧಿತವಾಗಿ ಉಳಿದಿದೆ. ಸಾಮಾನ್ಯವಾಗಿ ಹೆಚ್ಚು ಪದಗಳು ವ್ಯಂಜನಾಂತವಾಗಿ ನಿಲ್ಲುವುದಲ್ಲದೆ ಕೊನೆಯಲ್ಲಿ ಅನುನಾಸಿಕ ಧ್ವನಿ ಕೇಳಿ ಬರುತ್ತದೆ.

| ಕನ್ನಡ | ಕೊಡಗು |
|---|---|
| ಕಿವಿ | ಕೆಮಿ |
| ಕಲ್ > ಕಲ್ಲು | ಕಲ್ |
| ಕಣ್ > ಕಣ್ಣು | ಕಣ್ |
| ಕೈ | ಕೈ |
| ಕಾಲ್ | ಕಾಲ್ |

| ಕನ್ನಡ | ಕೊಡಗು |
|---|---|
| ಬಾಗಿಲು | ಪಡಿ ಹ. ಗ. ಪಡಿ |
| ತುಟಿ | ಕಿರಿ |
| ಬೆರಳು | ಬೆರ |
| ಪುಲ್ > ಪುಲ್ಲು ( > ಹುಲ್ಲು) | ಪಿಲ್ |
| ಪಲ್ > ಹಲ್ಲು | ಪಲ್ |
| ಪುಬುರ್ > ಪುಬ್ಬು > ಹುಬ್ಬು | ಪುಬ್ಬು |
| ಪೊಟ್ಟೆ > ಹೊಟ್ಟೆ | ಪೊಟ್ಟೆ |
| ಪಸು > ಹಸು | ಪಯ್ಯು |
| ಹೆಂಡತಿ | ಪೊಣ್ |

| | |
|---|---|
| ಪೂ > ಹೂವು | ಪೂವ್ |
| ಪಾಲ್ > ಹಾಲು | ಪಾಲ್ |
| ಪುಳು > ಹುಳು | ಪುಳು |
| ಪಂದಿ > ಹಂದಿ | ಪಂದಿ |
| ಕುಱಿ | ಕೊರಿ |
| ಸಿಡಿ | ಚೆಡಿಲ್ |
| ನಾಲಗೆ | ನಾಲಯಿ |
| ಕಿತ್ತಿಳೆ | ಕಿತ್ತುಲಿ |
| ಮೂಱು | ಮೂಂದ್ |
| ಕಿಱಿದು | ಚೆರಿಯ |
| ಪಱ್ತಿ > ಹತ್ತಿ | ಪರತಿ |
| ಒಂಬತ್ತು | ಒಯಿಂಬದು |
| ಹುಡುಗಿ | ಮೂಡಿ |

# ತುಳು ಭಾಷೆ

Tulu is one of the Dravidian languages spoken only in the collectorate of South Canara by about 500,000 people, and is nearely exactly confined between 12.30 and 13.30 degrees north latitude, extending eastward to the foot of the ghats.[1]

ಈ ಮಾತು ಸುಮಾರು ಒಂದುನೂರುವರುಷದ ಹಿಂದೆ ತುಳು ಭಾಷೆಯನ್ನು ಕುರಿತು ಬರೆದ ಒಂದು ಉಲ್ಲೇಖ. ತುಳು ಭಾಷೆಯನ್ನು ಆಡುವ ಪ್ರದೇಶ ಮೊದಲು ಮದರಾಸು ಪ್ರಾಂತ್ಯಕ್ಕೆ ಸೇರಿತ್ತು. ಈಗ ವಿಶಾಲ ಕರ್ನಾಟಕಕ್ಕೆ ಸೇರಿದೆ. ಕನ್ನಡನಾಡಿನ ತೆಂಕಣ ಹಾಗೂ ಪಡುವಣಕ್ಕೆ ಸಮುದ್ರತೀರ ಪ್ರದೇಶದಲ್ಲಿ, ವಿಶೇಷವಾಗಿ ಮಂಗಳೂರಿನ ಸುತ್ತ ಮುತ್ತ ಕಲ್ಯಾಣಪುರಿ ಮತ್ತು ಚಂದ್ರಗಿರಿ ನದಿಗಳ ನಡುವೆ ತುಳು ಭಾಷೆಯನ್ನು ಆಡುವರು. ಸುಮಾರು ಏಳು ಲಕ್ಷ ಜನಸಂಖ್ಯೆಯ ತುಳು ಭಾಷೆ ಕನ್ನಡದ ನಂಟನ್ನು ಹೊಂದಿ, ಕನ್ನಡದ ಸೆರಗಿನಲ್ಲಿ ಆರೇಳು ಶತಮಾನಗಳಿಂದ ಬಾಳುತ್ತಿದೆ.

ತುಳು ಭಾಷೆಯನ್ನು ತುಳುವ ಭಾಷೆಯೆಂದೂ ಕರೆಯುವರು. ತುಳು ಎಂಬ ಶಬ್ದ ಯಾವ ಕಾಲದಲ್ಲಿ ಬಳಕೆಗೆ ಬಂತೆಂಬುದು ನಿಶ್ಚಯವಾಗಿ ಗೊತ್ತಿಲ್ಲ.[2] ೧೨ನೆಯ ಶತಮಾನದ ಪೂರ್ವಾರ್ಧದ, ವಿಷ್ಣುವರ್ಧನನ ಕಾಲದ ಶಾಸನವೊಂದರಲ್ಲಿ ಬರುವ ಪದ್ಯದಲ್ಲಿ ತುಳು ಎಂಬ ಪದವಿದೆ. ಇದು ಆ ಭಾಷೆಯ ಹಳೆಯ ಉಲ್ಲೇಖವೆಂದು ತೋರುತ್ತದೆ:

ತುಳು ದೇಶಾ ಚಿತ್ರಕೂಟಂ ತಳವನಪುರ ಪುಚ್ಛಂಗಿ ಕೋಳಾಲವೇಳುಂ
ಮಳೆ ಪಲ್ಲೂರ್ಕಂಚಿ ಕೊಂಗರ್ವ್ವಿರ್ಸುವ ಹರಿಯ ಘಟ್ಟಂ ಬಯಲ್ನಾಡು ನೀಳಂ।
ಚಳ ದುರ್ಗಂ ರಾಯರಾಯೋತ್ತಮ ಪುರಿತೆರೆಯೂಕ್ಕೋರ್ವತೂಗ್ಗೋರ್ನ್ದವಾದಿ
ಸ್ಥಳವಂ ಭ್ರೂ ಭಂಗದಿಂ ಕೊಂಡತುಳ ಭುಜಬಲಾಟೋಪನೀ ವಿಷ್ಣುಭೂಪಂ॥

---

[1] Rev. J. Brigel, *A Grammar of the Tulu Language*, 1872, p. v.

[2] ಅಗನಾನೂಱು ಎಂಬ ತಮಿಳು ಕಾವ್ಯದಲ್ಲಿ ತುಳುವರು ಎಂಬ ಪದವಿದೆ. ಅಗನಾನ್ನೂಱು ಒಂದು ಸಂಕಲನ ಕಾವ್ಯ. ಅದರ ಕಾಲ ಸುಮಾರು ಕ್ರಿ.ಶ. ನಾಲ್ಕನೆಯ ಶತಮಾನ. ಅದರಲ್ಲಿ ಒಂದುಕಡೆ ತಮಿಳುನಾಡಿನ ಮುತ್ತೂರಿನ ಹಿರಿಮೆ-ಗರಿಮೆಯನ್ನು ಬಣ್ಣಿಸುವಾಗ ಅದನ್ನು ತುಳು ನಾಡಿನ ವೈಭವಕ್ಕೆ ಹೋಲಿಸುತ್ತಾನೆ.

೧೨ನೆಯ ಶತಮಾನದ ಈ ಶಾಸನದ ಉಲ್ಲೇಖವನ್ನು ಬಿಟ್ಟರೆ, ಸು. ೧೫೦೦ ರಲ್ಲಿದ್ದಿರಬಹುದಾದ ಕೋಟೀಶ್ವರನೆಂಬ ಜೈನಕವಿ ತನ್ನ ಜೀವಂಧರ ಷಟ್ಪದಿ ಕಾವ್ಯದಲ್ಲಿ 'ತುಳು ಮಹಾದೇಶದೊಳು ಬಯಿದೂರೊಳಗೆ' ಎಂಬಲ್ಲಿ ಇದರ ಪ್ರಸ್ತಾಪ ದೊರೆಯುತ್ತದೆ. ಆದರೆ ಕನ್ನಡ ಸಾಹಿತ್ಯದಲ್ಲಿ ತುಳು ಭಾಷೆಯನ್ನು ಕುರಿತು ಮಮತೆಯಿಂದ ನುಡಿದ ಕವಿಯೆಂದರೆ ರತ್ನಾಕರವರ್ಣಿ ; ತುಳುವರೂ ಮೆಚ್ಚಿ ಕೊಂಡಾಡುವಂತೆ ಕಾವ್ಯ ಬರೆದನಂತೆ,

ಅಯ್ಯಯ್ಯ ಚೆನ್ನಾದುದೆನೆ ಕನ್ನಡಿಗರು
ರಯ್ಯಾ ಮಂಚಿದಿಯೆನೆ ತೆಲುಗಾ ।
ಅಯ್ಯಯ್ಯ ಎಂಚಪೊರ್ಲಾಂಡೆಂದು ತುಳುವರು
ಮೆಯ್ಯುಬ್ಬಿ ಕೇಳಬೇಕಣ್ಣಾ ॥[1]

ವಿಜಯನಗರದ ಕೃಷ್ಣದೇವರಾಯ 'ತೌಳವ' ವಂಶದವನೆಂದು ತಿಳಿಯಬರುತ್ತದೆಯಲ್ಲದೆ ದಕ್ಷಿಣ ಕನ್ನಡ ಜಿಲ್ಲೆಯ ಹಾಗೂ ಇತರ ಕಡೆಗಳಲ್ಲಿನ ಕೆಲವು ಶಾಸನಗಳಲ್ಲಿ ತುಳು, ತುಳುವ ಪದಗಳು ಇರುವಂತೆ ತಿಳಿದುಬಂದಿದೆ. ತುಳು ಎಂಬ ಪದಕ್ಕೆ ಮೃದು ಎಂಬ ಅರ್ಥವೆಂದು ಹೇಳುವರು.

ದ್ರಾವಿಡ ಭಾಷಾ ಬುಡಕಟ್ಟಿಗೆ ಸೇರಿದ ತುಳು ಭಾಷೆಯ ಆರಂಭ, ಬೆಳವಣಿಗೆ, ಮತ್ತು ವಿಕಾಸಗಳನ್ನು ವಿವರಿಸಲು ಸಿಗುವ ಸಾಮಗ್ರಿ ಅತ್ಯಲ್ಪ ; ಇದಕ್ಕೆ ಸಂಬಂಧಿಸಿದಂತೆ ಗ್ರಂಥಗಳು-ಶಾಸನಗಳು ಮತ್ತು ಇತರ ಸಾಹಿತ್ಯಿಕ ಉಲ್ಲೇಖಗಳು ತೀರ ಕಡಮೆ. 'ಪಾಡ್ದನ' (ಪಾಡ್ದನೆ < ಸಂ. ಪ್ರಾರ್ಥನೆ) ಎಂಬ ಜನಪದ ಸಾಹಿತ್ಯವಿದೆ. ತುಳು ನಾಡಿನ ಬೀರಸಿರಿ ( < ವೀರಶ್ರೀ)ಯನ್ನು ಕೊಂಡಾಡುವ ಚಾರಿತ್ರಿಕ ಹಿನ್ನೆಲೆಯ ಕಾವ್ಯಮಯ ಗದ್ಯರಚನೆ ಪಾಡ್ದನ. ಪಂಜೆಮಂಗೇಶರಾಯರು ತುಳು ಹಾಡುಗಳ ವಿಚಾರವಾಗಿ ಕೊಂಚ ಬರೆದಿದ್ದಾರೆ. ಸಂಧಿಗಳೆಂಬ ಹಾಡುಗಬ್ಬಗಳೂ ಇವೆ. ಇವುಗಳ ನೆರವಿನಿಂದ ತುಳು–ಕನ್ನಡ, ತುಳು–ತಮಿಳು, ತುಳು–ಮಲೆಯಾಳ; ತುಳು–ಕೊಂಕಣಿ—ಈ ಭಾಷೆಗಳ ಸಂಬಂಧ ಏನು ? ಎಷ್ಟು ? ಎಂಬುದರ ಸ್ವರೂಪ ತಿಳಿಯಬೇಕು. ಆದರೂ ತುಳು ಮತ್ತು ಕನ್ನಡದ ಸಂಬಂಧ ಅತ್ಯಂತ ನಿಕಟವಾದುದೆಂಬುದರಲ್ಲಿ ಸಂಶಯವಿಲ್ಲ. ಒಂದು ಕಡೆ ಕನ್ನಡ ಭಾಷೆ, ಇನ್ನೊಂದು ಕಡೆ ಮಲೆಯಾಳ, ಜೊತೆಗೆ ಇಂಡೊ-ಆರ್ಯನ್ ಪರಿವಾರದ ಕೊಂಕಣಿ—ಈ ಮೂರು ಭಾಷೆಗಳ ಆವರಣದಲ್ಲಿ ತುಳು ಭಾಷೆ ಇದೆ.

ತುಳು ಭಾಷೆಗೆ ತನ್ನದೇ ಆದ ಒಂದು ಲಿಪಿಯಿಲ್ಲ, ಇತರ ಹಲವು ದ್ರಾವಿಡ ಭಾಷೆಗಳಂತೆ. ಬೆಳ್ತಂಗಡಿಯ ಬಳಿಯ ಗ್ರಾಮದವರು ತುಳು ಭಾಷೆಗೆ ಲಿಪಿ ಇದೆಯೆಂದೂ, ಅದನ್ನೇ ಅಲ್ಲಿನವರು ಬಳಸುತ್ತಿರುವರೆಂದೂ ಹೇಳಿದರೆಂಬುದಾಗಿ ನನ್ನ ಸ್ನೇಹಿತರೊಬ್ಬರು ತಿಳಿಸಿದಾಗ ಆಶ್ಚರ್ಯಚಕಿತನಾಗಿ ಕೂಡಲೇ ಅಲ್ಲಿಂದ ಮತ್ತೊಬ್ಬರ ಮೂಲಕ ಆ ಲಿಪಿ

[1] ಭರತೇಶ ವೈಭವ ಸಂಗ್ರಹ, ಆಸ್ಥಾನ ಸಂಧಿ, ಪದ್ಯ ೪

ಯನ್ನು ಬರೆಸಿ ತರಿಸಿದೆ. ಆದರೆ ಅದನ್ನು ನೋಡಿದಮೇಲೆ ಉತ್ಸಾಹವೆಲ್ಲ ತಣ್ಣ ಗಾಯಿತು. ಅವರು ತುಳು ಲಿಪಿಯೆಂದು ಭಾವಿಸಿ ಭ್ರಮಿಸಿದ್ದು ಮಲೆಯಾಳ ಲಿಪಿ. ಆಗ ಈ ಸಾಲುಗಳು ನೆನಪಾದುವು :

> The Tulu language has no alphabet of its own. Those who formerly wrote in Tulu used to employ Malayalam characters: but more recently the Canarese alphabet has been adopted both in writing and printing; so the latter may now be considered as the modern Tulu alphabet.[1]

ಆದರೂ ತುಳು ಭಾಷೆಯನ್ನು ಬರೆಯಲು ಕನ್ನಡ ಲಿಪಿಯ ಜೊತೆಗೆ ಮಲೆಯಾಳ ಲಿಪಿಯನ್ನು ಈಗಲೂ ಕೆಲವರು ಬಳಸುವರೆಂದು ತಿಳಿಯಿತು. ಅಂತೂ ಕನ್ನಡ ಲಿಪಿ ಯನ್ನೇ ಹೆಚ್ಚು ಉಪಯೋಗಿಸುವರೆಂಬುದರಲ್ಲಿ ಅನುಮಾನವಿಲ್ಲ. ಬಾಸೆಲ್ ಮಿಷನ್ನಿ ನವರು ಮೊದಲು ತುಳು ಪುಸ್ತಕಗಳನ್ನು ಕನ್ನಡ ಲಿಪಿಯಲ್ಲೇ ಅಚ್ಚು ಹಾಕಿಸಿದರು. ಸಂತಮ್ಯಾಥ್ಯೂವಿನ ಪವಿತ್ರವಾಣಿಯು ತುಳು ಅನುವಾದ ೧೮೪೨ರಲ್ಲೂ, ಹೊಸ ಒಡಂಬಡಿಕೆ ೧೮೪೭-೪೭ರಲ್ಲೂ ಅಚ್ಚಾದುವು. ಆದುದರಿಂದ ಇಂದು ಕನ್ನಡ ಲಿಪಿಯೇ ತುಳು ಲಿಪಿಯೂ ಆಗಿದೆ. ದಕ್ಷಿಣ ಕನ್ನಡದಲ್ಲಿ ಜೈನರು, ಬ್ರಾಹ್ಮಣರು, ಶೂದ್ರರು, ಬಂಟರು (Bunts), ಕ್ರೈಸ್ತರು, ಗೌಡರು, ಗಾಣಿಗರು—ಎಲ್ಲಾ ಜಾತಿಯವರೂ ತುಳು ಭಾಷೆಯನ್ನು, ಸಾಮಾನ್ಯವಾಗಿ ಆಡುತ್ತಾರೆ. ಇವರಲ್ಲಿ ಅನೇಕರಿಗೆ ತುಳುವೇ ಮಾತೃಭಾಷೆ.

ತುಳುಭಾಷೆಯನ್ನು ತಮಿಳಿನೊಡನೆ ಹೋಲಿಸಿದರೆ ಅಜಗಜಾಂತರ ಅಂತರವಿದೆ. ತುಳುವನ್ನು ಮಲೆಯಾಳದೊಡನೆ ತುಲನೆ ಮಾಡಿದರೂ ತುಂಬಾ ವ್ಯತ್ಯಾಸವಿದೆ. ಕನ್ನಡ ಭಾಷೆಯೊಡನೆ ಹೋಲಿಸಿದರೆ ಉಳಿದ ಎರಡು ಭಾಷೆಗಳೊಡನೆ ಹೋಲಿಸು ವಾಗ ಕಾಣುವಷ್ಟು ಪ್ರಮಾಣದ ಅಂತರ ಕಾಣುವುದಿಲ್ಲ. ತುಳು ಭಾಷೆಯ ಸಾಕಷ್ಟು ಸಂಖ್ಯೆಯ ಪದಗಳು ಕನ್ನಡದಿಂದಲೇ ಬಂದಿರುವುದು ಕಾಣುತ್ತದೆಯಲ್ಲದೆ ಕನ್ನಡದ ಬೆಳವಣಿಗೆಯ ಯಾವುದೋ ಒಂದು ಘಟ್ಟದಲ್ಲಿ ಪ್ರತ್ಯೇಕವಾಗಿ ಉಳಿದು ತುಳುಭಾಷೆ ಯಾಗಿ ಬೆಳೆಯಿತೆಂದು ತೋರುತ್ತದೆ.

ತುಳುಭಾಷೆಯ ಸ್ವರೂಪವನ್ನು ನಿರ್ಧರಿಸಲು ಸಿಗುವ ಆಧಾರಗಳು :

೧. *A Grammar of Tulu Language*, Rev. J. Brigel, 1872, Mangalore
೨. *Tulu–English Dictionary*, A Manners, 1886.
೩. *Tulu Phonology*, L. V. R, Iyyer, L. 6.
೪. *Tulu Initial Affricates* and Siblants, L. V. R. Iyyer, QJOMS, Bangalore 22, 252–73.

---

[1] J. Brigel, *A Grammar af the Tulu Language*, p. 1

೫. ತುಳು ವ್ಯಾಕರಣ (ತುಳು ಭಾಷೆಯಲ್ಲಿ ರಚಿತ), ಎಸ್. ಯು. ಪಣಿಯಾಡಿಯಾ.
೬. ತುಳುವಿನ ಸ್ವರಮಾಲೆ, ತೆಕ್ಕುಂಜೆ ಗೋಪಾಲಕೃಷ್ಣ ಭಟ್, ಮಧುಪುರ (ಸಂಕಲನ ಗ್ರಂಥ) ೧೯೬೨.
೭. ತುಳುಭಾಷೆಯ ಸ್ವರೂಪ, ಹಂಪ. ನಾಗರಾಜಯ್ಯ, ಗುರುದೇವ ೯–೧೨, ಪುಟಗಳು, ೩೫೮–೩೬೨.

ಫ್ರಾನ್ಸಿಸ್ ವೈಟ್ ಎಲ್ಲಿಸ್ ಎಂಬಾತ ತುಳು ಭಾಷೆ ಮಲೆಯಾಳ ಭಾಷೆಯ ಉಪ-ಭಾಷೆಯೆಂದು ತಿಳಿಸಿದ್ದಾನೆ. ಆದರೆ ಅದು ತಪ್ಪೆಂದು ತಿಳಿದುಬಂದಿದೆ. ತುಳು ಭಾಷೆಯ ವರ್ಣಮಾಲೆಯ ವಿವರ ನೀಡುತ್ತಾ ಬ್ರಿಗೆಲ್, ೧೫ ಸ್ವರ; ೩೮ ವ್ಯಂಜನಗಳುಂಟೆಂದು ಹೇಳಿದ್ದಾನೆ. ಪಣಿಯಾಡಿಯ ಅವರು ೧೬ ಸ್ವರಗಳು ಉಂಟೆಂದು ಅಭಿಪ್ರಾಯಪಟ್ಟಿದ್ದಾರೆ.[1] ವಾಸ್ತವವಾಗಿ ಕನ್ನಡ ವರ್ಣಮಾಲೆಯ ಎರಕವೇ ತುಳು ವರ್ಣಮಾಲೆ. ಆದರೆ ಸ್ವರಗಳಲ್ಲಿ ಒಂದೆರಡು ಪ್ರಮುಖ ವ್ಯತ್ಯಾಸಗಳಿವೆ: ಓಷ್ಠೀಕೃತ ಹಾಗೂ ನಿರೋಷ್ಠೀಕೃತ.

ಅ ಆ ಇ ಈ ಉ ಊ ಉ˘ ಊ˘

ಎ ಏ ಐ ಎ˘ ಏ˘ ಒ ಓ ಔ

—ಹೀಗೆ ಸ್ವರಗಳನ್ನು (೧೬) ಹಿಂದಿನ ಬರಹಗಾರರು ತುಳುಭಾಷೆಯಲ್ಲಿವೆಯೆಂದು ಹೇಳಿದ್ದರು. ಇಲ್ಲಿ ಉ, ಊ; ಎ, ಏ ಗಳಲ್ಲಿ ಎರಡೆರಡು ರೀತಿಯ ಉಚ್ಚಾರಗಳಿರುತ್ತವೆ. ಧ್ವನಿವಿಜ್ಞಾನದ ಪರಿಭಾಷೆಯಲ್ಲಿ ಹೇಳುವುದಾದರೆ ಇವು ಒಂದೇ ಧ್ವನಿಯ ಉಪಧ್ವನಿಗಳಾಗಿವೆ. ಎಲ್ಲ ಭಾಷೆಗಳಲ್ಲೂ ಸಾಮಾನ್ಯವಾಗಿ ಇಂಥ ವಿಭಾಗ ಅಥವಾ ವ್ಯತ್ಯಾಸ ಇರುತ್ತದೆ. ತುಳು ವ್ಯಾಕರಣಕಾರರು ಈ ಧ್ವನಿಯ ಉಪಧ್ವನಿಗಳನ್ನು ಗುರುತಿಸಿರುವುದಲ್ಲದೆ ಅವಕ್ಕೆ ಒಂದು ಪ್ರತ್ಯೇಕ ಚಿಹ್ನೆಯನ್ನೇ ಕೊಟ್ಟು ವಿವರಿಸಿದ್ದಾರೆ.

ಉದಾಹರಣೆಗೆ ಈ ಕೆಲವು ಮಾತುಗಳನ್ನು ನೋಡಿ:

ಮಳ್ತು˘ ದ್, ಮರ್ದು˘ ಡ್, ಪೋಪೆ ಇತ್ಯಾದಿ.

ಈ ಉಊ—ಉ˘ ಊ˘ ಮತ್ತು ಎಏ—ಎ˘ ಏ˘ ಎಂಬ ಸ್ವರಗಳಲ್ಲಿ ಪ್ರಸಾರದ ದೃಷ್ಟಿಯಿಂದ ಉಪಯುಕ್ತ ವ್ಯತ್ಯಾಸವಿದೆ. ಈ ಪದಗಳ ಅರ್ಥಭೇದವನ್ನು ವಾಸ್ತವವಾಗಿ ಉಚ್ಚಾರ—ಧ್ವನಿ ಭೇದದಿಂದಲೇ ಗುರುತಿಸುವರು. ಆದುದರಿಂದ ಉಚ್ಚಾರದ ವ್ಯತ್ಯಾಸವನ್ನು ಸೂಚಿಸಲು ಬರವಣಿಗೆಯಲ್ಲೂ ಕೆಲವು ಪ್ರತ್ಯೇಕ ಸಂಕೇತಗಳು ಅಗತ್ಯವಾಗಿ ತೋರಿ ಮೇಲೆ ಸೂಚಿಸಿದಂತೆ ಹಿಂದಿನ ಲೇಖಕರು ಬರೆಯುತ್ತಿದ್ದರು. ಇದು ಒಳ್ಳೆಯ ಕ್ರಮ. ಧ್ವನಿಲೇಖದ ಮೂಲಕ ಉಚ್ಚಾರದ ವ್ಯತ್ಯಾಸಗಳನ್ನೂ ಸೂಚಿಸುವುದು ಧ್ವನಿಶಾಸ್ತ್ರದ ವಾಡಿಕೆಯಾದರೂ ಈ ಕ್ರಮವೂ ಅಂಗೀಕಾರ ಯೋಗ್ಯವಾಗಿದ್ದು

[1] ಎಲ್. ವಿ. ರಾಮಸ್ವಾಮಿ ಅಯ್ಯರ್ ತಮ್ಮ ಒಂದು ಲೇಖನದಲ್ಲಿ 'Materials for a sketch of Tulu Phonology, IL, vol, II; ತುಳು ಭಾಷೆಯ ಒಟ್ಟು ಧ್ವನಿಮಾಗಳು ಮುವ್ವತ್ತು (೩೦) ಎಂದು ತಿಳಿಸಿದ್ದಾರೆ.

ವ್ಯತ್ಯಾಸ ತಟ್ಟನೆ ತಿಳಿಯುವಂತಿದೆ. ಆದರೆ ಸ್ವರಗಳ ಸಂಖ್ಯೆಯನ್ನು ಸಂಕೇತಗಳ ಆಧಿಕ್ಯದಿಂದ ಹೆಚ್ಚಿಸುವುದಕ್ಕಿಂತಲೂ ಆ ಸಂಖ್ಯೆಯನ್ನು ಕೊನೆಯ ಪಕ್ಷ ೧೩ಕ್ಕಾದರೂ ಇಳಿಸಬಹುದೆಂದು ಕಾಣುತ್ತದೆ. ಎಏ-ಎ᳚ಏ᳚ ಎಂದು ಬರೆಯುವುದಕ್ಕಿಂತಲೂ ಎಏ—ಎಂಬೆರಡು ಸ್ವರಗಳನ್ನು ಇಟ್ಟುಕೊಂಡು ಅವೆರಡಕ್ಕೂ ಅನ್ವಯವಾಗುವ—ವ್ಯತ್ಯಾಸಗಳನ್ನು ತೋರಿಸುವ ಚಿಹ್ನೆಯನ್ನು ಬಳಸಿಕೊಳ್ಳಬಹುದು.

ಹೀಗೆ ಮಾಡುವುದರಿಂದ ಸ್ವರಗಳ ಸಂಖ್ಯೆ ಬರವಣಿಗೆಯಲ್ಲಿ ಕೇವಲ ೧೩ಕ್ಕೆ ಇಳಿಯುತ್ತದೆ. ಆದರೆ ಉಚ್ಚಾರಣೆಯಲ್ಲಿರುವ ಧ್ವನಿಮಾಗಳ ಸಂಖ್ಯೆ ಕಡಮೆಯಾಗುವುದಿಲ್ಲ. ತುಳು ಭಾಷೆಯನ್ನು ಮಂಗಳೂರು ತುಳು, ಪುತ್ತೂರು ತುಳು, ಬ್ರಾಹ್ಮಣರ ತುಳು, ಜೈನರ ತುಳು, ಶೂದ್ರರ ತುಳು ಮುಂತಾದ ಉಪಭಾಷೆಗಳನ್ನು ಗಮನದಲ್ಲಿಟ್ಟುಕೊಂಡು ವಿವೇಚಿಸಬೇಕಾಗುತ್ತದೆ. ಸಾಮಾನ್ಯವಾಗಿ ಇಲ್ಲಿನ ಎಲ್ಲ ಮತದವರೂ ತುಳು ಭಾಷೆಯಲ್ಲಿ ಮಾತನಾಡುತ್ತಾರೆ. ಜೈನರ ಮನೆಗಳಲ್ಲಿ ಮಕ್ಕಳು ಹಾಡುವ ಒಂದು ಪದವನ್ನು ಇಲ್ಲಿ ಕೊಡಲಾಗಿದೆ:

ವೃಂದಾವನೊಟ್ಟು ತೆಲಿತೊಂದುಕುಲಿದಿನ
ಶಾರದ ದೇವಿನ್ ತೂಯರಯೆ।
ಕೈಟೊಂಜಿ ಬಿಸಣಿಗೆ ಪತೊಂದು ಪತೊಂದು
ಪುಣಿಪಿನ ರಾಗನೂ ಕೇಂಡರಯೇ।
ವೃಂದಾವನೊಟ್ಟು ತೆಲಿತೊಂದು ಕುಲಿದಿನ
ಶಾರದ ದೇವಿನ್ ತೂಯರಯೇ ॥ ೧ ॥

ಕೈಟೊಂಜಿ ಜಪಸರ ಪುಸ್ತಕಮೊಂತ
ಪತೊಂದಿನ ಪೊರ್ಲುನು ತೂಯರಯೇ ॥ ವೃಂದಾ ॥

ಬಗ್ಗದ್ ಒಂಜೆಕಡೆಟ್ ಕುಲ್ಲುದು ಭಜನೆ
ನ್ ಮಲ್ಪುಗೊಯೇ ವೃಂದಾವನೊಟ್ಟು........॥

ತುಳು ಭಾಷೆ ದಕ್ಷಿಣ ದ್ರಾವಿಡ ಭಾಷೆಗಳ ಗುಂಪಿಗೆ ಸೇರುತ್ತದೆ. ತುಳು ಭಾಷೆಗೆ ಲಿಪಿಯಿಲ್ಲದಿದ್ದರೂ ಅದನ್ನು ಅಸಂಸ್ಕೃತ ದ್ರಾವಿಡ ಭಾಷೆಗಳ ಪಟ್ಟಿಗೆ ಸೇರಿಸದೆ ಸಂಸ್ಕಾರ ಸಂಪನ್ನ ದ್ರಾವಿಡ ಭಾಷೆಗಳ—ಕನ್ನಡ, ತೆಲುಗು, ತಮಿಳು, ಮಲೆಯಾಳಗಳ ಜೊತೆಗೆ ಸೇರಿಸಬೇಕು. ಏಕೆಂದರೆ ಅದರ ಉಪಲಬ್ಧ ಹಾಡುಗಳು ತುಳುವಿನ ಸಾಹಿತ್ಯ ಸಂಪತ್ತನ್ನು ಸಾರುತ್ತವೆ. ಲಕ್ಕಣನಂತಹ ತುಳು ಕವಿಗಳು ಅನೇಕರು ಆಗಿಹೋಗಿರಬೇಕೆಂಬುದು ಇದರಿಂದ ತಿಳಿಯುತ್ತದೆ. ಆದುದರಿಂದ ಇವು ಐದು ಭಾಷೆಗಳೂ ಸೇರಿ ಆದ ಗುಂಪಿಗೆ ಪಂಚದ್ರಾವಿಡ (ಭಾಷೆಗಳು) ಎಂದು ಕರೆಯುವರು.

ತುಳು ಭಾಷೆಯಲ್ಲಿ ಆನೇಕ ಉಪಭಾಷೆಗಳಿವೆ. ಮಲೆಕುಡಿ (ಮಹಾರಾಷ್ಟ್ರದಲ್ಲಿದ್ದಾರೆ), ಪರವ (ಆಂಧ್ರಪ್ರದೇಶ), ಶೂದ್ರರ ಹೊಲೆಯರ ತುಳು, ಬ್ರಾಹ್ಮಣರ ತುಳು ಇತ್ಯಾದಿ. ಬ್ರಾಹ್ಮಣೇತರರು ಆಡುವ ತುಳು ಭಾಷೆಯಲ್ಲಿ ತುಳುವಿನ ಪದಗಳೇ ಹೆಚ್ಚಿದ್ದರೆ

ಬ್ರಾಹ್ಮಣರಾಡುವ ತುಳುವಿನಲ್ಲಿ ಕನ್ನಡದ ರೂಪಗಳು ಹೆಚ್ಚೆನ್ನಬಹುದು. 'ಉಡುಪಿ ತುಳು' ಎಂದು ಬೇರೆ ೧೯೬೧ರ ಜನಗಣತಿಯಲ್ಲಿ ಉಲ್ಲೇಖವಾಗಿದೆ. ಮೈಸೂರು-ಮಹಾರಾಷ್ಟ್ರ ಎರಡೂ ಸೇರಿ ಕೇವಲ ಹತ್ತು ಜನ ಗಂಡಸರೂ, ಏಳು ಜನ ಹೆಂಗಸರೂ ತಾವು ಆಡುವ ಭಾಷೆ 'ಉಡುಪಿ ತುಳು' ಎಂದು ತಿಳಿಸಿರುವಂತೆ ವರದಿಯಾಗಿದೆ. ಇವಲ್ಲದೆ ಕೊಂಕಣಿ ತುಳು, ಮಂಗಳೂರು ತುಳು, ಕಾರ್ಕಳ ತುಳು, ಕೊರಗರ ತುಳು, ಜೈನರ ತುಳು, ಪಾದ್ರಿ ತುಳು ಎಂಬ ಪ್ರಭೇದಗಳೂ ಇರುವಂತೆ ತೋರುತ್ತದೆ.

| ಬ್ರಾಹ್ಮಣ ತುಳು | | ಅರ್ಥ | ಶೂದ್ರರ ತುಳು |
|---|---|---|---|
| ಇವ್ಳೊಬ್ಳು | = | ಈ ಹೆಂಗಸು | ಮೋಳು < ಇವಳ್ |
| ಎಡಜ್ಬ್ಗ | = | ಎಡ (ಕೈ) | ಡಜ್ಬ್ಗ < ಎಡ |
| ಉಣ್ಪ್ಪ | = | ಆಹಾರ | *ನುಪ್ಪು < ಉಣ್ |
| ಸಿಕ್ | = | ಸಿಗು | ತಿಕ್ < ಬಿ (ಸಿ) ಕ್ಕು |
| ಜೆಞ್ಜಿ | = | ಏಡಿ | ದೆಞ್ಜಿ < ತ ಞ್ಣ್ಟ |

ಬ್ರಾಹ್ಮಣೇತರ ತುಳು (ಸಪಲಿಗ) ಉಪಭಾಷೆಯಲ್ಲಿ [ನ್] ಮತ್ತು [ಣ್]ಗಳು ಸ್ವಚ್ಛಂದ ಪರಿವರ್ತನದಲ್ಲಿದ್ದು /ನ್/ ಧ್ವನಿಮಾದ ಉಪಧ್ವನಿಗಳಾಗಿವೆ. ಹೀಗೆಯೇ [ಲ್] ಮತ್ತು [ಳ್]ಗಳು /ಲ್/ ಧ್ವನಿಮಾದ ಉಪಧ್ವನಿಗಳಾಗಿವೆ. ಇದರಲ್ಲಿ [ಹ್] ಧ್ವನಿಯ ಬಳಕೆ ಇಲ್ಲ. ಶಿವಳ್ಳಿ ಬ್ರಾಹ್ಮಣರ ತುಳುವಿನಲ್ಲಿ ಳ್ ಧ್ವನಿ ಬರುವ ಕಡೆಯೆಲ್ಲಾ ಸಪಲಿಗರ ತುಳುವಿನಲ್ಲಿ ರ್ ಧ್ವನಿ ಇರುತ್ತದೆ. ಅಸಂಡೆ, ಕುರಿ, ಕೋರಿ, ಗುರಿ (ಕ. ಗುಳಿ/ಕುಳಿ), ತಾರಿ, ಪರ ಇವು ಕ್ರಮವಾಗಿ ಅಳಸಂಡೆ, ಕುಳಿಪುಣ, ಕೋಳಿ, ಗುಳಿ, ತಾಳಿ (ಕ. ತಾಳೆ), ಪಳ (ಕ. ಪಳೆಯ) ಎಂಬ ರೂಪದಲ್ಲಿವೆ.

| ಬ್ರಾಹ್ಮಣರ ತುಳು | | ಅರ್ಥ | ಶೂದ್ರರ ತುಳು |
|---|---|---|---|
| ಏನ್ | = | ನಾನು | ಯಾನ್ < ಯಾ/ಆನ್ |
| ಏರ್ | = | ಯಾರು | ಯಾರ್ < ಯಾರ್ |
| ಸೋಜ | = | ತೋರು | ತೋಜ್ < ತೋನುಜಿ |
| ಬಾಳ್ಜ | = | ಬಾಳೆ | ಬಾರೆಜ < ಬಾಟಿತಿ |
| ಕೋಳಿ | = | ಕೋಳಿ | ಕೋರಿ > ಕೋಟಿ |
| ಬೂಳ್ | = | ಬೀಳು | ಬೂರ್ < ಬೀಟಿ್ |

ತುಳು ಭಾಷೆಯ ಮೇಲೆ ಆದ ಕನ್ನಡದ ಪ್ರಭಾವಗಳಲ್ಲಿ ಪ>ಹ ಭೇದ ಮುಖ್ಯವಾದುದು. ವಾಸ್ತವವಾಗಿ ತುಳುವಿನಲ್ಲಿ ಪ>ಹ ಆಗಿಲ್ಲ. ಪಕಾರ ಪಕಾರವಾಗಿಯೇ

* ನುಪ್ಪು ಎಂದರೆ ಅನ್ನ ಎಂಬ ಅರ್ಥ ಈಗ ತುಳುವಿನಲ್ಲಿ ರೂಢಿಯಲ್ಲಿದೆ. ನುಪ್ಪು ಬೊಡಚಿ =ಅನ್ನಬೇಡ; ನುಪ್ಪುಯಾವು=ಅನ್ನ ಸಾಕು....ಇತ್ಯಾದಿ.

ಉಳಿದಿದೆ. ಆದರೆ ಪಕಾರ ಇರುವ ಪದಗಳ ಜೊತೆಗೆ ಕೆಲವು ಹಕಾರದ ಪದಗಳೂ ಬಳಕೆಗೆ ಬಂದುಬಿಟ್ಟಿವೆ. ಅಂಥ ಪದಗಳೆಲ್ಲಾ ನಿಸ್ಸಂದೇಹವಾಗಿ ಆದರ ಪಕ್ಕದ ಭಾಷೆಯಾದ ಕನ್ನಡದಿಂದ ತೆಗೆದುಕೊಂಡ ಪದಗಳು.[1]

ಉದಾಹರಣೆ :

ಹಗಲು, ಹನಿ, ಹಲವು

ಹಾಕು, ಹಾವು, ಹಾಸಿಗೆ, ಹಾಳು....ಇತ್ಯಾದಿ.

ಜೈನರ ತುಳುವಿನಲ್ಲಿ ಕನ್ನಡ ಭಾಷೆಯ ಪ್ರಭಾವ ಹೆಚ್ಚಾಗಿರುವಂತೆ ಕಾಣುತ್ತದೆ. ಕನ್ನಡದೊಡನೆ ಹೋಲಿಸಿದಾಗ ತುಳು ಭಾಷೆಯಲ್ಲಿ ಕಾಣುವ ಇತರ ಕೆಲವು ಧ್ವನಿ ವ್ಯತ್ಯಾಸಗಳಲ್ಲಿ ಕೆಲವು :

| ಕನ್ನಡ | ತುಳು |
|---|---|
| ಆಱು | ಆಜಿ |
| ಬಜಲೆ (ಳೆ) | ಉದಳ್ |
| ತೋೞು | ಸೋ/ತೋಜ್ |
| ಮೂಱು | ಮೂಜಿ |

(ಕ) – ಱ/ರ – : – ಜ – (ತು)

| | |
|---|---|
| ಬಾೞೆ | ಬಾಳ್ಜ : ಬಾರೆ |
| ಕೋೞಿ | ಕೋಳಿ : ಕೋರಿ |
| ಬೀೞ್ | ಬೂಳ್ : ಬೂರ್ |

(ಕ) – ೞ್ : (ತು) – ಳ್ : – ರ್

ಮೂಲದ್ರಾವಿಡದ *ಚ್ – ಮತ್ತು *ತ್ – ಧ್ವನಿಮಾಗಳು ಬಹುಮಟ್ಟಿಗೆ ಐಕ್ಯಗೊಂಡಿವೆ. ಕೆಲವು ಕಡೆ *ಚ್ – > ಸ್ – ಆಗಿದೆ. ಇದು ಕನ್ನಡದಿಂದ ಆದ ಸ್ವೀಕರಣವಿರಬಹುದು.

| ಕನ್ನಡ | ತುಳು |
|---|---|
| ಅವಳು | ಆಳಿ |
| ನೆಳಲು | ನಿಳೆಲಿ/ನಿರೆಳಿ |
| ಪುಳು (> ಹುಳು) | ಪುಳಿ/ಪುರಿ |
| ಮುಳುಗು | ಮುಕ್ರ್ಗುಣಿ |
| ಏಳು (ಸಂಖ್ಯೆ) | ಏಳಿ |
| ಕೀಳು | ಕೀಳಿ |
| ಕೊಳಲು | ಕೊಳಲಿ |
| ಪಾಳು (> ಹಾಳು) | ಹಾಳಿ |

---

[1] *Dravidian Problems*, I. A, 1933, p. 48

(ಕ) – ಉ : (ತು) – ಇ

ಆದರೆ ಈ ನಿಯಮ ಸಾರ್ವತ್ರಿಕವೇನೂ ಅಲ್ಲವೆನ್ನಬಹುದು. ಏಕೆಂದರೆ ಈ ನಿಯಮಕ್ಕೆ ಅಪವಾದಗಳೂ ಇವೆ. ಉರ್ದು > ಉದ್ದು (ಕ) : ಉರ್ದು (ತು); ಪೊಟ್ಟು > ಹೊತ್ತು (ಕ) : (ತು) ಪೊರ್ತು.

| ಕನ್ನಡ | ತುಳು |
|---|---|
| ಬೆಳ್ + ನೆಯ್ | ಬೊಳ್‌ನೆಯ್ |
| ಪೆಣ್ > ಹೆಣ್ಣು | ಪೊಣ್ಣು |
| ಪೇಡಿ > ಹೇಡಿ | ಪೋದಿ |
| ಬೆಳ್ಳಿ | ಬೊಳ್ಳಿ |
| ಬೇಡು | ಬೋದ್ |

ಕ. ಎವ ಅಥವಾ ಏವ > ತುಳು. ಓವ ಅಥವಾ ಒವ

ತುಳು ಭಾಷೆಯಲ್ಲಿ—ಕುಳು (ಹೋ. ಕಳ್),—(ಇ) ಳು,—ಆಡ್ಳು ಎಂಬುವು ಬಹುವಚನ ಪ್ರತ್ಯಯಗಳು. ಸಂಸ್ಕೃತದಿಂದ ಬಂದ ತದ್ಭವ ರೂಪಗಳೂ ತುಳುವಿನಲ್ಲುಂಟು; (ಸಂ) ವರ್ಷ > ಬರ್ಸ್ (=ಮಳೆ). ಒಂದರಿಂದ ಮೊದಲುಗೊಂಡು ಸಂಖ್ಯಾವಾಚಿಗಳು ದ್ರಾವಿಡದ ಪದಗಳೇ ಉಳಿದಿವೆ:

ಒಂಜಿ (=ಒಂದು), ರಡ್ಡ್ (=ಎರಡು), ಮೂಜಿ (= ಮೂರು), ನಾಲ್ (ನಾಲ್ಕು), ಐನ್ (ಐದು), ಆಜಿ (ಆರು), ಏಳ್ (ಏಳು), ಎಣ್ಮ (ಎಂಟು), ಒಂರ್ಬ (ಒಂಭತ್ತು), ಪತ್ತ್ (ಹತ್ತು; ಪತ್ತೊಂಜಿ) (ಹನ್ನೊಂದು), ಪದ್‌ರಾಡ್ (ಹನ್ನೆರಡು), ಇರ್ವ (ಇಪ್ಪತ್ತು), ಮುಪ್ಪ (ಮುವ್ವತ್ತು), ನಾಲ್ಪ (ನಲವತ್ತು), ಐವ (ಐವತ್ತು), ಅಜಿಪ (ಅರವತ್ತು), ಎಳ್ಪ (ಎಪ್ಪತ್ತು), ಸೊಣ್ಪ (ಎಂಬತ್ತು), ನೂದು > ನೂತ (ನೂರು), ಸಾರ (ಸಾವಿರ).[1]

| ಸಪಲಿಗ | (ಕಾರ್ಕಳ) ಜೈನ | (ಪುತ್ತೂರು) ಜೈನ |
|---|---|---|
| ತಜಪ್ಪು (ಎಲೆಕತ್ತರಿಸು) | ಹಜಪ್ಪು | ಅಜಪ್ಪು |
| ತನ್ನಾನ (ತಂಗೂಳು) | ತನ್ನಾನ | ಅಸಿಯನೊ |
| ತರ್ಕೆ (ತಲೆ, ಕೂದಲು) | ತರ್ಕೆ (ಕೂದಲು) | ಅರೆ (ತಲೆ) |
| ತಲಿ (ತಳೆ) | ಹಲಿ | ಆಲಿ |
| ತವ್ವು | ಹವ್ವು | ಅವ್ವು |
| ತಗ್ಲೆ (ತಗಣಿ) | ತಗುಲೆ | ಅಗುಲೆ |
| ತಿಗ | ತಿಗ | ಚೀವ |

[1] ಇದು ಸಂಸ್ಕೃತ ಭಾಷೆಯ ಸಹಸ್ರ ಪದದ ತದ್ಭವ.

| | | |
|---|---|---|
| ತಾದಿ | ಹಾದಿ | ಆದಿ |
| ತೆಪ್ಪ (ಬಿಪ್ಪ) | ತೆಪ್ಪ | ಎಪ್ಪ |

ಕೆಲವು ಗಾದೆ ಮಾತುಗಳು :

೧. ಉಪ್ಪುತಿಂದವನು ನೀರು ಕುಡಿಯುತ್ತಾನೆ.
   = ಉಪ್ಪು ತಿಂದಿನಾಯೆ ನೀರ್ ಪರ್ವೆ

೨. ಮಂಗನ ಕೈಗೆ ಮಾಣಿಕ್ಯ ಕೊಟ್ಟಹಾಗೆ.
   = ಮಂಗ ಕೈಟ್ ಮಾಣಿಕ ಕೊರಿಲೆಕ್ಕ

ಕೆಲವೊಮ್ಮೆ ಕನ್ನಡದ ಪದಾಂತ್ಯ - ಲ್ ಕಾರದ ಸ್ಥಾನದಲ್ಲಿ ತುಳು ಭಾಷೆಯಲ್ಲಿ - ರ್ ಕಾರವಿರುತ್ತದೆ :

| ಕನ್ನಡ | ತುಳು |
|---|---|
| ಕಾಲು | ಕಾರು |
| ಪಲ್ಲು | ಪರು |
| ಮೊಲೆ | ಮಿರೆ |

ಆದರೆ ಪುಲ್ಲು (=ಹುಲ್ಲು), ಕಲ್ಲು (= ಕಲ್ಲು) ಎಂಬ ಪದಗಳೂ ಇವೆ.

| | |
|---|---|
| ಅಮ್ಮ (ಚೈ) | ಅಪ್ಪೆ |
| ಅಮ್ಮ (ತಂದೆ) | ಅಮ್ಮೆ |
| ಮಗ | ಮಗ್ಗೆ |
| ಅಣ್ಣ | ಅಣ್ಣೆ |
| ಅಕ್ಕ | ಅಕ್ಕೆ |

ಕನ್ನಡದ ಅಕಾರಾಂತ ನಾಮಪದಗಳು ತುಳುವಿನಲ್ಲಿ ಏಕಾರಾಂತವಾಗಿ ನಿಂತಿವೆ.

೧೨

## ಶ್ರಾವಣ ದ್ರಾವಿಡ ಭಾಷೆಗಳು :
## ಗೋಂಡಿ ಭಾಷೆ

ಇನ್ನೊಂದು ದ್ರಾವಿಡಭಾಷೆಯಾದ ಗೋಂಡಿ ಭಾಷೆ ಮಧ್ಯದ್ರಾವಿಡ ಭಾಷೆಗಳ ವಿಭಾಗದಲ್ಲಿ ಸೇರುತ್ತದೆ. ಗೋಂಡಿ ಭಾಷೆಯನ್ನು ಕುರಿತು, ಒಂದುನೂರು ವರುಷಗಳ ಹಿಂದೆಯೇ ಬರೆದ, ಕಾಲ್ಡ್‌ವೆಲ್ ಗ್ರಂಥದ ಪರಿಶಿಷ್ಟ ಭಾಗದಲ್ಲಿ ಅಲ್ಪಸ್ವಲ್ಪ ಪರಿಚಯ ವಿದೆ.[1] ಆದರೆ ಆ ವೇಳೆಗಾಗಲೆ ಗೋಂಡ್ ಭಾಷೆಯ ವ್ಯಾಕರಣ ಮತ್ತು ಪದಕೋಶ ಗಳನ್ನು ಕುರಿತ ಕೃತಿಗಳು ಒಂದೆರಡಾದರೂ ಸಿದ್ಧವಾಗಿದ್ದುವೆಂಬುದನ್ನು ಗಮನಿಸ ಬೇಕು. ಉದಾಹರಣೆಗೆ ಹೆಸರಿಸುವುದಾದರೆ ೧೮೪೯ರಲ್ಲೇ ರೆವರೆಂಡ್ ಜೆ. ಜಿ. ಡ್ರಿಬರ್ಗ್ ಎಂಬ ಹೆಸರಿನ ವಿದ್ವಾಂಸ, ಕಲ್ಕತ್ತಾದ ಬಿಷಪ್ ಕಾಲೇಜಿನ ಕಡೆಯಿಂದ ಗೋಂಡಿ ಭಾಷೆಯ ವ್ಯಾಕರಣ ಹಾಗೂ ಶಬ್ದಕೋಶವನ್ನು ವಿವೇಚಿಸುವ ಹೊತ್ತಗೆ ಗಳನ್ನು ಹೊರತಂದನು.[2] 'ಸಿಯೊನಿ ಗೋಂಡರ' ಭಾಷೆಯನ್ನು ಕುರಿತು ಡಾ|| ಮ್ಯಾಂಗರ್ ಎಂಬುವನು ಇದೇ ಸಮಯದಲ್ಲಿ ಒಂದು ಪುಟ್ಟ ಪುಸ್ತಿಕೆಯನ್ನು ಪ್ರಕಟಿ ಸಿದನು.[3] ಅನಂತರ ೧೮೭೦-೧೮೭೨ರಲ್ಲಿ ರೆವರೆಂಡ್ ಜೆ. ಡಾಸನ್ ಎಂಬಾತ ಗೋಂಡಿ ಭಾಷೆಯ ವ್ಯಾಕರಣದ ಬಗೆಗೆ ಒಂದು ಲೇಖನ ಬರೆದನು.[4] ಡಾಸನ್ ಈ ಗೋಂಡಿ ಭಾಷೆಗೆ ಸೇಂಟ್ ಮ್ಯಾಥ್ಯೂ, ಸೇಂಟ್ ಮಾರ್ಕರ ಪ್ರವಚನಗಳನ್ನು ಭಾಷಾಂತರಿಸಿದನು. ಇವುಗಳ ಆಧಾರದಿಂದ ಕಾಲ್ಡ್‌ವೆಲ್ ಗೋಂಡಿ ಭಾಷೆಯನ್ನು ಕುರಿತು ಅದು ಕನ್ನಡ-ತೆಲುಗು-ತಮಿಳು ಭಾಷೆಗಳಿಗೆ ಸಮೀಪವಾಗಿದೆಯಾದರೂ

---

[1] *ACGODLS*, ನಾಲ್ಕನೆಯ ಮುದ್ರಣ, ಪುಟ ೬೨೬–೬೨೯

[2] Rev. J. G. Driberg, *A Grammar and Vocabulary of Gond Language*, 1849, Calcutta.

[3] Dr. Manger, *Language of the Seoni Gonds*, JOAS of Bengal.

[4] J. Rev. Dawson, *Brief Grammar and Vocabulary of the Gond Language*, JOBAS, 1871

ತೆಲುಗಿಗೆ ಸಮೀಪತರವಾಗಿಯೂ, ತಮಿಳಿಗೆ ಸಮೀಪತಮವಾಗಿಯೂ ಇದೆಯೆಂದು ಅಭಿಪ್ರಾಯಪಟ್ಟಿದ್ದಾನೆ.

> In many respects it accords most with Telugu, its neighbour to the South and East; but on the whole it seems more closely allied to Tamil, though locally of all Dravidian dialects the farthest removed from it . . . .[1]

ಸುಮಾರು ಹತ್ತು ಲಕ್ಷಕ್ಕಿಂತಲೂ ಹೆಚ್ಚು ಜನರು ಆಡುವ ಭಾಷೆ ಈ ಗೋಂಡಿ ಭಾಷೆ. ಮಧ್ಯಪ್ರದೇಶದಲ್ಲಿರುವ ಕಾಡುಗಳಲ್ಲಿ ಸಾಧಾರಣವಾಗಿ ವಾಸಿಸುವ ಗೋಂಡರನ್ನು ಆದಿವಾಸಿಗಳೆಂದೂ, ಕಾಡುಜನರೆಂದೂ ಕರೆಯುವರು. ಬಿಹಾರ, ಆಂಧ್ರ, ಒರಿಸ್ಸಾ, ಮಹಾರಾಷ್ಟ್ರಗಳಲ್ಲೂ ಗೋಂಡರು ವಾಸಿಸುವರು. ಗೋಂಡಾ ಜನಾಂಗದವರು ಇಂದು ಕಾಡುಜನಾಂಗವಾಗಿರಬಹುದು. ಆದರೆ ಇವರೂ ಹಿಂದೆ ಒಮ್ಮೆ ರಾಜ್ಯವಾಳಿದ ಅರಸು ಮನೆತನದವರೆಂದು ಇತಿಹಾಸ ಓದಿದರೆ ತಿಳಿದುಬರುತ್ತದೆ. ಗೋಂಡಾ ಜನ ಸುಮಾರು ಹದಿನಾಲ್ಕನೆಯ ಶತಮಾನದಿಂದ ಮೊದಲುಗೊಂಡು ನಾಲ್ಕುನೂರು ವರುಷಗಳವರೆಗೂ ರಾಜ್ಯವಾಳಿದ್ದಾರೆಂಬುದು ಚರಿತ್ರೆ ಸಾರುವ ಸತ್ಯಸಂಗತಿ. ಆದರೆ ಮರಾಠರು ೧೮ನೆಯ ಶತಮಾನದಲ್ಲಿ ದೊಡ್ಡದೊಂದು ದಾಳಿ ನಡಸಿದಾಗ ಅವರನ್ನು ಎದುರಿಸಲಾರದೆ ಗೋಂಡರು ಗದ್ದೆ, ತರೀನೆಲ—ಮೊದಲಾದ ಉತ್ತಮವಾದ ಬಯಲು ಪ್ರದೇಶವನ್ನೆಲ್ಲಾ ತೊರೆದು ಗುಡ್ಡಗಾಡುಗಳಿಗೆ ಓಡಿಹೋದರು. ಹೀಗಾಗಿ ಮಧ್ಯಪ್ರದೇಶದಲ್ಲಿ ಇರುವ ಸೆವೋನಿ, ಬೇತುಲ್, ಬಸ್ತಾರ್, ರಾಯ್‌ಪುರ್, ಮಾಂಡ್ಲಾ, ರಾಯ್‌ಗರ್, ಬಿಲಸ್‌ಪುರ್, ದುರ್ಗ್, ಹೊಸಂಗಾಬಾದ್ ಛಿಂದ್ವಾರಾ ಜಿಲ್ಲೆಗಳಲ್ಲಿಯೂ, ಜಗದಲ್‌ಪುರ, ಮಹಾರಾಷ್ಟ್ರಕ್ಕೆ ಸೇರಿರುವ ಛಾಂದ್ ಅಮ್ರಾವತೀ ಯೋತ್‌ಮಾಲ್, ಅಕೋಲ, ಬುಲ್ಡಾನಾ, ವಾರ್ಧಾ ಜಿಲ್ಲೆಯಲ್ಲೂ ಗೋಂಡರು ಗುಂಪು ಗುಂಪಾಗಿ ಚೆದುರಿಹೋದಂತೆ ಅಲ್ಲಲ್ಲಿ ಹಂಚಿಹೋಗಿದ್ದಾರೆ. ಇನ್ನೊಂದು ಸ್ವಾರಸ್ಯವೆಂದರೆ ಕನ್ನಡ ಮಾತನಾಡುವಷ್ಟು ಸಂಖ್ಯೆಯಲ್ಲಿ ಗೋಂಡರು ಇಲ್ಲವಾದರೂ ಗೋಂಡಿ ಭಾಷೆಯಲ್ಲಿ ಕನ್ನಡದಲ್ಲಿ ಇರುವಷ್ಟೇ ಉಪ-ಭಾಷೆಗಳಿವೆ. ಇಲ್ಲಿ ಉದಾಹರಣೆಗಾಗಿ ಕೆಲವನ್ನು ಮಾತ್ರ ಹೆಸರಿಸಬಹುದು; ಗಾಯ್ಕಿ, ಕಲರಿ, ರಾಜಗೋಂಡಿ, ಕಂದ್ರು, ಮುರಿಯ, ಮಾಡಿಯಾ (ಮರಿಯ), ಡೊರ್ಲಿ? ಕೊಕಡಿ, ನಗರ್ಚಿ, ಪಂಖಲಿ, ಕೊಯ (?)—ಎಂಬ ಈ ಏಳೆಂಟು ಪ್ರಮುಖ ಗೋಂಡೀ ಉಪ-ಭಾಷೆಗಳನ್ನು ಭಾಷಾವಿಜ್ಞಾನಿಗಳು ಉಲ್ಲೇಖಿಸಿದ್ದಾರೆ.

ಗೋಂಡಿ ಭಾಷೆಯ ಉಪ-ಭಾಷೆಗಳನ್ನು ಕುರಿತು ಈ ಕೆಳಕಂಡ ಉಪಯುಕ್ತ ಕೃತಿಗಳು ರಚಿತವಾಗಿವೆ:

---

[1] *ACGODLS*, 1956, p. 626-27

1. *A Manual of Mardia Language* (Maria dialect)
   —Abraham A. Lind. Kedgaon, 1913
2. *First Gondi Manual*—Chand Dialect.
   —S. B. Patwardhan, London, 1935.
3. *A Grammar of Mariagondi as spoken by the Bison Horn or Dandami Marias of Bastar State*—A.N. Mitchell, Jagadalpur, 1942.
4. *A Grammar of Gondi Language*—Adilabad Dialect: P. Sethumadhava Rao, Hyderabad, 1954.
5. *Gondi Grammar and Vocabulary*, Mandla Dialect—H. D. Williamson, London, 1890.
6. *Grammar of Gondi* as spoken in the Betul District, Central Provinces, India.
   —C. G. Chenevix Trench,
   Vol. I Grammar, 1919
   II Vocabulary, Folk-tales, 1921.

ಕಳೆದ ಶತಮಾನದಿಂದೀಚೆಗೆ, ಉಳಿದೆಲ್ಲ ದ್ರಾವಿಡ ಭಾಷೆಗಳಂತೆ, ಗೋಂಡಿ ಭಾಷೆಯ ಮೇಲೂ ಅನ್ಯಭಾಷೆಯ ಪ್ರಭಾವ ಬೀಳತೊಡಗಿದೆ.

Gond also has borrowed from Hindi conjunctions and even the relative pronoun so that by paradox which shows clearely the capacity of resistence of the cultivated languages, these uncultivated languages alone have at their disposal to-day means allowing the sentence to be articulated.[1]

ಗೋಂಡರು, ಅದರಲ್ಲಿಯೂ ಹೆಚ್ಚಾಗಿ ಗಂಡಸರು, ಮರಾಠಿಯ ಒಂದು ಉಪಭಾಷೆಯಾದ 'ಹಳಬಿ' ಭಾಷೆಯ ಪ್ರಭಾವಕ್ಕೆ ಒಳಗಾಗಿದ್ದಾರೆ. ಆದರೆ ಸ್ತ್ರೀಯರು ಮಾತ್ರ ಇನ್ನೂ ಹೊರಗಿನ ಭಾಷೆಗಳ ವರ್ಚಸ್ಸಿಗೆ ಅಷ್ಟಾಗಿ ಒಳಗಾಗದೆ ಗೋಂಡಿ ಭಾಷೆಯನ್ನು ಉಸಿರಾಡಿಸುತ್ತಿದ್ದಾರೆ.

ಗೋಂಡಿ ಭಾಷೆ ಪ್ರಧಾನವಾಗಿ ದ್ರಾವಿಡ ಭಾಷೆಯಾದರೂ, ಗೋಂಡರು ಅವರು ನೆಲಸಿರುವ ಜಾಗಗಳಲ್ಲಿ ಬಳಕೆಯಲ್ಲಿ ಇರುವ ದ್ರಾವಿಡೇತರ ಭಾಷೆಗಳನ್ನು ಬಳಸತೊಡಗಿರುವುದರಿಂದಲೂ, ಅವರ ಭಾಷೆಯ ಮೇಲೆ ಆರ್ಯ ಪರಿವಾರದ ಭಾಷೆಗಳು ತಮ್ಮ ಮುದ್ರೆಯನ್ನು ಪ್ರಬಲವಾಗಿ ಒತ್ತಿರುವುದರಿಂದಲೂ ಗೋಂಡಿ ಭಾಷೆಯ ವಿವರಣೆ ಕಷ್ಟಸಾಧ್ಯವಾಗಿದೆ ಅಥವಾ ಕೊಂಚ ತೊಡಕಿನದಾಗಿದೆ.

---

[1] J. B., The *GSODLS*, p. 121

In the absence of any reliable report, therefore, it would not be just to consider all the individuals returing Gondi as their mother tongue to belong to the Dravidian speaking Group only . . . . strictly speaking Gondi can not justifiably be said to represent either Dravidian or Indo—Aryan family exclusively.[1]

ಕನ್ನಡ ಭಾಷೆಯ ಕೆಲವು ಪದಗಳೊಡನೆ ಗೋಂಡಿ ಭಾಷೆಯ ಕೆಲವು ಪದಗಳನ್ನು ಹೋಲಿಕೆಗಾಗಿ ಇಲ್ಲಿ ಕೊಟ್ಟಿದೆ :

| ಕನ್ನಡ | ಗೋಂಡಿ |
|---|---|
| ಅಕ್ಕ | ತಕ್ಕ |
| ಅವು | ಆವೂ |
| ಇವು | ಈವೊ |
| ಎರಡು | ಇರುರ್ |
| ಕಳ್ಳು (<ಕೞ್) | ಕಲ್ |
| ಕಾಣು | ಖಾಂತೊನಿನ್ |
| ಕಿವಿ | ಕಾವಿ |
| ಕೆಯ್ | ಕೀ |
| ಬಾಯ್ | ಬಾಯ್ |
| ಮೂರು | ಮೂಂಡ್ |
| ಹೈದ | ಪೆದೆಲ್ (cf. ತ. ಪಯ್ಯನ್) |

ಗೋಂಡಿ ಭಾಷೆಯಲ್ಲಿ ಭವಿಷ್ಯದರ್ಥವನ್ನು ಸೂಚಿಸಲು ಧಾತುವಿಗೆ 'ಕ' ಪ್ರತ್ಯಯವನ್ನು ಸೇರಿಸುವರು.

ಉದಾ : ಕ. ಕೆಯ್‌ಗುವ್—ಮಾಡುತ್ತೇನೆ : ಗೋಂ. ಕೀಕಾ

. . . . the remarkable influence of Indo-Aryan on Gondi can be noticed in particular aspects of the language, e. g. the adjectives and adverbs in Gondi have particularly the Indo-Aryan stamp.[2]

ಉದಾಹರಣೆ :

(ಗೋಂ) ಯೇರ್ = ನೀರು : ಇದು ದ್ರಾವಿಡ ನಾಮಪದ. ಇದರಿಂದ

---

[1] *Census of India*, 1961, Vol. I, p. cci

[2] Siddheshwar Varma, *Indo-Aryan Stamp on Gondi*, IL, Vol, III.

ಥಂಡೋಯೇರ್ = ತಣ್ಣೀರು
ಗರಮ್‌ಯೇರ್ = ಬಿಸಿನೀರು

ಎಂಬ ಇತರ ಪದಗಳನ್ನು ಮಾಡಿಕೊಂಡಿದ್ದಾರೆ. ಇಲ್ಲಿನ ವಿಶೇಷಣಗಳು ಆರ್ಯ ಭಾಷೆಯ ಪದಗಳು.

ಮೂಲದ್ರಾವಿಡ ಸ್ವರಗಳಲ್ಲಿ ವ್ಯತ್ಯಾಸವಿಲ್ಲದೆ ಗೋಂಡಿಯಲ್ಲಿ ಉಳಿದು ಬಂದಿವೆ, ಹ್ರಸ್ವ *ಎ ಹೊರತು. ಮೂಲದ್ರಾ *ಎ ಧ್ವನಿಮಾಕ್ಕೆ ಸಮಾನವಾಗಿ ಎ ಜೊತೆಗೆ ಕೆಲವು ಕಡೆ ಅ ಕೂಡ ಕಂಡುಬರುತ್ತದೆ. ವ್ಯಂಜನಗಳಲ್ಲಿ ಮೂಲದ್ರಾ *—ಕ್-ಕ್ಕೆ -ಯ್-ಬಂದಿದೆ. *ಚ್- → ಸ್ → ಹ್ → Ø

*-ಚ್- → -ಸ್-
*ಣ್ಟ್ → ನ್ಡ್
*ಱ್ಱ → ತ್ತ್ ; ತ್
*ಣ್ → ನ್

೧೩

# ತೊದ ಭಾಷೆ

೧೯೬೧ರ ಜನಗಣತಿಯಲ್ಲಿ ೭೬೫ ಜನ ತೊದ ಭಾಷೆಯನ್ನು ಆಡುವವರಿದ್ದಾರೆಂದು ಹೇಳಿದೆ. ಅದರಲ್ಲಿ ೭೬೦ ಜನ, ಶೇಕಡಾ ೯೯ ಜನ ನೀಲಗಿರಿ ಬೆಟ್ಟ ಒಂದರಲ್ಲೇ ವಾಸಿಸುವರು. ಅಲ್ಲಿನ ಬೆಟ್ಟಗುಡ್ಡಗಳ ಇಳಿಜಾರು ಪ್ರದೇಶದಲ್ಲಿ ಸಣ್ಣ ಸಣ್ಣ ಜೋಪಡಿಗಳನ್ನು ಕಟ್ಟಿಕೊಂಡು ವಾಸಮಾಡುವ ಇತರ ಎಲ್ಲ ಆದಿವಾಸಿಗಳಂತೆ ಈ ತೊದವರೂ ಪ್ರಧಾನವಾಗಿ ಪರ್ವತ ನಿವಾಸಿಗಳು. ನೀಲಗಿರಿಯಲ್ಲಿ ಬಹಳ ಕಡಮೆ ಸಂಖ್ಯೆಯಲ್ಲಿ ಇರುವ ಈ ತೊದವರು ಆಡುವ ಭಾಷೆಯೇ ದ್ರಾವಿಡಭಾಷಾ ಪರಿವಾರಕ್ಕೆ ಸೇರಿದ ತೊದ ಭಾಷೆ.

ತೊದ ಎಂಬ ಹೆಸರು ಸಾಕಷ್ಟು ಹಳೆಯ ಪದವೆಂಬಂತೆ ತೋರುತ್ತದೆ. ಹೊಯ್ಸಳ ವಂಶದ ವಿಷ್ಣುವರ್ಧನ ಮಹಾರಾಜನ ಚಮೂಪನಾದ ಪುಣಿಸನನ್ನು ವರ್ಣಿಸುವ ಕೆಲವು ಪದ್ಯಗಳು, ಶಾಸನ ಪದ್ಯಗಳು ದೊರೆತಿವೆ. ಮೈಸೂರಿಗೆ ಹತ್ತಿರದಲ್ಲಿರುವ ಚಾಮರಾಜನಗರದಲ್ಲಿನ ಶ್ರೀ ಪಾರ್ಶ್ವನಾಥಸ್ವಾಮಿಯ—ಜೈನರ ಬಸದಿಯಲ್ಲಿ ಸಿಗುವ ಒಂದು ಶಾಸನದ ಎರಡು ಪದ್ಯಗಳು ಇಂತಿವೆ:

ತೊದವನದಿರ್ಪಿ ಕೊಂಗರನಡಂಗಿಸಿ ಪೋಲುವರಂ ಪೊರಳ್ಚಿ ಮಾ
ಣದೆ ಮಲೆಯಾಳರಂ ಮಡಿಪಿ ಕಾಳನೃಪಾಲನ ತೋಳಬಿಂಕಮಂ।
ಬೆದರಿಸಿ ಪೊಕ್ಕು ನೀಳಸಿಳೆಯಂ ಜಯಲಕ್ಷ್ಮಿಗೆ ಕೀರ್ತಿ . . . ಮಾ
ಡಿದ ವಿಭು ಬಿಟ್ಟಿದೇವನ ಮಹಾಸಚಿವಂ ಪುಣಿಸಂ ಬಳಾಧಿಕಂ॥
ಅದಟಂ ಪೊಯ್ಸಳ ಭೂಪನೊರ್ಮೆ ಬೆಸ [ಸೆಲ್] ನೀಲಾದ್ರಿಯಂ ಕೊಂಡತ
ನ್ನೊದವಿಂದಂ ಮಲೆಯಾಳರಂ ಕದನದೊಳ್ಪಿಂಕೊಂಡು ತತ್ಸಾಹಸಾ।
ಭ್ಯುದಯಂ ಕೈಕೊಳೆ ಕೇರಳಾಧಿಪತಿಯಾಗಿರ್ದೀಂ ಬಯಲ್ನಾಡನಂ
ಪದಟಿಂ ಕಾಣಿಸಿಕೊಂಡನಿಂತು ಪುಣಿಸಶ್ರೀ ದಂಡನಾಥಾಧಿಪಂ॥[1]

ಈ ಶಿಲಾಶಾಸನದ ಕಾಲ ಕ್ರಿ.ಶ. (೧೧೧೬/೧೧೧೭) ಹನ್ನೆರಡನೆಯ ಶತಮಾನದ ಪ್ರಾರಂಭ ಕಾಲ. ಅಂದರೆ ಈ ವೇಳೆಗಾಗಲೇ ತೊದವರು ನೀಲಗಿರಿಯ ಮೇಲೆ

[1] ಮೈಸೂರು ಜಿಲ್ಲೆಯ ಚಾಮರಾಜನಗರ ತಾಲ್ಲೂಕು ಶಾಸನಗಳು, ಶಾಸನ ಸಂಖ್ಯೆ ೮೩.

ವಾಸಿಸುತ್ತಿದ್ದರೆಂದು ಗೊತ್ತಾಗುತ್ತದೆ. ಅದೂ ಅಲ್ಲದೆ ಈ ಶಾಸನದಿಂದ ಮಳೆಯಾಳರೂ ಕೊಂಗರೂ ತೊದವರ ನೆರೆಹೊರೆಯವರಾಗಿದ್ದರೆಂದು ಸ್ಪಷ್ಟವಾಗುತ್ತದೆ. ತೊದವರು ಕೊಂಗರನ್ನು ಸೋಲಿಸಿದಂತೆ ಇತರ ಶಾಸನಗಳಿಂದ ತಿಳಿದುಬರುತ್ತದೆ.

ಮೇಲೆ ಉದಾಹರಿಸಿದ ಶಾಸನ ಪದ್ಯದಲ್ಲಿ ಬರುವ 'ಕಾಳನೃಪಾಲನ' ಎಂಬಲ್ಲಿನ ಕಾಳನು ಯಾರು? ಕಾಳ ಎಂಬ ಹೆಸರು ಇಂದು ತೊದವರಲ್ಲಿ ಬಳಕೆಯಲ್ಲಿ ಇಲ್ಲ. ಆದರೆ ಬಡಗರಲ್ಲಿ ಕಾಳ ಎಂಬುದು ಬಳಕೆಯಲ್ಲಿದೆ. ಆದುದರಿಂದ ಕಾಳನು ಬಡಗರವನಿರ ಬಹುದು. ಆದರೆ ಇಲ್ಲಿ ಇನ್ನೊಂದು ಸಂದೇಹ ಮೂಡುತ್ತದೆ. ಕಾಳ ಎಂಬ ಹೆಸರು ಇಂದು ತೊದವರಲ್ಲಿ ಇಲ್ಲದಿರಬಹುದು, ಬಹಳ ಹಿಂದೆ ತೊದವರಲ್ಲಿ ಆ ಹೆಸರು ಇದ್ದಿರ ಬಹುದು. ಈ ಊಹೆ ನಿಜವಾಗಿದ್ದಲ್ಲಿ ತೊದ ಜನಾಂಗದವರಿಗೆ ಆದಿವಾಸಿಗಳೆಂದು ಇಂದು ಕರೆಯುವಂತಿದ್ದರೂ ಒಂದು ಕಾಲಕ್ಕೆ ಅವರು ನಾಗರಿಕರಾಗಿದ್ದಿರಬಹುದೆಂದು ಹೇಳಬೇಕಾಗುತ್ತದೆ. ಇದರಿಂದ "ಒಬ್ಬ ರಾಜನೂ, ಒಂದು ರಾಜ್ಯಭಾರ ಕ್ರಮವೂ ಇರುವಷ್ಟು ನಾಗರಿಕರು ಅವರಾಗಿದ್ದರೆಂದಾಯಿತು!"[1]

ತೊದ ಜನಾಂಗದವರನ್ನು ತೋಡರು ಎನ್ನುವರು. ನೀಲಗಿರಿ ಬೆಟ್ಟಗಳಲ್ಲಿ ಇರುವ ಆದಿವಾಸಿಗಳ ಗುಂಪಿಗೆ ಸೇರಿದ ಈ ತೋಡರು ವಾಸಮಾಡುವ ಜಾಗ ವಿಚಿತ್ರ ರೀತಿಯದು. ಬೆಟ್ಟಗುಡ್ಡಗಳ ಕಣಿವೆಗಳಲ್ಲಿ ನೀರು ಮತ್ತು ಹುಲ್ಲು ಇದ್ದು ತಂಪಾಗಿರುವ ತಾಣಗಳಲ್ಲಿ ಇವರು ಚಕ್ರಾಕಾರಗಳಲ್ಲಿ ಕಲ್ಲಿನ ಗೋಡೆಗಳನ್ನು ಎಬ್ಬಿಸುವರು ಮತ್ತು ಕಲ್ಲಿನ ಗೋಡೆಯ ಮೇಲೆ ಶಂಖುವಿನ ಆಕಾರದ ಗುಡಿಸಲನ್ನು ಕಟ್ಟುವರು. ಈ ತೆರನಾಗಿ ಕಟ್ಟಿದ ಹತ್ತು-ಹನ್ನೆರಡು ಗುಡಿಸಲುಗಳ ಗುಂಪಿಗೆ 'ಮಾಡ' (> ? ಮಹಡಿ) ಎಂದು ಕರೆಯುವರು. ಮಾಡ-ಎಂದರೆ ಗ್ರಾಮ ಎಂಬ ಅರ್ಥದಲ್ಲೂ ಅವರು ಆ ಪದ ವನ್ನು ಬಳಸುವರು. ತೋಡರು ಆದಷ್ಟೂ ಅಂದವಾದ ಜಾಗವನ್ನೇ ವಾಸಕ್ಕೆ ತಕ್ಕದ್ದೆಂದು ಆರಿಸಲು ಇನ್ನೂ ಒಂದು ಮುಖ್ಯ ಕಾರಣವಿದೆ. ತೋಡರಿಗೆ ಆಕಳ ಬಲವೇ ಬಲ. ದನಗಳಿಗೆ ತೋಡರು ಹೆಚ್ಚು ಪ್ರಾಶಸ್ತ್ಯವಿತ್ತಿದ್ದಾರೆ. ಅವರ ಎಲ್ಲ ವ್ಯವಹಾರ ಹಾಗೂ ಒಟ್ಟು ಜೀವನ ನಿರ್ವಹಣೆ ಆಕಳ ಸಂಪತ್ತಿನ ಸುತ್ತ ಹಬ್ಬಿದೆ. ತೋಡರು ದನದ ದೊಡ್ಡಿಗೆ ಹೈನಿನ ಮನೆ ಅಥವಾ ಹೈನು ಗುಡಿಸಲು—ಎಂದು ಹೇಳುವರು. ಈ ಹೈನು ಮನೆಯೇ ಅವರ ದೇವಾಲಯ. ತೋಡರು ಹಾಲು, ಮೊಸರು, ನುಜ್ಜಿಗೆ ಮಾಡುವರು. ಹುಟ್ಟನಿಂದ (ತೊಟ್ಟಿಲಿಂದ) ಹಿಡಿದು ಚಟ್ಟದವರೆಗೆ ತೋಡರ ಪ್ರತಿ ಯೊಂದು ಕೆಲಸದಲ್ಲೂ ಈ ಹೈನಿನ ಸಂಬಂಧ ಇದ್ದೇ ಇರುತ್ತದೆ. ತೋಡರು ಎಮ್ಮೆ ಯನ್ನು ಐರ್ ಎಂದೂ, ಕೋಣನನ್ನು ಏರ್ ಎಂದೂ ಹೇಳುವರಲ್ಲವೆ ಎಲ್ಲ ಎಮ್ಮೆ ಗಳಿಗೂ ಬೇರೆ ಬೇರೆ ಹೆಸರು ಕೊಟ್ಟಿರುತ್ತಾರೆ. ಎಮ್ಮೆ ಕರು ಹಾಕಿದರೆ ಅದನ್ನು ಹಬ್ಬ ದಂತೆ ಆಚರಿಸುತ್ತಾರೆ.

---

[1] ಎನ್. ಲಕ್ಷ್ಮೀನಾರಾಯಣರಾವ್, ಪ್ರ. ಕ, ಪುಟ ೧೨೩.

ಇವರ ಆದಿದೇವರು ಪಿತಿ ಅಥವಾ ಪೂತಿ (<? ಪೃಥ್ವಿ). ಪಿತಿ ಅಥವಾ ಪೂತಿಯ ಮಗ ಓನ್. ಇವನಲ್ಲದೆ ಆನ್ ಮುಂಗಾನೊ, (<? ಅವನ್ ಮುಂಗಾಣುವನ್ = ಮುಂದೆ ಆಗುವುದನ್ನು ಕಾಣುವವನು), ಗಾಡಿಂಗಾತೊ; ಕುಜವಾಡಾ, ದೆಕುಲಾರಿಯಾ, ಬೆಲೆಗೋಷು—ಎಂಬ ಐದು ದೇವರುಗಳು ತೋಡರ ಹಿರಿಯ ದೇವರುಗಳು. ಆಪಮೂ ಟೆಯಕಿರ್ಜಿ ಎಂಬವಳೇ ತೋಡರ ಪ್ರೀತಿಯ ದೇವತೆ; ಇವಳ ಮಗ ಕೊರಾಟೊ (< ಕೊರಡು ?) ಎಂಬುವನು ಸದಾ ಕೈಯಲ್ಲಿ ಕಬ್ಬಿಣದ ಕೋಲು ಹಿಡಿದಿರುತ್ತಾನೆ. ತೋಡರು ರಾವಣನ ಸಂತತಿಯವರೆಂದು ಕೆಲವರೂ, ಪಾಂಡವ ವಂಶಜರೆಂದು ಮತ್ತೆ ಕೆಲವರೂ ಹೇಳುವರು.[1] ತೊದ ಭಾಷೆಯನ್ನು ತೋದ ಭಾಷೆ ಯೆಂದೂ ಹೇಳುವರು.

ತೋಡರ ಭಾಷೆಯಾದ ತೊದ ಭಾಷೆಯನ್ನು ಸಂಪೂರ್ಣವಾಗಿ ಕನ್ನಡ, ಅಥವಾ ತಮಿಳು, ಅಥವಾ ಮಲೆಯಾಳ—ಎಂದು ಖಚಿತವಾಗಿ ಹೇಳುವಂತಿಲ್ಲವೆಂದು ಕೆಲವು ವಿದ್ವಾಂಸರ ಅಭಿಪ್ರಾಯ. ಆದರೆ ತೊದ ಭಾಷೆ ದ್ರಾವಿಡ ಗುಂಪಿಗೆ ಸೇರಿದ ಭಾಷೆ ಯೆಂದು ನಿಶ್ಚಯವಾಗಿ ಹೇಳಬಹುದು. ತೊದ ಭಾಷೆಯಲ್ಲಿ ಕಾಣುವ ಮತ್ತೊಂದು ಹೆಚ್ಚಳವೆಂದರೆ ಅವರು ಅವರವರಲ್ಲೇ ಮಾತನಾಡಿಕೊಳ್ಳುವಾಗ ಮತ್ತೊಂದು ಭಾಷೆ ಬಳಸುತ್ತಾರೆ; ಪ್ರಾರ್ಥನಾ ಸಮಯದಲ್ಲೇ ಸ್ವಲ್ಪ ಭಿನ್ನವಾದ ಭಾಷೆಯನ್ನು ಉಪಯೋಗಿಸುತ್ತಾರೆ; ಹೈನು ಮನೆಗೆ ಸೇರಿದ ವಿಚಾರ ತಿಳಿಸುವಾಗಲೇ ಒಂದು ತೆರನಾಗಿ ನುಡಿಯುತ್ತಾರೆ. ಇಷ್ಟಾದರೂ ತೋಡರು ಬಡಗರೊಡನೆ ಮಾತನಾಡುವಾಗ ಮಾತ್ರ ಬಹುಮಟ್ಟಿಗೆ ತಮಿಳು ಭಾಷೆಗೆ ಹೋಲುವ ಭಾಷೆಯಲ್ಲೇ ಸಂಭಾಷಿಸುವರು. ಹೀಗಾಗಿ ತೋಡರ ಭಾಷೆ ದ್ರಾವಿಡ ಜಾತಿಗೆ ಸೇರಿದ ವಿಶಿಷ್ಟವಾದ ಒಂದು ಮಿಶ್ರ ಭಾಷೆಯಾಗಿದೆ.

ಬಹಳ ಹಿಂದೆಯೇ ತೊದ ಭಾಷೆಯನ್ನು ತುವ ಭಾಷೆಯೆಂಬ ಹೆಸರಿನಿಂದ ರಾಬರ್ಟ್ ಕಾಲ್ಡ್‌ವೆಲ್ ದ್ರಾವಿಡ ಭಾಷೆಗಳ ಗುಂಪಿಗೆ ಸೇರಿಸಿದ್ದನು. ಅವನಿಗೆ ನೀಲಗಿರಿಯಲ್ಲಿ ವಾಸಿಸುತ್ತಿದ್ದ 'ಮಿಶನರಿ'ಯಾದ ರೆವರೆಂಡ್ ಎಫ್. ಮೆತ್ಸ್ ಎಂಬಾತ ಕೆಲವು ವಿವರಗಳನ್ನು ಒದಗಿಸಿದ್ದನು. ಅಲ್ಲಿಂದ ಮುಂದೆ ಡಾ॥ ಪೋಪ್ ತೊದ ಭಾಷೆಯನ್ನು ಪರಿಶೀಲಿಸಿ ಅದರ ವ್ಯಾಕರಣವೊಂದನ್ನು ಸಿದ್ಧಪಡಿಸಿದನು.[2] ಈ ವ್ಯಾಕರಣ ಕರ್ನಲ್ ಮಾರ್ಷಲ್ ಬರೆದ 'ತೊದವರು' (Tudas) ಎಂಬ ಪುಸ್ತಕದಲ್ಲಿ ಅಚ್ಚಾಗಿದೆ.

ತೊದ ಭಾಷೆ ಮೊದಲಿಗೆ ಬಹಳವಾಗಿ ಪ್ರಾತ್ಯಾಯಿಕ ಭಾಷೆಯಾಗಿದ್ದಂತೆ ತೋರು

---

[1] ತೋಡರ ಜನಜೀವನಕ್ಕೆ ಸಂಬಂಧಿಸಿದ ಹೆಚ್ಚಿನ ವಿವರಗಳಿಗೆ 'ಕನ್ನಡನಾಡಿನ ಆದಿವಾಸಿಗಳು': ಡಿ. ಕೃಷ್ಣ ಅಯ್ಯಂಗಾರ್ . . . ಲೇಖನ ನೋಡಿ: ಮೈಸೂರು ರಾಜ್ಯ, ನವಂಬರ್ ೧, ೧೯೫೬.

[2] Dr. Pope, *Outlines of the Grammar of Tuda Language.*

ತ್ತದೆ. ಮುಂದೆ ತೊದವರು ಪ್ರತ್ಯೇಕವಾಗಿ ಬಾಳತೊಡಗಿದುದರಿಂದ ತೊದ ಭಾಷೆ ತನ್ನ ವಿಭಕ್ತಿಗಳನ್ನು-ಪ್ರತ್ಯಯಗಳನ್ನು ಕಳೆದುಕೊಂಡು ಶಿಥಿಲಸ್ಥಿತಿಯಲ್ಲಿ ನಿಂತಿದೆ. ಈ ಭಾಷೆಯಲ್ಲಿ ತೆಲಗು ಭಾಷೆಯ ಪ್ರಭಾವ ಕಡಮೆ. ಇತ್ತೀಚೆಗೆ ತಮಿಳು ರೂಪಗಳು ಸೇರಿದಂತೆ ಕಾಣುತ್ತದೆ. ಮಲೆಯಾಳ ಭಾಷೆಯ ಸಂಬಂಧವೂ ಅಷ್ಟಾಗಿ ಕಾಣುವುದಿಲ್ಲ. ಡಾ|| ಪೋಪ್ ತೊದ ಭಾಷೆಯ ವ್ಯಾಕರಣವನ್ನು ಬರೆದ ಕಾಲಕ್ಕೆ ಈ ಭಾಷೆ ಕನ್ನಡ ಭಾಷೆಗೆ ಸಮೀಪತರವಾಗಿದೆಯೆಂದೂ, ಬಹುಶಃ ತೊದ ಭಾಷೆ ಕನ್ನಡ ಭಾಷೆಯ ಉಪ-ಭಾಷೆಯೇ ಇರಬೇಕೆಂದೂ ಭಾವಿಸಿದನು :

> The language seems to have been originally old Canarese, and not a distinct dialect. The Tudas were probably immigrants from the Canarese country, and have dwelt in the Nilagiris for about 800 years.[1]

ಆದರೆ ತೊದ ಭಾಷೆಯನ್ನು ದ್ರಾವಿಡ ಗುಂಪಿಗೆ ಸೇರಿದ ಇತರ ಭಾಷೆಗಳಂತೆ ಪ್ರತ್ಯೇಕವಾಗಿಯೇ ಪರಿಶೀಲಿಸುವುದು ಆಗತ್ಯವೆಂದು ಭಾಷಾವಿಜ್ಞಾನಿಗಳು ಭಾವಿಸಿದ್ದಾರೆ. ಈ ಭಾಷೆಯಲ್ಲಿ ಬರುವ ಒಂದು ವಿಶಿಷ್ಟ ಧ್ವನಿಮಾ ಎಂದರೆ 'ಫ'. ಉದಾ : ಪೂಫ್= ಹುಳು. ಪ್ರಥಮಾ, ದ್ವಿತೀಯ, ಹಾಗೂ ಷಷ್ಠೀ ವಿಭಕ್ತಿಗಳಲ್ಲಿ ವ್ಯತ್ಯಾಸವೇ ಇಲ್ಲ.

| ಕನ್ನಡ | ತೊದ |
|---|---|
| ಇಬಿಂಪೆ | ಎರ್ಪ್ಬ |
| ಎರಡು | ಎಡ್ |
| ಒಂದು | ಒದ್ದ್ |
| ಕಣ್ಣು | ಕಣ್ಣ್ |
| ನಾನು | ಆನ್/ಆನು |
| ನಾವು | ಎಮ್/ಆಮ್ |
| ನೀನು | ನಿ |
| ನೀವು | ನೀವ್ |
| ಪಾವ್ > ಹಾವು | ಫಾಬ್ |
| ಬಾ | ವಾ |
| ಮೀನು | ಮೀನ್ |
| ಮೂಱು | ಮೂದು |

[1] ಅದೇ. ಇದು Colonel Marshall ಅವರ *A Phrenologist Among Todas* ಎಂಬ ಗ್ರಂಥದಲ್ಲಿ ಸೇರಿದೆ.

ಮೂಲದ್ರಾವಿಡ ಸ್ವರಗಳು ತೊದ ಭಾಷೆಯಲ್ಲಿ ಉಳಿದಿರುವ ಪರಿ ಇಂತಿದೆ:

ಮೂಲದ್ರಾ ಅ → ಒ : ಅ

* ಆ → ಓ : ಆ
* ಉ → ಉ : wi(ವಿ)
* ಊ → ಊ
* ಎ → ಎ : ಒ
* ಏ → ಏ : ಓ
* ಒ → ವ : ವೀ : ಒ
* ಓ → ವಾ : ವೀ

# ಬ್ರಾಹೂಈ ಭಾಷೆ

ಬ್ರಾಹೂಈ ಭಾಷೆ ಪರ್ವತವಾಸಿಗಳ—ಆದಿವಾಸಿಗಳ ಭಾಷೆ. ಇಂದಿಗೆ ಒಂದುನೂರು ವರುಷದ ಹಿಂದೆ ಮೊಟ್ಟಮೊದಲ ಬಾರಿಗೆ ಕಾಲ್ಡ್ವೆಲ್ ಈ ಭಾಷೆಯನ್ನು ದ್ರಾವಿಡ ಭಾಷಾವರ್ಗಕ್ಕೆ ಸೇರಿಸಬೇಕೊ ಅಥವಾ ಸೇರಿಸಬಾರದೊ ಎಂಬ ಅನುಮಾನವನ್ನು ವ್ಯಕ್ತಪಡಿಸುತ್ತಾ, ಆದರೂ ಬ್ರಾಹೂಈ ದ್ರಾವಿಡಭಾಷೆಯೇ ಇರಬೇಕೆಂಬುದರ ಕಡೆಗೇ ತನ್ನ ಒಲವನ್ನು ವ್ಯಕ್ತಪಡಿಸುತ್ತಾ, ತನ್ನ ಅಭಿಪ್ರಾಯವನ್ನು ಹೀಗೆ ಸೂಚಿಸಿದ್ದನು.

I have not included however the Brahui in the list of Dravidian Languages which are to be subjected to systematic comparision . . . because the Dravidian element contained in it bears but a small proportion to the rest of its component elements.[1]

ಭಾರತದ ಭಾಷಾ ಪರಿವೀಕ್ಷಣೆಯ ನಾಲ್ಕನೆಯ ಸಂಪುಟದಲ್ಲಿ (ಪುಟ—೬೮೫) ಈ ಭಾಷೆಯ ಪ್ರಸ್ತಾಪವಿದೆ. ಆದರೆ ಒಂದು ಶತಮಾನದ ಅವಧಿಯಲ್ಲಿ ಎಷ್ಟೋ ಮಹತ್ತರ ಕಾರ್ಯಗಳು ನಡೆದಿವೆ. ದ್ರಾವಿಡಭಾಷೆಗಳ ಗುಂಪಿಗೇ ಬ್ರಾಹೂಈ ಭಾಷೆಯೂ ಸೇರಿದೆಯೆಂಬ ವಿಚಾರದಲ್ಲಿ ಇಂದು ಯಾವ ಸಂದೇಹವೂ ಉಳಿದಿಲ್ಲ. ಕನ್ನಡದ ಕೆಲವು ಶಬ್ದಗಳೊಡನೆ ಈ ಭಾಷೆಯ ಪದಗಳನ್ನು ಹೋಲಿಸಿ ನೋಡೋಣ :

| ಕನ್ನಡ | ಬ್ರಾಹೂಈ |
|---|---|
| ಅರಿವು | ಹರ್ರಿಫ್ |
| ಅಪ್ಪ | ಬಾವಾ (?) |
| ಇರ್ | ಅರ್ |

[1] ACGODLS, ನಾಲ್ಕನೆಯ ಮುದ್ರಣ, ೧೯೫೬, ಪು. ೩೯.

| | |
|---|---|
| ಕಣ್ | ಖನ್ |
| ಕಲ್ | ಖಲ್ |
| ಪವಿ | ಖಫ್ |
| ಕೊಲ್ (> ಕೊಲ್ಲು) | ಖಲ್ (> ಖಲ್ಲಿಂಗ್) |
| ಕೂಳು | ಖು:(ಕು)ನ್ (+ ಇಂಗ್) |
| ಚಳಿ (> ಗ್ರಾ. ಸಳಿ) | ಸೆಲ್ಹ್ |
| ತಾನ್ (> ತಾನು) | ತೆನ್ |
| ದಿನ | ದೆ |
| ನೇರ್ | ದರ್ |
| ನೀರ್ | ದೀರ್ |
| ಬರ್ | ಬರ್ |
| ಬಾಯ್ | ಬಾ |
| ಬಾಗಿಲು | ದರ್‌ವಾಜ (?) |
| ಮೂರು | ಮುಸಿತ್ |

ಇಂದು ಬ್ರಾಹೂಈ ಭಾಷೆ 'ಕಿ' ಪ್ರತ್ಯಯವನ್ನು (ಇದು ಪರ್ಶಿಯನ್ ಮತ್ತು ಹಿಂದೂಸ್ಥಾನಿ ಭಾಷೆಗಳ ಪ್ರಭಾವದಿಂದ ಬಂದದ್ದು ಎಂಬ ಸೂಚನೆಯಿದೆ. ಆದರೆ—ಕ್ ಪ್ರತ್ಯಯ ದ್ರಾವಿಡಭಾಷೆಗಳಲ್ಲಿ ಸಹಜವಾದ ಚತುರ್ಥೀ ವಿಭಕ್ತಿ ಪ್ರತ್ಯಯುವಲ್ಲವೆ? ಇದರ ಬಗೆಗೆ ಹೆಚ್ಚು ವಿವರ ಆಗತ್ಯವೆಂದು ತೋರುತ್ತದೆ) ಹೆಚ್ಚಾಗಿ ಉಪಯೋಗಿಸ ತೊಡಗಿದೆ. ಅಲ್ಲದೆ ಇದರ ನೆರೆಹೊರೆಯ ಭಾಷೆಗಳಾದ ಬಲೂಚಿ ಸಿಂಧಿ ಭಾಷೆಗಳ ಪ್ರಭಾವದಿಂದಾಗಿ ಬ್ರಾಹೂಈ ಭಾಷೆಯ ಶಬ್ದಗಳೂ, ಕೆಲವೊಮ್ಮೆ ವಾಕ್ಯರಚನೆಯೂ ತಮ್ಮ ಮೂಲಸ್ವರೂಪವನ್ನು ಉಳಿಸಿಕೊಳ್ಳುತ್ತಿಲ್ಲವೆನ್ನಬಹುದು. ಅಲ್ಲದೆ ತನ್ನ ಇತರ ಎಲ್ಲ ಜ್ಞಾತಿಭಾಷೆಗಳ ಸಂಪರ್ಕದಿಂದ ಸಿಡಿದು ಹೋದಂತೆ ಬಹುದೂರದಲ್ಲಿ, ಸುಮಾರು ಎಂಟುನೂರು ಮೈಲಿಗಳಾಚೆ, ಒಂಟಿಯಾಗಿ ನಿಂತ ಬ್ರಾಹೂಈ ಭಾಷೆ ದ್ರಾವಿಡ ಭಾಷೆಯ ಮೂಲ ವ್ಯಾಕರಣಾಂಶಗಳನ್ನು ಇನ್ನೂ ಉಳಿಸಿಕೊಂಡಿರುವುದು ಆಶ್ಚರ್ಯ.

> A single Dravidian Language, Brahui (with 174,000 speakers) is spoken, far off from the rest, in the mountains of Baluchistan : it seems to be a relic of a time when Dravidian occupied a much wider territory, before the invasion of Indo-Aryan and Iranian speech.[1]

---

[1] Leonard Bloomfield, *Language*, 1963, p. 70.

ಉತ್ತರ ಭಾರತದ ಯಾವುದೋ ಒಂದು ಗುಡ್ಡಗಾಡಿನವರ ಭಾಷೆ ಅಥವಾ ಉಪಭಾಷೆಯಾಗಿದ್ದಿರಬಹುದಾದ ಜಿಪ್ಸಿ ಅಥವಾ ಕೊರವಂಜಿಗಳ ಭಾಷೆಯನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದು. ಅಲೆಮಾರಿಗಳಾದ ಈ ಕೊರವಂಜಿಗಳು ಹೋದ ಎಡೆಗಳಲ್ಲೆಲ್ಲಾ ಜಿಪ್ಸಿ ಭಾಷೆಯೂ ಹಿಂಬಾಲಿಸಿದೆ. ಹಲವು ದೇಶವಿದೇಶಗಳಲ್ಲಿ ಬಹುವರ್ಷಗಳಿಂದ ಸುತ್ತಾಡಿ ಆಯಾ ದೇಶದ ಭಾಷೆಗಳೊಡನೆ ಸಾಕಷ್ಟು ಸಂಪರ್ಕಹೊಂದಿ ತನ್ನ ಸಹಜರೂಪವನ್ನು ಬಹುಮಟ್ಟಿಗೆ ಕಳೆದುಕೊಂಡಿದೆ. ಆದರೆ ಇಷ್ಟಾದರೂ ಅವರ ವ್ಯಾಕರಣ ಸ್ವರೂಪ ಭಾರತೀಯವಾಗಿಯೇ ಉಳಿದಿದೆ.[1] ದ್ರಾವಿಡ ಕುಟುಂಬದ ಬ್ರಾಹೂಈ ಭಾಷೆಯ ಕತೆಯೂ ಹೆಚ್ಚು ಕಡಮೆ ಹೀಗೆಯೆ ಆಗಿದೆಯಾದರೂ ಇದು ದ್ರಾವಿಡ ವರ್ಗಕ್ಕೆ ಸೇರಿದ್ದು ಎಂಬ ನಿಸ್ಸಂದೇಹ ತೀರ್ಮಾನಕ್ಕೆ ವ್ಯಾಕರಣ ಇಂಬಾಗಿದೆ. ಈ ಭಾಷೆ ಕನ್ನಡ ಭಾಷೆಯ ಒಂದು ಶಾಖೆಯಾಗಿದ್ದಿರಬಹುದೆಂಬ ಊಹೆಯನ್ನೂ ಕೆಲವರು ಮಾಡಿದ್ದಾರೆ. ಅವರಿಗೆ ಆಧಾರವೆಂದರೆ ನೇಪಾಳದಲ್ಲಿ ಒಂದು ಕಾಲಕ್ಕೆ ಇದ್ದ ಕರ್ನಾಟಕದ ಅರಸುಮನೆತನಗಳ ಆಡಳಿತ. ಆದರೆ ಈ ಹೇಳಿಕೆಯನ್ನು ಪೋಷಿಸುವ ಇತರ ಪೂರಕಸಾಮಗ್ರಿ ಸಾಲದು.

ಬ್ರಾಹೂಈ ಭಾಷೆ (ಹ್ರಸ್ವ) ಎ, ಮತ್ತು (ಹ್ರಸ್ವ) ಒ ಸ್ವರಗಳನ್ನೂ ಕಳೆದುಕೊಂಡಿದೆ. ಇದಕ್ಕೆ ಕಾರಣ ಬಲೋಚೀ ಭಾಷೆ. ಮೂಲ ದ್ರಾವಿಡ ವ್ಯಂಜನಗಳನ್ನು ಅಷ್ಟಾಗಿ ಕಳೆದುಕೊಳ್ಳದಿದ್ದರೂ, ಮೂಲಸ್ವರ ವ್ಯವಸ್ಥೆಯನ್ನು ತನ್ನ ಪರಿಸರದ ಭಾಷೆಗಳಿಗೆ ಹೊಂದಿಕೊಳ್ಳುವಂತೆ ಮಾರ್ಪಡಿಸಿಕೊಂಡಿದೆ :

ಅ ಆ ಇ ಈ
ಉ ಊ ಏ ಓ

ಎಂಬ ಎಂಟು ಸ್ವರಗಳು ಬ್ರಾಹೂಈ ಭಾಷೆಯಲ್ಲಿವೆಯೆಂದು ಎಮಿನೊ ಅವರು ಬರೆದಿದ್ದಾರೆ; ಡೇನಿಸ್ ಬ್ರೇ ಹಿಂದೆ ಸ್ವಲ್ಪ ತಪ್ಪಾಗಿ ಹೇಳಿದುದನ್ನು ತಿದ್ದಿದ್ದಾರೆ.

The Brahui vowel system has lost*e and* o of proto-Dravidian and is completely assimilated to the Balochi system. No other neighbouring language has a vowel system quite like that of these two languages.[2] ಮೂಲದ್ರಾ *ಎ → ಅ : ಇ ; *ಒ → ಓ

---

[1] ಹಿಂದೂಸ್ಥಾನಿ ಭಾಷೆಯ ವ್ಯಾಕರಣದೊಡನೆ ಜಿಪ್ಸಿ ಭಾಷೆಯ—The Language of Gypsies—ನಿಯಮಗಳು ಹೊಂದುತ್ತವೆಯೆಂದು ಹಲವರು ಹೇಳುವರು. ಆದರೂ ಈ ಹೇಳಿಕೆಯ ವಿಚಾರದಲ್ಲಿ ಭಿನ್ನಾಭಿಪ್ರಾಯವೂ ಇದೆಯೆಂಬುದನ್ನು ಮರೆಯಬಾರದು. ಅಲ್ಲದೆ ಇದರಲ್ಲಿ ಸ್ಪ್ಯಾನಿಷ್ ಉಪಭಾಷೆ, ಇಂಡಿಕ್ ಉಪಭಾಷೆ ಎಂಬ ವ್ಯತ್ಯಾಸಗಳೂ ಇವೆಯಾದುದರಿಂದ ಇದರ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ ಆಗಬೇಕಾಗಿದೆ.

[2] *Bilingualism and Structural Borrowing*, p. 440

ಆಗಿದೆ. ಈ ಭಾಷೆಯಲ್ಲಿ ಅ ಎಂಬ ಪ್ರತ್ಯಯವೇ ಕೆಲವು ಕ್ರಿಯಾ ಪದಗಳಿಗೆ ಉಪಸರ್ಗವೂ ಆಗಿ ಪರಿಣಮಿಸುತ್ತದೆ ; ಈ ಬಗೆಯ ಉಪಸರ್ಗ ಸೇರುವುದು ಇತರ ದ್ರಾವಿಡ ಭಾಷೆಗಳಲ್ಲಿ ಇಲ್ಲ. ಪರ್ಶಿಯಾ ಭಾಷೆಯ ಕೆಲವು ಉಪ ಭಾಷೆಗಳಲ್ಲಿ ಈ ಉಪಸರ್ಗವಿದ್ದರೂ, ವಾಸ್ತವವಾಗಿ ಬ್ರಾಹೂಈ ಭಾಷೆ ಬಲೋಚಿ ಭಾಷೆಯಿಂದಲೇ ಇದನ್ನು ಸ್ವೀಕರಿಸಿರಬೇಕು. ಉತ್ತಮಪುರುಷ ಬಹುವಚನದ ಸರ್ವನಾಮದಲ್ಲಿ ಉಳಿದ ದ್ರಾವಿಡ ಭಾಷೆಗಳಲ್ಲಿ ಕಾಣುವ ವ್ಯಾವರ್ತಕ ಹಾಗೂ ಅಭಿವ್ಯಾಪಕವೆಂಬ ವಿಂಗಡಣೆ ಬ್ರಾಹೂಈ ಭಾಷೆಯಲ್ಲಿ ಇಲ್ಲ.

ಹೀಗೆಯೇ ದ್ರಾವಿಡ ಭಾಷೆಗಳಿಗೆ ಸಹಜವಾದ ಲಿಂಗವಿಭಾಗವನ್ನೂ ಬ್ರಾಹೂಈ ಕಳೆದುಕೊಂಡಿದೆ.[1] ಇದರ ಆಕೃತಿಮಾಗಳು ಡ್ರಾವಿಡ ಭಾಷೆಯವೇ ಆಗಿದ್ದರೂ, ಕೆಲವೊಮ್ಮೆ ಅವುಗಳ ರಚನೆ ಇರಾನಿಯನ್ನನುಸರಿಸಿವೆ.[2] ನಿ(=ನೀವು) ನುಮ್ (ನೀನು) ಎಂಬ ಅಲ್ಪ ಪ್ರಾಣಾಕ್ಷರಗಳ ಜೊತೆಗೆ ಫ ಧ್ವನಿಯೂ ಬಳಕೆಯಲ್ಲಿದೆ. ಬ್ರಾಹೂಈಯ ಸಂಖ್ಯಾವಾಚಕಗಳಲ್ಲಿ ಮೊದಲ ಮೂರರ, ಅಂದರೆ ಒಂದರಿಂದ ಮೂರರವರೆಗೆ ಮಾತ್ರ ದ್ರಾವಿಡ ಭಾಷೆಗೆ ಸೇರಿದ ಪದಗಳೇ ರೂಢಿಯಲ್ಲಿವೆ. ಆದರೂ ಅಲ್ಲಿಂದಾಚೆಗೆ, ಅಂದರೆ ನಾಲ್ಕನೆಯ ಸಂಖ್ಯೆಯಿಂದ, ಅನ್ಯದೇಶೀಯ ಮಾತುಗಳೇ ಬಳಕೆಯಲ್ಲಿವೆ. ಮುಸಿತ್ ಎಂಬುದು ಮೂರು ಎಂಬ ಸಂಖ್ಯಾವಾಚಿಯಾದ ಪದ—ಇದು ಮೂಜಿ(=ಮೂರು) ಎಂಬ ತುಳು ಪದದೊಡನೆ ಹೋಲುತ್ತದೆ. ಬ್ರಾಹೂಈ ಭಾಷೆಯಲ್ಲಿ ಸರ್ವನಾಮ ಏಕವಚನ, ಮಧ್ಯಮ ಪುರುಷ—ನೀ (=ನೀನು) ಬಹುವಚನ ನುಮ್ (=ನೀವು) : ಕನ್ನಡ ನೀವ್ ಎಂಬುದರೊಡನೆ ತುಲನೆಮಾಡಿ ನೋಡಬಹುದು.

ಉತ್ತಮ, ಮಧ್ಯಮ ಪುರುಷ ಬಹುವಚನ ಪ್ರತ್ಯಯಗಳು ಉಳಿದ ದ್ರಾವಿಡ ಭಾಷೆಗಳಲ್ಲಿ ಇರುವಂತೆಯೇ ಬ್ರಾಹೂಈ ಭಾಷೆಯಲ್ಲೂ ಇವೆ. ಡೇನಿಸ್ ಬ್ರೇ ಎಂಬುವರು ಈ ಬ್ರಾಹೂಈ ಭಾಷೆಯನ್ನು ಅಭ್ಯಾಸಮಾಡಿ ಒಂದು ಒಳ್ಳೆಯ ವ್ಯಾಕರಣವನ್ನು ಸಿದ್ಧಪಡಿಸಿದ್ದಾರೆ.[3] ಬ್ರಾಹೂಈಗಳು ಇಸ್ಲಾಮ್ ಧರ್ಮಾನುಯಾಯಿಗಳಾದ ದ್ರಾವಿಡ ಜನಾಂಗ. ಭಾರತ ವಿಭಜನೆಯಾದ ಮೇಲೆ ಹರಪ್ಪ—ಮೊಹೆಂಜೊದಾರೊಗಳೂ, ಬ್ರಾಹೂಈ ಭಾಷಾ ಪ್ರದೇಶವೂ ಪಾಕಿಸ್ತಾನಕ್ಕೆ ಸೇರಿದೆ. ಮೇಲೆ ವಿವರಿಸಿದ ನೆರೆ

---

[1] Prof. M. B. Emoneall, *Phonetic Observations on the Brahui Language*, BSOS, 8, 1935-37, p. 981-83

[2] ಬ್ರಾಹೂಈ ಭಾಷೆಯನ್ನು ಬಲೋಚೀ, ಪಷ್ತೋ, ಸಿಂಧೀ, ಜಟ್ಕೀ ಭಾಷೆಗಳನ್ನು ಆಡುವವರೂ ಬಳಸುವುದರಿಂದ ಈ ಭಾಷೆಯಲ್ಲಿ ಸಂಕರ ಉಂಟಾಗಿದೆ. ಬ್ರಾಹೂಈಗಳೂ ಬಲೋಚೀ ಭಾಷೆಯನ್ನು ಆಡುವರು. ಈ ದ್ವಿಭಾಷಿತ್ವದಿಂದಾಗಿ ಈ ಭಾಷೆಗಳಲ್ಲಿ ಪರಸ್ಪರ ಪ್ರಭಾವ ಬಿದ್ದಿದೆ. ತೊದ, ಕುರುಖ್, ಮಲ್ತೊ ಭಾಷೆಗಳಿಗಿಂತ ಬ್ರಾಹೂಈ ಭಾಷೆಯಲ್ಲಿ ದ್ರಾವಿಡ ಪದಗಳು ಕಡಮೆಯಾಗಿವೆ !

[3] Denys De S. Bray, *The Brahui Language*, Calcutta, I, II, III (Volumes) 1909–1934

ಹೊರೆಯ ಭಾಷೆಗಳ ಪರಿಸರದ ಪರಿಣಾಮದಿಂದಲ್ಲದೆ, ಇವರು ಮುಸ್ಲಿಮ್ ಧರ್ಮವನ್ನು ಅನುಸರಿಸುವ ಪಂಗಡದವರಾದುದರಿಂದಲೇ ಇರಬೇಕು, ಇತ್ತೀಚೆಗೆ ಬ್ರಾಹೂಈಗಳ ಭಾಷೆ ದ್ರಾವಿಡ ಭಾಷೆಯ ಮಾತುಗಳನ್ನು ಕಳೆದುಕೊಳ್ಳತೊಡಗಿದೆ.[1]

Brahui would show a much higher proportion of words from Iranian, Sindhi, and Hindustani.[2]

ಬ್ರಾಹೂಈಗಳು ಸಂಖ್ಯೆಯಲ್ಲಿ ಸುಮಾರು ಎರಡು ಲಕ್ಷ ಜನರಿದ್ದಾರೆ. ಕುರುಖ್ ಜನಾಂಗದಂತೆ ಬ್ರಾಹೂಈಗಳೂ ಒಂದು ಕಡೆಯಿಂದ ಇನ್ನೊಂದು ಕಡೆಗೆ ವಲಸೆ ಹೋಗುವ ಸ್ವಭಾವದವರು. ೧೯೩೧ರ ಜನಗಣತಿಯಂತೆ ಬ್ರಾಹೂಈಗಳ ಸಂಖ್ಯೆ—೨೦೭,೪೧೫. ಇವರಲ್ಲಿ ೧೮೨,೫೮೮೭ ಜನ ಬಲೂಚಿಸ್ಥಾನದಲ್ಲೂ, ೧,೮೨೭ ಜನ ಸಿಂಧ್‌ನಲ್ಲೂ ಇದ್ದರೆಂದು ತಿಳಿದುಬಂದಿದೆ.

[1] M. B. Emeneau, *Brahui and Dravidian Comparative Grammar*, 1962, ಈ ಪುಸ್ತಕದ ಪುಟ ೪೭ರಿಂದ ಪುಟ ೬೨ರವರೆಗೆ ಇರಾನಿಯ ಮತ್ತು ಇಂಡೊ-ಆರ್ಯ ಭಾಷೆಗಳ ಪ್ರಭಾವವನ್ನು ವಿವರಿಸಿದ್ದಾರೆ.

[2] *Dravidian Borrowings from Indo-Aryan*, p. 3

# ಕುಈ ಭಾಷೆ

ಅಸಂಸ್ಕಾರ ದ್ರಾವಿಡ ಭಾಷೆಗಳಲ್ಲಿ ಕುಈ ಭಾಷೆಗೆ ಜೇಗನೆ ಅದೃಷ್ಟ ಕಣ್ಣು ತೆರೆಯಿ ತೆನ್ನಬಹುದು. ಈ ಭಾಷೆಯ ವ್ಯಾಕರಣ ಹಾಗೂ ಗದ್ಯಗಳನ್ನು ಕುರಿತು ಸಾಧಾರಣ ವಾದ ಕೆಲಸ ಈ ಶತಮಾನದ ಆದಿಯ ಒಂದೆರಡು ದಶಕಗಳಲ್ಲೇ ನಡೆಯಿತು. ಇವುಗಳಲ್ಲಿ ವಿನ್‌ಫೀಲ್ಡ್ ಅವರು ಸಿದ್ಧಪಡಿಸಿರುವ 'ಕುಈ ಭಾಷೆಯ ವ್ಯಾಕರಣ'— ಗಮನಾರ್ಹ ಕೃತಿಯಾಗಿದೆ.[1] ಅವರು ಈ ಭಾಷೆಯ ಪದಸಂಪತ್ತನ್ನೂ ಪಟ್ಟಿಮಾಡಿ ಕೊಟ್ಟಿದ್ದಾರೆ.[2] ಅವರೆ ಈ ವೇಳೆಗಾಗಲೆ ಲಿಂಗುಮ್ ಲೆಚ್ಮಜೀ ಮತ್ತು ಫ್ರೆಂಡ್ ಪೆರೈರ ಎಂಬಿಬ್ಬರಲ್ಲದೆ ಇನ್ನೂ ಇತರ ವಿದ್ವಾಂಸರು ಪ್ರಾರಂಭದ ಕೃಷಿ ಮಾಡಿದ್ದರು.[3] ಕುಈ ಭಾಷೆ ಪೂರ್ವ ದ್ರಾವಿಡದಿಂದ ಸ್ವತಂತ್ರವಾಗಿ ಒಡೆದು ನಿಂತ ಭಾಷೆಯೆಂದು ವಿದ್ವಾಂಸರ ಅಭಿಪ್ರಾಯ. ಕುಈಂಗರು ಆಡುವ ಈ ಕುಈ ಭಾಷೆ ಇಂದಿಗೂ ಹೆಚ್ಚು ಜನರ ಭಾಷೆಯಾಗಿ ಉಳಿದಿದೆ. ಸುಮಾರು ಆರು ಲಕ್ಷಕ್ಕಿಂತಲೂ ಅಧಿಕ ಸಂಖ್ಯೆಯಲ್ಲಿ ಇರದ ಈ ಕುಈಂಗರು ಒರಿಸ್ಸಾ ಸಂಸ್ಥಾನದಲ್ಲಿ ಬಹುವಾಗಿ ವಾಸಿಸುತ್ತಿದ್ದಾರೆನ್ನ ಬಹುದು. ಅಲ್ಲದೆ ಒರಿಸ್ಸಾದಲ್ಲಿ ಹರಿಯುವ ಮಹಾನದಿಯ ಅಕ್ಕಪಕ್ಕಗಳಿಂದ ಮೊದಲು ಗೊಂಡು ಆಂಧ್ರ ಪ್ರದೇಶದ ವಿಶಾಖಪಟ್ಟಣದವರೆಗೂ ಈ ಕುಈಂಗರು ಇದ್ದಾರೆ.

ಕುಈ ಭಾಷೆಯನ್ನು ಆಡುವವರನ್ನು ಕುಈಂಗರೆಂದು ಎಲ್ಲರೂ ಕರೆಯುವುದಿಲ್ಲ. ಕುಯಿ, ಕುವಿ, ಕಂಧ್, ಕಂಧಿ, ಕೊಂಧ್, ಖೊಂಡ್, ಖೊಂಡಿ, ಖೊಂಧಿ, ಕೊಂದ್, ಕೊಡು—ಹೀಗೆ ಹಲವು ಹೆಸರುಗಳನ್ನು ಇವರಿಗೆ ಹೇಳಿದೆ. ಕೊಂಡ್ ಜನಾಂಗನೆಂಬು

---

[1] Rew. W. W. Winfield, *A Grammar of the Kui Language*, 1928

[2] *A Vocabulary of the Kui Language*, 1929

[3] (ಅ) Lingum Letchmajee, *An Introduction of the Grammar of the Kui or Kandh Language*, First Ed. 1853, II Ed, 1902, Calcutta.

(ಇ) Friend Pereira J. E., *A Grammar of the kui Language*, 1909, Calcutta.

(ಉ) Schulze, *A Grammar of the Kuvi Language*, v. p. 1911

ದನ್ನು ಒಪ್ಪಿಕೊಂಡರೆ ಅದರ ನಿಷ್ಪತ್ತಿಯನ್ನು (ತೆಲುಗು) ಕೊಂಡ (=ಬೆಟ್ಟ) ಗಳಲ್ಲಿ ವಾಸಿಸುವವರೇ ಕೊಂಡರೆಂದು ಹೇಳಬಹುದು. ಆದರೆ ಕೊಂಡರಲ್ಲಿ ಬಹುಮಟ್ಟಿಗೆ ತಮ್ಮನ್ನು ಕೂಯಿಂಗರೆಂದೂ, ತಮ್ಮ ಭಾಷೆಯನ್ನು ಕುಯಿ ಎಂದೂ ಕರೆಯುವರು; ಆಂಧ್ರದ ಸಮೀಪದಲ್ಲೂ, ವಿಶೇಷವಾಗಿ ವಿಶಾಖಪಟ್ಟಣದ ಸುತ್ತಲೂ ಇರುವ ಕೊಂಡರು ತಮ್ಮನ್ನು ಕೊವಿಂಗರೆಂದೂ ಮತ್ತು ತಮ್ಮ ಭಾಷೆಯನ್ನು ಕೂವಿ ಎಂದು ಹೇಳಿಕೊಳ್ಳುವರು. ಬಹುಶಃ ಈ ಎಲ್ಲ ವಿವಿಧ ರೂಪಗಳಿಗೂ ಮೂಲಧಾತು 'ಕೂ' ಎಂಬುದಿರಬೇಕು; ಕೂಯಿಂಗ, ಕೂವಿಂಗ ಎಂಬುವು ಬಹುವಚನ ರೂಪಗಳಿರಬೇಕು. ಭಾಷಾಶಾಸ್ತ್ರಜ್ಞರೇನೋ ಈ ಜನಾಂಗವನ್ನು ಕುಯಿಂಗರೆಂದೇ ಕರೆಯುವರಾದರೂ ದ್ರಾವಿಡ ಜನರೇ ಆದ ಒರಿಯಾ ಜನಾಂಗದವರು ಈ ಕುಯಿಂಗರನ್ನು 'ಕಂಧ್, ಕಂಧಿ, ಕೊಂಧ್' ಎಂದು ಕರೆಯುವರು. ಹಾಗೆಯೇ ಇವರನ್ನು ಕೊಡು ಜನಾಂಗ ದವರೆಂದು ತೆಲುಗರು ಹೇಳುವರು. ಇಲ್ಲಿ ನಾವು ಅನುಕೂಲದ ದೃಷ್ಟಿಯಿಂದ ಕುಯಿಂಗ ರೆಂದೇ ನಿರ್ದೇಶಿಸುವೆವು—ಅವರಲ್ಲೇ ಕೆಲವರು ಈ ಹೆಸರನ್ನು ಬಳಸುವರು.

ಒರಿಯಾಗಳ ದೆಸೆಯಿಂದಾಗಿ ಕುಯಿಂಗರ ಪ್ರಗತಿ ದಿನೇ ದಿನೇ ಕುಂಠಿತವಾಗ ತೊಡಗಿದೆ. ಏಕೆಂದರೆ ಕುಯಿಂಗರ ಉತ್ತರ, ಪೂರ್ವ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಸುತ್ತುವರಿದಂತೆ ಆವರಿಸಿಕೊಂಡಿರುವ ಒರಿಯಾಗಳ ಪ್ರಭಾವದಿಂದಾಗಿ ಒರಿಯಾಗಳು ಆಡುವ ನುಡಿಯ ಪದಗಳೂ, ಪದಪುಂಜಗಳೂ ಕುಯಿ ಭಾಷೆಯಲ್ಲಿ ಕೂಡಿಕೊಳ್ಳ ತೊಡಗಿವೆ. ಆದರೂ ಬ್ರಾಹೂಈ ಭಾಷೆಯಂತೆ ಕುಯಿ ಭಾಷೆಯ ವ್ಯಾಕರಣ ಸ್ವರೂಪ ಮಾತ್ರ ಇನ್ನೂ ಮೊದಲಿನಂತೆಯೇ ಅಬಾಧಿತವಾಗಿ ನಿಂತು ತಾನು ದ್ರಾವಿಡ ಸದಸ್ಯನೆಂದು ಸಾರುತ್ತಿದೆ. ಈ ಮೊದಲೇ ತಿಳಿಸಿರುವಂತೆ ಕುಯಿಂಗರು ಒರಿಸ್ಸಾದ ಮಹಾನದಿಯ ತೀರಪ್ರದೇಶದಲ್ಲೂ, ವಿಶಾಖಪಟ್ಟಣದ ಉತ್ತರ ಭಾಗಕ್ಕೂ ಇರುವ ಪರ್ವತ ಪ್ರದೇಶದಲ್ಲಿ ಹೆಚ್ಚಾಗಿ ವಾಸಿಸುವರು. ಇವೆರಡು ಮುಖ್ಯ ಪ್ರದೇಶಗಳಲ್ಲದೆ ಅಸ್ಸಾಮಿನ ಟೀ ತೋಟಗಳ ಭಾಗದಲ್ಲೂ ಕುಯಿಂಗರು ನೆಲಸಿದ್ದಾರೆ. ಇವರು ಆಧುನಿಕ ರೀತಿನೀತಿಗಳಿಗೆ ಇನ್ನೂ ಮಾರುಹೋಗಿಲ್ಲ, ಹೊರಗಿನ ನಾಗರಿಕ ಸಂಪ್ರದಾಯಗಳ ಸಂಪರ್ಕ ಪಡೆದಿಲ್ಲ.

> . . .the konds still have very little acquaintance with the world at large, most of them are animists in religion, and their social organisation rarely progress beyond the village community or the group of villages in a small section of the country. All this is reflected in their Vocabulary. It abounds in terms for concrete objects, but contains few for abstract ideas. . .[1]

[1] *A Vocabulary of the Kui Language*, 1929, p. vii

ಕುಯಿಂಗರು ಆಡುವ ಕುಯಿಶಾ ಭಾಷೆಯನ್ನು ಗೋಂಡಿ, ತುಳು, ಒರಾಓನ್ ಭಾಷೆಗಳ ಗುಂಪಿನಲ್ಲಿ ಸೇರಿಸಬಹುದು. ಕುಯಿಶಾ ಭಾಷೆ ವ್ಯಾಕರಣದ ಹಾಗೂ ಪದಸಂಪತ್ತಿನ ದೃಷ್ಟಿಯಿಂದ ಕನ್ನಡ, ತೆಲುಗು, ತಮಿಳು ಭಾಷೆಗಳೊಡನೆ ಹೋಲುತ್ತದೆಯಾದರೂ ತೆಲುಗು ಭಾಷೆಗೆ ಸಮೀಪತರವಾಗಿದೆ. ಕುಯಿಶಾ, ಗೋಂಡಿ, ಕುರುಖ್, ಮಲ್ತೊ, ತೆಲುಗು—ಈ ಭಾಷೆಗಳಲ್ಲಿ ಸ್ತ್ರೀವಾಚಕ ಏಕವಚನ ಸರ್ವನಾಮ ಪ್ರತ್ಯೇಕವಾಗಿ ಇಲ್ಲ ; ಆದರೆ ಅದರ ಬದಲು ಅವರು ನಪುಂಸಕಲಿಂಗದ ಏಕವಚನ ರೂಪವನ್ನೇ ಬಳಸುವರು. ತಮಿಳು ಭಾಷೆಯಲ್ಲಿ ಇರುವಂತೆ ಕುಯಿಶಾ ಭಾಷೆಯಲ್ಲೂ ಮಹಾಪ್ರಾಣ ವ್ಯಂಜನಗಳ ಉಪಯೋಗ ಇಲ್ಲ.

ಕುಯಿಶಾ ಭಾಷೆ ಖೊಂಡ್‌ಮಾಲ್, ಗಂಜಾಮ್, ಫಲ್‌ಬನಿ—ಈ ಮೊದಲಾದ ಜಿಲ್ಲೆಗಳಲ್ಲೂ ಪ್ರಚುರದಲ್ಲಿದೆ. ಆದರೆ ಈ ಕುಯಿಂಗರಲ್ಲಿ ಆಂಧ್ರ ಪ್ರದೇಶದ ವಿಶಾಖಪಟ್ಟಣದ ಉತ್ತರಕ್ಕೆ ಇರುವವರು 'ಕುವಿ' ಭಾಷೆಯನ್ನು ಆಡುವರು. ಕುಈ ಭಾಷೆಗೆ ಲಿಪಿ ಇಲ್ಲವಾಗಿ—ಇದರ ಸಾಹಿತ್ಯವೂ ಅಷ್ಟಾಗಿ ಇಲ್ಲ—ಹಿಂದೆ ತೆಲುಗು ಲಿಪಿಯನ್ನು ಹೆಚ್ಚಾಗಿ ಬಳಸುತ್ತಿದ್ದರು. ಆದರೆ ಈಗ ಒರಿಯಾ ಭಾಷೆಯ ಲಿಪಿಯೇ ಬಹುಮಟ್ಟಿಗೆ ರೂಢಿಯಲ್ಲಿದೆ. ಇದರ ಜೊತೆ ಜೊತೆಗೆ ರೋಮನ್ ಲಿಪಿಯೂ ಪ್ರಚಾರದಲ್ಲಿದೆ. ಇತ್ತೀಚೆಗೆ ಈ ಭಾಷೆಯಲ್ಲಿ ಕೆಲವು ಪುಸ್ತಕಗಳೂ ಹೊರಬರುತ್ತಿವೆ. ಬೈಬಲ್ಲಿನ ಒಡಂಬಡಿಕೆಗಳು (ರೋಮನ್ ಲಿಪಿಯಲ್ಲಿ) ಈ ಭಾಷೆಗೂ ಅನುವಾದವಾಗಿವೆ. ಕುಈ ಭಾಷೆಯನ್ನು ರೆವರೆಂಡ್ ಕಾಲ್ಡ್‌ವೆಲ್ ಕು ಭಾಷೆ—ಎಂದಷ್ಟೇ ಕರೆದಿದ್ದಾನೆ. ೧೯೬೧ರ ಜನಗಣತಿಯ ವರದಿಯಂತೆ ಕುಯಿಶಾ ಭಾಷೆ ಆಡುವವರ ಸಂಖ್ಯೆ—೫೧೧,೯೦೭. ಸರ್ ಜಾರ್ಜ್ ಗ್ರಿಯೆರ್ಸನ್ ಕುಯಿಶಾ ಭಾಷೆಯನ್ನು ಖೊಂಡ್ ಭಾಷೆಯ ಜೊತೆಯಲ್ಲಿ ಸೇರಿಸಿಬಿಟ್ಟಿದ್ದನು. ಆದರೆ ಆಧುನಿಕ ವಿದ್ವಾಂಸರ ಅಭಿಪ್ರಾಯದ ಅನುಸಾರವಾಗಿ ಕುಈ ಒಂದು ಪ್ರತ್ಯೇಕ ಭಾಷೆಯಾಗಿ ಪರಿಗಣಿಸಲು ಅರ್ಹವಾಗಿದೆ.

ಕೆಲವು ಕುಯಿಶಾ ಶಬ್ದಗಳು :

| ಕನ್ನಡ | ಕುಈ | | |
|---|---|---|---|
| ಅದು | ಅದು | | |
| ತಮ್ಮಂದು | ತಮದು | | |
| ನಿನ್ನವು | ನಿನವ | | |
| ಬೇರೆಯುವನು | ಪಿಜಿನ್ | ಹೋ : ಹ. ಗ. | ಪೆಜಿನ್ |
| ಬೇರೆಯುವಳು | ಪಿಜಿಳ್ | ,, | ಪೆಜಿಳ್ |
| ಬೇರೆಯುವರು | ಪಿಜಿರ್ | ,, | ಪೆಜಿರ್ |
| ಬೇರೆಯುದು | ಪಿಜಿಂದು | ,, | ಪೆಜಿತು |
| ಬೇರೆಯುವು | ಪಿಜಿ | ,, | ಪೆಜಿವು |

| | | | | | |
|---|---|---|---|---|---|
| ಮೂಲದ್ರಾ*-ಕ್- | ಕುಈ | ಗ್ | | | |
| | ಕುವಿ | ಯ್ | | | |
| *ಚ್- | ಕುಈ | ಸ್ | | | |
| | ಕುವಿ | ಹ್ | | | |
| *ಚ್ಚ್ | ಕುಈ | ಸ್ | | | |
| | ಕುವಿ | ಚ್ಚ್\|ಚ್ | | | |
| *ಟ್- | ಕುಈ | ಡ್\|ರ್ | | | |
| | ಕುವಿ | ತ್\|ದ್ | | | |
| *ಟ್ಟ್ | ಕುಈ | ಟ್ | | | |
| | ಕುವಿ | ತ್ತ್ | *ಯ್ | ಕುಈ | ಜ್ |
| *ಣ್ | ಕುಈ | ನ್\|ಣ್ | | ಕುವಿ | ಯ್ |
| | ಕುವಿ | ನ್ | | | |

೧೬

# ಕುವಿ ಭಾಷೆ

ಕುವಿ ಭಾಷೆ ಒರಿಯಾ ಮತ್ತು ತೆಲುಗು ಭಾಷೆಗಳ ಗಡಿಯ ನಡುವೆ ದ್ವಿಮುಖಿಯಾದ ಪ್ರಭಾವಕ್ಕೆ ಒಳಗಾಗಿ ಬಾಳುತ್ತಿದೆ. ಕುವಿ ಭಾಷೆ, ಕುಯಿ ಭಾಷೆಯ ಸಮೀಪದ ಭಾಷೆ. ಬಹುಕಾಲದವರೆಗೂ ಈ ಎರಡು ಭಾಷೆಗಳನ್ನೂ ಒಂದೇ ಭಾಷೆಯಾಗಿ ಭಾಷಾ ವಿಜ್ಞಾನಿಗಳೂ ಕೂಡ ಪರಿಗಣಿಸುತ್ತಿದ್ದರು. ಈಗ ಕುವಿ ಭಾಷೆಯನ್ನು ಕುಯಿ ಭಾಷೆಯ ಉಪಭಾಷೆಯಾಗಿಯೂ ಪರಿಗಣಿಸದೆ ಒಂದು ಸ್ವತಂತ್ರ (ಪ್ರತ್ಯೇಕ) ದ್ರಾವಿಡ ಭಾಷೆಯಾಗಿ ವಿವೇಚಿಸುವರು. ಧ್ವನಿವ್ಯವಸ್ಥೆ ಪದಸಂಪತ್ತು ಹಾಗೂ ವ್ಯಾಕರಣಗಳ ವಿವರಣೆಯಲ್ಲಿ ಕುವಿ ಭಾಷೆ ಕುಯಿ ಭಾಷೆಯನ್ನು ಬಹುಮಟ್ಟಿಗೆ ಹೋಲುತ್ತದೆಯಲ್ಲದೆ, ಈ ಭಾಷೆಗಳನ್ನು ಆಡುವ ಜನಾಂಗವೂ ಒಂದೇ ಆಗಿ ತೋರುತ್ತದೆ. ಕುವಿ ಭಾಷೆಯನ್ನು ಕುರಿತು ಈ ಶತಮಾನದ ಪ್ರಾರಂಭದಿಂದಲೂ ಕೆಲಸ ನಡೆದಿದೆ. ಕೆಲವು ಮುಖ್ಯ ಗ್ರಂಥಗಳನ್ನು ಇಲ್ಲಿ ಹೆಸರಿಸಿದೆ :

1. F. V. P. Schulze, *A Grammar of the Kuvi Language*, Madras, 1911.
2. A. G. Fitzerald, *Kuvinga Bassa*, The Khond Language as spoken by the Parjes of the Madras Presidency, Calcutta, 1933.
3. F. V. P. Schulze, *Vocabulary of Kuvi-Kond Language*, Madras, 1913.

ಕೆಲವು ಕುವಿ ಭಾಷೆಯ ಪದಗಳನ್ನು ಆರಿಸಿಕೊಂಡು ಅವನ್ನು ಕನ್ನಡ ಭಾಷೆಯ ಪದಗಳೊಡನೆ ತುಲನೆಮಾಡಿ ನೋಡಬಹುದು.

| ಕನ್ನಡ | ಕುವಿ |
|---|---|
| ಕೀವು | ಸೀವೆಸಿ |
| ಕೆರ್ಪು | ಸೆಪ್ಪ |
| ಕಿಚ್ಚು | ಹೀಚೂ |

| | |
|---|---|
| ಕಚ್ಚು | ಕಥಲಿ |
| ತಲೆ | ತ್ರಾಯು |
| ಕಿವಿ | ಕಿರಿಯು > ಕ್ರೀಯು |
| ಪಲ್ > ಹಲ್ಲು | ಪಲ್ಲು |
| ಏನು | ಏನ |
| ಆಕ್ಕಿ | ಮಂಜಿ |
| ಕೆಯ್ > ಕೈ | ಕೇಯು |
| ತೂಪು | ಹೂಪಲಿ |
| ಪೊಕ್ಕುಳ | ಪೂಲೆರಿ |
| ಸೀರು | ಹೀರು |

| | |
|---|---|
| ಮೂಲದ್ರಾ.* -ಕ್- : ಯ್ | *-ಟ್- : ದ್, ತ್ |
| * ಕ್ಕ್- : ಕ್ | * ಟ್ಟ್ : ತ್ತ್ |
| * ಚ್- : ಹ್ | *-ಱ್ : ಜ್ |
| *-ಚ್- : ಹ್ | * ಣ್ : ನ್ |
| ಳ್ : ಲ್—* ಳ್ : ಲ್ | * ೞ್ : ರ್, ಲ್ |

# ಪೆಂಗು ಭಾಷೆ

ಪೆಂಗು ಎಂಬ ಹೆಸರಿನ ದ್ರಾವಿಡ ಭಾಷೆಯೊಂದು ಇದೆಯೆಂದು ಇತ್ತೀಚೆಗೆ ಕಂಡು ಹಿಡಿಯಲಾಯಿತು. ಪ್ರಾಧ್ಯಾಪಕ ಟಿ. ಬರೊ ಮತ್ತು ಸುಧಿಭೂಷಣ ಭಟ್ಟಾಚಾರ್ಯ ಎಂಬ ಇಬ್ಬರು ಭಾಷಾವಿಜ್ಞಾನಿಗಳು ೧೯೫೭ ಮತ್ತು ೧೯೫೮ರ ಅವಧಿಯಲ್ಲಿ ನಡಸಿದ ಸಂಶೋಧನೆಯ ಫಲವಾಗಿ ಪೆಂಗು ಭಾಷೆ ಬಯಲಿಗೆ ಬಂದಿತು. ಪೆಂಗು ಎಂಬುದೂ ದ್ರಾವಿಡ ಗುಂಪಿಗೆ ಸೇರಿದ ಭಾಷೆಯಾಗಿದ್ದು, ಈ ಹಿಂದೆ ಇದರ ಬಗೆಗೆ ಸಾಕಷ್ಟು ಮಾಹಿತಿ ದೊರೆತಿರಲಿಲ್ಲ. ಪೆಂಗು ಭಾಷೆಯನ್ನು ಒರಿಸ್ಸಾ ಸಂಸ್ಥಾನದ ಕೊರಾಪುತ್ ಜಿಲ್ಲೆಯ ಉತ್ತರಭಾಗಕ್ಕೆ ಮತ್ತು ಕಲಹಂದಿ ಜಿಲ್ಲೆಯ ಗಡಿಗಳಲ್ಲಿ ಇರುವ ಜನರು ಆಡುತ್ತಾರೆ.

ಈ ಶತಮಾನದ ಪ್ರಾರಂಭದ ದಶಕದಲ್ಲಿ ಭಾರತದ ಭಾಷೆಗಳ ಪರಿವೀಕ್ಷಣೆ ನಡೆಸಿದ ಜಿ. ಎ. ಗ್ರಿಯೆರ್ಸನ್ ಪೆಂಗು ಭಾಷೆಯನ್ನು ಕುಯಿ ಭಾಷೆಯೊಡನೆ ಸಮೀಕರಿಸಿದ್ದನು. ಪೆಂಗು ಭಾಷೆ, ವಿದ್ವಾಂಸರ ಅಭಿಪ್ರಾಯದಂತೆ, ದ್ರಾವಿಡ ಭಾಷೆಗಳಾದ ಕುಈ ಮತ್ತು ಕುವಿ ಎಂಬ ಭಾಷೆಗಳ ಸಮೀಪವರ್ತಿಯಾಗಿರುವಂತೆ ತೋರುತ್ತದೆ. ೧೯೬೧ರ ಜನಗಣತಿಯ ವರದಿಯಲ್ಲಿ ನಮೂದಿಸಿರುವಂತೆ ಪೆಂಗು ಭಾಷೆಯನ್ನು ಆಡುವವರ ಸಂಖ್ಯೆ ೧,೨೫೪. ಈ ಭಾಷೆಯ ಧ್ವನಿವ್ಯವಸ್ಥೆ ಮತ್ತು ವ್ಯಾಕರಣ ಸ್ವರೂಪಗಳನ್ನು ಕುರಿತ ಸಂಶೋಧನೆ ಇನ್ನೂ ಆಗಬೇಕಾಗಿದೆ. ಈ ಭಾಷೆಯನ್ನು ಪೆಂಗೊ ಭಾಷೆ ಯೆಂದೂ ಕರೆಯುವರು.

೧೮

# ಕೋಲಾಮಿ ಭಾಷೆ

ದ್ರಾವಿಡ ಭಾಷೆಗಳಲ್ಲಿ ಕೆಲವು ಭಾಷೆಗಳು ವಿದ್ವಾಂಸರ ಕಣ್ಣು ತಪ್ಪಿಸಿಕೊಂಡು ಕಣ್ಣು ಮುಚ್ಚಾಲೆಯಾಟ ಆಡುತ್ತಿದ್ದವೆನ್ನಬಹುದು. ಅವುಗಳಲ್ಲಿ ಈ ಕೋಲಾಮಿ ಭಾಷೆಯೂ ಒಂದು. ಕೋಲಾಮಿ—ಎಂಬ ಈ ದ್ರಾವಿಡ ಕುಟುಂಬದ ಭಾಷೆಯನ್ನು ಕುರಿತು ಎಂ. ಬಿ. ಎಮಿನೊರವರು *Kolami—A Dravidian Language* ಎಂಬ ಬಹು ಅಮೂಲ್ಯ ಕೃತಿಯನ್ನು ಸಿದ್ಧಪಡಿಸಿದ್ದಾರೆ. ಈ ಪ್ರೌಢ ಕೃತಿಯಲ್ಲಿ ಕೋಲಾಮಿ ಭಾಷೆಯ ವ್ಯಾಕರಣ ರೂಪವನ್ನೂ ವಿವೇಚಿಸಿದ್ದಾರೆ. ೧೯೩೭–೩೮ರಲ್ಲಿ ಕೇವಲ ಆರು ವಾರದವರೆಗೆ, ಅಂದು ಕೇಂದ್ರ ಸಂಸ್ಥಾನಕ್ಕೆ ಸೇರಿದ್ದ, ಆದರೆ ಇಂದು ಮಧ್ಯಪ್ರದೇಶದಲ್ಲಿ ಇರುವ, ದ್ರಾವಿಡ ವರ್ಗದ ಕೋಲಾಮಿಗಳು ಆಡುವ ಭಾಷೆಯಾದ ಕೋಲಾಮಿ ಭಾಷೆಯನ್ನು ಕುರಿತು ಎಂ. ಬಿ. ಎಮಿನೊ ಅವರು ಅಭ್ಯಾಸಮಾಡಿದರು.

ಈ ಅವಧಿಯಲ್ಲಿ ಅವರು ವಾರ್ಧಾದಲ್ಲಿ ಬೀಡುಬಿಟ್ಟಿದ್ದು ಇಬ್ಬರು ಭಾಷಾ ನಿವೇದಕರಿಂದ ತಮಗೆ ಬೇಕಾದ ಅಗತ್ಯ ವಿವರಗಳನ್ನು ಸಂಗ್ರಹಿಸಿದರು. ಅಲ್ಲಿಂದ ಮುಂದೆ ಪಿ. ಸೇತುಮಾಧವರಾವ್ ಎಂಬುವರು ೧೯೫೦ರಲ್ಲಿ ಹೈದರಾಬಾದು ಸಂಸ್ಥಾನದ ಗಡಿಯಲ್ಲಿನ ಕೋಲಾಮಿ ಭಾಷೆಯನ್ನು ಕುರಿತು ಒಂದು ಪುಸ್ತಕ ಬರೆದರು. ಮುಂದೆ ಎಮಿನೊ ಅವರು ಟಿ. ಬರೊ ಅವರೊಡನೆ ಅನೇಕ ವಿಚಾರಗಳಲ್ಲಿ ಪರಸ್ಪರ ವಿನಿಮಯ ನಡಸಿ *Kolami—A Dravidian Language* ಎಂಬ ಪುಸ್ತಕವನ್ನು ೧೯೫೫ರಲ್ಲಿ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದ ವತಿಯಿಂದ ಪ್ರಕಟಪಡಿಸಿದರು. ಈಗ ೧೯೬೧ರಲ್ಲಿ ಮತ್ತೆ ಅಣ್ಣಾಮಲೈ ವಿಶ್ವವಿದ್ಯಾಲಯದವರು ಅದರ ಎರಡನೆಯ ಮುದ್ರಣ ಮಾಡಿದ್ದಾರೆ. ಈ ಮಧ್ಯೆ ಕೋಲಾಮಿ ಭಾಷೆಯ ಪದಗಳನ್ನು—ಕಿನ್ವತ್‌ನಲ್ಲಿ ಕೇವಲ ಎರಡು ದಿನಗಳ ಅವಧಿಯಲ್ಲಿ, ಕಲಕತ್ತಾದ ಭಾರತೀಯ ವಸ್ತುಸಂಗ್ರಹಾಲಯದ ಅಧಿಕಾರಿಯಾದ ಸುಧಿಭೂಷಣ ಭಟ್ಟಾಚಾರ್ಯ ಮತ್ತು ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ಭಾಷೆಯ 'ಬೋಡೆನ್' ಪ್ರಾಧ್ಯಾಪಕರಾದ ಟಿ. ಬರೊ—ಈ ಇಬ್ಬರೂ ಕಲೆಹಾಕಿದರು.

ಮಧ್ಯಪ್ರದೇಶ ಮತ್ತು ಬೀರಾರಿನ ಭಾಗಗಳಲ್ಲಿ ಇರುವ ಆದಿವಾಸಿಗಳಾದ ಕೋಲಾಮಿ

ಗಳು ೧೯೩೧ರ ಜನಗಣತಿಯಂತೆ ೩೧,೭೬೩ ಜನರಿದ್ದಾರೆ. ಈ ಜನಸಂಖ್ಯೆಯಲ್ಲಿ= ೫,೯೮೭ ಜನ ಗಂಡಸರು ; ೧೫,೭೭೬ ಜನ ಹೆಂಗಸರು. ಮಧ್ಯಪ್ರದೇಶದ ಛಂದ, ಅಮ್ರೋತಿ (< ? ಅಮರಾವತಿ) ಜಿಲ್ಲೆಗಳಿಗಿಂತಲೂ ಬೀರಾರಿನ ಯೇತ್‌ಮಾಲ್ ಹಾಗೂ ವಾರ್ಧಾ ಜಿಲ್ಲೆ ಮತ್ತು ಹೈದರಾಬಾದ್ ಜಿಲ್ಲೆಗಳಲ್ಲಿ ಕೋಲಾಮಿಗಳು ಹೆಚ್ಚಿಗೆ ಇದ್ದಾರೆ. ೧೯೩೬ರ ಜನಗಣತಿಯಲ್ಲಿ ಕೋಲಾಮಿಗಳ ಸಂಖ್ಯೆ ೧೯೩೧ರ ಜನಗಣತಿಗಿಂತಲೂ ಸ್ವಲ್ಪ ಹೆಚ್ಚಿದೆ. ೧೯೩೬ರ ವರದಿಯಂತೆ ಇವರ ಲೆಕ್ಕ—೩೬,೫೯೫. ಹೈದರಾಬಾದಿನ ಅದಿಲಾಬಾದ್ ಮತ್ತು ಇತರ ಕಡೆಗಳಲ್ಲಿ ಇರುವ ಕೋಲಾಮಿಗಳ ಸಂಖ್ಯೆ ಈ ಲೆಕ್ಕದ ಹಿಡಿತಕ್ಕೆ ಸಿಕ್ಕಿಲ್ಲ. ಏಕೆಂದರೆ ಅಲ್ಲಿನ ಕೋಲಾಮಿಗಳನ್ನು ೧೯೪೧ರ ಖಾನೇಷುಮಾರಿಯಲ್ಲಿ ಗೋಂಡರ ಉಪಶಾಖೆಗಳಿಗೆ ಸೇರಿದವರೆಂದು ನಮೂದಿಸಲಾಗಿದೆ. ಸುಮಾರು ಮೂರು ನಾಲ್ಕು ಸಾವಿರ ಕೋಲಾಮಿಗಳು ಈ ಭಾಗದಲ್ಲಿ ಇರಬಹುದೆಂದು ಊಹಿಸಲಾಗಿದೆ. ಆದರೆ ಪಿ. ಸೇತುಮಾಧವರಾವ್ ಅವರು ಸುಮಾರು ಐದು ಸಾವಿರಕ್ಕಿಂತಲೂ ಹೆಚ್ಚಿನ ಕೋಲಾಮಿಗಳು ಹೈದರಾಬಾದು ಸಂಸ್ಥಾನದಲ್ಲಿ ಇರಬೇಕೆಂದು ಭಾವಿಸಿದ್ದಾರೆ. ಈ ಭಾಗದ ಕೆಲವು ಕೋಲಾಮಿಗಳು ಗೋಂಡಿ ಭಾಷೆಯನ್ನೂ, ಮತ್ತೆ ಕೆಲವರು ಮರಾಠಿಯನ್ನೂ, ಬಹಳ ಕಡಮೆ ಜನ ಹಿಂದೂಸ್ಥಾನಿ ಭಾಷೆಯನ್ನೂ ಆಡುವರು. ಆದರೂ

Excepting the Kolams of Sirpur and Chinnur, those living in the other taluks of Adilabad speak a fairly uniform Kolami Language.[1]

ಕೋಲಾಮಿ ಭಾಷೆಯಲ್ಲಿ ಸಾಹಿತ್ಯ ಕೃತಿಗಳು ಯಾವುವೂ ದೊರೆತಿಲ್ಲ. ಆದರೂ ಈ ಭಾಷೆಯಲ್ಲಿ ಕೆಲವು ಹಾಡುಗಳು ಇರುವಂತೆ ತಿಳಿದುಬಂದಿದೆ. ಇಂದು ಈ ಭಾಷೆಯೂ ನೆರೆಹೊರೆಯ ಬೇರೆಬೇರೆ ಪರಿವಾರದ ಭಾಷೆಗಳ ಪ್ರಭಾವಕ್ಕೆ ಒಳಗಾಗುತ್ತಿದೆ. ಸಂಖ್ಯಾವಾಚಿಗಳಲ್ಲಿ ಒಂದರಿಂದ ಐದರವರೆಗೂ ದ್ರಾವಿಡ ಪದಗಳೇ ಇವೆ. ಆದರೆ ಐದರ ಅನಂತರ ದ್ರಾವಿಡದ ಅಂಶ ಅಳಿದುಹೋಗಿ ಆರ್ಯವರ್ಗದ ಪ್ರಭಾವ ಕಾಣುತ್ತದೆ. ಉದಾ : ಅಕ್ರ (=ಹನ್ನೊಂದು), ತ್ಸವ್ದ (=ಹದಿನಾಲ್ಕು), ಪಂದ್ರ (=ಹದಿನೈದು), ಸತ್ರ (=ಹದಿನೇಳು), ಸಂಬರ್ (=ನೂರು)—ಎಂಬ ಸಂಖ್ಯಾವಾಚಿಗಳು ಈಗ ಅವರಲ್ಲಿ ನಿತ್ಯದ ರೂಢಿಯಲ್ಲಿವೆ. ವಾಸ್ತವವಾಗಿ ಹಾಗೂ ಚಾರಿತ್ರಿಕವಾಗಿ ಇವು ಮರಾಠಿ ಪದಗಳು—

Historically these words are Marathi in origin and are imperfectly Kolamized.[1]

---

[1] P. Sethumadhava Rao, *A Grammar of the Kolami Language*, 1950, p. 7

ಆದರೂ ಬ್ರಾಹೂಈ, ಮಲ್ತೊ, ಕುರುಖ್ ಭಾಷೆಗಳಿಗಿಂತಲೂ ಮೇಲು. ಕೋಲಾಮಿ ಭಾಷೆಯಲ್ಲಿರುವ ಧ್ವನಿಮಾಗಳನ್ನು ವಿಶ್ಲೇಷಿಸುತ್ತಾ ಎಮಿನೊ ಅವರು ೧೦ ಸ್ವರಗಳನ್ನೂ, ೧೯ ವ್ಯಂಜನಗಳನ್ನೂ ಈ ಭಾಷೆಯ ಧ್ವನಿಮಾಗಳೆಂದು ಕೊಟ್ಟಿದ್ದಾರೆ. ಹ್ ಧ್ವನಿಮಾದ ಇರುವಿಕೆಯ ವಿಚಾರದಲ್ಲಿ ಭಿನ್ನಾಭಿಪ್ರಾಯವಿದೆ. ಮಹಾಪ್ರಾಣ ವರ್ಣಗಳು ಬಹುಮಟ್ಟಿಗೆ ಬಳಕೆಯಲ್ಲಿ ಇಲ್ಲ. ಒಂದೇ ಧ್ವನಿಮಾದ ಉಪಧ್ವನಿಗಳೂ ಇವೆ, ಇತರ ಎಲ್ಲ ಭಾಷೆಗಳಲ್ಲಿರುವಂತೆ.

ಕೋಲಾಮಿ ಭಾಷೆ ದ್ರಾವಿಡ ಭಾಷೆಗಳಲ್ಲಿ ತೆಲುಗು ಭಾಷೆಗೆ ಹತ್ತಿರವಿದ್ದಂತೆ ತೋರುತ್ತದೆ. ಮನ್ನೆ ಮತ್ತು ನಾಯ್ಕಿ-ಕೋಲಾಮಿ,-ಇವು ಕೋಲಾಮಿ ಭಾಷೆಯ ಉಪ-ಭಾಷೆಗಳು. ಆಂಧ್ರ ಪ್ರದೇಶದ ಆದಿಲಾಬಾದ್ ಜಿಲ್ಲೆಯ ಕೋಲಾಮಿ ಭಾಷೆಗೆ 'ಮನ್ನೆ' ಎಂದು ಹೆಸರು. ಇದನ್ನು ಆಡುವವರ ಸಂಖ್ಯೆ ೪,೯೮೨. ಕೋಲಾಮಿ ಗುಂಪಿಗೆ ಸೇರಿದ 'ಮನ್ನೆರುವಲು'—ಎಂಬ ಕೋಮಿನವರು ಆಡುವ ಭಾಷೆಯಾದದುರಿಂದ ಈ ಉಪಭಾಷೆಗೆ-ಮನ್ನೆ-ಎಂಬ ಹೆಸರು ಬಂದಿದೆ. ಇನ್ನೊಂದು ಉಪಭಾಷೆಯಾದ 'ನಾಯ್ಕಿ-ಕೋಲಾಮಿ'ಯನ್ನು ದಾದ್ರ ಮತ್ತು ನಾಗರಹವೇಲಿ ಮುಂತಾದ ಸ್ಥಳಗಳ ಕೋಲಾಮಿಗಳು ಆಡುವರು.

ಕೋಲಾಮಿ ಭಾಷೆಯನ್ನು ಆಡುವವರ ಒಟ್ಟು ಸಂಖ್ಯೆ ಇಂತಿದೆ :

| | | | |
|---|---|---|---|
| ೧೯೩೧ ರ | ಜನಗಣತಿಯ | ವರದಿಯಂತೆ | — ೩೧,೭೬೩ |
| ೧೯೪೧ | ,, | ,, | — ೩೬,೫೯೫ |
| ೧೯೫೧ | ,, | ,, | — ೪೨,೬೭೭ |
| ೧೯೬೧ | ,, | ,, | — ೪೬,೦೬೯ |

ಕನ್ನಡದ ಕೆಲವು ಪದಗಳೊಡನೆ ಕೋಲಾಮಿ ಭಾಷೆಯ ಪದಗಳನ್ನು ಹೋಲಿಸಬಹುದು :

| ಕೋಲಾಮಿ | ಕನ್ನಡ | | |
|---|---|---|---|
| ಪಾಟ | ಪಾಡು(<ಹಾಡು) | (ಹೋ. ತೆಲುಗು) | ಪಾಟ |
| ಎಲ್ಕ | ಇಲಿ | ,, | ಎಲುಕ |
| ದೊಂಗ | ಕಳ್ಳ | ,, | ದೊಂಗ |
| ನಾಲ್ಕ | ನಾಲಗೆ | | ನಾಲುಕ |
| ಗುಂಡ್ | ಕಲ್ಲು | | |

[1] M. B. Emeneau, *Kolami—A Dravidian Language*, 1955, p. 7.

| | | |
|---|---|---|
| ಕೆನ್ | ಕಣ್ಣು | ಕನ್ |
| ಕಂಡ್ಲು | ಕಣ್ಣುಗಳು | ಕಂಡ್ಲು |
| ಕಲ | ಕನಸು | ಕಲ |
| ಎಲ್ಲ(?) | ಮನೆ | ಇಲ್ಲು |
| ಪಿಲ್ಲ | ಹೆಂಗಸು (=ಹುಡುಗಿ) | ಪಿಲ್ಲ |
| ಇದ್ದರ್ | ಇಬ್ಬರು | ಇದ್ದರು |
| ಮುಗ್ಗರ್ | ಮೂವರು | ಮುಗ್ಗುರು |
| ನಲ್ಗುರ್ | ನಾಲ್ವರು | ನಲುಗರು |
| ಎಂಪೆರ್ | ಎಷ್ಟು ಜನ | ಎಂದುರು |
| ಅಂದರ್ | ಅಷ್ಟೂ ಜನ | ಅಂದರೂ |
| ಮೇಕೆಲ್ | ಮೇಕೆಗಳು | ಮೇಕಲು |

ಪುನರಾವೃತ್ತಿಯ ಪದಗಳು :

ಮೇಕೆಲ್ ಗೀಕೆಲ್=ಮೇಕೆ ಗೀಕೆ
ಪಲ್ ಗಿಲ್ =ಹಲ್ಲು ಗಿಲ್ಲು

ವಾರ್ಧಾ ಕೋಲಾಮಿ ಭಾಷೆಗೂ, ಆದಿಲಾಬಾದಿನ ಕೋಲಾಮಿ ಭಾಷೆಗೂ ಇರುವ ಅಂತರವೆಂದರೆ ವಾರ್ಧಾ ಕೋಲಾಮಿಯಲ್ಲಿ ಮರಾಠಿ ಭಾಷೆಯ ಪ್ರಭಾವ ಅಧಿಕ.

The Adilabad Kolams have not borrowed so many numerals and do not use the Marathi classifier with the Kolami numerals which are the only ones that have been reported.[1]

ಎಮಿನೊ ಅವರು ವಾರ್ಧಾ ಕೋಲಾಮಿಯ ಬಗೆಗೂ ; ಪಿ. ಸೇತುಮಾಧವರಾವ್ ಅವರು ಆದಿಲಾಬಾದು ಕೋಲಾಮಿಯನ್ನು ಕುರಿತೂ ಬರೆದಿದ್ದಾರೆ.

The count made by Emeneau for the Kolami spoken near Wardha showed that of the vocabulary collcteed there, approximately 35 per cent was derived from Marathi.[2]

ಆದಿಲಾಬಾದ್ ಜಿಲ್ಲೆಯ ತೆಲುಗು ಭಾಷೆಯಾಡುವವರು ಕೋಲಾಮಿಗಳನ್ನು ಮನ್ನೊಡ್‌ಗಳೆಂದು ಕರೆಯುವರು.

---

[1] M. B. Emeneau, *India as a Linguistic Area*, p. 12
[2] *Dravidian Borrowings from Indo-Aryan*, p. 3

ಕೋಲಾಮಿ ಭಾಷೆಯ ಜೊತೆಗೆ ಬಹುಮಂದಿ ಕೋಲಾಮಿಗಳು ತೆಲುಗು ಭಾಷೆಯನ್ನೂ, ಉಳಿದವರಲ್ಲಿ ಕೆಲವರು ಮರಾಠಿ ಭಾಷೆಯನ್ನೂ, ಕೆಲವರು ಹಿಂದೂಸ್ತಾನಿ ಭಾಷೆಯನ್ನೂ, ಕೆಲವರು ಗೋಂಡೀ ಭಾಷೆಯನ್ನೂ ಆಡುವರು.

ಕೋಲಾಮಿಗಳು ಅಧಿಕ ಸಂಖ್ಯೆಯಲ್ಲಿ ಇರುವುದು (೧೯೩೧ರ ಜನಗಣತಿಯಂತೆ ೨೫,೬೪೭ ಜನ) ಬೀರಾರಿನ ಯೋತ್‌ಮಾಲ್ ಜಿಲ್ಲೆಯಲ್ಲಿ. ೧೯೩೧ರ ಜನಗಣತಿಯಂತೆ ಕೋಲಾಮಿಗಳು ಇರುವ ಸ್ಥಳ ಮತ್ತು ಸಂಖ್ಯೆ ಇಂತಿದೆ :

| | | ಜನಸಂಖ್ಯೆ |
|---|---|---|
| ಹೈದರಾಬಾದಿನ ಅದಿಲಾಬಾದ್ ಜಿಲ್ಲೆಯಲ್ಲಿ | .... | ೫,೦೦೦ |
| ಮಧ್ಯಪ್ರದೇಶದ ವಾರ್ಧಾ ಜಿಲ್ಲೆಯಲ್ಲಿ | .... | ೨೫೨೦ |
| ಬೀರಾರಿನ ಅಮರಾವತಿ ಜಿಲ್ಲೆಯಲ್ಲಿ | .... | ೧೦೬ |
| ಮಧ್ಯಪ್ರದೇಶದ ಚಾಂದಾ ಜಿಲ್ಲೆಯಲ್ಲಿ | .... | ೮೯ |
| ಬೀರಾರಿನ ಯೋತ್‌ಮಾಲ್ ಜಿಲ್ಲೆಯಲ್ಲಿ | .... | ೨೫,೬೪೭ |

## ಧ್ವನಿವ್ಯವಸ್ಥೆ

ಸ್ವರಗಳು : ಹ್ರಸ್ವಸ್ವರಗಳು—ಅ ಇ ಉ ಎ ಒ
ದೀರ್ಘಸ್ವರಗಳು—ಆ ಈ ಊ ಏ ಓ

ಮೂಲ ದ್ರಾವಿಡ ಧ್ವನಿಗಳಿಗೆ ಹೋಲಿಸಿದಾಗ ಸ್ವರಗಳಲ್ಲಿ ವ್ಯತ್ಯಾಸಗಳು ಬಹುವಾಗಿ ಇಲ್ಲ; ವ್ಯಂಜನಗಳಲ್ಲಿ ಕಾಣುವ ಕೆಲವು ವ್ಯತ್ಯಾಸಗಳು ಇಂತಿವೆ :

| | |
|---|---|
| * -ಕ್- : ಗ್ | * -ತ್- : ದ್ |
| * ಕ್ಕ : ಕ್ | * ತ್ತ : ತ್ |
| * ಙ್ಕ್ : ಙ್ಗ್ | * ನ್ತ : ನ್ದ |
| * ಚ್- : ಸ್ | * ಪ್ಪ : ಪ್ |
| *-ಚ್- : ಸ್ | * ಮ್ಪ : ಮ್ |
| * ಞ್ಚ : ನ್ಜ | * ಱ್ : ದ್, ರ್ |
| * ಟ್ : ಡ್ | * ಱ್ಱ : ತ್ತ, ತ್ |
| * ಣ್ : ನ್ | * ನ್ಱ : ನ್ದ |
| * ಣ್ಟ : ಣ್ಟ | * ೞ್ : ರ್ |
| | * ಳ್ : ಲ್ |

## ವ್ಯಂಜನಗಳು

| | ಓಷ್ಠ್ಯ Labial | ದಂತೋಷ್ಠ್ಯ Labial-Dental | ದಂತ್ಯ Dental | ಪರದಂತ್ಯ Post-Dental | ಮೂರ್ಧನ್ಯ Retroflex | ತಾಲವ್ಯ Palatal | ಕಂಠ್ಯ Velar |
|---|---|---|---|---|---|---|---|
| ಸ್ಪರ್ಶ Stop | ಪ ಬ | | ತ ದ | | ಟ ಡ | | ಕ ಗ |
| ಸ್ಪೃಷ್ಟೋಷ್ಮ Affricate | | | | | | ಚ ಜ | |
| ಊಷ್ಮಧ್ವನಿ Sibilarts | | | | ಸ ಜ಼ | | | |
| ಕಂಪಿತ Trill | | | | ರ | | | |
| ಪಾರ್ಶ್ವಿಕ Lateral | | | | ಲ | | | |
| ನಾಸಿಕ Nasal | ಮ | | ನ | | | | ಙ |
| ಘರ್ಷ Fricative | | ವ | | | | ಯ | |

# ಪರ್ಜಿ ಭಾಷೆ

ಭಾರತದ ಭಾಷೆಗಳ ಪರಿವೀಕ್ಷಣೆಯಲ್ಲಿ ಪರ್ಜಿ ಅಥವಾ ಪಾರ್ಜಿ ಭಾಷೆಯ ಉಪಭಾಷೆಯಾದ ಬಸ್ತಾರಿನ ಪರ್ಜಿಯ ಅಲ್ಪ ಸ್ವಲ್ಪ ಪರಿಚಯವಿದೆ.[1] ಆ ವಿವರಣೆ ಅಸಮಗ್ರ ಹಾಗೂ ಅಸಮರ್ಪಕವಾದುದರಿಂದ ಸ್ಟೆನ್‌ಕೊನೊ ಅದನ್ನು ಗೋಂಡಿ ಭಾಷೆಯ ಉಪಭಾಷೆಯೆಂದು ತೀರ ತಪ್ಪಾಗಿ ವರ್ಗೀಕರಿಸಿದನು. ಈ ತಪ್ಪು ಬಹುಕಾಲದವರೆಗೂ ಹೀಗೆಯೇ ಮುಂದುವರಿಯಿತು.

ಸರ್ ಜಾರ್ಜ್ ಗ್ರಿಯರ್ಸನ್ ಒಂದು ತಪ್ಪು ಮಾಡಿದನಾದರೂ, ಅದುವರೆಗಿನ ವಿದ್ವಾಂಸರು ಮಾಡಿದ್ದ ಮತ್ತೊಂದು ತಪ್ಪನ್ನು ಸರಿಪಡಿಸಿದ್ದನು; ಪರ್ಜಿ ಭಾಷೆಯನ್ನು ಅದುವರೆಗೂ ಭಟ್ರಿ (Bhatri) ಭಾಷೆಯೆಂದು ಕರೆಯುತ್ತಿದ್ದರು. ೧೮೬೩ರಲ್ಲೇ ಗ್ಲಾಸ್‌ಫರ್ಡ್ ಎಂಬಾತ

> Both these castes (i.e., Tugars and Parjas) are found in a small tract of country south from Jugdulpore, extending from Seetapore to Sunkum; they are a poor race and subsist partly by cultivation and partly by hunting. They are not so well clothed as the Mooreas, Bhuttras, Hulbas. They eat anything, even snakes and other reptiles; they also, on occasions of festivals, dance like Gudwes, but are not such a characteristic race.[2]

ಎಂಬುದಾಗಿ ಆ ಜನಾಂಗದ ಜೀವನ ವಿವರವನ್ನು ಕೊಟ್ಟಮೇಲೆ ಪರ್ಜಿ ಭಾಷೆಯನ್ನು ಹುಲ್ಬಿ ಭಾಷೆಯ ಉಪಭಾಷೆಯೆಂದು ತಪ್ಪಾಗಿ ಉಲ್ಲೇಖಿಸಿದನು; ಭಟ್ರಿ ಮತ್ತು ಪರ್ಜಿ ಎಂಬ ಎರಡು ಹೆಸರುಗಳನ್ನು ಪರ್ಯಾಯ ಪದಗಳಾಗಿ ಬಳಸಿದನು.

ಮುಂದೆ ಸ್ಟೀಫನ್ ಹಿಸ್ಲೊಪ್ (Stephen Hislop) ಎಂಬಾತ ಕೂಡ ಪರ್ಜಿ

---

[1] *L.S.I.* ಸಂಪುಟ IV, ಪುಟಗಳು 554-260

[2] Captain Glasfurd, *Papers Relating to the Dependency of Bustar*, 1863, p. 35

ಭಾಷೆಯನ್ನು 'ಭಟ್ರೇಯನ್ ಭಾಷೆ'ಯೆಂದೇ ಕರೆದಿದ್ದಾನೆ. ಈ ಬಗೆಯ ಗೊಂದಲ ಜಿ. ಎ. ಗ್ರಿಯೆರ್ಸನ್ನನ ವಿವರಣೆಯಿಂದ ಸ್ವಲ್ಪ ನಿವಾರಿತವಾಯಿತು. ಆತ ಭಟ್ರೇ ಭಾಷೆ ಒರಿಯಾ ಭಾಷೆಯ ಒಂದು ಉಪಭಾಷೆಯೆಂದು ನಿರ್ದೇಶಿಸಿದನಲ್ಲದೆ ಪರ್ಜಿ ಎಂಬ ಭಾಷೆ ಬೇರೆ ಪರಿವಾರದ ಭಾಷೆಯ ಒಂದು ಉಪಭಾಷೆಯೆಂದು ವಿವರಿಸಿದನು. ಆದರೆ ಆತನೂ—

> Unfortunately . . . the mistake was made of classifying the Language as merely a dialect of Gondi, and this error obscured the fact the Parji is an important independent member of the Dravidian family.[1]

ಅನಂತರವೂ ೧೯೧೬ರಲ್ಲಿ ರಸೆಲ್ ಎಂಬಾತ ಬಸ್ತಾರಿನ ಪರ್ಜಾಗಳನ್ನು ಧುರ್ವ ಎಂದು ಕರೆದಿದ್ದಾನೆ. ಥರ್ಸ್ಟನ್ (Thurston) ಒರಿಸ್ಸಾ ಮತ್ತು ಮದರಾಸು ಸಂಸ್ಥಾನಗಳ ಎಲ್ಲೆಗಳಲ್ಲಿ ವಾಸಿಸುವ ಪರ್ಜಾಗಳನ್ನು ಪೊರೊಜ (Poroja)ರೆಂದು ಹೇಳಿದ್ದಾನೆ.

ಪರ್ಜಿ ಮತ್ತು ಗೋಂಡಿ ಭಾಷೆಗಳನ್ನು ಪ್ರತ್ಯೇಕ ಭಾಷೆಗಳಾಗಿ ಪರಿಶೀಲಿಸಬೇಕೆಂದು ಮೊಟ್ಟಮೊದಲ ಬಾರಿಗೆ ಗ್ರಿಗ್ಸನ್ (Grigson) ಎಂಬಾತ ತನ್ನ ಒಂದು ಪುಸ್ತಕದಲ್ಲಿ ಸೂಚಿಸಿದನಲ್ಲದೆ ಪರ್ಜಿ ಭಾಷೆಯನ್ನು ಕುರಿತು ತಾನು ಮತ್ತೊಂದು ಪುಸ್ತಕ ಬರೆಯಲಿರುವುದಾಗಿಯೂ ಹೇಳಿದ್ದನು.[2] ದುರ್ದೈವದಿಂದ ಅಕಾಲಮರಣಕ್ಕೆ ತುತ್ತಾದುದರಿಂದ, ಅವನ ಆಶೆ ನೆರವೇರದೆಹೋಯಿತು. ಜಗದಲಪುರದಿಂದ ೧೮ ಮೈಲಿ ದೂರದ ಮಟಲಿಪದರ್ ಎಂಬ ಹಳ್ಳಿಯಿಂದ ೧೯೫೦–೫೧ರಲ್ಲಿ ಥಾಮಸ್ ಬರೊ ಮತ್ತು ಸುಧಿಭೂಷಣ ಭಟ್ಟಾಚಾರ್ಯ ಇವರು ಭಾಷಾ ಸಂಗ್ರಹ ಕಾರ್ಯದಲ್ಲಿ (field survey) ತೊಡಗಿದ್ದಾಗ ಪರ್ಜಿ ಭಾಷೆ ದ್ರಾವಿಡ ಪರಿವಾರಕ್ಕೆ ಸೇರಿದ ಒಂದು ಸ್ವತಂತ್ರ ಭಾಷೆಯೇ ಹೊರತು ಉಪಭಾಷೆಯಲ್ಲವೆಂದು ಖಚಿತಪಡಿಸಿದರು.

> It was soon confirmed that it was a Dravidian Language quite independent from Gondi, and a valuable addition to the material available for the comparative study of Dravidian[3]

ದಕ್ಷಿಣ ಜಗದಲಪುರದಿಂದ ದಟ್ಟವಾದ ಕಂಗೇರ್ ಕಾಡಿನ ಮೂಲಕ ಸುಕ್ಮ ಜಮೀಂದಾರಿಯವರೆಗೂ, ಜಯಪುರದ ಗಡಿಯಲ್ಲೂ ಪರ್ಜಾಗಳಿದ್ದಾರೆ.

ಪರ್ಜಿ ಭಾಷೆ ಅಸಂಸ್ಕೃತ ಅಥವಾ ಶ್ರಾವಣ ಭಾಷೆಗಳ ಗುಂಪಿಗೆ ಸೇರಿದ ಒಂದು ಸ್ವತಂತ್ರ ಅಥವಾ ಪ್ರತ್ಯೇಕ ಪರಿಗಣನೆಗೆ ಅರ್ಹವಾದ ಭಾಷೆ. ಪಾರ್ಜಿ ಎನ್ನುವ

---

[1] *The Parji Language*, 1953, p. vii

[2] Grigson, *Maria Gonds of Bastar*, 1938

[3] T. Burrow, S. Bhattacharya, *The Parji Language*, p. viii

ದ್ರಾವಿಡ ಜನಾಂಗದವರು. ಆದಿವಾಸಿಗಳು ಆಡುವ ಈ ಭಾಷೆಯ ಹೆಸರಾದ ಪರ್ಜಿ ಎಂಬುದು 'ಪ್ರಜೆ' ಎಂಬ ಸಂಸ್ಕೃತ ಪದದ ರೂಪಾಂತರವಿರಬೇಕೆಂದು ಪ್ರಾಜ್ಞರು ಭಾವಿಸಿದ್ದಾರೆ. ಪಾರ್ಜಿ (ಪರ್ಜಿ)ಗಳನ್ನು ಧುರ್ವ ಎಂಬ ಹೆಸರಿನಿಂದಲೂ ಕರೆಯು ವರು, ಆದರೆ ಧುರ್ವ ಮತ್ತು ಕೊರಾಪುತಿ—ಇವು ಪರ್ಜಿ ಭಾಷೆಯ ಪ್ರಭೇದಗಳು. ಪರ್ಜಿ ಭಾಷೆ ಆಡುವವರಲ್ಲಿ ಸುಮಾರು ೧೫ ಸಾವಿರ ಜನ ಪರ್ಜಿಗಳು ಮಧ್ಯಪ್ರದೇಶ ದಲ್ಲಿ ಇರುವ ಜಗದಲಪುರ, ಬಸ್ತಾರ್‌ಗಳಲ್ಲೂ, ಪಶ್ಚಿಮ ಬಂಗಾಳದಲ್ಲೂ ಇದ್ದಾರೆ. ೧೯೩೧ರ ಜನಗಣತಿಯಲ್ಲಿ ನಮೂದಿಸಿರುವಂತೆ ಪರ್ಜಿ ಭಾಷೆಯನ್ನು ಆಡುವವರ ಸಂಖ್ಯೆ ೧೨,೩೬೩ ಜನ; ೧೯೬೧ರ ಜನಗಣತಿಯ ವರದಿಯಂತೆ ಇವರ ಸಂಖ್ಯೆ ೮೪,೬೦೭; ಪರ್ಜಿ ಭಾಷೆಯ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ ಆಗಬೇಕೆಂದು ತೋರುತ್ತದೆ. ಅಲ್ಲಿಯವರೆಗೂ

> Detailed analysis for Parji is not possible without further material, but it is otherwise probable that Parji is closely related to Kolami.[1]

ಆದರೂ ಈಗ ಸಧ್ಯಕ್ಕೆ ಸಿದ್ಧವಾಗಿರುವ ಪರ್ಜಿ ಭಾಷೆಯನ್ನು ಕುರಿತ ಬರೋ ಅವರ ಹೊತ್ತಗೆಯಲ್ಲಿ ಪರ್ಜಿ ಭಾಷೆಯ ವ್ಯಾಕರಣಾಂಶಗಳ, ಶಬ್ದಸಂಪತ್ತಿನ ವಿವರ ತಿಳಿದು ಬರುತ್ತದೆ. ಪರ್ಜಿ ಭಾಷೆಯ ಒಟ್ಟು ಧ್ವನಿಮಾಗಳು ಇಂತಿವೆ:

| | |
|---|---|
| ಸ್ವರಗಳು—ಹ್ರಸ್ವ ಸ್ವರಗಳು : | ಅ ಇ ಉ ಎ ಒ |
| ದೀರ್ಘ ಸ್ವರಗಳು : | ಆ ಈ ಊ ಏ ಓ |
| ವರ್ಗೀಯ ವ್ಯಂಜನಗಳು : | ಕ ಗ ಙ |
| | ಚ ಜ ಞ |
| | ಟ ಡ ಣ |
| | ತ ದ ನ |
| | ಪ ಬ ಮ |
| ಅವರ್ಗೀಯ ವ್ಯಂಜನಗಳು : | ಯ ರ ಱ ಲ ವ |
| ಒಟ್ಟು ಧ್ವನಿಮಾಗಳು—೩೦ | |

ಪರ್ಜಿ ಭಾಷೆಯಲ್ಲಿ, ತಮಿಳಿನಂತೆ, ಮಹಾ ಪ್ರಾಣವರ್ಣ (ಧ್ವನಿ) ಗಳಿಲ್ಲ; ಹಳಗನ್ನಡ, ತಮಿಳು, ಮಲೆಯಾಳ ಭಾಷೆಗಳಲ್ಲಿ ಇರುವಂತೆ ಶಕಟರೇಫ ಇಂದಿಗೂ ಅಬಾಧಿತವಾಗಿ ಉಳಿದುಬಂದಿದೆ.

ದ್ರಾವಿಡ ವರ್ಗಕ್ಕೆ ಸೇರಿದ ಪರ್ಜಿ ಭಾಷೆ ಇಂಡೊ-ಆರ್ಯನ್ ವರ್ಗಕ್ಕೆ ಸೇರಿದ

[1] *Kolami—A Dravidian Language*, p. 29

ಹಲ್ಬಿ (Halbi) ಎಂಬ ನೆರೆಹೊರೆಯ ಭಾಷೆಯ ಪ್ರಭಾವಕ್ಕೆ ಒಳಗಾಗಿದೆ. ವಾಸ್ತವವಾಗಿ ಹಲ್ಬಿ ಎಂಬುದು ಪರ್ಜಾಗಳು ಆಡುವ ಎರಡನೆಯ ಭಾಷೆಯೆನ್ನಬಹುದು. ಈ ದ್ವಿಭಾಷಿತ್ವದ ಪರಿಣಾಮವಾಗಿ ಪರ್ಜಿ ಭಾಷೆ ಪರಭಾಷೆಯ ಪದಗಳನ್ನು ವಿಪುಲವಾಗಿ ಪಡೆಯತೊಡಗಿದೆ. ಆದ್ದರಿಂದ ಅನಂತರದ ಸಂಖ್ಯಾವಾಚಕ ಪದಗಳನ್ನೆಲ್ಲಾ ಪರ್ಜಿ ಭಾಷೆ ಈ ಹಲ್ಬಿ ಭಾಷೆಯಿಂದಲೇ ಸ್ವೀಕರಿಸಿದೆ ;

> .......the Parjas are by now all bilingual and in many places speak Halbi more frequently than their own tongue, they have become largely at home in Halbi phonetics, and in areas particularly exposed to Halbi influence, the Halbi sounds will be heard occasionally in Parji speakers. . .[1]

ಪರ್ಜಿ ಭಾಷೆಯ ಕೆಲವು ಪದಗಳನ್ನು ಅರ್ಥಗಳೊಡನೆ ಉದಾಹರಿಸಿದೆ :

| ಪರ್ಜಿ | ಕನ್ನಡ |
|---|---|
| ಜನ್ | ಜನರು |
| ಗೋಟ | ಇತರರು |
| ಪೆಂದ್ | ಹಂದಿ < ಹ. ಗ. ಪಂದಿ |
| ಕರ್ | ಸೊಸಿ > ಸಸಿ |
| ಏನು | ಆನೆ : ಹೋ. ತ. ಯಾನೈ |
| ಇಯು | ಅಮ್ಮ |
| ಗಾಯ್ < ಹಿಂದಿ | ಗೋವು |
| ಗುರ್ರೊಲ್ | ಕುದುರೆ : ಹೋ. ತೆ. ಗುರ್ರಮು |
| ಮಂಜ | ಮನುಷ್ಯ |
| ಮಾಲ್ | ಮಗಳು |
| ಮಂಜಿಲ್ | ಮಯೂರ |
| ಪುಟ್ಟ (ಕ್ಕ) ಲ್/ಪುತ್ತ | ಹುತ್ತ < ಹ. ಗ. ಪುತ್ತ |
| ಮಲಂಗ್ | ಕಾಡು |
| ಪನ್ಡ್ | ಹಣ್ಣು < ಹ. ಗ. ಪಣ್ |
| ವೆಲಕೆಯ್ | ಬಲಗೈ |

ಪರ್ಜಿ ಭಾಷೆಯನ್ನು ಉಳಿದ ದ್ರಾವಿಡ ಭಾಷೆಗಳಿಗೆ ಹೋಲಿಸಿ ನೋಡಿದರೆ ಹಲ ಕೆಲವು ಧ್ವನಿ ವ್ಯತ್ಯಾಸಗಳನ್ನು ಗುರುತಿಸಬಹುದು. ಕನ್ನಡ ಭಾಷೆಯೊಡನೆ ಹೋಲಿಸಿ ಒಂದೆರಡು ಮಾರ್ಪಾಟುಗಳನ್ನು ಮಾತ್ರ ಉದಾಹರಣೆಗಾಗಿ ಇಲ್ಲಿ ತೋರಿಸಿದೆ :

---

[1] *The Parji Language*, p. 1

| ಕನ್ನಡ | ಪರ್ಜಿ |
|---|---|
| ಕಣ್ | ಕನ್ |
| ಪಣ್ | ಪನ್ಡ್ |
| ಮಣ್ | ಮನ್ |

(ಕ)–ಣ್ : (ಪರ್ಜಿ) – ನ್

| | |
|---|---|
| ಕೇೞ್ | ಕೇದ್ |
| ನೀಱ್ (=ಬೂದಿ) | ನೀನ್ |

(ಕ) – ಱ್ : (ಪ) ದ್

| ಪರ್ಜಿ | ಕನ್ನಡ |
|---|---|
| ತೆಲ್ | ತಲೆ |
| ಪೆಲ್ | ಪಲ್ |
| ಕೆಲ್ | ಕಲ್ |
| ವೆರ್ | ಬಱ್ |
| ನೆರುಬ್ | ನರವು |

ಪ. ವಎವ— : ಕ. ವಅವ

| | |
|---|---|
| ಕೇಲ್ | ಕಾಲ್ |
| ಪೇಲ್ | ಪಾಲ್ > ಹಾಲು |
| ಏದ್ | ಆಱ್ > ಆರು (=ತಣ್ಣಗೆ) |

ಪ. ವಏವ : ಕ. ವಆವ

೨೦

# ಮಲ್ತೊ ಭಾಷೆ

ಅಸಂಸ್ಕಾರಿ ಅಥವಾ ಶ್ರಾವಣ ದ್ರಾವಿಡ ಭಾಷೆಗಳ ಗುಂಪಿಗೆ ಸೇರಿದ ಮತ್ತೊಂದು ಮುಖ್ಯವಾದ ಭಾಷೆಯೆಂದರೆ ಮಲ್ತೊ ಭಾಷೆ. ಮಲ್ತೊ ಭಾಷೆಯನ್ನು ಆಡುವ ಆದಿವಾಸಿ ಜನಾಂಗದವರು ಈಗ ರಾಜಮಹಾಲ್ ಪರ್ವತ ಪಂಕ್ತಿಯ ಸುಮಾರು ೬೫-೭೦ ಮೈಲಿಗಳ ಉದ್ದಕ್ಕೂ ಇದ್ದಾರೆ. ಈ ಪರ್ವತ ಶ್ರೇಣಿಯ ಉದ್ದಕ್ಕೂ ವಾಸಿಸುವ ಮಲ್ತೋಗಳ ಜನಸಂಖ್ಯೆ ಮೂರುನಾಲ್ಕು ಲಕ್ಷವಿರಬಹುದೆಂದು ಭಾವಿಸಲಾಗಿದ್ದರೂ, ೧೯೬೧ರ ಜನಗಣತಿಯ ವರದಿಯಂತೆ ಇವರ ಸಂಖ್ಯೆ ೮೮,೬೪೫. ಮಲ್ತೋ ಭಾಷೆಗೆ ಸೌರಿಯಾ ಭಾಷೆ ಎಂಬ ಇನ್ನೊಂದು ಹೆಸರೂ ಇದೆ. ಮಾಲ್ತೋ ಎಂದೂ ಕೆಲವರು ಕರೆಯುವರು.

ಮಲ್ತೊ ಭಾಷೆಯನ್ನು ಆಡುವ ಜನರು ಸಾಹಸಿಗಳು. ಹಿಂದೆ ಒಂದು ಕಾಲದಲ್ಲಿ ಮುಸಲ್ಮಾನ ದೊರೆಗಳು ಆಳುವಾಗ ಜನತೆಯನ್ನು ಮಲ್ತೋಗಳು ಬಹಳ ಹೆದರಿಕೆಯಲ್ಲಿ ಇಟ್ಟಿದ್ದರು—ಅಂದರೆ ಇವರ ಲೂಟಿ, ದರೋಡೆಗಳೆ ಜನತೆಯ ಭೀತಿಗೆ ಮುಖ್ಯ ಕಾರಣವಾಗಿತ್ತು. ಮಲ್ತೊ ಭಾಷೆ ಹೋಲಿಕೆಯಲ್ಲಿ ಬಹುಶಃ ಕುರುಖ್ ಭಾಷೆಗೆ ಹತ್ತಿರವಾದ ಭಾಷೆಯಂತೆ ಕಾಣುತ್ತದೆ.[1] ಕಾಲಕ್ರಮೇಣ ದ್ರಾವಿಡೇತರ ಭಾಷೆಗಳ ಸಂಪರ್ಕಕ್ಕೆ ಒಳಗಾಗಿರುವ ಮಲ್ತೊ ಭಾಷೆಯ ಸಂಖ್ಯಾವಾಚಕ ಪದಗಳಲ್ಲಿ ಮೂರರವರೆಗೆ ಮಾತ್ರ ದ್ರಾವಿಡ ಪದಗಳಿದ್ದು, ಮೂರರ ಅನಂತರದ ಪದಗಳೆಲ್ಲಾ ಬಂಗಾಳಿ ಅಥವಾ ಬಿಹಾರಿ ಭಾಷೆಯ ಪದಗಳಾಗಿವೆ.

> Malto . . . presumably began by borrowing numerals and classifiers from a neighbouring Magadhan Language and subsequently elaborated the system independently, chiefly on the basis of inherited material.[2]

---

[1] Earnest Droese, *Introduction to the Malto Language*, 1884.

[2] M. B. Emeneau, *Language*, vol. 32, No. 1., p. 14

ಮಲ್ತೊ ಭಾಷೆಯು ಕೆಲವು ಪದಗಳು ಇಂತಿವೆ :

| ಮಲ್ತೊ | ಕನ್ನಡ |
|---|---|
| ಒತ್ರ್ | ಒಬ್ಬನು |
| ಇವ್ರ್ | ಇಬ್ಬರು |
| -ಇಸ್ | ಎರಡು |
| ಮಖೆ | ಹುಡುಗ |
| [(ಸಂ)ದಂದಾ<] ಡಃಇಬಾ | ಉದ್ದವಾದುದು |
| ಕಡ | ಕೂದಲು |
| ಮಖಿ | ಹುಡುಗಿ |
| ಮಖೊ | ಚಿಕ್ಕ, ಸಣ್ಣ |
| ಮಖು | ಕರು |
| ಖದೆ | ಮಗ |
| ಪಟ | ಪಾತ್ರೆ |

ಮನ್ ಒಂದ್ ಮನು–ಎಂದರೆ ಒಂದು ಮರ; ಈ ವಾಕ್ಯದಲ್ಲಿ ವರ್ಗ+ಸಂಖ್ಯಾವಾಚಕ+ನಾಮಪದ–ಇದು ಕ್ರಮ. ಈ ಬಗೆಯ ರಚನೆ ಇತರ ದ್ರಾವಿಡ ಭಾಷೆಗಳಲ್ಲಿ ಇಲ್ಲ.

ಮೂಲದ್ರಾವಿಡದಿಂದ ಇಂದಿನ ದ್ರಾವಿಡ ಭಾಷೆಗಳು ಸುಮಾರು ಮೂರೂವರೆ ಸಾವಿರ ವರ್ಷಗಳ ಹಿಂದೆಯೇ ಆಗಿರಬೇಕೆಂದೂ, ಆಗ ಕುರುಖ್ ಮತ್ತು ಮಲ್ತೊ ಭಾಷೆಗಳು ಒಂದುಗೂಡಿದ್ದುವೆಂದೂ, ಕ್ರಿ. ಶ. ಆರನೆಯ ಶತಮಾನದ ಹೊತ್ತಿಗೆ ಈ ಎರಡು ಭಾಷೆಗಳು ಪ್ರತ್ಯೇಕವಾದುವೆಂದೂ ಒಂದು ಅಭಿಪ್ರಾಯವಿದೆ.

# ಒಲ್ಲಾರಿ ಭಾಷೆ

ಶ್ರಾವಣ ಭಾಷೆಗಳಿಗೆ ಸೇರಿದಂತೆ ಒಲ್ಲಾರಿ ಎಂಬ ಹೆಸರಿನ ಮತ್ತೊಂದು ದ್ರಾವಿಡ ಪರಿವಾರದ ಭಾಷೆಯನ್ನು ಕುರಿತು ಇತ್ತೀಚೆಗೆ ಭಾಷಾಪರಿವೀಕ್ಷಣೆ ನಡೆಸಲಾಗಿದೆ. ಸುಧಿಭೂಷಣ ಭಟ್ಟಾಚಾರ್ಯ ಎಂಬುವರು ಈ ಭಾಷೆಯನ್ನು ಕುರಿತು ಒಂದು ಕಿರು ಹೊತ್ತಗೆಯನ್ನು ಹೊರತಂದಿದ್ದಾರೆ.[1] ಈ ಪುಟ್ಟ ಪುಸ್ತಕದ ಪ್ರಯೋಜನವನ್ನು ಟಿ. ಬರೊ ಮತ್ತು ಎಂ. ಬಿ. ಎಮಿನೊ ಅವರು, ತಮ್ಮ ಸಂಶೋಧನೆಗೂ ಮತ್ತು ದ್ರಾವಿಡ ಭಾಷಾ ಜ್ಞಾತಿಕೋಶದ ವಿವರಣೆಗೂ ಉಪಯೋಗಿಸುವುದರ ಮೂಲಕ, ಬಹುವಾಗಿ ಪಡೆದಿದ್ದಾರೆ. ಒಲ್ಲಾರಿ ಭಾಷೆ ಬಹುಮಟ್ಟಿಗೆ ಗದಬ ಭಾಷೆಯ ಉಪಭಾಷೆಯಂತೆ ತೋರುತ್ತದೆ—ಎಂದು ಮಾತ್ರ ಸಧ್ಯಕ್ಕೆ ಹೇಳಬಹುದೇ ಹೊರತು, ಇತರ ವಿವರಗಳು ದೊರೆಯುವತನಕ, ಹೆಚ್ಚಿಗೆ ಹೇಳಲು ಸಾಧ್ಯವಿಲ್ಲ.

| ಒಲ್ಲಾರಿ | ಕನ್ನಡ |
|---|---|
| ಅದ್ | ಅದು, ಅವಳು |
| ಅಗ್ಲೆ | ಮಣ್ಣಿನ ಪಾತ್ರೆ ಹೋ. ಅಗಳ್ |
| ಆತ | ಅತ್ತೆ |
| ಕರ್ಪ್ | ದಾಟು |
| ಕೊಜಿಲ್ | ಸೊಸೆ: ಹೋ. ತೆ. ಕೋಡಲು |

[1] S. Bhattacharya, *Ollari, A Dravidian Speech*, Delhi, 1957

೨೨

# ಕೊರಗರ ಭಾಷೆ*

ದಕ್ಷಿಣ ಕನ್ನಡ ಜಿಲ್ಲೆಯ ಎರಡು ಪ್ರಮುಖ ತಾಲ್ಲೂಕುಗಳಾದ ಉಡುಪಿ ಹಾಗೂ ಕಾರ್ಕಳಗಳಲ್ಲೂ, ಕುಂದಾಪುರ ತಾಲ್ಲೂಕಿನಲ್ಲೂ, ಮದರಾಸು ಮತ್ತು ಮಹಾರಾಷ್ಟ್ರದ ಒಂದೆರಡು ಭಾಗಗಳಲ್ಲೂ ಕೊರಗರೆಂಬ ಒಂದು ಜನಾಂಗಕ್ಕೆ ಸೇರಿದ ಜನರಿದ್ದಾರೆ. ಈ ಕೊರಗರ ಸಂಖ್ಯೆ ಸುಮಾರು ಒಂದು ಸಾವಿರಕ್ಕೂ ಸ್ವಲ್ಪ ಹೆಚ್ಚೇ ಇರಬಹುದೆಂದು ಭಾವಿಸಲಾಗಿದ್ದರೂ, ೧೯೬೧ರ ಜನಗಣತಿಯಂತೆ ೧೯೨ ಜನ ಕೊರಗರ ಲೆಕ್ಕ ಸಿಕ್ಕಿದೆ. ಇವರಲ್ಲಿ ೧೧೮ ಜನ ಗಂಡಸರು, ೭೪ ಜನ ಹೆಂಗಸರು. ಮೊನ್ನೆ ಮೊನ್ನೆಯವರೆಗೂ ಕೊರಗರ ಭಾಷೆಯನ್ನು ತುಳು ಭಾಷೆಯ ಉಪಭಾಷೆಯೆಂದೇ ಪರಿಗಣಿಸುತ್ತಿದ್ದರು. ೧೯೬೧ರ ಜನಗಣತಿಯಲ್ಲೂ ಹೀಗೆಯೇ ಬರೆದಿದೆ. ಆದರೆ ಈಗ ಈ ಕೊರಗರ ಭಾಷೆಯೇ ಪ್ರತ್ಯೇಕವಾಗಿ ಪರಿಗಣಿಸಬೇಕಾದ ಒಂದು ಉಪಭಾಷೆಯೆಂದು ಗೊತ್ತಾಗಿದೆ. ಕೊರಗರ ಭಾಷೆ ಕೇಳುವಾಗ ಮೇಲುನೋಟಕ್ಕೆ ತುಳು ಭಾಷೆಯಂತೆ ತೋರಿದರೂ, ತುಳು ಭಾಷೆಗಿಂತ ತೀರ ಭಿನ್ನವಾದುದೆಂದು ಹೇಳಬಹುದು. ಇವೆರಡು ಭಾಷೆಗಳ ವ್ಯಾಕರಣ ರಚನೆಯಲ್ಲಿ ಗಮನಾರ್ಹವಾದ ವ್ಯತ್ಯಾಸ ಕಂಡುಬರುತ್ತದೆ. ಇನ್ನೂ ಹೆಚ್ಚಿನ ಸ್ವಾರಸ್ಯವೆಂದರೆ ಈ ಭಾಷೆ ದಕ್ಷಿಣ ದ್ರಾವಿಡಕ್ಕಿಂತಲೂ ಉತ್ತರ ದ್ರಾವಿಡ ಭಾಷೆಗಳ ಉಪ–ಗುಂಪಿಗೆ ಹೋಲುತ್ತದೆ. ಕೊರಗರ ಭಾಷೆಯನ್ನು ಕುರಿತು ಸಂಶೋಧನೆ ನಡೆಯಬೇಕಾಗಿದೆಯಾಗಿ, ಸಧ್ಯಕ್ಕೆ ಹೆಚ್ಚಿನ ವಿವರಗಳು ತಿಳಿಯದು. ಈ ಭಾಷೆ ಆಡುವವರಲ್ಲಿ ಮದರಾಸು ಪ್ರಾಂತ್ಯದಲ್ಲಿ ೧೪ ಜನರೂ, ಮಹಾರಾಷ್ಟ್ರದಲ್ಲಿ ೪೨ ಜನರೂ, ಮೈಸೂರು ರಾಜ್ಯದಲ್ಲಿ ೧೩೬ ಜನರೂ ಇದ್ದಾರೆ. ಇತ್ತೀಚೆಗೆ ಈ ಭಾಷೆಯನ್ನು ಕುರಿತು ಡಾ|| ಡಿ. ಎನ್. ಎಸ್. ಭಟ್ಟರ ಉಪಯುಕ್ತ ಪುಸ್ತಕ ಪ್ರಕಟವಾಗಿದೆ: *The Koraga Language*, 1971 ಎಂಬುದು ಅವರ ಹೆಸರು. ಅದರಲ್ಲಿ ಕೊರಗ ಭಾಷೆಯ ಉಪಭಾಷೆಗಳಾದ ಒಂಟೆ, ತಪ್ಪು ಮೂಡು–ಎಂಬುವನ್ನು ಪರಿಚಯಿಸಿದ್ದಾರೆ. ಮುಂದಿನ ಪುಟದಲ್ಲಿ ಇವುಗಳಲ್ಲಿ ಒಂದು ಉಪಭಾಷೆಯಿಂದ ಆರಿಸಿದ ಕೆಲವು ಮಾತುಗಳಿವೆ:

* ಮುಂದೆ 'ಉಪಭಾಷೆಗಳ ಪರಿವೀಕ್ಷಣೆ'ಯ ವಿಭಾಗದಲ್ಲಿ ಇದರ ಪ್ರಸ್ತಾಪ ಬರುತ್ತದೆ.

| (ಮೂಡು) ಕೊರಗ | ಕನ್ನಡ |
|---|---|
| ಉಂಜಿ : | ಒಂದು |
| ಕೊಣೆ : | ಕಣಿ |
| ಕೂಜಿ : | ಹುಡುಗಿ : ಹೋ. ಕೂಸು |
| ಕೋಜಿ : | ಹುಡುಗ |
| ತೋಡ : | ಹರಿಯುವ ಹಳ್ಳ : ಹೋ. ತೊಜಿ |
| ಎಲಿ : | ಇಲಿ |
| ಕಡಿ : | ಚೂರು : ಹೋ. ಕಾಳುಕಡ್ಡಿ |
| ಪಿಡಿ : | ಹುಲಿ < ಪುಲಿ |
| ಹಂಡಿ : | ಹಣ್ಣು < ಪಣ್ : ಹೊ. ತೆ ಪಣ್ಣು |
| ತಿಪ್ಪು : | ಹಿಂಡು |
| ಹಜಿ : | ಹುಡುಕು |
| ಊಳು : | ಉಗುಳು |
| ಬೂಳು : | ಬೀಳು |
| ಇಲ್ಲಿ : | ಮನೆ |
| ಮಡ್ಕ : | ಮಡಕೆ |
| ಹೊಳ : | ಹೊಳೆ |
| ಆ : | ಆಗು |
| ಜಪ್ಪು : | ಹೊಡಿ |
| ಮುಲ್ಲು : | ಮೂಲೆ |

೨೩

# ಗದಬ ಭಾಷೆ

ಈ ಹಿಂದೆಯೇ ಒವ್ಮೆ ಹೇಳಿರುವಂತೆ ಮುಂಡಾ ಭಾಷಾ ಪರಿವಾರಕ್ಕೆ ಸೇರಿದ ಗದಬ ಎಂಬ ಭಾಷೆಯೊಂದಲ್ಲದೆ ದ್ರಾವಿಡ ಭಾಷಾಕುಟುಂಬಕ್ಕೆ ಸೇರಿದ ಗದಬ-ಎಂಬ ಹೆಸರಿನ ಮತ್ತೊಂದು ಭಾಷೆಯೂ ಭಾರತದಲ್ಲಿ ಇಂದಿಗೂ ಜೀವಂತವಾಗಿದೆ. ಗದಬ ಹಾಗೂ ಈ ಭಾಷೆಗೆ ಸೇರಿದ ಇತರ ಕೆಲವು ಉಪಭಾಷೆಗಳ ವಿಚಾರದಲ್ಲಿ ವಿದ್ವಾಂಸರು ಭಾಷಾ ಸಂಗ್ರಹ ಕಾರ್ಯ ನಡಸಿದ್ದಾರೆ.

ಒರಿಸ್ಸಾ ಸಂಸ್ಥಾನದ ಕೊರಾಪುತ್ ಜಿಲ್ಲೆಯಲ್ಲಿ ದ್ರಾವಿಡ ಭಾಷೆಗಳ ವರ್ಗಕ್ಕೆ ಸೇರಿದ ಗದಬ ಭಾಷೆಯನ್ನು ಆಡುವ ಹೆಚ್ಚಿನ ಜನರಿದ್ದಾರೆ. ಆದರೆ 'ಗದಬ' ಭಾಷೆ ಕೊರಾಪುತ್ ಜಿಲ್ಲೆಗೆ ಮಾತ್ರ ಮೀಸಲಾಗಿರದೆ ಆಂಧ್ರ ಪ್ರಾಂತ್ಯಕ್ಕೆ ಸೇರಿದ ವಿಶಾಖ ಪಟ್ಟಣದ ಸಾಲೂರು ಎನ್ನುವಲ್ಲಿಯೂ ಪ್ರಚಾರದಲ್ಲಿದೆ. ಈ ಭಾಷೆಯಲ್ಲಿಯೂ ನಾಲ್ಕೈದು ಉಪಭಾಷೆಗಳಿವೆ ; ಕೊಂಡೇಕೋರ್ ಗದಬ ಹಾಗೂ ಗುತೋಬ್ ಗದಬ—ಇವುಗಳಿಗೆ ವಿಶೇಷ ಅಂತರವಿದೆ. ಇವಲ್ಲದೆ ಸಲೂರಿನ ಗದಬ, ಒಲ್ಲಾರಿ ಮತ್ತು ಆದಿಲಾಬಾದಿನ ಗದಬ—ಇವು ಮೂರು ಗದಬ ಭಾಷೆಯ ಮುಖ್ಯ ಉಪಭಾಷೆಗಳು.

| (ಒಲ್ಲಾರಿ) ಗದಬ | ಕನ್ನಡ |
|---|---|
| ಪುಟ್ಕಲ್ | ಪುತ್ತ > ಹುತ್ತ |
| ಮನ್/ಮಟ್ | ಇರು |
| ತುಜ | ನಿದ್ರೆ : ಹೋ. (ತ) ತೂಂಗು (ಕ) ತೂಕಡಿಕೆ |
| ಎರ್ | ಆಗ : ಹೋ. ಇರ್ |

# ಕೊಯ ಭಾಷೆ

ಸುಮಾರು ಒಂದೂವರೆ ಲಕ್ಷ ಜನರು ಆಡುವ ಕೊಯ ಎಂಬ ಹೆಸರಿನ ಭಾಷೆಯನ್ನು ಗೋಂಡಿ ಭಾಷೆಯ ಒಂದು ಉಪ ಭಾಷೆಯಾಗಿ ಮಾತ್ರ, ಭಾರತದ ಭಾಷೆಗಳ ಪರಿವೀಕ್ಷಣೆಯ ವಿವರಣೆಯಲ್ಲಿ, ಸರ್ ಜಾರ್ಜ್ ಎಬ್ರಹಾಮ್ ಗ್ರಿಯೆರ್ಸನ್ನನು ತಿಳಿಸಿದ್ದನು. ಏಕೆಂದರೆ ಜಿ. ಎ. ಗ್ರಿಯೆರ್ಸನ್, ಗೋಂಡಿ ಭಾಷೆಗೆ ಸೇರಿದ ಉಪಭಾಷೆಗಳಲ್ಲಿ ಒಂದಾದ ಕೊಯಿ ಎಂಬ ಹೆಸರಿನ ಉಪ ಭಾಷೆಗೇ ಕೊಯ ಎಂಬ ಹೆಸರೂ ಸೇರಿದೆಯೆಂದು ಭಾವಿಸಿದ್ದನು. ಆದರೆ ಭಾಷಾವಿಜ್ಞಾನಿಗಳ ಇತ್ತೀಚಿನ ಅಭ್ಯಾಸದ ಫಲವಾಗಿ ಕೊಯ ಭಾಷೆಯನ್ನು ಬೇರೆಯಾಗಿಯೇ ಪರಿಶೀಲಿಸುವ ಅಭಿಪ್ರಾಯ ವ್ಯಕ್ತವಾಗಿದೆ.

> ... [Recent] studies have shown that Koya should be considered as an independent language of the [Dravidian] Group.[1]

೧೯೬೧ರ ಜನಗಣತಿಯಲ್ಲಿ ನಮೂದಿಸಿರುವಂತೆ ಕೊಯ ಭಾಷೆಯನ್ನು ಆಡುವವರ ಒಟ್ಟು ಸಂಖ್ಯೆ ೧೪೦,೭೭೬. ಇವರಲ್ಲಿ ಬಹುಪಾಲು ಜನರು, ಸುಮಾರು ೧೦೮,೬೫೭ ಜನರು, ಆಂಧ್ರ ಪ್ರದೇಶದಲ್ಲಿ ವಾಸಿಸುವರು. ಹೀಗಾಗಿ ಈ ಭಾಗದ ಕೊಯ ಭಾಷೆಯ ಮೇಲೆ ತೆಲುಗು ಭಾಷೆಯ ಪ್ರಭಾವ ಕಂಡುಬರುತ್ತಿದೆ. ಉಳಿದ ಜನ ಕೊರಾಪುತ್ ಜಿಲ್ಲೆಯಲ್ಲಿದ್ದಾರೆ. ಕೊಯ ಭಾಷೆ ಮಧ್ಯದ್ರಾವಿಡ ಭಾಷೆಯ ಗುಂಪಿಗೆ ಅಳವಡುತ್ತದೆ.

---

[1] *Census of India*, 1961, vol. I. page, cci

# ಕೊಂಡ ಭಾಷೆ

ಕೊಂಡ ಭಾಷೆಯ ವಿಷಯವಾಗಿ ತೀರ ಇತ್ತೀಚಿನವರೆಗೂ ಯಾವ ವಿವರವೂ ತಿಳಿದು ಬಂದಿರಲಿಲ್ಲ. ೧೮೭೧ನೆಯ ಇಸವಿಯಿಂದ ಪ್ರಾರಂಭವಾದ ಭಾರತದ ಜನಗಣತಿಯ ವರದಿಯಲ್ಲಿ, ೧೯೫೧ರ ವರೆಗೂ, ಯಾವ ವರದಿಗಳಲ್ಲೂ ಈ ಕೊಂಡ ಭಾಷೆಯ ಅಲ್ಪ ಸ್ವಲ್ಪ ವಿವರವೂ ಬಂದಿಲ್ಲ. ಸಾಕಷ್ಟು ಎಚ್ಚರಿಕೆಯಿಂದ ಭಾರತದ ಭಾಷೆಗಳ ಪರಿವೀಕ್ಷಣೆ ನಡಸಿದ ಸರ್ ಜಾರ್ಜ್ ಎಬ್ರಹಾಮ್ ಗ್ರಿಯೆರ್ಸನ್ನನ ಗಿಡುಗ ದೃಷ್ಟಿಯಿಂದಲೂ ಮೆಲ್ಲಗೆ ತಪ್ಪಿಸಿಕೊಂಡ ಈ ಕೊಂಡ ಭಾಷೆಯನ್ನು ಸುಧಿಭೂಷಣ ಭಟ್ಟಾಚಾರ್ಯ ಎಂಬುವರು ೧೯೫೫ರ ಸುಮಾರಿಗೆ ಪತ್ತೆ ಹಚ್ಚಿದರು.[1] ಅವರು ಕೊಂಡ ಭಾಷೆಯನ್ನು ಪರಿಶೀಲಿಸಿ, ಇದು ದ್ರಾವಿಡ ಪರಿವಾರಕ್ಕೆ ಸೇರಿದ ಮತ್ತೊಂದು ಭಾಷೆಯೆಂಬುದನ್ನು ನಿರ್ಧರಿಸಿದರಲ್ಲದೆ ಕೊಂಡ ಭಾಷೆಯ ಕೆಲವು ವಿವರಗಳನ್ನು ನಿರೂಪಿಸಿದರು.

ನಿಜವಾಗಿ ನೋಡಿದರೆ ಜಿ. ಎ. ಗ್ರಿಯೆರ್ಸನ್ನನೂ ಈ ಕೊಂಡ ಭಾಷೆಯನ್ನು ಕಂಡನಾದರೂ ಅದನ್ನು ಸರಿಯಾಗಿ, ಸೂಕ್ಷ್ಮವಾಗಿ ಪರಿಶೀಲಿಸದೆ ಕುಈ ಭಾಷೆಯ ಮತ್ತೊಂದು ರೂಪವಿರಬೇಕೆಂದು ಭಾವಿಸಿದನು. ಕೊಂಡ ಭಾಷೆಯನ್ನು ಹತ್ತು ವರ್ಷಗಳ ಹಿಂದೆ ಹುಡುಕಿದ ಮೇಲೆ, ಈ ಭಾಷೆಯನ್ನು ಕೇವಲ ಉಪ ಭಾಷೆಯಾಗಿ ಪರಿಗಣಿಸದೆ ಒಂದು ಪ್ರತ್ಯೇಕ ಭಾಷೆಯಾಗಿಯೇ ಅವಲೋಕಿಸಬೇಕೆಂದು ವಿದ್ವಾಂಸರು ಭಾವಿಸಿದ್ದಾರೆ.

On the strength of recent researches it is considered advisable to treat it [Koṇḍa] as an independent language at least tentatively.[2]

ಕೊಂಡ ಭಾಷೆ, ಗೋಂಡಿ ಮತ್ತು ಕುಈ–ಕುವಿ ಭಾಷೆಗಳ ನಡುವೆ ನಿಲ್ಲುವ ಮತ್ತು ಅವೆರಡೂ ಭಾಷೆಗಳ ಮಧ್ಯದ ಬಾಂಧವ್ಯವನ್ನು ಕೂಡಿಸುವ ಕೊಂಡಿಯಂತಿದೆ. ೧೯೬೧ರ ಖಾನೇಷುಮಾರಿ ಲೆಕ್ಕದಂತೆ ಕೊಂಡ ಭಾಷೆಯನ್ನು ಆಡುವವರ ಸಂಖ್ಯೆ

---

[1] *Bulletin of the Department of Anthropology*, 2, 1953-56, p. 17-48

[2] R. C. Nigam, *Census of India*, 1961, Vol. I, p. ccii

೧೨,೫೮. ಇವರಲ್ಲಿ ಬಹುಸಂಖ್ಯೆಯ ಜನರು, ಅಂದರೆ ಸುಮಾರು ೧೦,೯೩೦— ಜನರು ಒರಿಸ್ಸದವರು. ಈ ಕೊಂಡ ಭಾಷೆಯನ್ನು ಕುರಿತು ಎಮಿನೊ ಮತ್ತು ಬರೊ —ಅವರು,

> There has taken place also Bhattacharya's investigation and publication of Koṇḍa, previously unknown and already clearely identifiable as a language forming a link between Gondi and Kui-Kuwi[1]

ಎಂದು ಹೇಳಿದ್ದಾರೆ. ೧೯೬೧ರ ಜನಗಣತಿಯಲ್ಲಿ ಕೊಂಡ ಭಾಷೆಯ ಉಲ್ಲೇಖ, ವಿವರ ಸೇರಿದೆ.[2]

| ಕೊಂಡ | ಕನ್ನಡ |
|---|---|
| ಜ಼ಿಲ್/ಜ಼ಿಜ಼್ | ಸೆಳೆ |
| ಪುನ್/ಪುತ್ | ತಿಳಿ |
| ವೆವ್/ವೆಜ಼್ | ಕೇಳು |
| ತಿನ್/ತಿಜ಼್ | ತಿನ್ನು < ತಿನ್ |
| ಪುಜ಼ಿ | ಪುತ್ತು < ಹುತ್ತ |
| ಇನ್/ನಿಜ಼್ | ಹೇಳು |
| ಸೋಲ್/ಸೊಜ಼್ | ಹೋಗು |
| ಪೂರ್ವ ದ್ರಾವಿಡ ಱ > ಕೊಂ. | ಟಿ (hṛ) ಜಿ |

[1] *A Dravidian Etymological Dictionary*, 1961, p. vi

[2] *Census of India*, 1961, Vol. I, p. ccii

# ಬಡಗ ಭಾಷೆ

ಕ್ರಿ. ಶ. ಮೂರನೆಯ ಶತಮಾನದ 'ಅಗನಾನೂಱು'—ಎಂಬ ಹೆಸರಿನ ತಮಿಳು ಕಾವ್ಯವೊಂದರಲ್ಲಿ ಬಡಗರ ಹೆಸರಿನ ಪ್ರಸ್ತಾಪವಿದೆಯೆಂದು ಹೇಳುವರು.[1] ಬಡಗ ಭಾಷೆ ಕನ್ನಡದ ಒಂದು ಪ್ರಮುಖ ಶಾಖೆ. ಬಹಳ ಜನ ವಿದ್ವಾಂಸರು ಇಂದಿಗೂ ಬಡಗ ಭಾಷೆಯೆಂದು ಪ್ರತ್ಯೇಕವಾಗಿ ಪರಿಗಣಿಸದೆ ಕನ್ನಡ ಭಾಷೆಯ ಒಂದು ಉಪಭಾಷೆಯಾಗಿಯೇ ನೋಡುವರು. ಇದನ್ನು ಉಪಭಾಷೆಯಾಗಿ ನೋಡಬೇಕೆ ಇಲ್ಲವೆ ಭಾಷೆಯೆಂದು ನಿರೂಪಿಸಬೇಕೆ ಎಂಬುದು ಇನ್ನೂ ನಿರ್ಧಾರವಾಗಿಲ್ಲ. ಆದರೆ ಬಡಗ ಭಾಷೆಯಾಗಿ ಒಂದು ಪ್ರತ್ಯೇಕ ದ್ರಾವಿಡಭಾಷೆಯೆಂಬಂತೆ ಸಮೀಕ್ಷಿಸುವುದು ಅಗತ್ಯವೆಂದು ತೋರುತ್ತದೆ.[2] ಈ ವಿಚಾರದಲ್ಲಿ ಹೆಚ್ಚಿನ ಸಂಶೋಧನೆ ಅಗತ್ಯ.

ಬಡಗರು ನೀಲಗಿರಿಯ ಬೆಟ್ಟದ ನಿವಾಸಿಗಳು. ಹೊಯ್ಸಳ ದೊರೆಗಳ ಸೈನ್ಯ ನೀಲಗಿರಿಯನ್ನು ಮುತ್ತಿಗೆ ಹಾಕಿದಾಗ ಕಾಳನೆಂಬ ಹೆಸರಿನ ದೊರೆಯೊಬ್ಬನು ತೀವ್ರವಾಗಿ ಎದುರಿಸಿದನೆಂದು ಚಾಮರಾಜನಗರದ ಶಾಸನದಲ್ಲಿ ಉಲ್ಲೇಖಿಸಿದೆ—ಈ ಶಾಸನವನ್ನು ತೊದ ಭಾಷೆಯನ್ನು ಕುರಿತು ಬರೆಯುತ್ತಾ ಉದಾಹರಿಸಿದೆ. ಚಾಮರಾಜನಗರ ತಾಲ್ಲೂಕಿನ ಬಾಗಳಿ ಗ್ರಾಮದ ೧೧೪೨ರ ಶಾಸನವೊಂದರಲ್ಲಿ "ನಿರುಗುಂಡನಾಡಾಳ್ವ ಎಡೆನಾಡ ಹಿರಿಯನಾಡ ಬೆಸದಿಂ ನೀಲಗಿರಿಯ ಕೋಟೆಯ ಶಿಖರದ ಮೇಗಣ ಕೂಳ್ಕಲ್ಲ ಕೋಟೆಗೆ ಹಾಕಿ ಮುತ್ತಿ ಕೋಟೆಯ ನಾಯಕನ ಮಗನಂ ಕೊಂದು ಮುತ್ತಿದಿರಾಂತ ಬಲಮಂ ಕೂಡಾಡಿಕೊಂದು ರಣಶೂರತೆಯಿಂ ಬಂಟನಾಗಿ ಸ್ವರ್ಗಸ್ತನಾದ" ಎಂದಿದೆ. ಇದನ್ನು ಕುರಿತು ವಿವೇಚಿಸುತ್ತಾ ಎನ್. ಲಕ್ಷ್ಮೀನಾರಾಯಣರಾವ್ ಅವರು ಬರೆದಿದ್ದಾರೆ; "ಕೂಕಲಿನಲ್ಲಿ ಸತ್ತ ನಾಯಕನ ಮಗನು ಬಹುಶಃ ಚಾಮರಾಜನಗರದ ಶಾಸನದಲ್ಲಿ ಹೇಳಿದ ಕಾಳನ ಮಗನಾಗಿರಬೇಕು . . . ವಿಷ್ಣುವರ್ಧನನ ಮಗನಾದ

---

[1] ಅಗನಾನೂಱು, ನಕ್ಕೀರರ್, ಪದ್ಯ ಸಂಖ್ಯೆ ೨೫೦

[2] M. B. Emeneau, '*The Vowels of the Badaga Language*', *Language*, 15, 1939, p. 43.

ನರಸಿಂಹನ (೧೧೪೧-೧೧೭೩) ಶಾಸನವೊಂದರಲ್ಲಿ ಈ ರಾಜ (ನರಸಿಂಹ)ನ ದಂಡಾಧಿಪ ನಾದ ಬಿಟ್ಟಿಗನು

ನೀಲಾಚಲಮಂ ಸಾಧಿಸಿ
ಕಾಳನತಲೆಗೊಂಡನಿರದೆ ಕೊಂಗರಪಡೆಯಂ।
ಧೂಳಿಪಟಮಾಡಿಕಾದಿಸಿದ
ಕಾಳಾಸ್ತಕನಲುತೆ ವಿಷ್ಣು ದಂಡಾಧೀಶಂ ॥

ಎಂದು ಹೊಗಳಿಸಿಕೊಂಡಿದ್ದಾನೆ. ಈ ಪದ್ಯದಲ್ಲಿ ನಿರ್ದಿಷ್ಟನಾದ ಕಾಳನು ವಿಷ್ಣುವರ್ಧನನ ದಂಡನ್ನು ಎದುರಿಸಿ ಹೋರಾಡಿದ ಕಾಳನೇ ಎಂದು ಹೇಳಿದರೆ ತಪ್ಪಾಗಲಾರದು. ಈ ಕಾಳನು ಯಾವ ಮನೆತನಕ್ಕೆ ಸೇರಿದವನೆಂದಾಗಲಿ, ನೀಲಗಿರಿಬೆಟ್ಟದ ಮೇಲೆ ಆ ಕಾಲದಲ್ಲಿ ನೆಲಸಿದ್ದ ಯಾವ ಪಂಗಡಕ್ಕೆ ಸೇರಿದವನೆಂದಾಗಲಿ ಹೇಳುವುದಕ್ಕೆ ಆಧಾರ ಗಳಿಲ್ಲ. ಆದರೆ ಕಾಳ ಎಂಬ ಹೆಸರು ಈ ಪರ್ವತದ ಮೇಲೆ ಬಹುಕಾಲದಿಂದಲೂ ವಾಸಮಾಡುತ್ತಿರುವ ಬಡಗರಲ್ಲಿ ಈಗಲೂ ಇದೆ. ಇವನು (ಕಾಳ) ಬಡಗನಾಗಿರ ಬಹುದೆ? ಹಾಗಿದ್ದರೆ ೧೨ನೆಯ ಶತಮಾನಕ್ಕೆ ಮುಂಚೆಯೇ ಬಡಗರು ಈ ಪರ್ವತ ವನ್ನು ತಮ್ಮ ವಾಸಸ್ಥಾನವಾಗಿ ಮಾಡಿಕೊಂಡಿದ್ದರೆಂತಲೂ ಇವರೂ, ಇಲ್ಲಿಯ ಮೂಲ ನಿವಾಸಿಗಳಾದ ತೊದವರೂ ಸೌಹಾರ್ದದಿಂದಿದ್ದರೆಂತಲೂ, ತೊದವರು ಹೊಯ್ಸಳ ರೊಡನೆ ಕಾದಲು ಸಾಧ್ಯವಾಗದೆ ಬಡಗರ ಅರಸನಾದ ಕಾಳನ ಸಹಾಯವನ್ನು ಬೇಡಿದ ರೆಂತಲೂ ತಿಳಿಯಬೇಕಾಗುತ್ತದೆ"[1] ಎಂದು ಬರೆದಿದ್ದಾರೆ. ಆದರೂ ಈ ಕಾಳನು ಬಡಗನೊ, ತೊದವನೊ ಎಂಬ ಸಂದೇಹ ಇನ್ನೂ ಇದೆ. ಬಡಗರು ನೀಲಗಿರಿಯ ಬಡಗ ದಿಕ್ಕಿನಲ್ಲಿರುವ ಮೈಸೂರು ಪ್ರಾಂತದಿಂದ ಹೊಯ್ಸಳರ ಸೇನೆಯೊಂದಿಗೆ ನೀಲ ಗಿರಿಗೆ ಬಂದು ಅಲ್ಲಿಯೇ ಬೀಡುಬಿಟ್ಟಿರಬಹುದೆಂಬ ಊಹೆಯೂ ಇದೆ. ಈ ತದ್ವಿರುದ್ಧ ವಾದ ಅಭಿಪ್ರಾಯಗಳಲ್ಲಿ ಯಾವುದು ಸರಿ?—ಎಂಬ ಅನುಮಾನಕ್ಕೆ ಅವಕಾಶ ವಿತ್ತಿದೆಯಾದರೂ ೧೨ನೆಯ ಶತಮಾನದ ವೇಳೆಗೆ ನೀಲಗಿರಿಯ ಮೇಲೆ ಬಡಗರೂ, ತೊದವರೂ ಬೀಡುಬಿಟ್ಟಿದ್ದರೆಂಬುದರಲ್ಲಿ ಅನುಮಾನವಿಲ್ಲ.

ಆದರೆ ಬಡಗರ ಬಗೆಗೆ ಜನಜನಿತವಾದ ಕತೆ ಬೇರೆ ತೆರನಾಗಿದೆ. ಬಹಳ ಹಿಂದೆ ಮೈಸೂರಿನ ಬಳಿಯ ಬಡಗಹಳ್ಳಿ ಎಂಬ ಹಳ್ಳಿಯಲ್ಲಿ ಬಡಗರ ಗುಂಪನ್ನು ಮುಂದೆ ಬೆಳಸಿದ ಒಂದು ಮೂಲ ಮನೆತನವಿತ್ತು. ಆ ಮನೆಯಲ್ಲಿ ಇದ್ದ "ಏಳು ಜನ ಅಣ್ಣ ತಮ್ಮಂದಿರು ಒಬ್ಬ ತಂಗಿಯೊಡನೆ ವಾಸಿಸುತ್ತಿರುವಾಗ ಅಲ್ಲಿಯ ಮಹಮದೀಯ ನವಾಬನು ಅವಳ ಸೌಂದರ್ಯವನ್ನು ಮೆಚ್ಚಿ ವಿವಾಹ ಮಾಡಿಕೊಡಬೇಕೆಂದು ಬಲಾತ್ಕರಿಸಿದನಂತೆ. ಆ ಅಣ್ಣ ತಮ್ಮಂದಿರು ಇಷ್ಟಪಡದೆ ತಂಗಿಯೊಡನೆ ಓಡಿಬಂದು ನೀಲಗಿರಿ ಬೆಟ್ಟದಲ್ಲಿ ನೆಲಸಿದರು. ಅವರ ವಂಶದವರೇ ಬಡಗರು."[2]

[1] ನೀಲಗಿರಿಯ ಇತಿಹಾಸ, ಪ್ರ. ಕ. ೨೭-೧

[2] ಕನ್ನಡನಾಡಿನ ಆದಿವಾಸಿಗಳು, ಮೈಸೂರು ರಾಜ್ಯ, ಪುಟ ೫೨

ಆದಿವಾಸಿಗಳಾದ ಬಡಗರು ಬೆಟ್ಟದ ಮೇಲುಗಡೆ ಸಾಲುಸಾಲಾಗಿ ಕಟ್ಟದ ಗುಡಿಸಲುಗಳಲ್ಲಿ ವಾಸಿಸುವರು. ಬಡಗರು ಆಡುವ ಭಾಷೆ ದ್ರಾವಿಡ ಭಾಷೆ. ಬಡಗ ಭಾಷೆ ಕನ್ನಡಕ್ಕೆ ತೀರ ಹತ್ತಿರವಾದ ಭಾಷೆಯಾದರೂ ಅಂತರವೂ ಇದೆ. ತೊದ ಮತ್ತು ಬಡಗ ಭಾಷೆಗಳು ಬಹಳ ಕಾಲದಿಂದಲೂ ಅಕ್ಕಪಕ್ಕದ ಭಾಷೆಗಳಾಗಿ ಬೆಳೆದು ಬಂದಿರುವುದರಿಂದ ಈ ಭಾಷೆಗಳಲ್ಲಿ 'ಕೊಡು - ಕೊಳ್ಳು' ನಡೆದಿದೆ. ತೊದ, ಬಡಗ, ಕೋತ ಮೊದಲಾದವು ಕನ್ನಡದ ಉಪಭಾಷೆಗಳೆಂದು ಕೆಲವರ ಭಾವನೆ:

The dialects spoken by the tribes on the Neilgherries, the Badagas, i.e., the Northerners, the Kotas and Todas, are derived from ancient Canarese. Many grammatical forms of the ancient dialect are still found in use among them."[1]

ಆದರೆ ತೊದ, ಕೋತ ಭಾಷೆಗಳನ್ನು ಕನ್ನಡದ ಉಪಭಾಷೆಗಳೆಂದು ಹೇಳುವುದು ಸಾಧ್ಯವಿಲ್ಲ. ಬಡಗರ ಭಾಷೆಯನ್ನು ಕನ್ನಡದ ಉಪಭಾಷೆ ಎಂದು ಹೇಳಬಹುದು. ಏಕೆಂದರೆ ಬಡಗ ಭಾಷೆ—ಹವ್ಯಕ ಭಾಷೆಯಂತೆ—ಹಳಗನ್ನಡದ ಒಂದು ಉಪಶಾಖೆಯ ಹಾಗೆ ತೋರುತ್ತದೆ.

ಬಡಗ ಭಾಷೆಯ ಕೆಲವು ಶಬ್ದಗಳು:

| ಬಡಗ | ಕನ್ನಡ |
|---|---|
| ಕುನ್ನ (ವ) | ಚಿಕ್ಕ(ವನು) < ಹ. ಗ. ಕುನ್ನ : ಕುನ್ನಗ್ಗೆ |
| ಅವಕಗ | ಅವರಿಗೆ |
| ಜೋಚಿ | ಕೆಲವು |
| ಜಿನ | ದಿನ |
| ಒಂದು | ಒಂದು |
| ಬೆಚ್ಚ | ವೆಚ್ಚ |
| ದೊಟ್ಟ | ರೊಟ್ಟ |
| ಅಲೆ | ಆದರೆ |
| ಎರಡು | ಎರಡು |
| ಮಾತಿ | ಮಗ |
| ಮೂಱು | ಮೂಱು |
| ಮಾತೀಂದು | ಮಗನೆಂದು |
| ನಾನು/ನ | ನಾನು |
| ಬುದ್ದು | ಬಿದ್ದು < ವಿಬ್ಬಿ > ಬಿಬ್ಬಿ |

[1] Rev. G. Wurth, *Poetical Anthology*, 1868, p. V

| ಬಡಗ | ಕನ್ನಡ |
|---|---|
| ಎಂಗ್ಲ | ನಾವು |
| ನೀಂಗ್ಲ | ನೀವು |
| ಮೀನು | ಮೀನು |
| ಪಾಂಬು | ಪಾವು > ಹಾವು |

ಬಡಗ ಭಾಷೆಯಲ್ಲೂ ಕೆಲವು ಕಡೆ ಪ > ಹ ಆಗಿದೆ ; ಮತ್ತು ಬಡಗ ಭಾಷೆ, ಹವ್ಯಕ ಭಾಷೆಯಂತೆ, ಕೆಲವು ಹಳಗನ್ನಡ – ನಡುಗನ್ನಡ ರೂಪಗಳನ್ನು ಉಳಿಸಿಕೊಂಡು ಬಂದಿದೆ. ಬಹುಶಃ ಬಡಗರು ಹೊರಗಿನ ಭಾಷೆಗಳ ಸಂಪರ್ಕಕ್ಕೆ ಒಳಗಾಗದುದೆ ಇದಕ್ಕೆ ಕಾರಣವಿರಬಹುದು.

The personal pronoun of the first person singular is nām, I ; the dative suffix is ga, holaga (holakka), to the field : the past tense of the verbs agrees with old Kannaḍa : māḍidem, I did."[1]

ಜಾರ್ಜ್ ಎಬ್ರುಹಾಮ್ ಗ್ರಿಯೆರ್ಸನ್ ಬಡಗ ಭಾಷೆಯನ್ನು ತನ್ನ "ಭಾರತ ಭಾಷೆಗಳ ಪರಿವೀಕ್ಷಣೆ"ಯ ನಾಲ್ಕನೆಯ ತೆನೆಯಲ್ಲಿ (ಸಂಪುಟ) ಕನ್ನಡದ ಒಂದು ಉಪಭಾಷೆಯೆಂದೇ ಪರಿಗಣಿಸಿದ್ದಾನೆ. ಬಡಗ ಭಾಷೆಯ ಸ್ವರೂಪದ ಪರಿಚಯಕ್ಕಾಗಿ ಆತ ಕೆಲವು ಸಾಲುಗಳನ್ನು ಕೊಟ್ಟಿದ್ದಾನೆ. ಅಲ್ಲಿಯ ಕೆಲವು ಮಾತುಗಳನ್ನು ಮಾತ್ರ ಇಲ್ಲಿ ಎತ್ತಿ ಕೊಟ್ಟಿದೆ.[2]

## ಬಡಗ ಭಾಷೆಯ ಕೆಲವು ವಾಕ್ಯಗಳು

ಒಬ್ಬ ಮನಿಚಗ ಎರಡು ಮಕ್ಕ್ಳಿದ್ದರು. ಅವಕರ್ಟೋಗೆ ಕುನ್ನವ.ು ಅಪ್ಪ.ುಗ. ಅಪ್ಪಾ[1] ಆಸ್ತಿಯೊಯೆನಗೆ ಬಪ್ಪಕೂರ ಯೆನಗೆ ತಾ ಎಮ್ಮನೆ, ಅವ.ು ಅವಕಗ ಬದುಕ ಕೂರ್ಥಿಚ್ಚ.ು. ಜೋಚಿ ಜಿನಗ್ಲಿಂದೆ ಕುನ್ನ ಮಾತಿ ಎಲ್ಲಾವ ಸೇತಿಯುಂಡು, ದೂರದೇಚಗ ಕಡೆದುಹೋಗಿ, ಅಲ್ಲಿ ಕೆಟನ.ುನಾಗಿ ಬದಿಕಿ, ತನ್ನ ಬದುಕೆಲ್ಲಾವ ಬೀಜು. ಹಾಟ್ಮಾಡಿಬುಟ್ಟ.ು. ಆಲೆ ಅವ.ು ಎಲ್ಲಾವ ಚೆಚ್ಚ ಮಾಡಿದಡೆಮ್ಮನೆ, ಆ ದೇಚ ಬಕ್ಕೆಲ್ಲ ಅನಹಂಜ ಉಟ್ಟಾತು ; ಅವ.ು ತಟಮೊಟ ಆಪದುಗಾತು. ಆಗ ಅವ.ು ಹೋಗಿ, ಆ ದೇಚದವಕರ್ಟೋಗೆ ಒಬ್ಬ ಗೆರಸ್ತನ ಸೇದೂಂಣ.ು. ಎವ.ು ಅವ.ುನ ಹಂದಿಯ ಮೇಸೋದುಗ ತನ್ಹೊಲಗ ಜ್ಕೇಗಿದ.ು ಇತ್ತೆ ಹಡೊನೇ ಹಂದಿ

---

[1] R. Narasimhachar, *History of Kannda Language*, p. 37–38

[2] *L. S. I.* Vol. IV, 1906, Specimen of Badaga Language

ತಿಂಬ ತೌಡೂಂದ ತನ್ನ ಹೊಟ್ಟೆ ತುಂಬಿಸೋದುಗ ಆಸೆಪಟ್ಟ.ು; ಅಲೆದಾರೂ ಅವ.ುಗ ಕೊಟ್ಟ ಇಲ್ಲೆ. ತನ್ನ ಬುದ್ಧಿ ತನಗೆ ಬಪ್ಪನೆ, ಅವ.ು, ಯೆನ್ನಪ್ಪನ ಸಾರೆ ಯೇಚೋ ಕೂಲಿಯವಕಗ ದೊಟ್ಟೆ ಬೇಕಾದಾಚಗವಿಮಾಜಿಿ ಹಡದೆ; ಆಲೆ ನಾ.ು ಇಲ್ಲಿ ಹಸೂಂದ ಸತ್ತನೆ ನಾ.ುಯ್ದೆದ್ದು, ಕಡೆದು, ಯೆನ್ನಪ್ಪನಸಾರೆ ಹೋಗಿ, ಅವ.ುಗ, ಅಪ್ಪಾ! ಮೇಲೋಕಗ ಬಿರೋದಾಗಿಯೂ ನಿನ್ನ ಮುಂದಾಡೂ ಪಾಪ ಮಾಡಿದೆ.ು— ನಾ.ು ಇನ್ನು ನಿನ್ನ ಮಾತಿಂದು ಕೊರಚಿಸಿಯುಂಬದುಗ ತಕ್ಕವ.ು ಅಲ್ಲ; ಯೆನ್ನ ನಿನ್ನ ಕೂಲಿಯವಕರ್ಟೋಗೆ ಒಬ್ಬನ ಮಾಕೆ ಮಾಡುನ್ನನೆ, ಎಂದು ಹ್ಟೇಗಿ ಯ್ಟೆದ್ದು, ತನ್ನಪ್ಪನ ಸಾರೆ ಬನ್ನ.ು. ಆಲೆ ಅವ.ು ಇನ್ನು ದೂರದೊ ಇಬ್ಬನೆ ಅವ.ುನಪ್ಪ.ು ಅವ.ುನ ನೋಡಿ, ಕರ್ಟುಕತ್ತಿ, ಓಡಿಬಂದು ಅವ.ುನ ಗ್ಟತ್ತು ಮೇಲೆ ಬ್ಟುದ್ದು, ಅವ.ುನ ಮುತ್ತಿಕ್ಕಿದ.ು. ಆಲೆ ಮಾತಿ ಅವ.ುಗ ಅಪ್ಪಾ! ಮೇಲೋಕಗ ಬಿರೋದಾಗಿಯೂ ನಿನ್ನ ಮುಂದಾಡೂ ಪಾಪ ಮೊಡಿದೆ.ು. ಇನ್ನು ನಿನ್ನ ಮಾತಿಂದು ಕೊರಚಿಸಿಯುಂಬ ದುಗ ನಾತಕ್ಕವ.ು ಅಲ್ಲ, ಎನ್ನ.ು. ಆಗ ಅಪ್ಪ.ು ತನ್ನ ಜೀವಿತಿಗಾರರುಗ, ಜೇಗನ ಒಳ್ಳೊಳ್ಳೆಯ ಚೀಲೆ ಹೊಸ್ತು ಬಂದು, ಅವ.ುಗ ಹೊಜಿಿಸಿವಿ; ಅವ.ುನ ಕೈಗ ಉಂಗರವವೂ ಕಾಲುಗ ಕೆರವವೂ ಕೊಡಿವಿ. ಇನ್ನು ತಿಂದು ಕುಸಾಲೆ ಆಪೋ.ು. ಯೇಕಾಂದಲೆ ಈ ಯೆನ್ನ ಮಾತಿ ಸತ್ತವ.ು ಆಗಿದ್ದು, ತಿರಿಗಿ ಬದಿಕಿದ್ದನೆ; ಅರಂಡ್ಹೋದವ.ು ಆಗಿದ್ದು, ಸಿಕ್ಕಿದ್ದನೆ ಎನ್ನ.ು. ಆಗ ಕುಸಾಲೆ ಆಪದುಗೆ ಹೊರವಟ್ಟರು!

—ಇದರ ಕನ್ನಡ ಅನುವಾದವನ್ನು ಇಲ್ಲಿ ಮುಂದೆ ಕೊಟ್ಟಿದೆ:

ಒಬ್ಬ ಮನುಷ್ಯನಿಗೆ ಇಬ್ಬರು ಮಕ್ಕಳಿದ್ದರು. ಅವರಲ್ಲಿ ಚಿಕ್ಕವನು ತಂದೆಗೆ, 'ತಂದೆಯೇ, ಆಸ್ತಿಯಲ್ಲಿ ನನಗೆ ಬರತಕ್ಕ ಪಾಲನ್ನು ನನಗೆ ಕೊಡು', ಅಂದಾಗ, ಅವನು ಬದುಕನ್ನು ಅವರಿಗೆ ಹಂಚಿಕೊಟ್ಟನು. ಕೆಲವು ದಿನಗಳ ಮೇಲೆ ಚಿಕ್ಕ ಮಗನು ಎಲ್ಲಾ ಕೂಡಿಸಿಕೊಂಡು ದೂರ ದೇಶಕ್ಕೆ ಹೊರಟು, ಅಲ್ಲಿ ದುಂದುಗಾರನಾಗಿ ಬದುಕಿ ತನ್ನ ಆಸ್ತಿಯನ್ನು ಹಾಳುಮಾಡಿಬಿಟ್ಟನು. ಅವನು ಎಲ್ಲಾ ವೆಚ್ಚ ಮಾಡಿದ ಮೇಲೆ, ಆ ದೇಶದಲ್ಲಿ ಘೋರವಾದ ಬರ ಉಂಟಾಗಿ, ಅವನು ಕೊರತೆ ಪಡಲಾರಂಭಿ ಸಿದನು. ಆಗ ಹೋಗಿ ಆ ದೇಶಸ್ಥರಲ್ಲಿ ಒಬ್ಬನನ್ನು ಹೊಂದಿಕೊಂಡನು. ಇವನು ಅವನನ್ನು ಹಂದಿಗಳನ್ನು ಮೇಯಿಸುವದಕ್ಕೆ ತನ್ನ ಹೊಲಗಳಿಗೆ ಕಳುಹಿಸಿದನು. ಹೀಗಿರಲಾಗಿ ಹಂದಿಗಳು ತಿನ್ನುವ ಹಿಂಡಿಯಿಂದ ತನ್ನ ಹೊಟ್ಟೆ ತುಂಬಿಸಿಕೊಳ್ಳಲು ಅಪೇಕ್ಷಿಸಿದಾಗ ಯಾರೂ ಅವನಿಗೆ ಕೊಡಲಿಲ್ಲ. ಆಗ ತೆಪ್ಪರಿಸಿಕೊಂಡು, "ನನ್ನ ತಂದೆಯ ಹತ್ತರ ಎಷ್ಟೋ ಮಂದಿ ಕೂಲಿಯವರಿಗೆ ತುಂಬ ರೊಟ್ಟಿ ಉಂಟು, ಆದರೆ ನಾನು ಹಸಿವೆಯಿಂದ ಸಾಯುತ್ತೇನೆ. ನಾನು ಎದ್ದು ನನ್ನ ತಂದೆಯ ಬಳಿಗೆ ಹೋಗಿ, ಅವನಿಗೆ, 'ತಂದೆಯೇ ಪರಲೋಕಕ್ಕೆ ವಿರೋಧವಾಗಿಯೂ, ನಿನ್ನ ಮುಂದೆಯೂ,

ಪಾಪ ಮಾಡಿದ್ದೇನೆ. ನಾನು ಇನ್ನೂ ಮಗನೆಂದು ಕರೆಸಿಕೊಳ್ಳಲು ಯೋಗ್ಯನಲ್ಲ; ನನ್ನನ್ನು ನಿನ್ನ ಕೂಲಿಯವರಲ್ಲಿ ಒಬ್ಬನಂತೆ ಮಾಡು" ಅನ್ನುವೆನೆಂದು ಹೇಳಿ, ಎದ್ದು ತನ್ನ ತಂದೆಯ ಬಳಿಗೆ ಬಂದನು. ಅವನು ಇನ್ನು ದೂರದಲ್ಲಿರುವಾಗ ಅವನ ತಂದೆ ಅವನನ್ನು ನೋಡಿ ಅಂತಃಕರಣಪಟ್ಟು ಓಡಿಬಂದು, ಅವನ ಕೊರಳಿನಮೇಲೆ ಬಿದ್ದು ಮುದ್ದಿಟ್ಟನು. ಆದರೆ ಮಗನು ಅವನಿಗೆ, 'ತಂದೆಯೇ ಪರಲೋಕಕ್ಕೆ ವಿರೋಧ ವಾಗಿಯೂ, ನಿನ್ನ ಮುಂದೆಯೂ ಪಾಪ ಮಾಡಿದ್ದೇನೆ. ನಾನು ಇನ್ನೂ ನಿನ್ನ ಮಗ ನೆಂದು ಕರೆಯಿಸಿಕೊಳ್ಳಲು ಯೋಗ್ಯನಲ್ಲ'—ಎಂದು ಹೇಳಲು, ತಂದೆಯು ತನ್ನ ಆಳು ಗಳಿಗೆ 'ಒಳ್ಳೊಳ್ಳೆಯ ಅಂಗಿ ತಂದು ಅವನಿಗೆ ಹೊದ್ದಿಸಿರಿ, ಅವನ ಕೈಗೆ ಉಂಗುರ ವನ್ನೂ, ಕಾಲುಗಳಿಗೆ ಕೆರಗಳನ್ನೂ ಕೊಡಿರಿ; ಊಟಮಾಡಿ ಆನಂದ ಪಡೋಣ. ಏಕೆಂದರೆ ಈ ನನ್ನ ಮಗನು ಸತ್ತವನಾಗಿದ್ದು ತಿರುಗಿ ಬದುಕಿದ್ದಾನೆ, ಕಳೆದುಹೋದವ ನಾಗಿದ್ದು ಮತ್ತೆ ಸಿಕ್ಕಿದ್ದಾನೆ' ಎಂದನು. ಆಗ ಆನಂದಪಡಲು ಆರಂಭಿಸಿದರು.

ಬಡಗ ಭಾಷೆಯಲ್ಲಿ ರಳ (ೞ) ಮತ್ತು ಶಕಟ ರೇಫ (ಱ) ಉಳಿದುಕೊಂಡಿದೆ. ಉತ್ತರ ಕರ್ನಾಟಕದ ಕಡೆಯಲ್ಲಿ ರೂಢಿಯಲ್ಲಿ ಇರುವಂತೆ ಕೆಲವು ಪದಗಳ ಕೊನೆಯಲ್ಲಿ ಅನುನಾಸಿಕ ಧ್ವನಿ ಕಾಣಿಸಿಕೊಳ್ಳುತ್ತದೆ (ಅವ.). ಊಷ್ಮಧ್ವನಿ ಸ್ಪೃಷ್ಟೋಷ್ಮ ಧ್ವನಿಯಾಗಿ ಉಚ್ಚಾರವಾಗುತ್ತದೆ. (ದೇಶ > ದೇಚ)

ಬಡಗ ಭಾಷೆಯಲ್ಲಿ ೞ ಱಗಳು ಬಳಕೆಯಲ್ಲಿವೆಯಾದರೂ ಹಳಗನ್ನಡದ ಪದ್ಮಗಳೊಡನೆ ಕೆಲವು ಕಡೆ ಹೋಲಿಸಿದಾಗ ೞ್‌ದ ಪ್ರಯೋಗ ಸ್ವಾರಸ್ಯವಾಗಿ ತೋರುತ್ತದೆ.

ಇರು < ಇರುಳು
ೞ
ಅವ < ಅವಳು
ತಿಂಗು < ತಿಂಗಳು
ೞ
ಮಕ್ಕ < ಮಕ್ಕಳು
ೞ
ಕೇಗು < ಕಳುಹಿಸು
ೞ
ಕರು < ಕರುಳು
ೞ

ಆದರೆ ಶಕಟರೇಫದ ಉಪಯೋಗ ಸರಿಯಾಗಿದೆ:

(ಕ) ಅಱಿ – ಅಱಿ (ಬ)
ಕುಱಿ – ಕುಱಿ
ಏಱು – ಏಱು
ಕೆಱೆ – ಕೆಱೆ

ಟಿಳಧ್ವನಿ ಸಾಮಾನ್ಯವಾಗಿ ಬರವಣಿಗೆಯಲ್ಲಿ ಸ್ವತಂತ್ರ ಅಕ್ಷರವಾಗಿ ಬರದೆ ಕಾಗುಣಿತಾಕ್ಷರವಾಗಿ, ಒತ್ತಕ್ಷರವಾಗಿ ಬರುವುದೇ ಹೆಚ್ಚು :[1] ಅಂದರೆ ಟಿ ಸಾಮಾನ್ಯವಾಗಿ ಸ್ವರಮಧ್ಯೆ ಬರದೆ ವ್ಯಂಜನದ ತರುವಾಯ ಬರುವುದು ಹೆಚ್ಚು :

(ಬ) ಕೀ< ಕೀಟಿ (ಕ)
ಟಿ
ಬೂ< ಬೀಟು
ಟಿ
ಮೂಗು< ಮುಟುಗು
ಟಿ
ಯೆದು< ಎಟ್ದು
ಟಿ
ಹೊಗ್ದು< ಹೊಗಟು< ಪೊಗಟ್
ಟಿ
ಹಾ< ಹಾಟು< ಪಾಟ್
ಟಿ
ಹಾಯೇ< ಹಟಿ< ಪಟಿ
ಟಿ
ಹೊಯೆ< ಹೋಟಿ< ಪೋಟಿ
ಟಿ
ಗುೀ< ಗುಟಿ< ಕುಟಿ
ಟಿ

---

[1] ಕಳೆದ ದಶಕದಲ್ಲಿ ಪ್ರಾಧ್ಯಾಪಕ ಎಂ. ಬಿ. ಎಮಿನೊ ಅವರು ಬಡಗ ಭಾಷೆಗೆ ಸಂಬಂಧಿಸಿದಂತೆ ಭಾಷಾಸಂಗ್ರಹ ಕಾರ್ಯ ನಡಸಿದ್ದಾರೆ. ಇಲ್ಲಿ ಅವರ ಬರೆಹದ ಪ್ರಯೋಜನವನ್ನು ಪಡೆಯಲು ಆಗಿಲ್ಲ.

# ಕೋತ ಭಾಷೆ

ಶ್ರಾವಣ ವರ್ಗದ ದ್ರಾವಿಡ ಭಾಷೆಗಳಲ್ಲಿ ಒಂದಾದ ಈ ಕೋತ ಭಾಷೆಯನ್ನು ಕುರಿತು ಹಿಂದಿನಿಂದಲೂ ಸ್ವಲ್ಪ ಸಂಶೋಧನೆ ನಡೆದಿದೆಯಾದರೂ ಕಳೆದ ದಶಕದಲ್ಲಿ ಈ ಭಾಷೆಯನ್ನು ಕುರಿತು ಪ್ರಾಧ್ಯಾಪಕ ಮರ್ರೆ ಬಾರ್ನಸನ್ ಎಮಿನೊ ಅವರು ಬಹಳ ಒಳ್ಳೆಯ ಹೊತ್ತಗೆಗಳನ್ನು ಹೊರತಂದಿದ್ದಾರೆ.[1] ಹೀಗಾಗಿ ಇಂದು ಕೋತ ಭಾಷೆಯ ಧ್ವನಿ ಸ್ವರೂಪದ ವಿವರಣೆಯಿಂದ ಮೊದಲುಗೊಂಡು ಅದರ ವಾಕ್ಯರಚನೆ, ವ್ಯಾಕರಣ ಸ್ವರೂಪದವರೆಗೂ ಸಾಕಷ್ಟು ಸಾಮಗ್ರಿ ಸಿದ್ಧವಾಗಿದೆ.

ಕೋತ ಭಾಷೆಯನ್ನು ಆಡುವವರು ಉಳುಮೆಯ ಜೀತಗಾರರು. ಅವರು ನೀಲಗಿರಿ ಬೆಟ್ಟದಲ್ಲಿ ಹಿಂದಿನಿಂದಲೂ ಬೀಡುಬಿಟ್ಟಿದ್ದಾರೆ. ಅಸ್ಸಾಮಿನಲ್ಲಿ ಇರುವ, ಕೇವಲ ಒಂಬತ್ತು ಜನರನ್ನು ಬಿಟ್ಟರೆ, ಇನ್ನು ಉಳಿದ ಸುಮಾರು ಒಂದು ಸಾವಿರದ ಜನ ನೀಲಗಿರಿಯಲ್ಲೇ ಬಾಳುವರು. ೧೯೧೧ರ ಜನಗಣತಿಯ ವರದಿಯಂತೆ ಇವರ ಸಂಖ್ಯೆ ಕೇವಲ—೧೨೬೦. ೧೯೩೧ರ ಖಾನೇಷುಮಾರಿಯ ಲೆಕ್ಕದಂತೆ ಇವರ ಒಟ್ಟು ಸಂಖ್ಯೆ ೧೧೨೧. ೧೯೬೧ರಲ್ಲಿ ೮೬೨. ಹೀಗಾಗಿ ಕೋತ ಭಾಷೆಯನ್ನು ಆಡುವವರು ಕ್ರಮೇಣ ಅದೃಶ್ಯವಾಗಿ ಹೋಗುವಂತೆ ತೋರುತ್ತಿದೆ.

ಕಾಲ್ಡ್‌ವೆಲ್‌ನ ಕಾಲಕ್ಕೆ ಕೋತ ಭಾಷೆ ದ್ರಾವಿಡ ವರ್ಗದ ಭಾಷೆಯೆಂಬುದು ನಿರ್ಧಾರವಾಗಿತ್ತು, ಮತ್ತು ಆತ ಕೋತ ಭಾಷೆಯನ್ನು ಕನ್ನಡ ಭಾಷೆಗೆ ಹತ್ತಿರದ ಭಾಷೆಯೆಂದು ನಿರೂಪಿಸಿದ್ದಾನೆ.

"This language may be considered as a very old and very rude dialect of the Canarese, which was carried by a persecuted low caste tribe at some very remote period.[2]

ನೀಲಗಿರಿ ಬೆಟ್ಟ, ಇರುಳರು, ಬಡಗರು, ತೊದವರು, ಕುರುಬರು ಮತ್ತು ಯೆರವರು,

[1] M. B. Emeneau, *Kota Texts*, 1944-46. ಇವು ಈ ಭಾಷೆಯನ್ನು ಕುರಿತು ವಿಪುಲ ವಿವರ ಕೊಡುವ ನಾಲ್ಕು ಪ್ರತ್ಯೇಕ ಸಂಪುಟಗಳು.

[2] *ACGDDLS*, 1956, p. 34

ಯೆರುಕಲರು ಕೊರುವರು, ಕೋತರು—ಹೀಗೆ ಹಲವಾರು ವರ್ಗದವರ ಭಾಷೆಗಳ ತವರು. ಇದರ ಪರಿಣಾಮವಾಗಿ ಈ ಭಾಷೆಗಳಲ್ಲಿಯೇ ಪರಸ್ಪರ ಪ್ರಭಾವ ಸಾಧ್ಯವಿದೆ. ಆದರೂ ಇಲ್ಲಿನ ಸ್ವಾರಸ್ಯವೇ ಬೇರೆ ಇದೆ—

> There is as yet no evidence to show that the social prestige of the Todas at the top of the scale caused the Badagas to imitate the Todas linguistically. The Badagas may have borrowed one small linguistic trait or other, but they did not adopt the Toda language; moreover, the Todas certainly borrowed many Badaga words. The Kotas, lowest in the pile, adopted neither the Toda langauge nor the Badaga language.[1]

ಕೋತ ಭಾಷೆಯ ಸ್ವರಗಳು :

ಹ್ರಸ್ವ : ಅ ಇ ಉ ಎ ಒ
ದೀರ್ಘ : ಆ ಈ ಊ ಏ ಓ

ವ್ಯಂಜನಗಳು :

| | | | | | |
|---|---|---|---|---|---|
| ಪ | ತ | ತ̱ | ಟ | ಕ | — ಅಘೋಷ ಧ್ವನಿಗಳು |
| ಬ | ದ | ದ̱ | ಡ | ಗ | — ಘೋಷ ಧ್ವನಿಗಳು |
| ಚ̌ | ಜ̌ | | | | — ಅನುಘರ್ಷ ಧ್ವನಿಗಳು |
| ಮ | ನ | ಣ | ಙ | | — ಘೋಷ ಅನುನಾಸಿಕಗಳು |
| ಲ | ಳ | | | | — ಘೋಷ ಪಾರ್ಶ್ವಿಕಗಳು |
| ರ | | | | | — ಘೋಷ ವತ್ಸ್ರ್ಯ ಕಂಪಿತ |
| ಙ | | | | | — ಘೋಷ ಮೂರ್ಧನ್ಯ |
| ವ | | | | | — ಘೋಷ ದಂತೋಷ್ಠ ಸಂಘರ್ಷಿ |

ಇವಿಷ್ಟೂ ಕೋತ ಭಾಷೆಯ ಪ್ರಧಾನ ಧ್ವನಿಮಾಗಳು : ಇವಲ್ಲದೆ ಇನ್ನೂ ಎರಡು ಮೂರು ಉಪಮಾಗಳಿವೆ :

It may be noted, however, that initially there are no consonant clusters, except in a very few words which are

[1] *Bilingualism and Structural Borrowing*, M.B.E. Proc. Amer. Phil. Soc. Vol, 106, No, 5, p. 432

ultimately derived from Indo-Aryan languages.[1]

ಶಬ್ದದ ಪ್ರಾರಂಭದಲ್ಲಿ ಅಪರೂಪವಾಗಿ ಕಾಣಬರುವ ವ್ಯಂಜನಗುಚ್ಛನವನ್ನುಳ್ಳ ಪದಗಳು ಇಂಡೊ-ಆರ್ಯ ಭಾಷೆಯಿಂದ ಬಂದಿರುತ್ತವೆಂಬುದಕ್ಕೆ ಒಂದೆರಡು ನಿದರ್ಶನಗಳು :

ಸ್ಲೋಗವ್ < ಸಂ. ಶ್ಲೋಕವ್

ಪ್ರೋಜನವ್ < ಸಂ. ಪ್ರಯೋಜನವ್

ಕನ್ನಡ ಭಾಷೆಯಲ್ಲಿರುವಂತೆ ಕೋತ ಭಾಷೆಯಲ್ಲೂ ವ್ಯಂಜನ ಧ್ವನಿಮಾಗಳು ಸಂಧಿ-ಸಮಾಸಗಳಲ್ಲಿ ಒಂದರ ಬದಲು ಮತ್ತೊಂದು ಬರುವುದುಂಟು. ವಿಭಕ್ತಿ ಪ್ರತ್ಯಯಗಳು ಹೆಚ್ಚುಕಡಮೆ ಕನ್ನಡದಂತೆ; ಚತುರ್ಥಿ – ಕೆ, ಷಷ್ಠಿ – ಅ, ಮತ್ತು ಸಪ್ತಮಿ – ಒಳ್ಗ. ನಾಮಪದಗಳಲ್ಲಿ ಹೆಚ್ಚಿನ ಪ್ರಕೃತಿಗಳು ಏಕಾಕ್ಷರಿಗಳು ; ಈ ಪ್ರಕೃತಿಗಳನ್ನು ನಿರಪೇಕ್ಷ ಪ್ರಕೃತಿಗಳೆಂದೂ (absolute stem) ವಿಕೃತ ಪ್ರಕೃತಿಗಳೆಂದೂ oblique stem) ಎರಡು ತೆರನಾಗಿ ನೋಡಬಹುದು. ಧಾತುಗಳಲ್ಲೂ ಏಕಾಕ್ಷರೀ ಧಾತುಗಳೇ ಅಧಿಕ. ಸರ್ವನಾಮಗಳು ಇಂತಿವೆ :

| | |
|---|---|
| ಉತ್ತಮ ಪುರುಷ : | ಏಕವಚನ ; ಆನ್, ಎನ್ : ಬಹುವಚನ – ಆಮ್ |
| | ಸಮಾವೇಶಕ ; ಅಮ್ – : ಅಸಮಾವೇಶಕ – ಎಮ್ |
| ಮಧ್ಯಮ ಪುರುಷ : | ಏ. ವ ; ನೀ, ನಿನ್ – : ಬ.ವ ; ನೀಮ್, ನಿಮ್ |
| ಆತ್ಮಾರ್ಥಕ : | ಏ.ವ ; ತಾನ್, ತನ್ : ಬ.ವ ; ತಾಮ್, ತಮ್ –[2] |

ತನ್ನ ನೆರೆಹೊರೆಯ ಭಾಷೆಗಳಾದ ತೊದ ಮತ್ತು ಬಡಗ ಭಾಷೆಗಳ ಗಾಢ ಪ್ರಭಾವಕ್ಕೆ ಒಳಗಾಗದೆ, ಕೋತ ಭಾಷೆ ಹಿಂದಿನ ಸ್ವರೂಪವನ್ನು ಸಾಧ್ಯವಾದಷ್ಟು ಉಳಿಸಿಕೊಂಡು ಬಂದಿದೆ. ಕೋತ ಭಾಷೆಯ ಕೆಲವು ಪದಗಳನ್ನು ಇಲ್ಲಿ ಉದಾಹರಿಸಿದೆ :

| ಕೋತ | ಕನ್ನಡ |
|---|---|
| ಮೊಗ್ | ಮಗು |
| ಪೆಮೊಗ್ | ಹೆಂಗಸು < ಪೆಣ್ |
| ಮೊಳ್ | ಮಗಳು |
| ಪಜ್ | ಹಂದಿ < ಪಂದಿ |
| ಕೊಟಿ್ | ಎಮ್ಮೆಕರು[4] |

[1] *Kota Texts*, Part one, 1944, p. 16

[2] ಅದೇ., ಮೊದಲ ಭಾಗದ ಪುಟ ೧೫ರಿಂದ ಪುಟ ೨೯ರ ವರೆಗೆ ನೋಡಿ.

[3] ಕೆಲವು ಸಲ ಹೆಂಡತಿ ಎಂಬ ಅರ್ಥವೂ ಉಂಟು.

[4] ಒಂದು ವರುಷಕ್ಕಿಂತ ಕಡಮೆ ಇರುವ ಕರುವಿಗೆ ಈ ಹೆಸರು.

| | |
|---|---|
| ನೀರ್ | ನೀರು |
| ನಲ್ | ನಲ್—ನಲ್ಮೆ |
| ಮಲಿವ್ | ಬೆಟ್ಟದೆಮ್ಮೆಗಳು |
| ಮಲಬ್ | ಎತ್ತರತಗ್ಗು |
| ಆಯ ಅವ | ಅಯ್ಯೋ ಅವ್ವಾ |
| ಕಳ್ಕ್ | ಕಳ > ಕಣ |
| ವಲ್ | ಬಲ್ > ಬಲ |
| ಪರ್ವ್—ಪರ್ದ್ | ಪಣ್ |
| ಗೂಳ್ | ಕಳ್/ – ಗಳ್ |

೧೯೬೧ರ ಜನಗಣತಿಯ ವರದಿಯ ಪ್ರಕಾರ ಕೋತ ಭಾಷೆಯನ್ನು ಆಡುವವರ ಒಟ್ಟು ಸಂಖ್ಯೆ ೮೬೨ ಅಂದರೆ ೧೯೧೧ರ ಜನಗಣತಿಯ ಲೆಕ್ಕಕ್ಕಿಂತಲೂ ನಾಲ್ಕುನೂರು ಜನ ಕಡಮೆಯಾಗಿದ್ದಾರೆ. ತೊದ ಮತ್ತು ಕೋತ ಭಾಷೆಗಳನ್ನು ಆಡುವವರ ಸಂಖ್ಯೆ ಕರಗತೊಡಗಿದೆ. ಈ ೮೬೨ ಜನರಲ್ಲಿ ೪೬೭ ಜನ ಗಂಡಸರು; ೩೯೫ ಜನ ಹೆಂಗಸರು.

ಎಂ. ಬಿ. ಎಮಿನೊ ಅವರು ಸಿದ್ಧಪಡಿಸಿರುವ ಹೊತ್ತಗೆಯಲ್ಲಿ ಕೋತ ಭಾಷೆಯ ಆಕೃತಿಮಾಗಳನ್ನೂ, ವಾಕ್ಯರಚನೆಯ ವೈಶಿಷ್ಟ್ಯವನ್ನೂ, ಪದಕೋಶವನ್ನೂ, ವ್ಯಾಕರಣಾಂಶಗಳನ್ನೂ ನಿರೂಪಿಸಲು ನೆರವಾಗುವ ಹತ್ತಾರು ಕತೆಗಳನ್ನು ಅನುವಾದದೊಡನೆ ಕೊಟ್ಟಿದ್ದಾರೆ. ೧೯೩೫ರಿಂದ ೧೯೩೮ರ ವರೆಗೆ ಅವರು ಭಾರತದಲ್ಲಿದ್ದ ಕಾಲದಲ್ಲಿ ಸುಮಾರು ಎಂಟು ತಿಂಗಳಕಾಲ ನೀಲಗಿರಿಯಲ್ಲೇ ಇದ್ದುಕೊಂಡು ಕೋತ ಭಾಷೆಯ ವಿವರಗಳನ್ನು ಸಂಗ್ರಹಿಸಿದರು. ನೀಲಗಿರಿಯ ತೊದವರು (ತೋಡರು), ಬಡಗರು, ಇರುಳರು, ಕುರುಂಬರು ಮತ್ತು ಈ ಕೋತಭಾಷೆಯನ್ನು ಆಡುವವರು–ಸಮಾಜ ಶಾಸ್ತ್ರಕಾರರಿಗೂ ಭಾಷಾವಿಜ್ಞಾನಿಗಳಿಗೂ ಆಕರ್ಷಕ ಜನಾಂಗವಾಗಿದ್ದಾರೆ. ದಿನೇದಿನೇ ನಶಿಸತೊಡಗಿರುವ ಈ ಜನಾಂಗಗಳ ಭಾಷೆಗಳನ್ನು ಕುರಿತು ಹೆಚ್ಚು ಸಂಶೋಧನೆ ಶೀಘ್ರ ನಡೆಯುವುದು ಅಗತ್ಯ.

# ಕುರುಖ್ ಭಾಷೆ

ಉರಾಂವ್ ಅಥವಾ ಒರಾವೊನ್ ಎಂಬ ಮತ್ತೊಂದು ಹೆಸರಿನಿಂದ ಪ್ರಸಿದ್ಧರಾಗಿರುವ ಜನರು ಆಡುವ ದ್ರಾವಿಡಭಾಷೆಯೇ ಕುರುಖ್ ಅಥವಾ ಕುಡುಖ್ ಎಂಬ ಶ್ರಾವಣ ಗುಂಪಿನ ದ್ರಾವಿಡಭಾಷೆ. ಉತ್ತರ ದ್ರಾವಿಡಭಾಷಾ ಶಾಖೆಗೆ ಸೇರಿದ ಈ ಭಾಷೆಯನ್ನು ಆಡುವ ಜನರು ಬಿಹಾರ್ ಪ್ರಾಂತ್ಯದ ಛೋಟಾನಾಗಪುರದಲ್ಲಿ ಮತ್ತು ಅದರ ನೆರೆಹೊರೆಯ ಜಿಲ್ಲೆಗಳಲ್ಲಿ ಹೆಚ್ಚಿಗೆ, ಅಂದರೆ ಸುಮಾರು ಆರು ಲಕ್ಷಕ್ಕಿಂತಲೂ ಹೆಚ್ಚಾಗಿ ಇರುವರಾದರೂ, ಇವರಲ್ಲಿ ಸಾಕಷ್ಟು ಜನ ಸಮೀಪದ ಅಸ್ಸಾಮಿನಲ್ಲಿರುವ ಟೀ ತೋಟಗಳಲ್ಲಿ ಕೆಲಸಮಾಡಲು ವಲಸೆ ಹೋಗಿದ್ದಾರೆ. ೧೯೬೧ರ ಜನಗಣತಿಯ ವರದಿಯಂತೆ ಕುರುಖ್ ಭಾಷೆಯನ್ನು ಆಡುವವರ ಸಂಖ್ಯೆ ೧,೧೪೧,೮೦೪. ಇವರಲ್ಲಿ ಕೆಲವರು ಮಧ್ಯ ಪ್ರದೇಶದ ಪರ್ವತ ಶ್ರೇಣಿಯಲ್ಲಿ ಕೂಡ ಇದ್ದಾರೆ.

ಪರ್ಜಿ, ನಾಯ್ಕಿ ಮೊದಲಾದ ನಿಗ್ರಾರ್ಂಥಿಕ ದ್ರಾವಿಡ ಪರಿವಾರದ ಭಾಷೆಗಳಂತೆ ಕುರುಖ್ ಭಾಷೆಯೂ ಹೆಚ್ಚಿನ ಸಂಶೋಧನೆಗೆ ಒಳಗಾಗಿಲ್ಲವಾಗಿ ಭಾಷಾವಿಜ್ಞಾನದ ಸಶಾಸ್ತ್ರೀಯ ಅಭ್ಯಾಸಕ್ಕೆ ಬೇಕಾದ ತಕ್ಕ ಸಾಮಗ್ರಿ ಸಿಗುವುದಿಲ್ಲ. ಧಂಗರಿ, ಧನ್ವರಿ, ಮಲ್ಹಾರ್ ಎಂಬ ಹೆಸರಿನ ಕುರುಖ್ ಭಾಷೆಗಳೂ ಇವೆ. ಕುರುಖ್ ಭಾಷೆಯನ್ನು ಒರಾಒನ್ ಎಂಬುದಾಗಿಯೂ ಕರೆಯುವರು. ಹಿಂದೆ ಗ್ರಿಗ್ನಾರ್ಡ್ ವ್ಯಾಕರಣ ಬರೆದ ಕಾಲಕ್ಕೆ ಈ ಭಾಷೆಯನ್ನು ಒರಾಒನ್ ಭಾಷೆಯೆಂದೇ ಕರೆದಿದ್ದಾನೆ.[1] ಕಾಲ್ಡ್ವೆಲ್ ಕೂಡ ತನ್ನ ಗ್ರಂಥದ ಪರಿಶಿಷ್ಟದಲ್ಲಿ ಒರಾನ್ ಭಾಷೆಯೆಂದೇ ಕರೆದು, ಈ ಭಾಷೆ ದ್ರಾವಿಡ ಗುಂಪಿಗೆ ಸೇರುತ್ತದೆಯೆಂದು ವಿವರಿಸಿದ್ದಾನೆ. ಕಾಲ್ಡ್ವೆಲ್ ಗ್ರಂಥ ಅಚ್ಚಾದ ಹತ್ತಾರು ವರುಷಗಳಾದ ಮೇಲೆ ಫ್ಲೆಕ್ಸ್ ಮುಂತಾದವರ ಪುಸ್ತಕಗಳು ಹೊರಬಂದದ್ದು.[2] ಕುರುಖ್ ಭಾಷೆಯ ವ್ಯಾಕರಣಗಳೂ ಬೇರೆ ಬೇರೆ ವಿದ್ವಾಂಸರಿಂದ ರಚಿತವಾಗಿವೆ. ಕುರುಖ್ ಭಾಷೆಯ ಕೆಲವು ಶಬ್ದಗಳು ಇಂತಿವೆ :

[1] A. Grignard, *A Grammar of the Oran Language*, Calcutta, 1924.

[2] O. Flex and Kurukh Grammer, Rev. Ferd. Hahn, *Introduction into the Oraon Grammar*, Calcutta, 1900.

| ಕನ್ನಡ | ಕುರುಖ್ |
|---|---|
| ಒಂದು | ಒಂತ |
| ಎರಡು | ಎನ್ರ್‍ |
| ಮೂರು | ಮುಂದ್ |
| ನಾಲ್ಕು | ನಾಖ್[1] |
| ಆಳ್ | ಆಲ್ |
| ಕಣ್ | ಖನ್ |
| ಪಲ್ | ಪಲ್ |
| ಬರ್ | ಬರ್ |
| ಬಾಯ್ | ಬೊಇ |
| ಮೂಗು | ಮೊಯ್ |

ಕುರುಖ್ ಭಾಷೆಯಲ್ಲಿ ಹಿಂದಿ, ಬಿಹಾರಿ ಭಾಷೆಗಳ ಪ್ರಭಾವ ವಿಶೇಷವಾಗಿದೆ.[2] ಆದರೂ ತನ್ನ ವ್ಯಾಕರಣ ರಚನೆಯನ್ನು ದ್ರಾವಿಡದ ಚೌಕಟ್ಟಿಗೆ ಅನುಗುಣವಾಗಿಯೇ ಉಳಿಸಿಕೊಂಡಿದೆ. ಉದಾಹರಣೆಗೆ ಉತ್ತಮಪುರುಷದ ಸರ್ವನಾಮ ರೂಪಗಳನ್ನು ನೋಡಬಹುದು :

ಉತ್ತಮ ಪುರುಷ : ಎನ್ (ಏ. ವ) ಏನ್ (ಬ. ವ. ವ್ಯಾವರ್ತಕ)
ನಾಮ್ (ಅಭಿವ್ಯಾಪಕ)
ಮಧ್ಯಮಪುರುಷ : ನೀನ್ (ಏ. ವ) ನೀಮ್ (ಬ. ವ.)
ಆತ್ಮಾರ್ಥಕ ಸರ್ವನಾಮ : ತಾನ್ (ಏ. ವ.) ತಾವ್ (ಬ. ವ.)

ವಿಭಕ್ತಿ ಪ್ರತ್ಯಯಗಳು :
ದ್ವಿತಿಯಾ ವಿಭಕ್ತಿ : ಅನ್
ಚತುರ್ಥಿ ವಿಭಕ್ತಿ : ಅ, ಆಗೆ
ಪಂಚಮಿಾ ವಿಭಕ್ತಿ : ತಿ
ಷಷ್ಠೀ ವಿಭಕ್ತಿ : ಹಯ್
ಸಪ್ತಮಿಾ ವಿಭಕ್ತಿ : ನು

[1] ಇಲ್ಲಿಂದ ಮುಂದೆ ಬರುವ ಪದಗಳು ಉತ್ತರ ಭಾರತದ ಭಾಷೆಗಳಿಗೆ ಸಂಬಂಧಪಟ್ಟ ಪದಗಳು.
[2] ಕುರುಖ್ ಭಾಷೆಯ ಪದಕೋಶವನ್ನು ಹತ್ತು ವರುಷಗಳ ಹಿಂದೆ ಸಿ. ಬ್ಲೆಸೆಸ್ ಎಂಬುವರು ಸಿದ್ಧಪಡಿಸಿದ್ದಾರೆ.
C. Bleses, *An English-Uraon Dictionary*, Ranchi, 1956

# ನಾಯಿಕಿ ಭಾಷೆ

ಪರ್ಜಿ ಭಾಷೆಯನ್ನು ಕುರಿತು ಹೇಳಿರುವಂತೆ ೧೯೫೦-೧೯೫೧ರಲ್ಲಿ ಟಿ. ಬರೋರವರು ಭಾರತದಲ್ಲಿ ಸಂಚರಿಸಿದ ಕಾಲದಲ್ಲಿ ಕೆಲವು ಅಜ್ಞಾತ ದ್ರಾವಿಡಭಾಷೆಗಳ ವಿಚಾರದಲ್ಲಿ ಕೆಲಸ ನಡಸಿದರು. ಇದೇ ಕಾಲದಲ್ಲಿ ಅವರು ಸುಧಿಭೂಷಣ ಭಟ್ಟಾಚಾರ್ಯರ ಜೊತೆಯಲ್ಲಿ ನಾಯ್ಕಿ ಮತ್ತು ಗದಬ ಭಾಷೆಯ ಉಪಭಾಷೆಯಾದ ಅದಿಲಾಬಾದಿನ ಗಡಬ ಭಾಷೆಯ ಬಗೆಗೆ ಅನೇಕ ಉಪಯುಕ್ತ ವಿವರಗಳನ್ನು ಕಲೆಹಾಕಿದರು. ಈ ವಿವರಗಳನ್ನು ಪರ್ಜಿ ಭಾಷೆಯನ್ನು ಕುರಿತು ಬರೆದ ಪುಸ್ತಕದಲ್ಲೇ ಅಳವಡಿಸಿದರು. ನಾಯಿಕಿ ಎಂಬುದೂ ಕ್ಷುಲ್ಲಕ ಅಥವಾ ಶ್ರಾವಣ ದ್ರಾವಿಡ ಭಾಷೆ. ಇದು ಮಹಾರಾಷ್ಟ್ರದ ಭಾಂಡಾ ಜಿಲ್ಲೆಯ ಸುತ್ತ ಪ್ರಚಾರದಲ್ಲಿದೆ. ಆದರೆ ಪೆಂಗು ಭಾಷೆಯಂತೆ ನಾಯ್ಕಿ ಭಾಷೆಯ ವಿಚಾರದಲ್ಲೂ ಹೆಚ್ಚಿನ ವಿವರಗಳು ನಮಗೆ ತಿಳಿಯದು.

"... Parji and Naiki were previously hardly known except as it became evident that they and Kolami form a small sub-family within the Dravidian family. To this sub-family must be added the Gadba of Salur, which was previously unknown and which Shri Sudhibhushan Bhattacharya and Dr. Bhadriraju Krishnamurti have sampled independently and added to our files, and the Ollari dialect of the same Language which was also previously unknown and which Bhattacharya added to our files prior to the publication of his rather extensive field notes."[1]

ಇದು ಸುಮಾರು ನಲವತ್ತು ಸಾವಿರ ಜನ ಆಡುವ ಈ ಭಾಷೆಯನ್ನು ಕುರಿತು ಟಿ. ಬರೊ ಮತ್ತು ಎಂ. ಬಿ. ಎಮಿನೊ ಅವರು ತಮ್ಮ ದ್ರಾವಿಡ ಭಾಷಾ ಜ್ಞಾತಿಕೋಶದ ಪ್ರಸ್ತಾವನೆಯಲ್ಲಿ ಹೇಳಿರುವ ಮಾತು. ನಾಯ್ಕಿ, ಪರ್ಜಿ, ಕೋಲಾಮಿ, ಗದಬ ಮತ್ತು ಒಲ್ಲಾರಿ ಈ ದ್ರಾವಿಡಭಾಷೆ—ಉಪಭಾಷೆಗಳು ತಮ್ಮಲ್ಲಿ ಕಾಣುವ ಕೆಲವು ಸಾದೃಶ್ಯ

[1] *A Dravidian Etymological Dictionary*, 1961, p. vi

ಗಳಿಂದಾಗಿ ಇವೇ ಒಂದು ಉಪಶಾಖೆಯಾಗಿ ಕಾಣುತ್ತವೆ ಎಂಬುದು ಇವರ ಅಭಿಪ್ರಾಯ. ನಾಯ್ಕಿ ಭಾಷೆ ಜಿ. ಎ. ಗ್ರಿಯೆರ್ಸನ್ನನಿಗಿಂತಲೂ ಈಚೆಗೆ ಬೆಳಕಿಗೆ ಬಂದ ಭಾಷೆ ; ರಾಬರ್ಟ್‌ಕಾಲ್ಡ್‌ವೆಲ್ಲನ ಕಾಲಕ್ಕೆ ಅಜ್ಞಾತ ತಿಳಿಯದ ಭಾಷೆ.

ಪೂರ್ವ ದ್ರಾವಿಡ ಪದದ ಆದಿಯ ಕ್ ಧ್ವನಿಮಾ ಇಂದಿನ ಕೆಲವು ದ್ರಾವಿಡ ಭಾಷೆಗಳಲ್ಲಿ ಕಕಾರವಾಗಿಯೇ ಉಳಿದಿದ್ದರೂ, ನಾಲ್ಕೈದು ದ್ರಾವಿಡ ಭಾಷೆಗಳಲ್ಲಿ—ಕೆಲವು ಪರಿಸರಗಳಲ್ಲಿ ಅದು ಚ್-ಕಾರವಾಗಿದೆ. ಕಕಾರದ ಮುಂದೆ ಪೂರ್ವಸ್ವರಗಳಾದ (Front-vowels) ಇ, ಎ-ಗಳಿದ್ದರೆ ಕನ್ನಡ ಕೋತ, ನಾಯ್ಕಿ, ಗದಬ ಮುಂತಾದ ಭಾಷೆಗಳಲ್ಲಿ ಕಕಾರವೇ ಉಳಿದರೆ ತಮಿಳು, ತೆಲುಗು, ಮಲೆಯಾಳ—ಮುಂತಾದ ಭಾಷೆಗಳಲ್ಲಿ ಅದು ಚಕಾರವಾಗುತ್ತದೆ. ನಾಯ್ಕಿ ಭಾಷೆ ಕನ್ನಡದೊಡನೆ, ಈ ವಿಚಾರದಲ್ಲಿ, ಹೇಗೆ ಹೊಂದಿಕೊಳ್ಳುತ್ತದೆಯೆಂಬುದನ್ನು ಒಂದು ಉದಾಹರಣೆಯಿಂದ ನೋಡಬಹುದು :[1]

| | |
|---|---|
| ಕನ್ನಡ | ಕೇಳು |
| ನಾಯ್ಕಿ | ಕೇದ್ |
| ಕೋತ | ಕೇರ್ |
| ಗದಬ | ಕೇಟ |
| ಕೋಲಾಮಿ | ಕೇದ್ |
| ಪರ್ಜಿ | ಕೇದ್ |
| ತಮಿಳು | ಚೇೞು |
| ತೆಲುಗು | ಚೆರುಗು |
| ಮಲೆಯಾಳ | ಚೇೞುಕ |

ಇತರ ಕೆಲವು ಶಬ್ದಗಳು

| ಕನ್ನಡ | ನಾಯ್ಕಿ | |
|---|---|---|
| ಅಮ್ಮ (ಅಪ್ಪ) | ಅಮ್ಮತಾಕ್ | ಹೋ : ಕ. ಅಮ್ಮ |
| ಅಂಗಡಿ | ಅಂಗಾರಿ | |
| ಬೊಕ್ಕೆ | ಬೊಗ್ಗ | |
| ಕಳ್ಳ | ಡೊಂಗ | ಹೋ : ತೆ. ದೊಂಗ |
| ಅಡಗು | ಫಾಪ್ | |

[1] For further details on Naki Language, please see Fieldnotes collected by Burrow and Bhattacharya, incorporated in the *Parji Language* and *in Kolami—A Dravidian Language*.

| | | |
|---|---|---|
| ಎತ್ತು | ಹೆಡ್ | ಹೋ : ತೆ. ಎದ್ದು |
| ಇಲಿ<ಎಲಿ | ಎಲ್ಕ | ಹೋ : ತೆ. ಎಲುಕ |
| ಎನಿತು | ಎಂಥರ್ | ಹೋ : ತೆ. ಎಂದರು |

ಕೆಲವು ಸಂಖ್ಯಾವಾಚಕ ಶಬ್ದಗಳು ಸ್ವಾರಸ್ಯವಾಗಿವೆ :

| | ಕನ್ನಡ | ನಾಯ್ಕಿ | ಪರ್ಜಿ | ಕೋಲಾಮಿ |
|---|---|---|---|---|
| (ಸ್ತ್ರೀ ವಾಚಕ) | ಇಬ್ಬರು | ಇರಳ್ | ಇರಲ್[1] | ಇರಲ್ |
| | ಮೂವರು | ಮಯಳ್ | ಮುಯಲ್ | ಮುಯಲ್ |
| | ನಾಲ್ವರು | ನಲ್ಲಳ್ | ನೆಲಲ್ | . . . |

[1] ಪರ್ಜಿ ಮೂಲ ದ್ರಾವಿಡದ ಳ ಕಾರವನ್ನು ಕಳೆದುಕೊಂಡಿದೆ. ಆದುದರಿಂದ ಅದರ ಸ್ಥಾನ ದಲ್ಲಿ ಸಾಮಾನ್ಯವಾಗಿ ಪರ್ಜಿ ಭಾಷೆಯಲ್ಲಿ ಲಕಾರವೇ ಬರುತ್ತದೆ,

# ವಿಭಕ್ತಿ ; ಪ್ರತ್ಯಯಗಳು

| ಸಂಖ್ಯೆ | ವಿಭಕ್ತಿಯ ಹೆಸರು | [illegible] | ವಿಭಕ್ತಿ ಪ್ರತ್ಯಯಗಳು | ವಿಚಾರ |
|---|---|---|---|---|
| ೧ | ಪ್ರಥಮಾ ವಿಭಕ್ತಿ (ಕರ್ತೃ ವಿಭಕ್ತಿ) | | ಮ್, ನ್, ಉ (?) | ಪ್ರಕೃತಿಯೇ ಪ್ರಥಮಾ ವಿಭಕ್ತಿ |
| ೨ | ಸಂಬೋಧನಾ ವಿಭಕ್ತಿ (ಆಮಂತ್ರಣ ವಿಭಕ್ತಿ) | ?? | ಏ, ಎ | ಪ್ರಕೃತಿಯನ್ನೇ ಸಂಬೋಧನೆಗೂ ಬಳಸುತ್ತೇವೆ |
| ೩ | ದ್ವಿತೀಯಾ ವಿಭಕ್ತಿ (ಕರ್ಮ ವಿಭಕ್ತಿ) | | ಅನ್, ಅಮ್/ಅಂ, ಅನ್ನು | |
| ೪ | ತೃತೀಯಾ ವಿಭಕ್ತಿ (ಕರಣ ವಿಭಕ್ತಿ) | | ಇನ್, ಇಮ್/ಇಂ, ಇಂದಂ, ಇಂದೆ/ಇಂದ, ಎ | |
| ೫ | ಚತುರ್ಥೀ ವಿಭಕ್ತಿ (ಸಂಪ್ರದಾನ ವಿಭಕ್ತಿ) | | ಕ್ಕೆ, ಕೆ, ಗೆ, ಇಗೆ | |
| ೬ | ಪಂಚಮೀ ವಿಭಕ್ತಿ (ಅಪಾದಾನ ವಿಭಕ್ತಿ) | ?? | ಅತ್ತಣಿಂ, ಅತ್ತಣಿನ್, ಅತ್ತಣಿಂದಂ, ಅತ್ತ-ಣಿಂದೆ, ದೆಸೆಯಿಂದ, ಕಡೆಯಿಂದ | ಬಹುವಾಗಿ ತೃತೀಯಾ ವಿಭಕ್ತಿಯೇ ಇದರ ಕೆಲಸ ಮಾಡುತ್ತದೆ |
| ೭ | ಷಷ್ಠೀ ವಿಭಕ್ತಿ (ಸಂಬಂಧ ವಿಭಕ್ತಿ) | | ಅ, ಆ | |
| ೮ | ಸಪ್ತಮೀ ವಿಭಕ್ತಿ (ಅಧಿಕರಣ ವಿಭಕ್ತಿ) | | ಉಳ್, ಒಳ್, ಅಲ್ಲಿ | |

ಭಾಷೆಯಲ್ಲಿ ವಿಭಕ್ತಿಯ ಸ್ಥಾನ ಮಹತ್ವದ್ದು. ಏಕೆಂದರೆ ಅನೇಕ ಭಾಷೆಗಳಲ್ಲಿ ವಾಕ್ಯ ಏರ್ಪಡಬೇಕಾದರೆ ವಿಭಕ್ತಿಯಿಂದ ಕೂಡಿದ ಶಬ್ದಗಳಿರಬೇಕಾಗುತ್ತದೆ. ಪದದ ಅರ್ಥ

ವನ್ನು ವಿಭಜಿಸಿ, ಒಂದು ಪದಕ್ಕೂ ಇನ್ನೊಂದು ಪದಕ್ಕೂ ಇರುವ ಪರಸ್ಪರ ಸಂಬಂಧ ವನ್ನು ಸೂಚಿಸುವ ಪ್ರತ್ಯಯಕ್ಕೆ ವಿಭಕ್ತಿಯೆಂದು ಹೆಸರು. ಸಂಸ್ಕೃತಕ್ಕೂ ದ್ರಾವಿಡ ಭಾಷೆಗಳಿಗೂ ಇರುವ ಹಲವು ವ್ಯತ್ಯಾಸಗಳಲ್ಲಿ ವಿಭಕ್ತಿ-ಪ್ರತ್ಯಯ ಮುಖ್ಯವಾದುದು. ದ್ರಾವಿಡ ಭಾಷೆಗಳಲ್ಲಿ ಏಕ ಮತ್ತು ಬಹುವಚನಗಳೆರಡಕ್ಕೂ ಒಂದೇ ವಿಭಕ್ತಿ ಪ್ರತ್ಯಯ ಸೇರುತ್ತದೆ: (೧) ಆದರೆ ಸಂಸ್ಕೃತ ಭಾಷೆಯಲ್ಲಿ ಹಾಗಲ್ಲ, ಅಲ್ಲಿ ಇರುವ ಮೂರು ತೆರನಾದ ವಚನಗಳಿಗೆ ಮೂರು ಪ್ರತ್ಯೇಕವಾದ ವಿಭಕ್ತಿ ಪ್ರತ್ಯಯಗಳು ಸೇರುತ್ತವೆ. (೨) ಸಂಸ್ಕೃತದಲ್ಲಿ ವಚನ ಮತ್ತು ವಿಭಕ್ತಿಗಳಿಗೆ ಪ್ರತ್ಯೇಕವಾದ ಪ್ರತ್ಯಯಗಳಿಲ್ಲ, ವಚನ ಮತ್ತು ವಿಭಕ್ತಿಗಳೆರಡೂ ಒಂದೇ ಪ್ರತ್ಯಯದಿಂದ ಸೂಚಿತವಾಗುತ್ತವೆ; ಕನ್ನಡ ದಲ್ಲಿ ವಚನ ಮತ್ತು ವಿಭಕ್ತಿಗಳಿಗೆ ಬೇರೆಬೇರೆ ಪ್ರತ್ಯಯಗಳಿವೆ.

> ...in the inflecting languages, in the declension of nouns the number and case are united in one suffix, but in the suffix-agglutinating languages there is a seperate suffix for the number and another for each case.[1]

(೩) ಸಂಸ್ಕೃತದಲ್ಲಿ ಬೇರೆಬೇರೆ ಪ್ರಕೃತಿಗಳಿಗೆ, ಕೆಲವು ವಿಶೇಷ ಸಂದರ್ಭಗಳಲ್ಲಿ ಬೇರೆ ಬೇರೆ ಪ್ರತ್ಯಯಗಳಿರುವುದು ಕಾಣುತ್ತದೆ. ಇವುಗಳಿಗೆ ಉದಾಹರಣೆಗಳನ್ನಿತ್ತು ವಿಶದೀ ಕರಿಸಬಹುದು :

| | ಕನ್ನಡ | ಸಂಸ್ಕೃತ |
|---|---|---|
| (೧). | ಬೆಟ್ಟವನ್ನು ; ಬೆಟ್ಟಗಳನ್ನು | ಗಿರಿಂ, ಗಿರೀ, ಗಿರೀನ್ |
| (೨)-(ಅ) | ಅವರಿಂದ-ಅವರ್-ಬಹುವಚನ ಪ್ರತ್ಯಯ<br>ಇಂದ-ತೃತೀಯಾ ವಿಭಕ್ತಿ ,, | ತೈಃ |
| (೨)-(ಆ) | | |
| (೩) | | ರಾಜನ್, ರಾಜ, ರಾಜ್ಞ |

| ವಿಭಕ್ತಿ | ಏಕವಚನ | ಬಹುವಚನ | ವಚನ-ವಿಭಕ್ತಿ |
|---|---|---|---|
| ಪ್ರಥಮಾ | ಸೇವಕ–ನು | ಸೇವಕ–ರು | ಸೇವಕಃ |
| ದ್ವಿತೀಯ | ಸೇವಕ–ನನ್ನು | ಸೇವಕ–ರನ್ನು | ಸೇವಕಾನ್ |
| ತೃತೀಯಾ | ಸೇವಕ–ನಿಂದ | ಸೇವಕ–ರಿಂದ | ಸೇವಕೈಃ |
| ಚತುರ್ಥೀ | ಸೇವಕ | ಸೇವಕ–ರಿಗೆ | ಸೇವಕೇಭ್ಯಃ |
| ಪಂಚಮೀ | ಸೇವಕ–ನ ದೆಸೆಯಿಂದ | ಸೇವಕ–ರ ದೆಸೆಯಿಂದ | ಸೇವಕೇಭ್ಯಃ |
| ಷಷ್ಠೀ | ಸೇವಕ–ನ | ಸೇವಕ–ರ | ಸೇವಕಾನಾಮ್ |
| ಸಪ್ತಮೀ | ಸೇವಕ–ನಲ್ಲಿ | ಸೇವಕ–ರಲ್ಲಿ | ಸೇವಕೇಷು |

[1] Taraporewala, *Elements of the Science of Language*, p. 24

ಹಾಗಾದರೆ ದ್ರಾವಿಡ ಭಾಷೆಗಳ-ಕನ್ನಡದ ವ್ಯಾಕರಣ ಪ್ರಕ್ರಿಯೆಯಲ್ಲಿ ಸಂಸ್ಕೃತ ಭಾಷೆಯ ರೀತಿ ಮತ್ತು ಕ್ರಮ ಎಲ್ಲಿಯೂ ಕಾಣುವುದಿಲ್ಲವೆ—ಎಂದು ಪ್ರಶ್ನಿಸಬಹುದು. ಕೆಲವೆಡೆಗಳಲ್ಲಿ ಸಂಸ್ಕೃತದ ರೀತಿ ನಿಚ್ಚಳವಾಗಿ ಕಾಣುತ್ತದೆ. ಉದಾಹರಣೆಗೆ ದ್ರಾವಿಡ ಭಾಷೆಗಳ ಸರ್ವನಾಮಗಳಲ್ಲಿ ಸಂಸ್ಕೃತದ ಕ್ರಮ ಕಾಣುತ್ತದೆ. ಈ ರೂಪಗಳನ್ನು ನೋಡಿ :

ನೀನ್, ಆನ್, ತಾನ್ — ಆದಿ ದೀರ್ಘವಾಗಿದೆ
ನಿನ್ನ, ಎನ್ನ, ತನ್ನ — ಆದಿ ಹ್ರಸ್ವವಾಗಿದೆ

ಅಷ್ಟೇ ಏಕೆ ವಿಭಕ್ತಿಗಳ ವಿಂಗಡಣೆಯಲ್ಲೂ, ವಿವರಣೆಯಲ್ಲೂ ಸಂಸ್ಕೃತದ ಅನುಕರಣೆಯೇ ಇದೆ. ಆದರೆ ಭಾಷಾಶಾಸ್ತ್ರದ ದೃಷ್ಟಿಯಿಂದ ಸಮೀಕ್ಷಿಸಿದಾಗ ಮಾತ್ರ ಇದರಲ್ಲಿನ ವ್ಯತ್ಯಾಸ, ಮನದಟ್ಟಾಗುತ್ತದೆ.

ಸಂಸ್ಕೃತ ಭಾಷೆಯಲ್ಲಿ ಎಂಟು ವಿಭಕ್ತಿಗಳುಂಟು, ಸಂಬೋಧನಾ ವಿಭಕ್ತಿಯೂ ಸೇರಿ. ಕನ್ನಡದಲ್ಲಿಯೂ ಆ ಎಲ್ಲ ವಿಭಕ್ತಿಗಳೂ ಉಂಟೆಂದು ವೈಯಾಕರಣರು ವ್ಯಕ್ತ ಪಡಿಸಿದ್ದಾರೆ. ಆದರೆ ಭಾಷಾಶಾಸ್ತ್ರದ ದೃಷ್ಟಿಯಿಂದ ನೋಡಿ ಹೇಳುವುದಾದರೆ, ಕನ್ನಡದಲ್ಲಿ ಪ್ರಥಮ ಮತ್ತು ಪ್ರಥಮೇತರ ವಿಭಕ್ತಿಗಳೆಂಬ ಎರಡು ಪ್ರಭೇದ ಮಾಡಿಕೊಂಡರೆ ಸಾಕೆಂದು ಕಾಣುತ್ತದೆ. ಕೇಶಿರಾಜನಿಗಿಂತಲೂ ನಾಲ್ಕು ಶತಮಾನ ಹಳೆಯದಾದ ಕವಿರಾಜಮಾರ್ಗದಲ್ಲೇ, ಸಂಬೋಧನಾ ವಿಭಕ್ತಿಯನ್ನು ಬಿಟ್ಟು, ಏಳು ವಿಭಕ್ತಿಗಳನ್ನು ಹೇಳಿದೆ :

ನರಪತಿ ಬಂದನಾ ನೃಪನನಟ್ಟಿಯೆ ಕಾಣ್ಬುದು ತನ್ನರೇಂದ್ರನಿಂ
ಧರಣಿಸನಾಥೆ ಭೂಪದಿಕಪ್ಪವನೀಗವನೀಶನತ್ತಣಿಂ
ಪರಿಭವಮುಂ ಕಟಿಲ್ಲುವುದಧೀಶ್ವರನಾ ದಯೆಸಾಲ್ಗು ಮಾಮಹೀ
ಶ್ವರನೊಳಿದಪ್ಪುದೆಂಬುದಿದು ಕಾರಕಯುಕ್ತ ವಿಭಕ್ತ್ಯನುಕ್ರಮಂ ‖[1]

ನಾಗವರ್ಮನೂ[2] ಕೇಶಿರಾಜನೂ ಹೀಗೆಯೇ ಹೇಳಿದ್ದಾರೆ.

ಆದರೆ ಕನ್ನಡದಲ್ಲಿ, ಸಂಸ್ಕೃತದ ಕ್ರಮವನ್ನು ಅನುಕರಿಸಿ, ಅನುಸರಿಸಿ ಮಾಡಿಕೊಂಡ, ಎಂಟು ವಿಭಕ್ತಿಗಳಷ್ಟೂ ಇಲ್ಲ. ಏಕೆಂದರೆ ಕನ್ನಡದಲ್ಲಿ, ಮತ್ತು ಇತರ ದ್ರಾವಿಡ ಭಾಷೆಗಳಲ್ಲೂ—ಶಬ್ದದ ಸಹಜರೂಪವೇ ಪ್ರಥಮಾ ವಿಭಕ್ತಿಯಾಗುತ್ತದೆಯಲ್ಲದೆ, ಕನ್ನಡದಲ್ಲಿನ ಉಳಿದ ಆರು ವಿಭಕ್ತಿಗಳಲ್ಲಿ ಒಂದೆರಡು ವಿಭಕ್ತಿಗಳು ನಿಶ್ಚಯವಾಗಿಯೂ ಇಲ್ಲ. ಕನ್ನಡದ ಒಂದೆರಡು ವಿಭಕ್ತಿಗಳು ನೈಜಸೃಷ್ಟಿಯಾಗಿರದೆ ಕೇವಲ ವೈಯಾಕರಣರು ಸಂಸ್ಕೃತಾನುಕರಣೆಯಿಂದ ಮಾಡಿಕೊಂಡ ಕೃತಕ ವ್ಯವಸ್ಥೆಯಾಗಿದೆ.

[1] ಕವಿರಾಜಮಾರ್ಗ, ೧-೧೧೫ ; ಈ ಪದ್ಯದಲ್ಲಿ ಏಳು ವಿಭಕ್ತಿಗಳನ್ನೂ, ಪ್ರತ್ಯಯಗಳನ್ನೂ ಉದಾಹರಣೆಗಳೊಡನೆ ಹೇಳಿದೆ

[2] ಶಬ್ದಸ್ಮೃತಿ, ಸೂತ್ರಗಳು ೧೫-೧೬

ಕೆಲವು ವಿಭಕ್ತಿಗಳಿಗೆ ಸೇರುವ ಪ್ರತ್ಯಯಗಳು ಸಂಸ್ಕೃತದಲ್ಲಿ ಇರುವಂತೆ ನಿಯತವಾಗಿಯಾಗಲಿ, ಖಚಿತವಾಗಿಯಾಗಲಿ ಇಲ್ಲದಿರುವುದು ಈ ಹೇಳಿಕೆಯನ್ನೇ ಪುಷ್ಟೀಕರಿಸುತ್ತದೆ. ಕಾಲಕ್ರಮದಲ್ಲಿ ಹೇಗೆ ಪ್ರತಿಯೊಂದು ವಿಭಕ್ತಿಯ ಪ್ರತ್ಯಯಗಳೂ ಪರಿವರ್ತನೆಯಾಗಿದೆಯೆಂಬುದನ್ನೂ ಮುಂದೆ ವಿವರವಾಗಿ ಪರಿಶೀಲಿಸಲಾಗುವುದು. ಆದರೂ ದ್ರಾವಿಡ ಭಾಷೆಗಳಲ್ಲಿನ ವಿಭಕ್ತಿಪ್ರತ್ಯಯ ವ್ಯವಸ್ಥೆ ಜಟಿಲವಾಗಿಯೇ ತೋರುತ್ತದೆ.

## ಪ್ರಥಮಾ ವಿಭಕ್ತಿ

ಕವಿರಾಜಮಾರ್ಗದಲ್ಲಿ 'ವಿಭಕ್ತಿಗಳೇೞಿನಿಕ್ಕುಂ'[1] ಎಂದು ಹೇಳಿದೆ, ಪ್ರಥಮಾ ವಿಭಕ್ತಿಯನ್ನು ಒಪ್ಪಿಕೊಂಡಿದೆ. ನಾಗವರ್ಮ, ಕೇಶಿರಾಜ ಭಟ್ಟಾಕಲಂಕರೂ ಅಷ್ಟೇ.[2] ಆದರೆ ಕನ್ನಡದಲ್ಲಿ 'ಪ್ರಥಮಾ ವಿಭಕ್ತಿಯ ಪ್ರತ್ಯಯ' ಎಂಬುದೊಂದು ಬೇರೆ ಇಲ್ಲ. ಅಂದರೆ ಕನ್ನಡದಲ್ಲಿ ಪ್ರಥಮಾ ವಿಭಕ್ತಿಯೇ ಇಲ್ಲಪೆಂದಲ್ಲ; ಪ್ರಥಮಾ ವಿಭಕ್ತಿ ಇದೆ, ಆದರೆ ಅದಕ್ಕೊಂದು ಪ್ರತ್ಯೇಕವಾದ ಪ್ರತ್ಯಯ ಇಲ್ಲವೆಂಬುದು ಭಾಷಾವಿಜ್ಞಾನಿಗಳ ಅಭಿಪ್ರಾಯ. ಕನ್ನಡದಲ್ಲಿ ಸಾಮಾನ್ಯವಾಗಿ ಪ್ರಕೃತಿಗಳೇ ಪ್ರಥಮಾ ವಿಭಕ್ತಿಯ ಪದಗಳಾಗಿ ನಿಲ್ಲುತ್ತವೆಯೆನ್ನಬಹುದು. ಅಲ್ಲದೆ ಕನ್ನಡದಲ್ಲಿ ಶಬ್ದ-ಪದ ಎರಡೂ ಒಂದೇ ಆಗಿರುತ್ತವೆಯಾದರೂ ಶಬ್ದದ ಮೂಲರೂಪವೇ ಪ್ರಥಮಾ ವಿಭಕ್ತಿಯಲ್ಲಿ ಸಿಗುತ್ತದೆ. ಉದಾ: ಆನೆ, ಕಣ್, ಕುಱಿ, ನಾಯ್, ಪೊನ್, ಮುಳ್....ಇ. ಈ ಮೂಲ ರೂಪಗಳಿಗೆ ಮುಂದೆ ಬೇರೆಬೇರೆ ವಿಭಕ್ತಿ ಪ್ರತ್ಯಯಗಳು ಹತ್ತುತ್ತವೆ. ಆದುದರಿಂದ ಪ್ರಥಮಾ ವಿಭಕ್ತಿ ಮತ್ತು ಪ್ರಥಮೇತರ ವಿಭಕ್ತಿ ಎಂಬ ವಿಭಾಗ ಸಮಂಜಸ. ಕನ್ನಡದಲ್ಲಿ ಇರುವಂತೆ ಉಳಿದ ದ್ರಾವಿಡ ಭಾಷೆಗಳಲ್ಲೂ ಶಬ್ದದ ಸೈಜರೂಪವೇ, ಏಕವಚನದಲ್ಲಿ—ಪ್ರಥಮಾ ವಿಭಕ್ತಿ ರೂಪವಾಗುತ್ತದೆ.

ಹಾಗಾದರೆ ಅರಸ, ಮಗ, ರಾಮ—ಮುಂತಾದ ಈ ಬಗೆಯ ಅಕಾರಾದಿಯಾದ ಪದಗಳ ವಿಚಾರ ಹೇಗೆ? ಎಂಬ ಪ್ರಶ್ನೆ ಮೂಡಬಹುದು. ಈ ಪದಗಳು ಮೂಲದಲ್ಲಿ ಅಕಾರಾದಿಯಾದ ಪದಗಳಲ್ಲ. ಅರಸನ್, ಮಗನ್, ರಾಮನ್—ಎಂಬುದು ಈ ಪದಗಳ ಸಹಜರೂಪ. ಇವುಗಳು ಪ್ರಥಮಾ ವಿಭಕ್ತಿಯಲ್ಲಿ ಹೀಗೆ ವ್ಯಂಜನಾಂತವಾಗಿ ನಿಲ್ಲದೆ ಅರಸನು, ಮಗನು, ರಾಮನು—ಎಂದು ಸ್ವರಾಂತವಾಗುತ್ತವೆ. ವಾಸ್ತವವಾಗಿ ನಮ್ಮಲ್ಲಿ ಮೂಲತಃ ಅಕಾರಾಂತ ದೇಶ್ಯಪ್ರಕೃತಿಯೇ ಇಲ್ಲವೆನ್ನಬಹುದು. ಅರಸ, ರಾಮ, ಪತ್ರ—ಮೊದಲಾದವನ್ನು ಅಕಾರಾಂತವೆಂದೇ ಹೇಳಬಹುದಾದರೂ ಈ ಪದಗಳು ಕನ್ನಡ ಪದಗಳಲ್ಲವೆಂಬುದನ್ನು ಮರೆಯಬಾರದು. ಈ ಪದಗಳು ಬಂದದ್ದು ಸಂಸ್ಕೃತ ಭಾಷೆಯಿಂದ. ಆದುದರಿಂದ ನಾವು ಈಗ ಅಕಾರಾಂತವೆಂದು ಭಾವಿಸಿರುವ ಶಬ್ದಗಳಲ್ಲಿ

---

[1] ಕವಿರಾಜಮಾರ್ಗ, ೧-೧೧೪

[2] ಶಬ್ದಮಣಿದರ್ಪಣ, ಸೂತ್ರ-೧೦೩

ನೂರಕ್ಕೆ ತೊಂಬತ್ತರಷ್ಟು ಶಬ್ದಗಳೆಲ್ಲವೂ ಹಿಂದೆ ವ್ಯಂಜನಾಂತ ಪದಗಳಾಗಿದ್ದುವೆಂದು ಕಾಣುತ್ತದೆ :

| | |
|---|---|
| ಅಮ್ಮ < ಅಮ್ಮನ್ | ಕೊಳ < ಕೊಳನ್ |
| ಅಕ್ಕ < ಅಕ್ಕನ್ | ಕೋಣ < ಕೋಣನ್ |
| ಅಣ್ಣ < ಅಣ್ಣನ್ | ಮಗ < ಮಗನ್ |

ಆದುದರಿಂದ ವ್ಯಂಜನಾಂತ ಪದಗಳು ದ್ವಿತ್ವಗಳಾಗಿ ಅನಂತರ ಉಕಾರವನ್ನು ಪಡೆದುವೆನ್ನಬಹುದು. ಕೆಲವರು ಉಕಾರವನ್ನು ಎಲ್ಲ ಪದಗಳಿಗೂ ಸಾರ್ವತ್ರಿಕವಾಗಿ ಅಂಟಿಸಿ ಅದನ್ನು ಪ್ರಥಮಾ ವಿಭಕ್ತಿ ಪ್ರತ್ಯಯವೆಂದು ನಾಮಕರಣ ಮಾಡಿದ್ದಾರೆ. ಮುಂದೆ 'ಉ' ಎಂಬ ಸ್ವರ ಸೇರಿಸುವುದು ಸಂಪ್ರದಾಯವಾಗಿ ಹೋಯಿತೆನ್ನಬಹುದು. ಏಕೆಂದರೆ ಈ ಕ್ರಮ ಕ್ರಮೇಣ ಎಲ್ಲಿಯವರೆಗೆ ಹೋಯಿತೆಂದರೆ, ಮೊದಲಲ್ಲಿ ಅರಸನ್, ಮಗನ್, ರಾಮನ್—ಇಂತಹ ಕೆಲವು ಪದಗಳಿಗೆ ಮಾತ್ರ ಸೇರುತ್ತಿದ್ದ 'ಉ', ಕಡೆಕಡೆಗೆ ಸರ್ವೇಸಾಮಾನ್ಯವಾಗಿ ಎಲ್ಲ ಪದಗಳಿಗೂ ಸೇರಲಾರಂಭಿಸಿ, ಪ್ರಥಮಾ ವಿಭಕ್ತಿ ಪ್ರತ್ಯಯವೆಂಬ ನೂತನ ಅಭಿದಾನವನ್ನು ಬಿರುದಿನಂತೆ ತೆಗೆದುಕೊಂಡುಬಿಟ್ಟಿತು.

ನಿದರ್ಶನವಾಗಿ ಈ ಕೆಲವು ಪದಗಳನ್ನು ನೋಡಿ :

| | | |
|---|---|---|
| ಕಲ್ > ಕಲ್ಲು | ಗುರು > ಗುರುವು | ಪುೞ್ > ಪುೞು > ಹುಳು[1] |
| ಪತ್ರ > ಪತ್ರವು | ಮಣ್ > ಮಣ್ಣು | ಕುರಿ > ಕುರಿಯು |
| ಮನೆ > ಮನೆಯು | ತಲೆ > ತಲೆಯು | ಸೀತೆ > ಸೀತೆಯು |
| ಮುಳ್ > ಮುಳ್ಳು | ಬಿಲ್ > ಬಿಲ್ಲು | ಮರ > ಮರವು |

ಕನ್ನಡದಲ್ಲಿ ಈ ಉಕಾರ ಸೇರುವ ಕ್ರಮ ಯಾವಾಗ ಬಂತು ? ಇದಕ್ಕೆ ಕೇಶಿರಾಜನಲ್ಲಿ ಸಮರ್ಪಕ ವಿವರಣೆ ಇಲ್ಲ. ಬಹುಶಃ ಹನ್ನೆರಡನೆಯ ಶತಮಾನದ ಹೊತ್ತಿಗಾಗಲೇ ಈ ಪದ್ಧತಿ ವ್ಯಾಪಿಸತೊಡಗಿತ್ತೆಂದು ಕಾಣುತ್ತದೆ. ಹರಿಹರನ ಈ ಸಾಲುಗಳು ಇದಕ್ಕೆ ಸಾಕ್ಷಿಯಂತಿವೆ :

. . . . .ಮಾದಿರಾಜನ ಸತಿಯು
ಅಪ್ರತಿಮ ಮಾರಾಂಬೆಯೆಂಬ ಗುಣವತಿಯು[2]. . .

ಇಲ್ಲಿ ಸತಿ > ಸತಿಯು, ಗುಣವತಿ > ಗುಣವತಿಯು ಆಗಿವೆ. ನಾಯಿ, ಬಾಯಿ, ತಾಯಿ ಮತ್ತು ಸತಿ, ಗುಣವತಿ—ಇತ್ಯಾದಿ ಇಕಾರಾಂತಗಳಿಗೂ ವ್ಯಂಜನಾಂತ ಪದಗಳಿಗೆ

---

1 ಹಳಗನ್ನಡದ ಪುೞ್ ಪದದಿಂದ ಬಂದ ಹುಳು ಪದವನ್ನು ಹುಳು ಎಂದು ಹೇಳುವರಾದರೂ ಹಳ್ಳಿಗರು ಹುಳ ಎನ್ನುವರು ; ಅದೇ ರೀತಿಯಲ್ಲಿ ಗಳು/ಗಳ (ಬಿದಿರಿನ ಗಳ) ಎಂಬ ರೂಪ ರೂಢಿಯಲ್ಲಿದೆ.

2 ಬಸವರಾಜದೇವರ ರಗಳೆ, ೧–೯೯ / ೧೦೦, ಪುಟ ೫

ಸೇರಿಸಿದ್ದಂತೆ 'ಉ' ಪ್ರತ್ಯಯವನ್ನು ಸೇರಿಸಿದೆ. ಅಂದರೆ ಹರಿಹರನ ಕಾಲಕ್ಕಾಗಲೇ ಈ ಪದ್ಧತಿ ಗ್ರಂಥವನ್ನೂ ಪ್ರವೇಶಿಸಿದೆ. ಆದರೂ ಅದೇಕೋ ಈ ವಿವರ ಕೇಶಿರಾಜನಿಗೆ ಗೋಚರಿಸದೇ ಹೋಯಿತು. ಈ ಉಕಾರ ಸ್ವರ ಸೇರಿಸುವುದು ನಾಮಪದಗಳಿಗೆ ಮಾತ್ರ ನಿಲ್ಲದೆ ಸರ್ವನಾಮುಗಳಿಗೂ ದಾಂಗುಡಿಯಿಟ್ಟಿತು :

ಅವನ್ > ಅವನು ; ಇವನ್ > ಇವನು
ಅವರ್ > ಅವರು ; ಇವರ್ > ಇವರು
ನಾನ್ > ನಾನು ; ನೀನ್ > ನೀನು

ಈ ಉಕಾರ ಬಹುಶಃ ನಡುಗನ್ನಡ ಕಾಲದಲ್ಲಿ ಎಲ್ಲ ವ್ಯಂಜನಾಂತ ಪದಗಳಿಗೂ ಹಬ್ಬಿರಬೇಕು. ಇತರ ಹಳಗನ್ನಡ ವ್ಯಂಜನಾಂತ ಪದಗಳು ಹೊಸಗನ್ನಡ ಪದಗಳಾಗುವಾಗಲೂ ಇದೇ ಪದ್ಧತಿಯಿದೆ. ಅಷ್ಟೇಕೆ, ಇಂಗ್ಲಿಷಿನ ವ್ಯಂಜನಾಂತ ಪದಗಳನ್ನು ಕನ್ನಡಕ್ಕೆ ತೆಗೆದುಕೊಳ್ಳುವಾಗಲೂ ಇದೇ ರೀತಿ ಉಕಾರವನ್ನು ಸೇರಿಸಿ ಸ್ವರಾಂತ ಮಾಡಿಕೊಳ್ಳುತ್ತೇವೆ :

ಕಾಲೇಜ್ > ಕಾಲೇಜು ; ಮಾಸ್ಟರ್ > ಮೇಸ್ಟ್ರು
ಟೇಬಲ್ > ಟೇಬಲ್ಲು ; ಸ್ಕೂಲ್ > ಸ್ಕೂಲು

ಆದುದರಿಂದ "ಹಳಗನ್ನಡದಲ್ಲಿನ ವ್ಯಂಜನಾಂತಗಳೆಲ್ಲವೂ ಸ್ವರಾಂತಗಳಾಗುವುದರಿಂದ, ಅದರಲ್ಲಿಯೂ ಮುಖ್ಯವಾಗಿ ಉಕಾರಾಂತಗಳಾಗುವುದರಿಂದ, ಉ ಎಂಬುದನ್ನು ಪ್ರಥಮಾ ವಿಭಕ್ತಿಯ ಪ್ರತ್ಯಯವೆಂದು ಭಾವಿಸುವುದು ತಪ್ಪು"[1] ಎಂಬ ಸಮಂಜಸವಾದ ಹೇಳಿಕೆ ವ್ಯಕ್ತವಾಯಿತು. ಇದರಿಂದ ಪ್ರಥಮಾವಿಭಕ್ತಿಯ ಪ್ರತ್ಯಯವೆಂದು ಪ್ರತ್ಯೇಕವಾಗಿ ಇಲ್ಲವಾದರೂ ಪ್ರಥಮೆಯ ಅರ್ಥ ಪ್ರತೀತವಾಗುತ್ತದೆಂಬುದು ನಿಚ್ಚಳವಾಗುತ್ತದೆ.

ಹಳಗನ್ನಡದಲ್ಲಿ ಪ್ರಥಮಾ ವಿಭಕ್ತಿ ಪ್ರತ್ಯಯ—ಮ್ ಎಂಬುದಾಗಿ ಹೇಳಿದೆ. ಕೇಶಿರಾಜ ಪ್ರಥಮಾ ವಿಭಕ್ತಿ ಏಕವಚನದಲ್ಲಿ ಅಕಾರಾಂತ ಪದಗಳಿಗೆ ಬಿಂದು ಬರುವುದೆಂದೂ ;—ಎರಲೆ, ಕರಡಿ, ಗಿಡು, ಪುಲ್, ಪುಲಿ, ಪೊದಱ್, ಬಳ್ಳಿ—ಇಲ್ಲಿ ಬಿಂದು ಇಲ್ಲವಲ್ಲಾ—ಎಂದರೆ ಅದಕ್ಕೆ ಉಳಿದ ಕಡೆಗಳಲ್ಲಿ ಆ ಬಿಂದು ಲೋಪವಾಗುವುದೆಂದೂ ; —ಅವನ್ ಅವನೊಳ್ . . . ಇಲ್ಲಿ ನ್ ಇದೆಯಲ್ಲಾ ಎಂದರೆ ಅದಕ್ಕೆ—ಅಕಾರಾಂತ ಪುಲ್ಲಿಂಗ ಪದಗಳಿಗೆ ಸ್ವರ ಪರವಾಗಿ ಬಂದಾಗ ನಕಾರಾಗಮವಾಗುವುದೆಂದೂ ಹೇಳಿದ್ದಾನೆ.[2] ಅಂದರೆ ಅವನ ಹೇಳಿಕೆಯಲ್ಲಿ ಏಕರೂಪದ ಖಚಿತತೆಯಿಲ್ಲ. ಆದುದರಿಂದ ಅವನ ವಿವರಣೆಯಲ್ಲಿ ಹೊರಳಾಟಕ್ಕೆ ಕಾರಣ ಬಹುಶಃ ಈ ವಿಚಾರ

[1] ಕನ್ನಡ ಕೈಪಿಡಿ, ಪುಟ ೩೪೦

[2] ಶಬ್ದಮಣಿದರ್ಪಣ, ಸೂತ್ರ ೧೧೫, ಪುಟ ೧೨೦-೧೨೨

ದಲ್ಲಿ ಅವನಿಗೇ ಅನುಮಾನ ಬಂದಿದೆಯೆಂದು ಕಾಣುತ್ತದೆ. ಇಷ್ಟು ತಿರುತಿರುಗಿ ಹೇಳಿದ ಅವನ ವಿವರಣೆಯಾದರೂ ಸರಿಯಾಗಿ ಇದೆಯೆ? ಎಂದು ಪ್ರಶ್ನಿಸಿ, ಅದು ಅಂಗೀಕಾರಾರ್ಹವಲ್ಲವೆಂದು ಆಧುನಿಕರು ಅಭಿಪ್ರಾಯಪಟ್ಟಿದ್ದಾರೆ.

ಭಾಷಾವಿಜ್ಞಾನದ ದೃಷ್ಟಿಯಿಂದ ಪ್ರಥಮಾ ವಿಭಕ್ತಿಗೆ ಪ್ರತ್ಯೇಕ ಪ್ರತ್ಯಯವಿಲ್ಲವೆಂದು ಈಗಾಗಲೆ ಹೇಳಿದೆ. ಏಕವಚನದಲ್ಲಿ ಪ್ರಕೃತಿಯೇ—ಕಲ್, ಕುಜು, ತುಜು ಇತ್ಯಾದಿ—ಪ್ರಥಮಾ ವಿಭಕ್ತಿ ರೂಪವಾಗುತ್ತದೆ. ಬಹುವಚನದಲ್ಲಿ ಬಹುವಚನ ಪ್ರತ್ಯಯದಿಂದ ಕೂಡಿದ ಪ್ರಕೃತಿಯೇ ಪ್ರಥಮಾ ವಿಭಕ್ತಿಯಾಗುತ್ತದೆ—ಅರಸರ್, ಗುರುಗಳ್ ಇತ್ಯಾದಿ. ಆದರೆ ವ್ಯಾಕರಣಗಳಲ್ಲಿ—ಮ್ ಎಂಬುದನ್ನು (ಬಿಂದು, ನ್ ಗಳನ್ನೂ) ಪ್ರಥಮಾ ವಿಭಕ್ತಿಯ ಪ್ರತ್ಯಯವಾಗಿ ಹೇಳಿದೆ. ಈ/-ಮ್/ಎಂಬುದು ಯಾವ ಬಗೆಯ ಪ್ರತ್ಯಯ? ಯಾವ ಪದಗಳಿಗೆ ಸೇರುವ ಪ್ರತ್ಯಯ? ಕೈಪಿಡಿಕಾರರು "... ನಪುಂಸಕಲಿಂಗದಲ್ಲಿ—ಮ್ ಸೇರುತ್ತದೆ..." ಎಂದು ಹೇಳಿದ್ದಾರೆ.[1] ಆದರೆ ಇದು ಸರಿಯಲ್ಲವೆಂದು ಹೇಳಬಹುದು. ಏಕೆಂದರೆ ನಪುಂಸಕಲಿಂಗವಲ್ಲದ ಪದಗಳಿಗೂ ಈ—ಮ್ ಪ್ರತ್ಯಯ ಸೇರುತ್ತದೆಯಲ್ಲದೆ, ನಪುಸಂಕಲಿಂಗದ ಪದಗಳಿಗೆ ಈ—ಮ್‌ದ ಜೊತೆಗೆ—ನ್ ಎಂಬ ಪ್ರತ್ಯಯವೂ ಸೇರುತ್ತದೆ:

ಕೊಳಮ್/-ಕೊಳನ್ ; ಮರಮ್/ಮರನ್.

ಆದುದರಿಂದ ಬಿಂದು, ಮ್, ನ್ ಈ ಮೂರೂ ರೀತಿಯ ಪ್ರತ್ಯಯಗಳು ಪ್ರಥಮಾ ವಿಭಕ್ತಿಯಲ್ಲಿವೆ ಎನ್ನಬೇಕಾಗುತ್ತದೆ. ಕೆಲವರು ಬಿಂದುವೇ ಪ್ರಥಮಾ ವಿಭಕ್ತಿ ಪ್ರತ್ಯಯವೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಬಿಂದು ಅಥವಾ ಅನುಸ್ವಾರವೆಂಬುದು ಪ್ರಥಮಾ ವಿಭಕ್ತಿಯ ಪ್ರತ್ಯಯವಾಗುವುದಿಲ್ಲ, ಅದು ಪದಾಂತ್ಯದಲ್ಲಿ ಕೆಲವು ಕಡೆ ಇದ್ದರೆ ಹಲವು ಎಡೆಗಳಲ್ಲಿ ಇರುವುದಿಲ್ಲ; ಇನ್ನು—ಮ್ ಎಂಬುದು ಪ್ರಥಮಾ ವಿಭಕ್ತಿಯ ಪ್ರತ್ಯಯವೆ? ಎಂದು ಪ್ರಶ್ನಿಸಿದರೆ—ಮಾಧವನೀತನ್, ಅರಸನ್, ಕಲಿಯುಗ ವಿಪರೀತನ್, ಮುನಿಪ್ರವರನ್ ಎಂಬ ಹಲವಾರು ಪದಗಳಲ್ಲಿ—ಮ್ ಪ್ರತ್ಯಯವಿಲ್ಲ—ನ್ ಇರುವುದರಿಂದ—ಮ್ ಪ್ರಥಮೆಯ ಪ್ರತ್ಯಯವಿಲ್ಲ. ಅಲ್ಲದೆ ಕೇಶಿರಾಜನ ಅಭಿಪ್ರಾಯದಂತೆ ಅಕಾರಾಂತ ಪದಗಳಿಗೆ—ಮ್ ಸೇರಬೇಕು. ಆದರೆ ಅಕಾರಾಂತವಲ್ಲದ ಶಬ್ದಗಳಿಗೂ—ಮ್ ಪ್ರತ್ಯಯ ಸೇರುವುದೆಂಬುದನ್ನು ನೋಡಿದ್ದೇವೆ. ಹೀಗಾಗಿ ಹಿಂದಿನವರ ವಿವರಣೆ ಸಮರ್ಪಕವಾಗಿಲ್ಲ. ಅಕಾರಾಂತ ಪದಗಳಿಗೆ—ಮ್,—ನ್ ಅಷ್ಟೇ ಅಲ್ಲದೆ—ಅಳ್ ಕೂಡ ಸೇರುತ್ತದೆ:

ಅಕ್ಕಳ್—ಕರ್ಣಂಬೆತ್ತಕ್ಕಳೆ ... (ಪಂಪಭಾರತ)

ಮಗಳ್—ಏಳುಮಗಳುದಿರು ಜೋಳರಾಯನಿಗೆ—(ಇಂಗ್ಲಿಷ್ ಗೀತೆಗಳು)

ಅಂದರೆ ಸ್ತ್ರೀಲಿಂಗದಲ್ಲಿ, ಪ್ರಥಮಾ ವಿಭಕ್ತಿಯಲ್ಲಿ,-ಅಳ್ ಎಂಬ ಪ್ರತ್ಯಯ ಸೇರಿದೆ.

[1] ಕನ್ನಡ ಕೈಪಿಡಿ, ಮೂರನೆಯ ಮುದ್ರಣ, ೧೯೫೫, ಪುಟ ೩೭, ಅಡಿ ಟಿಪ್ಪಣಿಯಲ್ಲಿ.

ಆದರೆ ಈ-ಅಳ್ ಪ್ರತ್ಯಯ ಎಲ್ಲ ಸ್ತ್ರೀಲಿಂಗ ಪದಗಳಿಗೂ ಸೇರುವುದಿಲ್ಲ, ಮತ್ತು ಒಂದೇ ಪದಕ್ಕೆ-ಅಳ್,-(ಅ)ನ್ ಎಂಬ ಎರಡು ಪ್ರತ್ಯಯಗಳೂ ಸೇರುತ್ತವೆ—

ಅಕ್ಕಳ್ / ಅಕ್ಕನ್
ಮಗನ್ / ಮಗಳ್
ರತ್ನನ / ರತ್ನಳ
ಅವಳ್ನ ಕರಿ
ಅಕ್ಕನ ಮನೆಗೆ
ತಾಯೀನ ಕೇಳು

ಇತ್ಯಾದಿ ಪದಗಳಲ್ಲಿ ಮತ್ತು ವಾಕ್ಯಗಳಲ್ಲಿನ –(ಅ)ನ್ >–ನ ಎಂಬುದು ಸ್ತ್ರೀಲಿಂಗ ಪದಗಳಿಗೂ ಸೇರಿದೆ. ಆದುದರಿಂದ–ಮ್ ಪ್ರತ್ಯಯದಂತೆ –ನ್–ಅಳ್ ಪ್ರತ್ಯಯಗಳೂ ಮೂಲತಃ ಪ್ರಥಮಾ ವಿಭಕ್ತಿಯ ಪ್ರತ್ಯಯಗಳಲ್ಲ; ಪ್ರಥಮೆಯ ಅರ್ಥದಲ್ಲಿ ಪ್ರಯೋಗ ವಾಗಿವೆ.

ಮರಮ್ (– ಮ್), ಮಗನ್ (– ನ್) ಮುಂತಾದ ಪದಗಳಲ್ಲಿ ಬರುವ–ನ್ ಮತ್ತು – ಮ್ ಪ್ರತ್ಯಯಗಳು ಲಿಂಗವನ್ನು ಸೂಚಿಸುತ್ತವೆಯೆನ್ನಬಹುದಾದರೂ ಅದು ಸರಿಯಾದ ವಿವರಣೆಯಾಗುವುದಿಲ್ಲ. – ಮ್ ಕಾರವು ಮೂಲತಃ ಇದ್ದಂತೆ ತೋರು ವುದಿಲ್ಲ. ಏಕೆಂದರೆ ಹಳೆಯ ಶಾಸನಗಳಲ್ಲಿ – ನ್ ಕಾರ ಕೆಲವೆಡೆಗಳಲ್ಲಿ ಕಾಣುತ್ತದೆ. – ಮ್ ಕಾರ ಪ್ರಥಮಾ ವಿಭಕ್ತಿಯ ಪ್ರತ್ಯಯವಾಗಿ ಹಳಗನ್ನಡದಲ್ಲಿ ಕಾಣುತ್ತದೆಯಾಗಿ ಅದು ಆ ಕಾಲದ ಪರಿಧಿಯಲ್ಲೇ ಕಾಣಿಸಿಕೊಂಡಿರಬೇಕು. ಈ ಬಗೆಯಾಗಿ ಸೇರುವ – ಮ್ ಪ್ರತ್ಯಯ ದ್ರಾವಿಡ ಭಾಷೆಗಳಲ್ಲಿ ಅಪೂರ್ವ. ತಮ್ ಎಂಬ, ಸರ್ವನಾಮದ ಬಹುವಚನ ರೂಪದಲ್ಲಿನ – ಮ್, ಮತ್ತು ಅಱುಮ್ ಎಂಬ ಪದದಲ್ಲಿನ – ಮ್ ಎಂಬುವು ಪ್ರತ್ಯೇಕ ಕ್ರಿಯೆಗಳನ್ನು ಹೊಂದಿವೆ. ದ್ರಾವಿಡ ಭಾಷೆಗಳ ಆಮಹತ್ ಗುಂಪಿನಲ್ಲಿ ನಾಮಪದಗಳಿಗೆ, ಸಾಮಾನ್ಯವಾಗಿ, ವಿಶೇಷ ನಿಯಮಗಳೇನೂ ಇರುವು ದಿಲ್ಲ. ಹೀಗಾಗಿ ಈ ಮರಮ್ ಎಂಬ ಪದದ ಕೊನೆಯಲ್ಲಿನ – ಮ್ ಪ್ರತ್ಯಯ, ಬಹುಶಃ ಸಂಸ್ಕೃತ ಭಾಷೆಯ ನಪುಂಸಕ ಲಿಂಗದ ಅಂತ್ಯದಲ್ಲಿ ಬರುವ – ಅಮ್ (– ವೃಕ್ಷಮ್), ಎಂಬುದರ ಅನುಕರಣೆಯಿಂದ ಮೂಡಿರಬಹುದೆಂದು ಕೈಪರ್ (Kuiper)[1] ಎಂಬ ವಿದ್ವಾಂಸರ ಅಭಿಪ್ರಾಯ. ಆದರೂ ಪೂರ್ವದ ಹಳಗನ್ನಡದಲ್ಲಿ ಇದ್ದಿರಬಹುದಾದ – ನ್ ಎಂಬುದೇ ಮುಂದೆ ಹಳಗನ್ನಡ ಕಾಲಕ್ಕೆ – ಮ್ ಆಗಿರಬಹು ದೆಂದೂ ತೋರುತ್ತದೆ. ಅರಸನ್, ಮಗನ್, ಮರನ್, ರಾಮನ್—ಇತ್ಯಾದಿ ರೂಪ ಗಳು ಅರಸಮ್, ಮಗಮ್, ಮರಮ್, ರಾಮಮ್ ಎಂದು ಆಗಿರುವುದು ಸಾಧ್ಯ

[1] F. B. J. Kuiper, Notes on Dravidian Morphology, *Acta Orientalia*, 20, 1948.

ವಿದೆ, (> ಅರಸಂ, ಮಗಂ, ಮರಂ, ರಾಮಂ). ಇಷ್ಟಾದರೂ ಈ ನಕಾರ ಪೂರ್ತಿ ಹೊರಟುಹೋಗಿಲ್ಲ, ಇಂದಿಗೂ ಕೋಲಾರ ಜಿಲ್ಲೆಯಲ್ಲಿ ಉಳಿದುಕೊಂಡಿದೆ. ಈ ಭಾಗದಲ್ಲಿ—ಅಪ್ಪನು (ಅಪ್ಪನ್ + ಉ > ಅಪ್ಪನು. cf: ಅಣ್ಣನ್ + ಉ > ಅಣ್ಣನು)—ಎಂಬುದೂ ನಾಮಪದಗಳಿಗೆ ಸೇರುತ್ತದೆ: ರಾಮಪ್ಪನು, ವೆಂಕಟಪ್ಪನು, ನರಸಪ್ಪನು, ಜೂಲೋನು, ತಳವಾರೋನು . . .ಇತ್ಯಾದಿ.

ಆದುದರಿಂದ ಶಬ್ದಮಣಿದರ್ಪಣಕಾರನಾದ ಕೇಶಿರಾಜ 'ಬಿಂದು ವದಂತಕ್ಕೆ'[1] ಎಂಬುದಾಗಿ, ಪ್ರಥಮಾ ವಿಭಕ್ತಿಗೆ, ಪ್ರತ್ಯಯ ಹೇಳಿರುವುದು ಕೇವಲ ಸಂಸ್ಕೃತ ಭಾಷಾಮರ್ಯಾದೆಯನ್ನು ಅನುಸರಿಸಿ. ಅಷ್ಟೇ ಹೊರತು, ಇತರ ಎಲ್ಲ ದ್ರಾವಿಡ ಭಾಷೆಗಳಂತೆ ಕನ್ನಡದಲ್ಲಿಯೂ ಪ್ರತ್ಯೇಕವಾದ ಪ್ರಥಮಾವಿಭಕ್ತಿ ಪ್ರತ್ಯಯವಿಲ್ಲ. ಆಯಾ ಪದದ ಪ್ರಕೃತಿ ರೂಪವೇ ಸಹಜವಾಗಿ ಪ್ರಥಮಾವಿಭಕ್ತಿಯ ಕಾರ್ಯ ನಿರ್ವಹಿಸುತ್ತದೆ. ಆದಕಾರಣ ಏಕವಚನದಲ್ಲಿ ಪ್ರಕೃತಿಯೇ ಪ್ರಥಮೆಯ ಕಾರ್ಯ ನಿರ್ವಹಿಸಿದರೆ ಬಹುವಚನದಲ್ಲಿ ಬಹುವಚನ ಪ್ರತ್ಯಯದಿಂದ ಕೂಡಿದ ಪ್ರಕೃತಿ ಪ್ರಥಮಾವಿಭಕ್ತಿಯ ಅರ್ಥವನ್ನು ಸೂಚಿಸುತ್ತದೆ:

The nominative singular in all the three genders does not possess any case termination. The stem itself or the stem with gender-suffix forms the nominative singular. In modern scientific linguistics the nominative case here will be said to possess morpheme-zero. The nominative plural is formed with the suffiixes–âr, –ar, –gaḷ, –arkkaḷ, –dir and–vir.[2]

ಇದು ಶಾಸನಗಳ ಆಧಾರದಿಂದ ನೀಡಿದ ವಿವರಣೆ.

## ದ್ವಿತೀಯಾ ವಿಭಕ್ತಿ

ಹಳಗನ್ನಡದ ವ್ಯಾಕರಣಗಳಲ್ಲಿ ದ್ವಿತೀಯಾ ವಿಭಕ್ತಿಯ ಪ್ರತ್ಯಯ – ಅಮ್ – ಅಂ ಎಂಬುದಾಗಿ ವೈಯಾಕರಣರು ವಿವರಿಸಿದ್ದಾರೆ. ಆದರೆ ಇತ್ತೀಚೆಗೆ ದ್ವಿತೀಯಾ ವಿಭಕ್ತಿಯೇ ಇಲ್ಲ, ನಾಮಪದದ ಮುಂದೆ ಕ್ರಿಯಾಪದವನ್ನು ಇಟ್ಟರೆ ಅದೇ ದ್ವಿತೀಯಾ ವಿಭಕ್ತಿಯಾಗುತ್ತದೆ—ಎಂಬ ಇನ್ನೊಂದು ಅಭಿಪ್ರಾಯವೂ ಇದೆ; ನಮ್ಮ ಕ್ರಿಯಾ ಸಮಾಸಗಳೂ ಈ ವಾದಕ್ಕೆ ಪುಷ್ಟಿ ಕೊಡುತ್ತವೆ—ಬಳೆದೊಟ್ಟು (=ಬಳೆಯನ್ನು ತೊಟ್ಟು) ಮನೆವೊಕ್ಕು (=ಮನೆಯನ್ನು ಹೊಕ್ಕು) ಬಿಲ್ಗೊಳ್ (=ಬಿಲ್ಲನ್ನು ಕೊಳ್) ಇತ್ಯಾದಿ ಪ್ರಯೋಗಗಳನ್ನು ಗಮನಿಸಬಹುದು:

---

[1] ಶಬ್ದಮಣಿದರ್ಪಣ, ಎರಡನೆಯ ಮುದ್ರಣ, ಸೂತ್ರ ೧೧೫, ಪು. ೧೨೧.

[2] G. S. Gai, *Histrorical Grammar of Old Kannada*, p. 28-29.

There are many instances in OK (Old Kannada) and MK (Middle Kannada) where the stem itself is used in the sense of the accusative case. And in NK (New Kannada) especially in colloquial language, the accusative case sign is very rarely used.[1]

ಈ ವಾದವನ್ನು ಅಂಗೀಕರಿಸಲು ಬಹುಶಃ ಕಷ್ಟವಾದೀತು ಎನ್ನುವುದಕ್ಕಿಂತಲೂ, ಇನ್ನೂ ಹೆಚ್ಚಿನ ಅಭ್ಯಾಸ ನಡೆಯಬೇಕಾದೀತು ಎಂದು ಹೇಳಬೇಕಾಗಿದೆ. ಏಕೆಂದರೆ ಈ ಬಗೆಯ ನಿದರ್ಶನಗಳು ತಕ್ಕಮಟ್ಟಿಗೆ ಇದ್ದರೂ, ದ್ವಿತೀಯಾ ವಿಭಕ್ತಿಯ ಪ್ರತ್ಯಯ ಹಿಂದಿನಿಂದಲೂ ಇದ್ದಿತೆಂಬುದಕ್ಕೆ ಹೆಚ್ಚು ಆಧಾರಗಳಿವೆ.

ದ್ವಿತೀಯಾ ವಿಭಕ್ತಿಯ ಪ್ರತ್ಯಯ – ಅಂ/ –ಅಮ್ ಎಂಬುದು ಸರಿಯೆ ?—ಎಂದು ಪ್ರಶ್ನಿಸಬೇಕಾಗುತ್ತದೆ. ವಾಸ್ತವವಾಗಿ ಅದು – ಅಮ್ ಅಲ್ಲ, – ಅನ್ ಎಂದಿರಬೇಕು. ಮತ್ತು ಈ – ಅನ್ ಎಂಬುದೂ – ಆನ್ ಎಂಬುದರ ಅನಂತರದ ರೂಪವೆಂದು ತೋರುತ್ತದೆ: ಪ್ರಾಸಾದಾಂತರಮಾನ್, ಮಿಕ್ಕುದಾನ್,[2] ಪೀಠಮಾನ್ – ಇತ್ಯಾದಿ ಪ್ರಾಚೀನ ಪ್ರಯೋಗಗಳನ್ನು ಅವಲೋಕಿಸಬಹುದು. ಏಳನೆಯ ಶತಮಾನದ ಶಾಸನಗಳಲ್ಲಿ – ಆನ್, – ಅನ್, – ಆಮ್, – ಅಂ, – ಆ ಮತ್ತು – ಅ ಎಂಬ ಪ್ರತ್ಯಯಗಳೂ;[3] ಎಂಟನೆಯ ಶತಮಾನದಲ್ಲಿ—ಆನ್, – ಅನ್, – ಅಮ್ – ಅಂ, – ಆ ಎಂಬ ಪ್ರತ್ಯಯಗಳೂ ; ಒಂಬತ್ತನೆಯ ಶತಮಾನದಲ್ಲಿ—ಆನ್, – ಅನ್, – ಅಮ್, – ಅಂ, – ಅ ಎಂಬುವೂ, ಹತ್ತನೆಯ ಶತಮಾನದಲ್ಲಿ—ಅನ್, – ಅಮ್, – ಅಂ ಎಂಬುವೂ ಪ್ರಯೋಗವಾಗಿವೆ.

ಇವುಗಳ ಆಧಾರದ ಬಲ ಹಾಗೂ ಬೆಂಬಲದಿಂದ / – ಆನ್ / ಎಂಬುದು ದ್ವಿತೀಯಾ ವಿಭಕ್ತಿಯ ಹಳೆಯ ಪ್ರತ್ಯಯವೆಂದು ಹೇಳಬಹುದು. – ಆನ್ ಮತ್ತು – ಅನ್ ಎಂಬ ಪ್ರತ್ಯಯಗಳೂ, – ಆ ಮತ್ತು – ಅ ಎಂಬ ಪ್ರತ್ಯಯಗಳೂ ಜೊತೆ ಜೊತೆಯಲ್ಲೇ ಏಳನೆಯ ಶತಮಾನದ ಶಾಸನಗಳಲ್ಲಿ ಪ್ರಯೋಗವಾಗಿರುವುದು ಕಾಣುತ್ತದೆ. ಎಂಟನೆಯ ಶತಮಾನದ ಕನ್ನಡ ಶಾಸನಗಳಲ್ಲಿ – ಆನ್ ಮತ್ತು – ಅನ್‌ಗಳೆರಡೂ ಪ್ರಯೋಗವಾಗಿವೆ. ಅಂದರೆ ದ್ವಿತೀಯೆಯ ಪ್ರತ್ಯಯಗಳು ಆರಂಭದಲ್ಲಿ ದೀರ್ಘವಾಗಿದ್ದು ಕ್ರಮೇಣ ಹ್ರಸ್ವವಾದುವೆಂದು ತೋರುತ್ತದೆ. ಕೇಶಿರಾಜ ಹೇಳುವ 'ಎಲವೊ ನೀನೆನ್ನ ಕೊಂದಯ್ (= ನೀನೆನ್ನನ್ (ಮ್) ಕೊಂದಯ್)'[4] ಎಂಬಲ್ಲಿ—ಅ ಪ್ರತ್ಯಯವಿದೆ; ಇದನ್ನು ದ್ವಿತೀಯಾರ್ಥದಲ್ಲಿ ಷಷ್ಠಿ ವಿಭಕ್ತಿ ಬಂದಿದೆ ಎನ್ನುತ್ತಾನೆ.

[1] *HGOK*, p. 42.

[2] ಶ್ರವಣಬೆಳ್ಗೊಳದ ಶಾಸನ, ಶಾಸನ ಸಂಖ್ಯೆ ೨೭, ಕಾಲ ಸು. ೭೦೦.

[3] A. N. Narasimhaiah, *Grammar of Old Kanarese Inscriptions*, p. 135.

[4] ಶಬ್ದಮಣಿದರ್ಪಣಕ್ಕೆ ಸೂತ್ರ ೧೪೫, ಉದಾಹರಣೆ.

"ಆದರೆ ಈ ಸಂದರ್ಭದಲ್ಲಿ ಎನ್ನ ಎಂಬುದು ಅಂತ್ಯ ವ್ಯಂಜನ ಲೋಪವಾದ ದ್ವಿತೀಯೆಯೆಂದು ಹೇಳುವುದು ಸಮಂಜಸವೆಂದು ನಡುಗನ್ನಡ, ಹೊಸಗನ್ನಡಗಳ ಪ್ರಯೋಗಗಳಿಂದ ತಿಳಿದುಬರುತ್ತದೆ."[1] ಬಹುಶಃ ಕನ್ನಡ ಭಾಷೆಯ ಬೆಳವಣಿಗೆಯಲ್ಲಿ ಇದು ಪರಿವರ್ತನೆಯ ಕಡೆಗೆ ಸಾಗುತ್ತಿದೆಯೆಂಬುದನ್ನು ತೋರಿಸುತ್ತದೆ.

> -ān and -an, the accusative case terminations, are used with more or less same frequency of occurence in 7th and 8th centuries, while the frequency of occurence in the case-an is greater than that of -ân in the 9th cent, and in the 10th cent. -ān has been completely replaced by -an. This can support the view that -ān is earliar than -an.[2]

ಹೀಗಾಗಿ ದ್ವಿತೀಯಾ ವಿಭಕ್ತಿ ಪ್ರತ್ಯಯಗಳ ವಿಕಾಸಕ್ರಮ ಹೀಗಿದ್ದಿರಬಹುದು—

ಆನ್/ಆಮ್ { ಅನ್ > ಅಮ್ > ಅಂ ; ಆ > ಅ }

ದ್ವಿತೀಯಾ ವಿಭಕ್ತಿಯಲ್ಲಿ ಕೆಲವು ಪದಗಳಿಗೆ - ಉಮ್ ಎಂಬ ಪ್ರತ್ಯಯ ಸೇರಿದ ಮೇಲೆ ದ್ವಿತೀಯೆಯ ಪ್ರತ್ಯಯ ಹತ್ತುವುದು ಕಾಣುತ್ತದೆ. ಉದಾಹರಣೆಗೆ ಎಂಟನೆಯ ಶತಮಾನದ ಶಾಸನಗಳಲ್ಲಿ ಪಾರ್ವರುಮಾನ್, ವಾರಣಾಸಿಯುಮನ್—ಎಂಬ ಪ್ರಯೋಗಗಳಿವೆ. ಕೇಶಿರಾಜನೂ ಇದನ್ನು ಹೇಳಿದ್ದಾನೆ—"ಅಮ್ ಎಂದುಂ ಉಮ್ ಎಂದುಂ ಪೇಟ್ವ ಸಮುಚ್ಚಯದೊಳ್ 'ಉಂ' ಎಂಬುದು ದ್ವಿತೀಯೆಯ ನಡುವೆ ಪೊಕ್ಕಿರ್ಕ್ಕುಂ."[3] ಆದುದರಿಂದ—

> This leads to the supposition that the accusative case sign might have been a later development.[4]

ಎಂಬ ಅಭಿಪ್ರಾಯವೂ ವ್ಯಕ್ತವಾಗಿದೆ.

ಆದುದರಿಂದ ಹಳಗನ್ನಡ ವ್ಯಾಕರಣಗಳಲ್ಲಿ ದ್ವಿತೀಯಾ ವಿಭಕ್ತಿ ಪ್ರತ್ಯಯವೆಂದು ಹೇಳಿರುವ - ಅಮ್ ಎಂಬ ಪ್ರತ್ಯಯ ಸರಿಯಾದುದಲ್ಲ. ಅದು - ಆನ್ > ಅನ್/ಅಮ್ ಎಂದು ಇರಬೇಕು; ಈ ದ್ವಿತೀಯೆಯ ಪ್ರತ್ಯಯಕ್ಕೆ ಸ್ವರ ಪರವಾಗಿ ಸೇರಿದಾಗ ಅದು - ನ್ ಕಾರವಾಗಿ ಆಗುವುದು ಈ ಹೇಳಿಕೆಯನ್ನು ಸಮರ್ಥಿಸುತ್ತದೆ.

---

1 ಕನ್ನಡ ಕೈಪಿಡಿ, ಪು. ೩೪೧.

2 G. S. Gai, *Historical Grammar of Old Kannada*, p. 107.

3 ಶಬ್ದಮಣಿದರ್ಪಣ, ಸೂತ್ರ ೧೩೩೨ ವೃತ್ತಿ, ಪು. ೧೪೦

4 G. S. Gai, *HGOK*, p. 42.

ನಡುಗನ್ನಡದಲ್ಲಿ – ಅನ್ ಎಂಬ ಪ್ರತ್ಯಯವೇ ಅಲ್ಲದೆ ಈ ವ್ಯಂಜನಾಂತ ಪ್ರತ್ಯಯ ಸ್ವರಾಂತವಾಗಿ – ಅನು ಎಂಬ ರೂಪದಲ್ಲಿ ಪ್ರಯೋಗವಾಗಿದ್ದೆ. ಹೊಸಗನ್ನಡದಲ್ಲಿ ಕೆಲವು ವ್ಯತ್ಯಾಸಗಳಿವೆ. ಇಂದಿನ ಬರವಣಿಗೆಯ ಭಾಷೆಯಲ್ಲಿ – ಅನ್ನು ಎಂಬುದು ಪ್ರಯೋಗವಾಗುವುದಾದರೂ, ಮಾತನಾಡುವಾಗ ಮತ್ತು ಸಂಭಾಷಣೆಯ ಕಾಲದಲ್ಲಿ – ಅನ್ನ ಎಂಬ ರೂಪ ಕಂಡುಬರುತ್ತದೆ—ತಿಮ್ಮನನ್ನು > ತಿಮ್ಮನನ್ನ > ತಿಮ್ಮನ್ನ, ಕೃಷ್ಣನನ್ನ > ಕೃಷ್ಣನ್ನ. ಇದಲ್ಲದೆ ಕೆಲವೊಮ್ಮೆ ಈ ಪ್ರತ್ಯಯ ದೀರ್ಘಸ್ವರೂಪದಲ್ಲಿ ಪ್ರಯೋಗವಾಗುತ್ತದೆ; /–ಆ/,/ – ಈ/, – ಊ/ ,/ – ಏ/ .

ಉದಾ :

ಗುಣಾ ನೋಡು (=ಗುಣವನ್ನು ನೋಡು)
ಹಣಾ ತಾ (=ಹಣವನ್ನು ತಾ)
ದನಾ ಕಾಯಿ
ಕುರೀ ಮೇಯಿಸು
ಹಳ್ಳಾ ದಾಟು
ಮಗೂ ಕೊಡು
ಹಸೂ ಮಾರು
ಕರೂ ಬಿಡು
ಮನೇ ನೋಡು
ತಲೇ ಕೆರಿ—ಇತ್ಯಾದಿ.

ಇವಲ್ಲದೆ

The accusative case is used to express an object or person on which or whom the action of verb falls.[1]

ಉದಾಹರಣೆ :

ಇದಾನ್ ಪಡೆದಾನ್
ದತ್ತಮಾನ್ ವಿಟ್ಟಾರ್
ಸ್ವರ್ಗಾಗ್ರಮಾನ್ ಏಱಿದಾರ್

....ಇತ್ಯಾದಿ. ಗೋಂಡಿ ಭಾಷೆಯಲ್ಲಿ ಚತುರ್ಥಿಯ ಪ್ರತ್ಯಯವನ್ನೇ ದ್ವಿತೀಯೆಗೂ ಬಳಸುವರು. ಕುರುಖ್ ಭಾಷೆಯಲ್ಲಿ :

– ನ್, – ಆನ್, – ಇನ್

[1] ibid., p. 48

ಎಂಬುವು ದ್ವಿತೀಯೆಯ ಪ್ರತ್ಯಯಗಳು. ಇತರ ದ್ರಾವಿಡ ಭಾಷೆಗಳಲ್ಲಿ ದ್ವಿತೀಯಾ ವಿಭಕ್ತಿ ಪ್ರತ್ಯಯ ಇಂತಿದೆ :

| | | |
|---|---|---|
| ಹ. ಗ. | – ಅಮ್ | ಮರನಮ್, ಮರಮ್ |
| ಹೊ. ಗ. | – ಅಮ್, – ಅನ್, – ಅನ್ನು, – ಅ, ಆ<br>– ಈ, – ಊ, – ಏ | |
| ತುಳು. | – ನ /– ನು | ತರೆನು = ತಲೆಯನ್ನು |
| ತೆ. | – ಅಮ್, – ನ್ / – ನು, – ನಿ | ಗೊಡನ್<br>ರಾಮುನಿ, ಬಿಡ್ಡನು. |
| ಗೋಂ. | – ಅಮ್, – ಉನ್ / – ನ | |
| ಕು ಈ. | – ನಿ | ದಾದಾನಿ = ಅಣ್ಣನ್ |
| ಕುರುಖ್ | – ನ, – ಅನ್, – ಇನ್ | |
| ಮಲ್ತೊ. | – ನ | ಮಲ್ಲೆ (= ಮನುಷ್ಯ) > ಮಲ್ಲೆನ್ |
| ತ. | – ಅಮ್, – ಅಯ್, – ಐ | |
| ಮ. | – ಎ | ತನ್ನೆ, ಮಗನೆ, ಅವನೆ. |
| ಕೋಲಾಮಿ | – (ಕು) ನ್, – ಉನ್ | |
| ನಾಯ್ಕಿ | – ಕುನ್, – ಜ್‌ಗ್ | |
| ಬ್ರಾ. | – ಎ, – ಇನ್ | |

– ಅನ್ ಎಂಬುದು ಲಿಂಗವಿವಕ್ಷೆಯಿಲ್ಲದೆ ಸ್ವತಂತ್ರವಾಗಿ ಪ್ರಯೋಗವಾಗುತ್ತಿದ್ದಿರಲೂ ಬಹುದು.

ಉದಾ : ಅವನ್, ಅಕ್ಕನ್, ಮರನ್

## ತೃತೀಯಾ ವಿಭಕ್ತಿ

ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳಿಗೆ ಇರುವ ಪ್ರತ್ಯಯಗಳನ್ನು ಕುರಿತು ಹೇಳಿದ ಒಂದು ವಿವರಣೆ ತೃತೀಯಾ ವಿಭಕ್ತಿಗೂ ಅನ್ವಯವಾಗುತ್ತದೆ. ಅದೆಂದರೆ ಹಳಗನ್ನಡ ವ್ಯಾಕರಣಗಳಲ್ಲಿ ತೃತೀಯೆಯ ಪ್ರತ್ಯಯವಾಗಿ – ಇಮ್ ಎಂದು ಹೇಳಿದ್ದರೂ ಅದು ನಕಾರಾಂತವೆಂದೇ ತಿಳಿಯಬೇಕು; ಒಲ್ಪಿನ್, ನೆಗರ್ಪ್ಪಿನ್, ವರ್ಪ್ಪಿನ್, ಗುಣದಿನ್, ಸುಖದಿನ್—ಎಂಬ, ಶಾಸನದಲ್ಲಿ ಸಿಗುವ, ಪದಗಳು ಈ ಹೇಳಿಕೆಯನ್ನು ಸ್ಥಿರಪಡಿಸುತ್ತವೆ; ಬಲಪಡಿಸುತ್ತವೆ. ದ್ವಿತೀಯೆಯ ಪ್ರತ್ಯಯ – ಅನ್ ( < – ಅನ್), ತೃತೀಯೆಯ ಪ್ರತ್ಯಯ – ಇನ್. ಇದರ ಜೊತೆಗೆ ಇಮ್/ ಇಂ, ಇಂದಂ, ಇಂದೆ ಮತ್ತು /ಎ/, / ಇ/, / ಇಂದ/—ಎಂಬ ಪ್ರತ್ಯಯಗಳೂ ತೃತೀಯೆಯ ಪ್ರತ್ಯಯಗಳೆಂದು ಹೇಳಿದೆ.

ಕೇಶಿರಾಜನೂ :

ಸಮನಿಸಿ ತೋಱುಸುಗುಮಿಮಿಂ
ದಮಿಂದೆಯೆಂಬಿವು ತೃತೀಯೆಯೊಳ್ ಮತ್ತಮೆಕಾ
ರಮದೊಂದೆ ಮೇಣ್ ತೃತೀಯೆಗೆ
ಸಮುಚಿತಮಾದೇಶಮಱುದುಕೊಳ್ಗಿ ಕ್ರಮದಿಂ ‖[1]

ಎಂದು ಹೇಳಿದ್ದಾನೆ. ಇವುಗಳಲ್ಲಿ ಮೊದಲು ಕಾಲವನ್ನು ಸೂಚಿಸುವ ಕ್ರಿಯಾ ವಿಶೇಷಣವಾಗಿದ್ದ – ಇಂ, – ಇನ್ (ಅಂದರೆ ಆ ಕಾಲದಿಂದ ಎಂಬ ಅರ್ಥದಲ್ಲಿ) ಪ್ರತ್ಯಯಗಳು ಮುಂದೆ ಅದರಿಂದ, ಅಲ್ಲಿಂದ ಎಂಬರ್ಥದ ತೃತೀಯಾ ವಿಭಕ್ತಿಯ ಪ್ರತ್ಯಯಗಳಾದುವೆಂದು ಹೇಳಿಕೆಯೂ ಇದೆ;

It is likely that–im or –in (=from that time afterwords), an adverb of time originally, has later come to be used as a post position meaning 'from or by' (instrumental case).[2]

ತೃತೀಯಾ ವಿಭಕ್ತಿಯ ಪ್ರತ್ಯಯಗಳಲ್ಲಿ – ಎ ಎಂಬುದು ತೃತೀಯೆಯ ಪ್ರತ್ಯಯ ವಾಗಿರದೆ ಸಪ್ತಮೀ ವಿಭಕ್ತಿಯ ಪ್ರತ್ಯಯವೆಂದು ಹೇಳಬಹುದು. ಕೈಪಿಡಿಕಾರರೂ ಈ – ಎ ಎಂಬ ಪ್ರತ್ಯಯದ ವಿಚಾರವಾಗಿ 'ಇದು ವ್ಯಾಕರಣಗಳಲ್ಲಿ ತೃತೀಯಾ ವಿಭಕ್ತಿ ಪ್ರತ್ಯಯವೆಂದು ಹೇಳಿದ್ದರೂ ಸಪ್ತಮೀ ವಿಭಕ್ತಿಪ್ರತ್ಯಯವೆಂದು ತೋರುವುದು. ಒಳಗು + ಎ=ಒಳಗೆ ಎಂಬುದರೊಡನೆ ಹೋಲಿಸಿ' ಎಂದು ಹೇಳಿದ್ದಾರೆ.[3] ಅಲ್ಲದೆ ಶಾಸನಗಳಲ್ಲಿ ಎಲ್ಲಿಯೂ ಈ – ಎ ಎಂಬುದು ತೃತೀಯೆಯ ಪ್ರತ್ಯಯವಾಗಿ ಬಳಕೆ ಯಾಗಿರುವಂತೆ ತೋರುವುದಿಲ್ಲ. ತೃತೀಯಾ ವಿಭಕ್ತಿಯ ಪ್ರತ್ಯಯಗಳಾಗಿ ಶಾಸನ ಗಳಲ್ಲಿ ಸಿಗುವ ರೂಪಗಳು ಹೀಗೆ ಇವೆ:

ಕ್ರಿ. ಶ. ೭ನೆಯ ಶತಮಾನದಲ್ಲಿ—ಇಮ್, – ಇಂ, – ಇನ್, – ಇಂದ, – ಇಂದು
ಕ್ರಿ. ಶ. ೮ನೆಯ ಶತಮಾನದಲ್ಲಿ—ಇಮ್, – ಇಂದೆ
ಕ್ರಿ. ಶ. ೯ನೆಯ ಶತಮಾನದಲ್ಲಿ—ಇಂ, – ಇನ್, – ಇಂದ
ಕಿ. ಶ. ೧೦ನೆಯ ಶತಮಾನದಲ್ಲಿ—ಇಮ್, – ಇಂ, – ಇನ್, – ಇಂದ, – ಇಂದೆ
—ಇಂದಂ, – ಇಂದಮ್ (ಇದು ಕಡಮೆ : ಗುಣದಿಂದಮ್)

ಕನ್ನಡ ಧಾತುಗಳು ಉಕಾರಾಂತವಾಗಿರುವಾಗ ತೃತೀಯೆಯ ಪ್ರತ್ಯಯಗಳು ನೇರ ವಾಗಿ ಹತ್ತುತ್ತವೆ. ಆದರೆ ನಪುಂಸಕ ಲಿಂಗದ ಅಕಾರಾಂತ ಪದಗಳಿಗೆ ತೃತೀಯೆಯ

[1] ಶಬ್ದಮಣಿದರ್ಪಣ, ಸೂತ್ರ ೧೧೭, ಪು. ೧೨೩
[2] *HGOK*, p.50.
[3] ಬಿ. ಎಂ. ಶ್ರೀ ಮತ್ತು ಟಿ. ಎಸ್. ವೆಂ., ಕನ್ನಡ ಕೈಪಿಡಿ, ಭಾಗ ೪, ಪು. ೩೪೧ ಅಡಿಟಿಪ್ಪಣಿ

ಪ್ರತ್ಯಯು ಸೇರುವ ಮೊದಲು – ದ್ – ಎಂಬ ಆಗಮು ಸೇರುತ್ತದೆ.[1] ಹೀಗೆಯೇ ಇಕಾರಾಂತ ಹಾಗೂ ಎಕಾರಾಂತ ಪ್ರಕೃತಿಗಳಿಗೆ ತೃತೀಯೆಯ ಪ್ರತ್ಯಯಗಳು ಸೇರುವಾಗ – ಯ – ಎಂಬ ಧ್ವನಿಜಾರು ಬಂದುಹೋಗುವುದೂ ಉಂಟು. – ಇವ್ ಎಂಬ ಪ್ರತ್ಯಯ ಸಾಮಾನ್ಯವಾಗಿ ವ್ಯಂಜನಾಕ್ಷರಗಳ ತರುವಾಯ ಬಂದರೆ – ಇನ್ ಎಂಬುದು ಸ್ವರ ಹಾಗೂ ವ್ಯಂಜನಗಳು ಪದದಲ್ಲಿ ಇರುವಾಗ ಸೇರುತ್ತದೆ; ದಿಲೀಪ ನೃಪನಿವ್, ರಾಘವನಿವ್, ಇಂಬಿನಿವ್ (= ಇಂಬ್ + ಇನ್ + ಇವ್). ತೃತೀಯಾ ವಿಭಕ್ತಿಯ ಪ್ರತ್ಯಯಗಳು ಯಾವುದಾದರೂ ರೀತಿ, ಮಾರ್ಗ, ಕ್ರಮ ಅಥವಾ ಸಾಧನಗಳನ್ನು ತಿಳಿಸಲೂ ಉಪಯೋಗವಾಗುತ್ತವೆ; ಅಧಿಕಾರದಿವ್, ಒಳ್ಪಿನಿಂದ, ಬೆಸದಿಂ ಭಕ್ತಿಯಿವ್, ಸುಖದಿನ್....ಇತ್ಯಾದಿ. – ಇನ್ ಎಂಬುದರ ವಿಚಾರವಾಗಿ ಜೂಲ್ಸ್ ಬ್ಲಾಕ್

> This . . . . case is nevertheless imperfectly defined by the name of instrumental, since it serves to form the locative by the addition of the post-position oḷ "in" : marad-in-oḷ can be translated only as "in the interior of the tree"; in is in reality a suffix of oblique showing the adnominal relation giving to the word the value of a genitive. It is explained differently, but to no purpose, mâvin ele "leaf of mango" as opposed to mâvina mara "tree of mangoes."[1]

ಎಂದು ಹೇಳಿದ್ದಾನೆ.

ಹೀಗಾಗಿ ವಿದ್ವಾಂಸರ ಹೇಳಿಕೆಗಳು, ತೃತೀಯಾ ವಿಭಕ್ತಿಯ ಅಸ್ತಿತ್ವ ಅಥವಾ ಪ್ರತ್ಯೇಕ ಪರಿಗಣನೆಯನ್ನು ಪುನರ್ ಪರಿಶೀಲಿಸುವಂತೆ ಮಾಡಿವೆ. ಈ – ಇನ್ ಎಂಬುದು < – ಇಲ್ ಎಂಬುದರಿಂದ ಬಂದಿರಬಹುದೆಂಬ ಸೂಚನೆಯಿದೆ. ತೆಲುಗು ಭಾಷೆಯಲ್ಲಿ–ಚೇತ > –ಚೇ ಎಂಬ ಪ್ರತ್ಯಯವಿದೆ, ಕನ್ನಡದಲ್ಲಿಯೂ–ಕೈಯ,–ಕಯ್ಯಲ್ಲಿ ಎಂಬ ಪ್ರತ್ಯಯವಿದ್ದು ಇವನ್ನು ತೃತೀಯೆಯ ಪ್ರತ್ಯಯಗಳೆಂದು ಪರಿಗಣಿಸುವ ಸಲಹೆ ವ್ಯಕ್ತವಾಗಿದೆ. ಈ ಎಲ್ಲ ದೃಷ್ಟಿಗಳಿಂದ ನೋಡಿದರೆ ತೃತೀಯಾ ವಿಭಕ್ತಿ ಪುನರ್ ಪರಿಶೀಲನ ಯೋಗ್ಯವಾಗಿರುವುದು ಸ್ವಯಂಸ್ಪಷ್ಟವಾಗಿದೆ. ಪೂರ್ವದ ಹಳಗನ್ನಡ ಮತ್ತು ತಮಿಳು ಭಾಷೆಗಳಲ್ಲಿ – ಓಟು, – ಉಡನ್, – ಒಡನೆ, (ತೆ). – ತೋಡ > – ತೋ ಎಂಬ ಪ್ರತ್ಯಯಗಳು ತೃತೀಯೆಯ ಚೌಕಟ್ಟಿನಲ್ಲಿ ಸೇರುತ್ತವೆಂದು ತೋರುತ್ತದೆ. ಕುರುಖ್ ಭಾಷೆಯಲ್ಲಿ – ತ್ರಿ, – ತ್ರೂ ಎಂಬುವು ತೃತೀಯೆಯ ಪ್ರತ್ಯಯಗಳು. ಕೋಲಾಮಿಯಲ್ಲಿ – ಅಡ್ ಎಂಬುದು ಪ್ರತ್ಯಯ.

---

[1] *The Grammatical Structure of Dravidian Languages*, Eng. Tr. p. 14.

## ಚತುರ್ಥೀ ವಿಭಕ್ತಿ

ಚತುರ್ಥೀ ವಿಭಕ್ತಿಯಲ್ಲಿ ಮಾತ್ರ ಎಲ್ಲ ದ್ರಾವಿಡ ಭಾಷೆಗಳಲ್ಲೂ ಏಕರೂಪತೆ ಹಾಗೂ ಸಾಮ್ಯವಿರುವುದು ಎದ್ದು ಕಾಣುತ್ತದೆ. ದ್ರಾವಿಡ ಭಾಷೆಗಳಿಗೆಲ್ಲಾ ಮೂಲ ಪ್ರತ್ಯಯ, ಚತುರ್ಥಿಯಲ್ಲಿ ಕಂಠ್ಯ ಧ್ವನಿ ಒಂದೇ ಒಂದು ಇದ್ದಿರಬಹುದೆಂದು ಭಾಷಾವಿಜ್ಞಾನಿಗಳ ಅಭಿಪ್ರಾಯ :

> The suffix of this case in Primitive Dravidian was k ; and it is found unaltered in this primitive form in all the dialects. The only change that is noticed is that it is voiced in certain dialects to g, influenced, no doubt, by the character of the preceding sound. The k is generally followed by a vowel, but it is of little moment what vowel is used, as it only helps the enunciation of k.[1]

ಚತುರ್ಥೀ ವಿಭಕ್ತಿಯ ಪ್ರತ್ಯಯ ದ್ರಾವಿಡ ಭಾಷೆಗಳಲ್ಲಿ ಹೀಗಿದೆ:

ಕನ್ನಡ. – ಕೆ, – ಕ್ಕೆ, – ಗೆ
ತ. – ಕು, – ಕ್ಕು
ತು. – ಕ, – ಕು, – ಗ. – ಗು
ಕುಈ. – ಕೆ, – ಗೆ, – ಕಿ
ಕುರುಖ್. – ಗೆ, – ಗೇ
ಬ್ರಾ. – ಕಿ[2], – ಇಖ್, – ಸೆ[3]
ಕೋಲಾಮಿ. – ಉನ್ಗ್, – ಙ್
ತೆಲುಗು. – ಕು, – ಕಿ, – ಕುನ್, – ಕಿನ್
ತೊದ. – ಕ್, – ಗ್
ಮ. – ಕ್ಕು, – ನ್ನು, – ಇನ್ನು < – ಇಂಕು
ಕೋತ. – ಕೆ
ಬಡಗ – ಗ
ಕುರುಂಬ – ಕ, – ಗ
ಗೋಂ. – ಉಂಕ್

[1] K. V. Subbaiah, *A Comparative Grammar of Dravidian Languages*, IA, Vol. 39, p. 150, 1910.
[2] Dennys De S. Bray, *The Brahui Language*, p. 39 and 58.
[3] Jules Bloch, *The Grammatical Structure of Dravidian Languages*

ಮಲ್ತೊ – ಕ್, – ಕೊ, – ಗೆ
ಕೊರವ. – ಕ್, ಕು, – ಕ, – ಕೆ. – ಕಿ :

ಅವಂಕ್ =ಅವನಿಗೆ, ಮೌಂಕು = ಮಗನಿಗೆ, ಅರಸನಕ =ದೊರೆಗೆ, ತೋಪಂಕೆ= ತಂದೆಗೆ. ಕೊಲ್ಲಿಕಿ = ಹೊಲಕ್ಕೆ.

ಈ ರೀತಿಯಲ್ಲಿ ಬಹುಮಟ್ಟಿಗೆ ಎಲ್ಲ ದ್ರಾವಿಡ ಭಾಷೆಗಳಲ್ಲೂ ಚತುರ್ಥೀ ವಿಭಕ್ತಿಯ ಪ್ರತ್ಯಯದ ವಿಚಾರದಲ್ಲಿ ಸಂಬಂಧ – ಸಾದೃಶ್ಯಗಳು ಸ್ಪಷ್ಟವಾಗಿವೆ. ಕನ್ನಡದಲ್ಲಿ ಬಹಳ ಹಿಂದಿನಿಂದಲೂ – ಕೆ ಪ್ರತ್ಯಯವೊಂದೇ ಹೆಚ್ಚು ಪ್ರಚಾರದಲ್ಲಿರುವುದು ಕಾಣುತ್ತದೆ. ಇದರ ಜೊತೆಗೆ – ಗೆ ಮತ್ತು – ಇಗೆ ಎಂಬುದೂ ಕಾಣುತ್ತದೆ.

ನಹುಷಂಗೆ, ಯಯಾತಿಗೆ....ಇತ್ಯಾದಿ. ಇವುಗಳಲ್ಲಿ – ಇಗೆ ಎಂಬ ಪ್ರತ್ಯಯವೂ ಸಾಕಷ್ಟು ಪ್ರಾಚೀನವಾದರೂ, ಬರವಣಿಗೆಗೆ ಇಳಿಯುವ ಮುಂಚೆ ಶಾಸನಗಳಲ್ಲಿ ಇದ್ದರೂ, ಈ ಪ್ರತ್ಯಯವನ್ನು ಪ್ರತ್ಯೇಕವಾಗಿ ಪರಿಗಣಿಸುವುದಕ್ಕಿಂತಲೂ, ಇಕಾರ ಆಗಮವಾದ 'ಗೆ' ಪ್ರತ್ಯಯವೆಂದು ಪರಿಗಣಿಸುವುದೇ ಸರಿಯಾಗಿ ತೋರುತ್ತದೆ. ಶಾಸನಗಳಲ್ಲಿ /–ಕ್ಕೆ/, /– ಕೆ/,/–ಗೆ/,/– ಇಗೆ/ – ಗ್ಗೆ ಎಂಬ ರೂಪಗಳೂ ಪ್ರಯೋಗವಾಗಿವೆ. ಇವುಗಳಲ್ಲಿ – ಕೆ ಎಂಬ ಪ್ರತ್ಯಯವೇ ಪ್ರಾಚೀನ. ಏಳನೆಯ ಶತಮಾನದ ಶಾಸನಗಳಲ್ಲಿ (ಇ) ಗೆ ಪ್ರತ್ಯಯದ ಜೊತೆಗೆ ಇಂಗೆ (– ಭಟರಿಂಗೆ) ಎಂಬ ಪ್ರತ್ಯಯವೂ ಇದೆ.

The fact that we meet with both the forms pēr-in-ge and pēr-i-ge in the 8th cent. A.D., inscriptions, suggests that the period of transistion in the matter of the disappearence of the pre-consonantal nasal in a termination had already commenced then. It is possible to take the view that pēr-in-ge is an earlier form of pēr-i-ge and such instances might also confirm the hypothesis of continuous movement from complex to simple in the evolution of Kannada Language.[1]

ಬಹುಶಃ ಈ ಪ್ರತ್ಯಯ ಕೆಳಕಂಡಂತೆ ಬೆಳೆದಿರಬಹುದು :

/–ಕ್ಕೆ/ > –ಕೆ > – ಇಂಗೆ > ಇಗೆ / > ಗೆ > –ಗೆ

ಇವಲ್ಲದೆ – ಕ್ಕು ಎಂಬ ಪ್ರತ್ಯಯವೂ ಒಂದೆಡೆ ಶಾಸನದಲ್ಲಿ ಪ್ರಯೋಗವಾಗಿದೆ : ಕೊಂಗುಣಿ ಮುತ್ತರಸಕ್ಕುರ್. ಬಹುಶಃ ಈ ಉ ಎಂಬ ಸ್ವರಾಂತ ಉಮ್ (– ಉಂ) ಎಂಬುದರಿಂದ ಬಂದಿದೆಯಲ್ಲದೆ, – ಕು ಎಂಬ ಈ ಚತುರ್ಥಿಯ ಪ್ರತ್ಯಯ ರೂಪ ತಮಿಳಿ

[1] *Historical Grammar of Old Kannada*, p. 50.

ನಿಂದ ಕನ್ನಡಕ್ಕೆ ಕಾಲಿಟ್ಟಿರಬಹುದೆಂದೂ ವಿದ್ವಾಂಸರು ಊಹಿಸಿದ್ದಾರೆ. ಯಾವುದಾದರೂ ಪದಾರ್ಥವನ್ನು ಯಾರಿಗೆ ಅಥವಾ ಯಾತಕ್ಕೆ ಕೊಟ್ಟಿದೆಯೆಂಬುದನ್ನೂ ಚತುರ್ಥೀ ವಿಭಕ್ತಿ ವ್ಯಕ್ತಪಡಿಸುತ್ತದೆ; ಕಾಲನಿಗೆ, ಕಾದಾತಂಗೆ, ಗೋವಿಂದಪಾಡಿಗೆ ....ಇತ್ಯಾದಿ.

## ಪಂಚಮೀ ವಿಭಕ್ತಿ

ಕನ್ನಡದಲ್ಲಿ ಪಂಚಮೀ ವಿಭಕ್ತಿಯ ಪ್ರತ್ಯಯವಾಗಲಿ, ಪಂಚಮೀ ವಿಭಕ್ತಿಯೇ ಆಗಲಿ ಇಲ್ಲ. ಪುರಿಗೆಜಿಯಿಮ್ - ಎಂಬಲ್ಲಿ ತೃತೀಯಾ ವಿಭಕ್ತಿಯ ಪ್ರತ್ಯಯವನ್ನೇ ಪಂಚಮೀ ವಿಭಕ್ತಿಯ ಅರ್ಥದಲ್ಲಿ ಬಳಸಿದೆ,

> . . . the instrumental case termination is used for the purpose of what is called the Ablative of motion.[1]

ಆದುದರಿಂದ ವಾಸ್ತವವಾಗಿ ಕನ್ನಡದಲ್ಲಿ ಗ್ರಂಥದಲ್ಲಾಗಲಿ, ಜನರ ಆಡುಮಾತಿನಲ್ಲಾಗಲಿ ಪಂಚಮೀ ವಿಭಕ್ತಿಯ ಪ್ರಯೋಗ ಇಲ್ಲವಾದರೂ ಹಳೆಯ ವ್ಯಾಕರಣಗಳಲ್ಲಿ ಪಂಚಮೀ ವಿಭಕ್ತಿಯೆಂಬ ಹೆಸರಿನಿಂದ ತೃತೀಯೆಯ ಪ್ರತ್ಯಯವನ್ನೇ ಉಪಯೋಗಿಸಿದೆ. ಹೀಗೆ ಮಾಡಲು ಕಾರಣವೇನು?

ಬಹುಶಃ ಇದಕ್ಕೆ ಎರಡು ಪ್ರಮುಖ ಕಾರಣಗಳು ಇರುವಂತೆ ತೋರುತ್ತದೆ. ಮೊದಲನೆಯದಾಗಿ, ಸಂಸ್ಕೃತ ವ್ಯಾಕರಣಗಳ ಮಾದರಿಯನ್ನು ಅನುಸರಿಸಿ ಕನ್ನಡ ವ್ಯಾಕರಣಗಳು ಸಿದ್ಧವಾದುದರಿಂದ, ಕನ್ನಡದಲ್ಲಿಯೂ ಒಂದು ಪಂಚಮೀ ವಿಭಕ್ತಿಯನ್ನು ಕಲ್ಪಿಸಬೇಕಾದ ನಿರ್ಬಂಧವುಂಟಾಗಿರಬೇಕು. ಎರಡನೆಯದಾಗಿ, ಪಂಚಮೀ ವಿಭಕ್ತಿಯೇ ಇಲ್ಲದ ಮೇಲೆ ಇನ್ನು ಅದರ ಪ್ರತ್ಯಯ ಎಲ್ಲಿಂದ ಬರಬೇಕು?—ಆದರೂ ಸಂಸ್ಕೃತದ ಎರಕದಲ್ಲಿ ಕನ್ನಡವನ್ನೂ ಹಾಕಿರುವುದರಿಂದ, ಅಲ್ಲಿರುವಂತೆ ಇಲ್ಲಿಯೂ ಪಂಚಮೀ ವಿಭಕ್ತಿ ಉಂಟೆಂದು ಹೇಳಿದ ಮೇಲೆ, ಅದರ ಪ್ರತ್ಯಯಕ್ಕೂ ಏನಾದರೂ ಒಂದು ವ್ಯವಸ್ಥೆ ಮಾಡಬೇಕಲ್ಲವೆ? ಅದಕ್ಕಾಗಿ ತೃತೀಯೆಯ ಪ್ರತ್ಯಯವನ್ನೇ ತೆಗೆದುಕೊಂಡು ಪಂಚಮಿಯ ಪ್ರತ್ಯಯವೆಂದು ಪ್ರದರ್ಶಿಸಬೇಕಾಯಿತು, ಪ್ರದರ್ಶಿಸಿದ್ದಾಯಿತು. ಇದು ಮದುವೆ ಮುಂಜಿ ಮೊದಲಾದ ಮುಖ್ಯ ಸಮಾರಂಭಗಳಲ್ಲಿ ಪಕ್ಕದ ಮನೆಯವರ ಒಡವೆ ವಸ್ತ್ರಗಳನ್ನು ಕಾರಣಾಂತರಗಳಿಂದ ತಾತ್ಕಾಲಿಕವಾಗಿ ಹಾಕಿಕೊಂಡು ತನ್ನದೆಂಬಂತೆ ತೋರಿಸುವ ಹಾಗಿದೆ.

ಕೇಶಿರಾಜ ಪಂಚಮೀವಿಭಕ್ತಿ ಕನ್ನಡದಲ್ಲಿ ಉಂಟೆಂದು ಹೇಳಿದ್ದಾನೆ.[2] ಅಲ್ಲದೆ ಅತ್ ಎಂಬ ಪಂಚಮಿಯ ಪ್ರತ್ಯಯ ಅತ್ತಣಿಂ ಎಂದು ಆಗುತ್ತದೆಂದೂ ತಿಳಿಸಿದ್ದಾನೆ.[3]

[1] *Historical Grammar of Old Kannada*, p. 54.
[2] ಕೇಶಿರಾಜ, ಸೂತ್ರ ೧೦೩, ಪುಟ ೧೦೪
[3] ಅದೇ., ಸೂತ್ರ, ೧೨೬ ಪುಟ ೧೩೩

ನಂಟರತ್ತಣಿಂ, ಕೆಜಃೆಯತ್ತಣಿಂ, ಮರದತ್ತಣಿಂ.... ಇತ್ಯಾದಿ ಉದಾಹರಣೆಗಳು. ಇಲ್ಲಿ ಇನ್ನೊಂದು ಸ್ವಾರಸ್ಯವಿದೆ. ಅತ್ತಣಿಂ—ಎಂಬುದು ಒಂದು ಪ್ರತ್ಯಯವಲ್ಲ, ಅದು ಪ್ರತ್ಯಯಗಳ ಒಂದು ಗೊಂಚಲು. ಏಕೆಂದರೆ ಅದರಲ್ಲಿ ಅತ್ತ (ದಿಗ್ವಾಚಿ) + ಅಣ್ + ಇಮ್ (< ಇನ್) ಎಂಬ ಮೂರು ಬೇರೆ ಬೇರೆ ಆಕೃತಿಗಳಿವೆ. ಮೇಲೆ ಉದಾಹರಿಸಿದ ಪದಗಳಲ್ಲಿ ಅತ್ತಣಿಂ ಎಂಬುದನ್ನು ತೆಗೆದುಹಾಕಿದರೆ ಉಳಿಯುವುದು – ನಂಟರ, ಕೆಜಃೆಯ, ಮರದ – ಎಂಬ ಷಷ್ಠಿಯ ರೂಪಗಳು. ಅಂದರೆ ಪಂಚಮೀ ವಿಭಕ್ತಿ ಪ್ರತ್ಯಯ(?) ಷಷ್ಠೀ ವಿಭಕ್ತಿಯ ಮೇಲೆ ಸೇರಿದೆ. ಇಲ್ಲಿ – ಅಣ್ ಎಂಬುದನ್ನು ಆಗಮವೆಂದು ಬೇಕಾದರೂ ಕರೆಯಬಹುದು,

The augment aṇ exists only in Kannaḍa though this -aṇ is explained by Tamil forms like avaṇ, ivaṇ naḍuvaṇ.[1]

ಹೀಗಾಗಿ ಇಂಗ್ಲಿಷಿನಲ್ಲಿ ಇರುವಂತೆ—by, from, with ; ಸಂಸ್ಕೃತದಲ್ಲಿರುವಂತೆ—ಅತ್ - ಎಂಬಂತೆ, ಎಂದು ಅರ್ಥದ ದೃಷ್ಟಿಯಿಂದ ಹೇಳಬಹುದು. ಕನ್ನಡದಲ್ಲಿ ಪಂಚಮಿಯ ಪ್ರತ್ಯಯವಿಲ್ಲ. ಇಂಗ್ಲಿಷ್, ಸಂಸ್ಕೃತಗಳಲ್ಲಿ ಪಂಚಮಿಯ ಅರ್ಥದ ವಾಕ್ಯಗಳಿಗೆ ಉದಾಹರಣೆಗಳು—

ಇಂಗ್ಲಿಷ್ : The fruit fell from the tree.

ಸಂಸ್ಕೃತ : ವೃಕ್ಷಾತ್ ಫಲಮ್ ಪತತಿ ; ಚೋರಾತ್ ಭಯಮ್.

ಕನ್ನಡದಲ್ಲಿ ಪಂಚಮಿಯ ಅರ್ಥವನ್ನು ತೃತೀಯೆಯಿಂದಲೇ ಅಲ್ಲದೆ ಚತುರ್ಥಿಯಿಂದಲೂ ನಿರ್ವಹಿಸಬಹುದು. ಈಗಲೂ ಉತ್ತರ ಕರ್ನಾಟಕದ ಕಡೆ ಚತುರ್ಥಿಯ ಅರ್ಥದಲ್ಲೇ ದೆಸೆಯಿಂದ ಪದ (ಪ್ರತ್ಯಯ) ವನ್ನು ಉಪಯೋಗಿಸುತ್ತಾರೆ. 'ಈ ದೆಸೆಯಿಂದ' ಎಂಬುದು ಅತ್ತಣಿಂ ಎಂಬ ರೂಪದ ಪರಿವರ್ತನಗೊಂಡ ರೂಪವೆಂದು ತೋರುತ್ತದೆ. ಆದರೆ ಅತ್ತಣಿಂ ಎಂಬ ರೂಪ (ಪ್ರತ್ಯಯ)ವೂ ಅತ್ತಣ್ (=ಅಲ್ಲಿ) ಎಂಬುದರ ತೃತೀಯಾಂತ ರೂಪವೇ ಅಲ್ಲವೆ?

ಈ ವಾಕ್ಯ ನೋಡಿ :

ಹುಲಿಯ ದೆಸೆಯಿಂದ ಭಯ.

ಹೀಗೇ ಏಕೆ ಬರೆಯಬೇಕು ? ಇದೇ ವಾಕ್ಯವನ್ನು 'ಹುಲಿಯ ಭಯ' ಎಂದು ಬರೆದರೆ ಸಾಲದೆ ? ಅಥವಾ ಹುಲಿಯ ಭಯ—ಎಂದು ಹೇಳಿದರೆ ಭಯವಾಗುವುದಿಲ್ಲವೆ ? ಅಲ್ಲದೆ ಕಾಗೆ(ಯ) ಭಯ, ತಗುಣೆ(ಯ) ಕಾಟ, ಕಳ್ಳನ ಭಯ—ಎಂಬ ವಾಕ್ಯಗಳಿಲ್ಲವೆ ? ಇದರಂತೆ ಹುಲಿ(ಯ) ಭಯ ಎಂಬ ವಾಕ್ಯರಚನೆಯೇ ಸುಲಭವಾಗಿದೆ, ಆದುದರಿಂದ ದೆಸೆಯಿಂದ, ಅತ್ತಣಿಂದ, ಅತ್ತಣಿಂದಂ, ಅತ್ತಣಿಂದೆ, ಅತ್ತಣಿಂ—ಎಂಬುವು ನಿಷ್ಪನ್ನ ಶಬ್ದಗಳು ಹಾಗೂ ಅವು ತೀರ ಅಪ್ರಚುರ. ತತ್ಪರಿಣಾಮವಾಗಿ ಪಂಚಮಿಯ ಪ್ರತ್ಯಯಗಳೆಂದು ಪ್ರತ್ಯೇಕವಾಗಿ ಯಾವುದೂ ಇಲ್ಲ. ಇದರ ಕೆಲಸ

[1] L. V. Ramaswamy Aiyer, *Indian Linguistics.*

ವನ್ನು ತೃತೀಯೆ, ಷಷ್ಠಿ ಅಥವಾ ಚತುರ್ಥಿಯೇ ಮಾಡುವುದರಿಂದ ಪಂಚಮಿಯೆಂಬ ಬೇರೊಂದು ವಿಭಕ್ತಿ ಬೇಕಿಲ್ಲ. ತಮಿಳು ಭಾಷೆಯಲ್ಲಿ – ಇನ್ನ, – ಇಂಡೆ, ಕುಈ ಭಾಷೆಯಲ್ಲಿ – ಟ್ರೆ ಕುರುಖ್ ಭಾಷೆಯಲ್ಲಿ – ತೀ, ಕೋಲಾಮಿ ಭಾಷೆಯಲ್ಲಿ – ತನೆಟ್ ಎಂಬ ಪಂಚಮಿ ವಿಭಕ್ತಿಯ ಪ್ರತ್ಯಯಗಳಿವೆ.

## ಷಷ್ಠೀ ವಿಭಕ್ತಿ

ಷಷ್ಠೀ ವಿಭಕ್ತಿ ಬಹಳ ಹಳೆಯ ವಿಭಕ್ತಿ. ಕನ್ನಡ ವ್ಯಾಕರಣಗಳಲ್ಲಿ – ಅ ಎಂಬುದನ್ನು ಷಷ್ಠೀ ವಿಭಕ್ತಿಯ ಪ್ರತ್ಯಯವೆಂದು ಹೇಳಿದೆ. ಆದರೆ ಒಂಬತ್ತನೆಯ ಶತಮಾನಕ್ಕಿಂತಲೂ ಹಿಂದಿನ ಹಳೆಯ ಶಾಸನಗಳಲ್ಲಿ – ಆ ಎಂಬ ದೀರ್ಘಸ್ವರ ಷಷ್ಠೀ ವಿಭಕ್ತಿಯ ಪ್ರತ್ಯಯವಾಗಿ ಪ್ರಯೋಗವಾಗಿರುವುದು ಕಾಣುತ್ತದೆ; ಅರಸರಾ, ಅವರಾಮುಗಳ್ದಿರ್, ಅಜಿಡೊನಾ, ಈಯ್ದಾಪುಲಿಯಾ, ಎಳನಾಗನಾ, ಕಟ್ಟಿಪ್ಪಿನಾ, ಗಂಗಾಧರನಾ, ಮಂಗಳೀಶನಾ, ನೃಡನಾ, ಅಮೋಘವರ್ಷ ನೃಪತುಂಗನಾ.... ಇತ್ಯಾದಿ. ಆದುದರಿಂದ ಪೂರ್ವದ ಹಳಗನ್ನಡದಲ್ಲಿ – ಆ ಎಂಬುದೇ ಷಷ್ಠೀ ವಿಭಕ್ತಿಯ ಪ್ರತ್ಯಯವಾಗಿದ್ದಿರಬಹುದು. ಇಂದಿಗೂ ಮಕ್ಕಳು ಹೇಳುವ 'ಕಣ್ಣಾಮುಚ್ಚೆ ಕಾಡಾಗೂಡಿ....' ಎಂಬಲ್ಲಿ, ಕಣ್ಣಾಕುಡಿಕೆ ಎಂಬಲ್ಲಿಯೂ ಈ – ಆ ಬದುಕಿದೆ. ಹಳೆಯ ವ್ಯಾಕರಣಗಳಲ್ಲಿ ಇದನ್ನು ಷಷ್ಠಿಯ ಪ್ರತ್ಯಯವೆಂದು ಸ್ಪಷ್ಟವಾಗಿ ಹೇಳಿಲ್ಲದಿದ್ದರೂ ಗುರುತಿಸುವುದನ್ನು ಮರೆತಿಲ್ಲ. ಕೇಶಿರಾಜ ಷಷ್ಠಿಗೆ ಕೆಲವೊಮ್ಮೆ ದೀರ್ಘ ಬರುವುದೆಂದು ಹೇಳಿದ್ದಾನೆ:

ಆದರಿಪರ್ ಕೆಲಬರ್ ದೀ
ರ್ಘಾದೇಶಮನಗ್ರದಲ್ಲಿ ಷಷ್ಠಿಯಕಾರ।
ಕ್ಕಾದೀರ್ಘಮನಿರದರೆಬರ್
ಖೇದದ ಸಂಭ್ರಮದ ಮೆಯ್ಯೊಳುತ್ಪಾದಿಸುವರ್ ।[1]

ಹೀಗಾಗಿ ನಾವು – ಆ ಎಂಬುದನ್ನು ಷಷ್ಠೀ ವಿಭಕ್ತಿಯ ಪ್ರತ್ಯಯವೆಂದು ಪರಿಗಣಿಸಬೇಕು; ಅಷ್ಟೇ ಅಲ್ಲ, – ಆ ಎಂಬ ಪ್ರತ್ಯಯವೇ ಹಳೆಯ ಪ್ರತ್ಯಯ, ಮತ್ತು – ಅ ಎಂಬುದು – ಆ ಎಂಬುದರಿಂದಲೇ ಬಂದಿದೆಯೆಂದೂ ತೋರುತ್ತದೆ—ಆದುದರಿಂದ – ಅ< – ಆ.

ಇದಕ್ಕೆ ಶಾಸನದ ಆಧಾರಗಳೂ ಇವೆ.

No doubt in the inscriptions of the 7th cent. Forms with –â and –a terminations are found and that those with –a are more in number. More or less this same condition prevails with

---

1 ಶಬ್ದಮಣಿದರ್ಪಣ, ಸೂತ್ರ ೧೨೭, ಪುಟ ೧೩೪

regard to the inscriptions of the 8th cent. In the 9th cent inscriptions, forms with –a are found still in increasing number while in the 10th cent, all forms take the termination –a. These facts can support the view that –ā is earlier than –a and incidentally may go to confirm the wider hypothesis in regard to the evolution of Kannaḍa language.[1]

—ಅ, – ಅ ಎಂಬುವಲ್ಲದೆ, ಷಷ್ಠೀ ವಿಭಕ್ತಿಯ ಪ್ರತ್ಯಯವಾಗಿ ಕೆಲವೊಮ್ಮೆ –ಅತ್ತು, – ಅತು ಎಂಬ ಪ್ರತ್ಯಯಗಳೂ ಸೇರುವುದು ಕಾಣುತ್ತದೆ; [ಅತ್ತು < ಅತು ?]— ತನತ್ತು (ನಾಮಪದ.)

ಆಮ್ > ಎಮ್ಮ, ಎಮತು, ಎಮ್ಮತ್ತು (> ಎಮ್ಮದು, ನಮ್ಮದು)

ನೀನ್ > ನಿನ್ನ, ನಿನತು, ನಿನತ್ತು (> ನಿನ್ನದು)

ತಮಿಳು ಭಾಷೆಯಲ್ಲಿ ಷಷ್ಠೀ ವಿಭಕ್ತಿಯ ಪ್ರತ್ಯಯವಾಗಿ – ಅ ಎಂಬ ಪ್ರತ್ಯಯವೇ ಮೊದಲಿನಿಂದಲೂ ರೂಢಿಯಲ್ಲಿದೆ :

ಅವರ ಕಾಪ್ಪುಡೈಯ ಕಯಮ್ [(ಪುರನಾನೂರ್) = ಅವರು ಕಾಯುತ್ತಿರುವ ಕೊಳ.]

ಆಶಿರಿಕರ ನಿಶಿದಿಗೈ[2]

ಕಾನ ಚಿಱಿಯಾಱು

ಕಾನ ಕಿಱು ಆಱು (= ಕಾಡಿನ ಕಿರಿಯ ನದಿ.)

ಮರಾತ್ತ ನಿೞಲ್ (= ಮರದ ನೆರಳು.)

ಸಂಘಂ ಕಾಲದ ಸಾಹಿತ್ಯ ಕೃತಿಗಳಾದ ಪತ್ತುಪ್ಪಾಟ್ಟು, ಎಟ್ಟುತೊಗೈ, ಪುರನಾನ್ನೂರ್‌ವರೆಗೆ – ಅ ಎಂಬುದೇ ಷಷ್ಠಿಯ ರೂಪವಾಗಿ ಪ್ರಯೋಗವಾಗಿದೆ. ಆದುದರಿಂದ ಅದೇ ಪ್ರಾಚೀನ ಪ್ರತ್ಯಯವಿರಬೇಕಲ್ಲದೆ, ಕನ್ನಡದ ಅಥವಾ ಇತರ ದ್ರಾವಿಡ ಭಾಷೆಗಳ ಷಷ್ಠೀ ಪ್ರತ್ಯಯ ಈ ತಮಿಳಿನಿಂದಲೇ ಬಂದಿರಬಹುದೆಂಬ ವಾದವೂ ಇದೆ. ಇದು ಅಂಗೀಕೃತವಾದಲ್ಲಿ – ಅ > – ಅ ಬಂತೆಂಬ ವಾದ ನಿಲ್ಲುವುದಿಲ್ಲ. ಕನ್ನಡದಲ್ಲಿ – ಅ ಎಂಬುದನ್ನು ಷಷ್ಠೀ ಪ್ರತ್ಯಯವಾಗಿ ಮಾತ್ರವಲ್ಲದೆ ವಿಶೇಷಣ ಸಾಧಿಸಲೂ ಉಪಯೋಗಿಸುವರು. ಉದಾಹರಣೆಗೆ ಈ ಕೆಲವು ರೂಪಗಳನ್ನೂ, ಅವುಗಳಲ್ಲಿ ಇರುವ ಸಾಮ್ಯಗಳನ್ನೂ ಗಮನಿಸಿ :

[1] *HGOK*, p. 54.

[2] ಇದು ತಮಿಳು ಶಾಸನವೊಂದರಲ್ಲಿ ಸಿಗುವ ರೂಪ. ಶಾಸನದಲ್ಲಿ ಆಶಿರಿಕರ್ ಎಂಬ ವ್ಯಂಜನಾಂತ ರೂಪವಿದೆ. ಆದರೂ ಕೆಲವರ ಅಭಿಪ್ರಾಯದಂತೆ, 'ರ್' ಎಂಬುದರ ಮೇಲೆ ವ್ಯಂಜನವೆಂದು ಹೇಳದ ಚುಕ್ಕಿಯ ಗುರುತು ಇಲ್ಲವಾದುದರಿಂದ ಅದನ್ನು ಸ್ವರಾಂತವೆಂದೇ ಭಾವಿಸಬಹುದು.

ಬಂದ, ಹೋದ — (ಕೃದಂತ ವಿಶೇಷಣ)
ಎಳೆಯ, ನಿಡಿಯ, ಬಿಳಿಯ, ಹಳೆಯ — (ಗುಣವಾಚಕ)
ಅವನ, ಇವನ — (ಷಷ್ಠ್ಯಂತ)

– ಆ ಎಂಬುದರಿಂದ – ಅ ಎಂಬ ಷಷ್ಠಿಯ ಪ್ರತ್ಯಯ ಬಂದಿದೆಯೆಂಬ ಅಭಿಪ್ರಾಯ ದಂತೆ ಇನ್ನೊಂದು ವಾದವೂ ಇದೆ. – ಅದು ಎಂಬುದರ ಸಮೆದ ರೂಪವೇ – ಆ ಎಂಬ ಷಷ್ಠಿಯ ರೂಪವಾಗಿದೆಯೆಂಬ ಹೇಳಿಕೆಯೂ ಇದೆ. ಹೀಗಿದ್ದಲ್ಲಿ ಬಹುಶಃ – ಆ >* ಅದು > – ಅ ಆಗಿರಬಹುದು. ಆದರೆ ಶಾಸನಗಳಲ್ಲಿ / —ಅದು / ಪ್ರತ್ಯಯ ಪ್ರಯೋಗ ವಾಗಿಲ್ಲ. ಷಷ್ಠೀ ವಿಭಕ್ತಿ ಸಾಮಾನ್ಯವಾಗಿ ವ್ಯಕ್ತಿ ಅಥವಾ ವಸ್ತುಗಳ ಸಂಬಂಧವನ್ನು ವ್ಯಕ್ತಪಡಿಸುತ್ತದೆ.

ಉದಾಹರಣೆ :

ಅವರಾ ಮಗಳು
ಗುರುವಡಿಗಳಾ ಶಿಷ್ಯ
ವಿಮಲಮತಿಭಟಾರರ ಕಾಲಮ್

ಪುಂ ಸ್ತ್ರೀ ನಪುಂಸಕ ಲಿಂಗಗಳ ಶಬ್ದಗಳಲ್ಲಿ, ಕನ್ನಡದಲ್ಲಿ, ಷಷ್ಠೀ ವಿಭಕ್ತಿಯ ರೂಪ ಬದಲಾಗುವುದಿಲ್ಲ. ಸಂಸ್ಕೃತದಲ್ಲಿಯೂ ಹೆಚ್ಚು ಕಡಮೆ ಹೀಗೆಯೇ ಇದೆ. ಆದರೆ ಹಿಂದಿ ಭಾಷೆಯಲ್ಲಿ ಷಷ್ಠೀ ವಿಭಕ್ತಿಯ ರೂಪ ಯಾವುದಾಗುತ್ತದೆ ಎಂಬುದು ಅದರ ಮುಂದಿನ ಪದದ ಲಿಂಗವನ್ನು ಅನುಸರಿಸುತ್ತದೆ ಪುಲ್ಲಿಂಗ-ಸ್ತ್ರೀಲಿಂಗಗಳಲ್ಲಿ ಬೇರೆ ಬೇರೆಯಾಗಿ ಇರುತ್ತದೆ.

ಉದಾಹರಣೆ :

| | | | |
|---|---|---|---|
| (ಕ) | ನನ್ನ ಗಂಡ | ನನ್ನ ಹೆಂಡತಿ | ನನ್ನ ಮನೆ |
| (ಸಂ) | ಮಮ ಪುರುಷ | ಮಮ ಪತ್ನೀ | ಮಮ ಗೃಹಂ |
| (ಹಿಂದಿ) | | ಮೇರೀ ಪತ್ನಿ | ಮೇರಾ ಘರ್ |

ಬಹುಶಃ ಹಿಂದಿ ಭಾಷೆಯ ಈ ವ್ಯವಸ್ಥೆಗೆ ಅರಬ್ಬೀ ಭಾಷೆಯ ಪ್ರಭಾವವೇ ಕಾರಣ ವಿರಬೇಕೆಂದು ವಿದ್ವಾಂಸರು ಊಹಿಸಿದ್ದಾರೆ. ಏಕೆಂದರೆ ಅರಬ್ಬೀ ಭಾಷೆಯಲ್ಲಿ – ಇ ಎಂಬುದು ಷಷ್ಠೀ ವಿಭಕ್ತಿಯ ಪ್ರತ್ಯಯ (ಮತ್ತು ಸ್ತ್ರೀಲಿಂಗ ಪ್ರತ್ಯಯ) :

| | |
|---|---|
| ಎಲ್ (= ದೇವರು) | ಎಲಿ ( = ನನ್ನ ದೇವರು) |
| ಕತಬ್ (= ಪುಸ್ತಕ) | ಕತಬಿ (= ನನ್ನ ಪುಸ್ತಕ) |
| ಕತಬ್‌ತ (= ನೀನು ಬರೆಯುತ್ತಿ) | ಕತಬ್‌ತಿ (= ನೀನು ಬರೆಯುತ್ತಿ) |
| ಪುಲ್ಲಿಂಗ | ಸ್ತ್ರೀಲಿಂಗ |

ಇಲ್ಲಿ ಕಾಣುವ ಪುಲ್ಲಿಂಗ ಪ್ರತ್ಯಯಕ್ಕೂ, ಸ್ತ್ರೀಲಿಂಗ ಪ್ರತ್ಯಯಕ್ಕೂ ಇರುವ ವ್ಯತ್ಯಾಸ ಹಿಂದಿ ಭಾಷೆಯ ವ್ಯತ್ಯಾಸಕ್ಕೂ ಕಾರಣವಾಗಿದ್ದರೆ ಆಶ್ಚರ್ಯವೇನೂ ಇಲ್ಲ. ಮಲ್ತೊ ಭಾಷೆಯಲ್ಲಿ – ಕೀ ಎಂಬುದೂ, ಕುರುಖ್ ಭಾಷೆಯಲ್ಲಿ ಗಹಿ ಎಂದೂ ಷಷ್ಠಿಯ ಪ್ರತ್ಯಯ ಗಳು ಇವೆ. ಆದರೆ ಸಾಮಾನ್ಯವಾಗಿ, ಷಷ್ಠೀ ಪ್ರತ್ಯಯ ಎಲ್ಲ ದ್ರಾವಿಡ ಭಾಷೆಗಳಲ್ಲೂ ಇಂತಿದೆ:

ತಮಿಳು, ಗೋಂಡಿ, ಕೋತ: — ಅ
ಕುರುಖ್, ಮಲ್ತೊ, ಕುಈ: — ಇನ್
ತುಳು, ತೆಲುಗು, ನಾಯ್ಕಿ,
ಬ್ರಾಹೂಈ: — ಅ, – ಇನ್
ತೆ. – ಇನ್ > ಇ. ತಮ್ಮುನಿ
ಮಲೆಯಾಳಮ್: — ಇನ್, – ಉತೆ. ಮಗನ್ಱೆ = ಮಗನೆ
ಕನ್ನಡ: — ಆ, – ಅ, – ಅದು (<ಅತ್ತು ?)

'ಏಕಶತಂ ಷಷ್ಠ್ಯರ್ಥಾಃ'[1] ಎಂಬ ಪತಂಜಲಿಯ ಮಹಾಭಾಷ್ಯದ ಹೇಳಿಕೆಯಂತೆ ಜನ್ಯಜನಕ, ಸ್ವಸ್ವಾಮಿಭಾವ, ಅವಯವಾವಯವೀಭಾವ ಮೊದಲಾದ ಸಂಬಂಧ ಗಳನ್ನೂ ಷಷ್ಠೀ ವಿಭಕ್ತಿ ವ್ಯಕ್ತಪಡಿಸುತ್ತದೆ. ಷಷ್ಠೀ ವಿಭಕ್ತಿಯ ಮತ್ತೊಂದು ವೈಶಿಷ್ಟ್ಯ ವೆಂದರೆ ಉಳಿದ ಎಲ್ಲ ವಿಭಕ್ತಿಗಳೂ ಅದರ ಮೇಲೆ ಹತ್ತುವುದು.

## ಸಪ್ತಮೀ ವಿಭಕ್ತಿ

ಸಪ್ತಮೀ ವಿಭಕ್ತಿಯ ಪ್ರತ್ಯಯವನ್ನು ಕುರಿತು ಕೇಶಿರಾಜ – ಒಳ್ ಎಂಬುದಾಗಿ ಒಂದೆಡೆ ಹೇಳಿದ್ದರೂ,[1] ಇನ್ನೊಂದು ಕಡೆ – ಅಲ್ಲಿ, ಮತ್ತು – ಒಳ್ ಎಂಬುವೆರಡೂ ಸಪ್ತಮಿಯ ಪ್ರತ್ಯಯಗಳೆಂದು ನುಡಿದಿದ್ದಾನೆ.[2] ಆದರೆ ಶಾಸನಾಧಾರಗಳಿಂದ ಹೇಳುವು ದಾದರೆ ಪೂರ್ವದ ಹಳಗನ್ನಡದಲ್ಲಿ – ಅಲ್ ಮತ್ತು – ಉಳ್ ಎಂಬ ಪ್ರತ್ಯಯಗಳು ಸಪ್ತಮೀ ವಿಭಕ್ತಿಯಲ್ಲಿ ಪ್ರಯೋಗವಾಗುತ್ತಿದ್ದುವು. ಹಳೆಯ ಶಾಸನಗಳಲ್ಲಿ, ಕ್ರಿ. ಶ. ಏಳನೆಯ ಶತಮಾನದಿಂದ ಹತ್ತನೆಯ ಶತಮಾನದವರೆಗೆ, ಪ್ರಯೋಗವಾಗಿರುವ ಸಪ್ತಮೀ ವಿಭಕ್ತಿಯ ಪ್ರತ್ಯಯಗಳು ಇಂತಿವೆ:

ಕ್ರಿ. ಶ. ೭ನೆಯ ಶತಮಾನದ ಶಾಸನಗಳು — ಉಳ್, – ಉಳ, – ಉಳ್ಳ
— ಉಳ್ಳೆ, – ಒಳ್, – ಅಲ್ಲಿ
— ಇ, – ಈ, – ಎ, – ಏ

[1] ಕೇಶಿರಾಜ, ಶಮದ, ಸೂತ್ರ ೧೦೩, ಪುಟ ೧೦೮
[2] ಅದೇ., ಸೂತ್ರ ೧೨೯, ಪುಟ ೧೩೬

ಕ್ರಿ. ಶ. ೮ನೆಯ ಶತಮಾನದ ಶಾಸನಗಳು — ಉಳ್, - ಉಳ, - ಒಳ್, - ಒ
— ಒಳೆ, - ಒಳು, - ಒಳಗೆ

ಕ್ರಿ. ಶ. ೯ನೆಯ ಶತಮಾನದ ಶಾಸನಗಳು — ಉಳ್, - ಒಳ್

ಕ್ರಿ. ಶ. ೧೦ನೆಯ ಶತಮಾನದ ಶಾಸನಗಳು — ಒಳ್, - ಒಳೆ, - ಒಳಗೆ, - ಎ
— ಒಳವ್, -ಅಲ್, - ಅಲು

ಹಲ್ಮಿಡಿ ಶಾಸನದಲ್ಲಿಯೇ ಗಾಣದುಳ್ ತಿಂಗಳುಳ್ ಮಾಸದುಳ್ ಎಂಬ ಮಾತುಗಳಿವೆ. ಆದುದರಿಂದ ಸಪ್ತಮೀವಿಭಕ್ತಿಯ ಪ್ರತ್ಯಯಗಳಲ್ಲೆಲ್ಲಾ - ಉಳ್ ಎಂಬ ಪ್ರತ್ಯಯವೇ ಅತ್ಯಂತ ಪ್ರಾಚೀನವಾದ ಪ್ರತ್ಯಯವೆಂದು ಅಂಗೀಕರಿಸಬಹುದು. ಈ ರೂಪ ಬಹುಶಃ - ಉಲ್ ಎಂಬ ರೂಪದ ರೂಪಾಂತರವಿರಬಹುದು. ಕ್ರಿ. ಶ. ಒಂಬತ್ತನೆಯ ಶತಮಾನದವರೆಗೂ ಇದು ಪ್ರಯೋಗದಲ್ಲಿದ್ದು ಅಲ್ಲಿಂದ ಈಚೆಗೆ ಅದೃಶ್ಯವಾಗತೊಡಗಿದೆ.

ಒಳ್ ಎಂಬುದಕ್ಕಿಂತಲೂ - ಉಳ್ ಎಂಬುದು ಹಳೆಯ ಪ್ರತ್ಯಯವಾಗಿದೆ. ಅಲ್ಲದೆ[1] - ಉಳ ಎಂಬುದು - ಉಳ್ ಎಂಬ ಸಪ್ತಮೀ ಪ್ರತ್ಯಯದ ಷಷ್ಠೀ ರೂಪವೆನ್ನಬಹುದು. - ಉಳ್ ಎಂಬುದು ದ್ರಾವಿಡ ಭಾಷೆಗಳಲ್ಲೆಲ್ಲಾ ಬಹು ಹಳೆಯ ಧಾತುಗಳಲ್ಲಿ ಒಂದೆಂದು ಭಾವಿಸಲಾಗಿದೆ. ದ್ರಾವಿಡದ ಶಬ್ದಗಳನ್ನು ರೂಪಿಸುವಲ್ಲಿ ಈ - ಉಳ್ ಎಂಬುದು ಅನುಸರ್ಗವಾಗಿ ನಿಂತು ಪ್ರಮುಖಪಾತ್ರ ವಹಿಸಿದೆಯೆಂದು ಕೆ. ವಿ. ಸುಬ್ಬಯ್ಯ,[2] ಹಾಗೂ ಎಲ್. ವಿ. ರಾಮಸ್ವಾಮಿ ಅಯ್ಯರ್[3] ಹಲವು ಆಧಾರಗಳಿಂದ ನಿರೂಪಿಸಿದ್ದಾರೆ: ಕ. ತ. - ಉಳ್, ತೆ. - ಲೋ. - ಉಳ್, - ಅಲ್ಲಿ, - ಒಳಗೆ ಎಂಬ ಪ್ರತ್ಯಯಗಳು ಮೊದಲಿಗೆ ಸ್ವತಂತ್ರ ಪದಗಳಾಗಿದ್ದುವೆಂದು ಧಾರಾಳವಾಗಿ ಹೇಳಬಹುದು.

> . . . . there are cases in which the independent word is recognised . . . in Kannada . . . uḷ, suffix of the locative, is a well known word meaning 'interior' . . .[4]

- ಅಲ್ಲ, - ಒಳಗೆ ಎಂಬ ಪ್ರತ್ಯಯಗಳು ಸ್ವತಂತ್ರ ಶಬ್ದಗಳಾಗಿ ಹಳಗನ್ನಡ ನಡುಗನ್ನಡ ಮತ್ತು ಹೊಸಗನ್ನಡಗಳಲ್ಲಿ ನಿರಂತರವಾಗಿ ಬಳಕೆಯಲ್ಲಿವೆ.

ಕೋತ ಭಾಷೆಯಲ್ಲೂ ಸಪ್ತಮೀ ವಿಭಕ್ತಿಯ ಪ್ರತ್ಯಯ - ಒಳ್ಗೆ (< ಒಳಗೆ ?) ಎಂದು ಇದೆ. ನಡುಗನ್ನಡ ಕಾವ್ಯಗಳಲ್ಲಿ ಸಪ್ತಮಿಯ ಪ್ರತ್ಯಯವಾಗಿ - ಅಲು, - ಅಲಿ

---

[1] *GOKI*, p. 153.

[2] *A Comparative Grammar of Dravidian Languages*, I.A., 39, p. 156.

[3] L. V. R. Aiyer, *Indian Linguistics*, 1. 45.

[4] *The GSOD Languages*, p. 18.

ಎಂಬ ಎರಡು ಬೇರೆ ಪ್ರತ್ಯಯಗಳೂ ಪ್ರಯೋಗವಾಗಿವೆ. ಇಂದೂ ಆಡುನುಡಿಯಲ್ಲಿ ಈ ದೀರ್ಘ – ಅಲಿ ಪ್ರತ್ಯಯ ಬಳಕೆಯಲ್ಲಿದೆ :

ಮನೇಲಿ ಯಾರೂ ಇಲ್ಲ
ಅವನ ತಲೇಲಿ ಏನೂ ಇಲ್ಲ
ಬೀದೀಲಿ ಹೋಗುವವರು ಯಾರು ?

ಆದುದರಿಂದ ಸಪ್ತಮಿಯ ಪ್ರತ್ಯಯಗಳು ಕನ್ನಡದ ಬೆಳವಣಿಗೆಯ ವಿವಿಧ ಘಟ್ಟಗಳಲ್ಲಿ ಹೀಗೆ ನಿಂತಿವೆ :

ಪೂರ್ವದ ಹಳಗನ್ನಡ : — ಉಳ್, – ಒಳ್
ಹಳಗನ್ನಡ : — ಒಳ್, – ಒಳಗೆ, – ಅಲ್ಲಿ
ನಡುಗನ್ನಡ : — ಒಳ್, – ಒಳು, – ಒಳಗೆ, – ಅಲು, – ಅಲ್ಲಿ
ಹೊಸಗನ್ನಡ : — ಒಳಗೆ, – ಅಲ್ಲಿ, – ಅಲಿ

ಇವುಗಳಲ್ಲಿ – ಉಳ್ ಮತ್ತು – ಅಲಿ ಎಂಬೆರಡು ಪ್ರತ್ಯಯಗಳು ಇಂತು ವಿಕಾಸ ಗೊಂಡಿರುವಂತೆ ತೋರುತ್ತದೆ :

– ಉಳ್ > ಒಳ್ > – ಒಳು/ಒಳ > – ಒಳಗೆ
– ಅಲ್ > – ಅಲ್ಲಿ > – ಅಲು > – ಅಲಿ

ಕುರುಖ್ ಭಾಷೆಯಲ್ಲಿ – ನೂ, ಮಲ್ತೊ ಭಾಷೆಯಲ್ಲಿ – ನೋ ; ತೆಲುಗು ಭಾಷೆ ಯಲ್ಲಿ – ಅಂದು, – ನ ; ತಮಿಳಿನಲ್ಲಿ – ವಣ್, – ಉಳ್ ; ಮಲೆಯಾಳದಲ್ಲಿ ಇಲ್ –, ಕೋಲಾಮಿಯಲ್ಲಿ – ತ್ ಎಂಬುವು ಸಪ್ತಮಿ ವಿಭಕ್ತಿಯ ಪ್ರತ್ಯಯಗಳು. ತೆಲುಗು ಭಾಷೆಯಲ್ಲಿ – ನ.—ಅಂದು ಎಂಬ ಸಪ್ತಮಿಯ ಪ್ರತ್ಯಯ – ಅನ್ ಎಂಬುದಕ್ಕೆ + ದ ಸೇರಿ ಆಗಿವೆಯೆಂದು ತೋರುತ್ತದೆ ; – ಅನ್ ಸ್ಥಳವಾಚಕವೂ, – ನ ಉದಂತ ಜಡ ವಾಚಕವೂ ಆಗಿವೆ. ಸಪ್ತಮಿ ವಿಭಕ್ತಿ ಯಾವುದಾದರೂ ಸ್ಥಳ, ಪ್ರದೇಶದೊಡನೆ ಸಂಬಂಧವನ್ನು ಸೂಚಿಸುತ್ತದೆ :

ಊರುಳ್
ಕಟ್ಟಪ್ಪಿನುಳ್
ಮದ್ದೂರೊಳ್
ಅಣ್ಣಿಗೆರೆಯೊಳ್

ಉಕಾರಾಂತವಾದ ದಿಗ್ವಾಚಿಗಳಿಗೂ ಮೇಲ್ ಎಂಬ ಪದಕ್ಕೂ ಸಪ್ತಮಿ ವಿಭಕ್ತಿ ಯಲ್ಲಿ – ಎ ಎಂಬ ಪ್ರತ್ಯಯ ಸೇರುತ್ತದೆ :

ಕೆಳಗು > ಕೆಳಗೆ : ಹಿಂದು > ಹಿಂದೆ : ಮೇಲ್ > ಮೇಲೆ

ಧಾರವಾಡ ಮತ್ತು ರಾಯಚೂರು ಕಡೆಗಳಲ್ಲಿ—ಆಗ ಎಂಬುದು ಸಪ್ತಮೀ ವಿಭಕ್ತಿಯ ಪ್ರತ್ಯಯವಾಗಿ ಬಳಕೆಯಲ್ಲಿದೆ: ಕಲ್ಲಾಗ, ಮುಳ್ಳಾಗ, ಪುಸ್ತಕದಾಗ; ಮೈಸೂರಿನ ಕೆಲವು ಭಾಗಗಳಲ್ಲೂ ಉತ್ತರ ಕರ್ನಾಟಕದಲ್ಲೂ ಇಂಥದೇ ಮತ್ತೊಂದು ಪ್ರತ್ಯಯವಾದ —ಆಗೆ ಎಂಬುದು ರೂಢಿಯಲ್ಲಿದೆ:

ಊರಾಗೆ (ಊರಲ್ಲಿ), ಮನೆಯಾಗೆ (ಮನೆಯಲ್ಲಿ), ಗುಡಿಯಾಗೆ, ಕೈಯಾಗೆ (ಕೈಯಲ್ಲಿ),[1] ಹಳೆಯ ತ, ನಲ್ಲಿ ಕಣ್ (ತೊಲ್‌ಕಾಪ್ಪಿಯಮ್), ಇಲ್ (ಶಿಲಪ್ಪದಿಗಾರಂ) ಎಂಬುದನ್ನು ಸಪ್ತಮಿಯ ಪ್ರತ್ಯಯಗಳಾಗಿ ಹೇಳಿದೆ. ಉರಿಲ್ (ಊರಿನಲ್ಲಿ) ವೀಟ್ಟಿಲ್ (ಮನೆಯಲ್ಲಿ). ತುಳುವಿನಲ್ಲಿ – ಅಳ್, – ಡ್, – ಟ್, ಎಂಬುವು ಸಪ್ತಮೀ ಪ್ರತ್ಯಯಗಳು. ಇಲ್ಲಾಳ್ (ಮನೆಯಲ್ಲಿ), ಬಾಯಿಡ್ (ಬಾಯಲ್ಲಿ), ಕೈಟ್ (ಕೈಯಲ್ಲಿ).

## ಸಂಬೋಧನಾ ವಿಭಕ್ತಿ

ಇನ್ನು ಸಂಬೋಧನಾ ವಿಭಕ್ತಿ. ಇದು ಯಾರನ್ನು ಅಥವಾ ಯಾವುದನ್ನು ಕುರಿತು ಹೇಳುತ್ತೇವೆಯೋ ಅವರನ್ನು ಸಂಬೋಧಿಸುವಾಗ ಉಪಯೋಗವಾಗುತ್ತದೆ. ಬಾಲೇ (ಸ್ತ್ರೀಲಿಂಗ), ಕುಲಮುದ್ದ(ಪುಲ್ಲಿಂಗ)—ಇತ್ಯಾದಿ ರೂಪಗಳು ಶಾಸನದಲ್ಲೇ ಸಿಗುತ್ತವೆ. ಸಾಮಾನ್ಯವಾಗಿ – ಎ, – ಏ ಎಂಬ ಪ್ರತ್ಯಯಗಳು ಅಕಾರಾಂತ ಪದಗಳಿಗೆ ಹತ್ತಿದಾಗ – ನ್ ಅಥವಾ – ಮ್ ಪ್ರತ್ಯಯಗಳು ಸೇರುವುದೂ ಉಂಟು: ನಂದನಮೇ, ಚಂದ್ರನೆ. ಕೆಲವೊಮ್ಮೆ ಸಂಬೋಧನಾ ವಿಭಕ್ತಿಯ ಪ್ರತ್ಯಯವೆಂದು ಪ್ರತ್ಯೇಕವಾಗಿ ಯಾವುದೂ ಸೇರದೆ ಆ ಪದದ ಪ್ರಕೃತಿರೂಪವೇ ಪ್ರಯೋಗವಾಗುತ್ತದೆ. ಇದಿಷ್ಟೂ ಸಂಬೋಧನಾ ವಿಭಕ್ತಿಯ ಪದ ಏಕವಚನದಲ್ಲಿ ಇರುವಾಗ ಆಗುವ ಕ್ರಿಯೆ. ಆದರೆ ಬಹುವಚನದಲ್ಲಿ—ಇರ ಅಥವ್—ಇರಾ ಎಂಬ ಪ್ರತ್ಯಯಗಳು ಸೇರುತ್ತವೆ. ಪರಿಮಾಣವಾಚಕ ಮತ್ತು ಸರ್ವನಾಮಗಳಿಗೆ ಈ ಸಂಬೋಧನಾ ವಿಭಕ್ತಿ ಇಲ್ಲ. ಆದರೆ ಕೆಲವೆಡೆ ಇವಳೇ ಎಂಬ ರೂಪವಿದೆ. ಆದ್ದರಿಂದ ಕೆಲವು ಕ. ಉಪಭಾಷೆಗಳಲ್ಲಿ ಇದೆ. ಕುರುಖ್ ಭಾಷೆಯಲ್ಲಿ – ಓ – ಅಯ್, ಮತ್ತು – ಅಯೋ ಎಂಬ ಸಂಬೋಧನಾ ವಿಭಕ್ತಿಯ ಪ್ರತ್ಯಯಗಳು ಇವೆ.

ಒಟ್ಟು ದ್ರಾವಿಡ ಭಾಷೆಗಳು ನಾಲ್ಕು ವಿಭಕ್ತಿಗಳನ್ನು ಮಾತ್ರ ಪಡೆದಿವೆಯೆಂದು ಕೆಲವು ವಿದ್ವಾಂಸರ ಅಭಿಪ್ರಾಯ: ಪ್ರಥಮಾ ವಿಭಕ್ತಿ, ದ್ವಿತೀಯಾ ವಿಭಕ್ತಿ, ಚತುರ್ಥೀ ವಿಭಕ್ತಿ, ಮತ್ತು ಷಷ್ಠೀ ವಿಭಕ್ತಿ. ಈ ನಾಲ್ಕು ವಿಭಕ್ತಿಗಳು ಪ್ರಾತ್ಯಾಯಿಕ ಗುಣಗಳನ್ನು ಪಡೆದಿವೆಯಲ್ಲದೆ ಈ ವಿಭಕ್ತಿಗಳಿಗೆ ಸೇರುವ ಪ್ರತ್ಯಯಗಳು ಬಹುಮಟ್ಟಿಗೆ

---

[1] ಈ ಅಗೆ ಪ್ರತ್ಯಯ ಒಳಗೆ ರೂಪದ ವಿಕೃತಿಯೆಂದೂ, ಅಗ(ಮನೆ, ಒಳಗೆ), ಆಗೆ > ಅಗೆ ಎಂಬಂತೆ ನಿಷ್ಪನ್ನವಾದುದೆಂದೂ ಎರಡು ಅಭಿಪ್ರಾಯಗಳಿವೆ.

ಎಂದೂ ಸ್ವತಂತ್ರ ಪದಗಳಾಗಿದ್ದಂತೆ ತೋರುವುದಿಲ್ಲವೆಂದು ಕೆ. ವಿ. ಸುಬ್ಬಯ್ಯ ಅಭಿಪ್ರಾಯ ವ್ಯಕ್ತಪಡಿಸಿದ್ದರೆ, ಡಾ|| ಕಾಲ್ಡ್‌ವೆಲ್ ಮತ್ತು ಇತರ ಭಾಷಾವಿಜ್ಞಾನಿಗಳು ದ್ರಾವಿಡ ಭಾಷೆಗಳು ಸಂಶ್ಲೇಷಕ ಭಾಷೆಗಳಾದುದರಿಂದ ಈ ವಿಭಕ್ತಿ ಪ್ರತ್ಯಯಗಳು ಮೊಟ್ಟಮೊದಲಿಗೆ ಸ್ವತಂತ್ರವಾದ ಪದಗಳಾಗಿದ್ದಿರಬೇಕೆಂದು ಭಾವಿಸಿದ್ದಾರೆ. ದ್ರಾವಿಡ ಭಾಷೆಗಳ ವಿಭಕ್ತಿಗಳನ್ನು ಸಂಸ್ಕೃತದ ಮಾದರಿಯನ್ನು ಅನುಸರಿಸಿ ಪ್ರಥಮಾ, ದ್ವಿತೀಯಾ, ತೃತೀಯಾ . . . . ಎಂದು ವಿಭಾಗಿಸಿದ್ದಾರೆ. ಆದರೆ ಕೆಲವು ವಿದ್ವಾಂಸರು ಈ ಸಪ್ತ ವಿಭಕ್ತಿಗಳನ್ನು ಪ್ರಧಾನ ವಿಭಕ್ತಿಗಳು ಮತ್ತು ಆನುಷಂಗಿಕ ಅಥವಾ ಗೌಣ ವಿಭಕ್ತಿಗಳೆಂದು ಎರಡು ವಿಧವಾಗಿ ವರ್ಗೀಕರಿಸಬಯಸಿದ್ದಾರೆ.[1]

ಪ್ರಥಮಾ, ದ್ವಿತೀಯಾ, ಚತುರ್ಥೀ, ಹಾಗೂ ಷಷ್ಠೀ ವಿಭಕ್ತಿಗಳು ಪ್ರಧಾನ ವಿಭಕ್ತಿಗಳು; ತೃತೀಯಾ, ಪಂಚಮಿ, ಹಾಗೂ ಸಪ್ತಮೀ ವಿಭಕ್ತಿಗಳು ಆನುಷಂಗಿಕ ವಿಭಕ್ತಿಗಳು. ಸಂಬೋಧನಾ ವಿಭಕ್ತಿಯನ್ನು ಬೇಕಾದರೆ ಪ್ರಧಾನ ವಿಭಕ್ತಿಗಳ ಗುಂಪಿನಲ್ಲಿ ಅಡಕ ಮಾಡಬಹುದು. ಪ್ರಧಾನ ವಿಭಕ್ತಿಗಳಿಗೂ ಮತ್ತು ಆನುಷಂಗಿಕ ವಿಭಕ್ತಿಗಳಿಗೂ ಇರುವ ವ್ಯತ್ಯಾಸ ಇಂತಿದೆ. ಪ್ರಧಾನ ವಿಭಕ್ತಿಗಳ ಪ್ರತ್ಯಯಗಳು ಪ್ರಾತ್ಯಯಿಕವಾಗಿದ್ದರೆ, ಆನುಷಂಗಿಕ ವಿಭಾಗದಲ್ಲಿ ಅವು ಪರಸರ್ಗಗಳಾಗಿರುತ್ತವೆ. ಈ ಆನುಷಂಗಿಕ ವಿಭಕ್ತಿಗಳ ಪ್ರತ್ಯಯಗಳು ಪರಸ್ಪರ ವ್ಯತ್ಯಾಸಗೊಳ್ಳಬಹುದು,ಅದಲುಬದಲಾಗಬಹುದು. ದ್ರಾವಿಡ ಭಾಷೆಗಳಲ್ಲಿ, ಸಾಮಾನ್ಯವಾಗಿ, ವಿಭಕ್ತಿ ಪ್ರತ್ಯಯಗಳು ಏಕವಚನ ಬಹುವಚನಗಳೆರಡರಲ್ಲೂ ಒಂದೇ ವಿಧವಾಗಿ ಇರುತ್ತವೆ. ಆದರೆ ತುಳು ಮತ್ತು ತೆಲುಗು ಭಾಷೆಗಳಲ್ಲಿ ಮಾತ್ರ ಬೇರೆ ಬೇರೆ ಪ್ರತ್ಯಯಗಳೂ ಉಂಟು.

ಇದುವರೆಗೆ ಸಮೀಕ್ಷಿಸಿದ ವಿಭಕ್ತಿ ಪ್ರತ್ಯಯಗಳ ವಿವರಣೆ ಹಾಗೂ ಆಧಾರಗಳಿಂದ ಕನ್ನಡ ಭಾಷೆಗೆ ಸಂಬಂಧಿಸಿದಂತೆ ಕೆಲವು ಮುಖ್ಯ ಅಂಶಗಳನ್ನು ಗಮನಿಸಬಹುದು, ತೀರ್ಮಾನಗಳನ್ನು ತಳೆಯಬಹುದು: (೧) ಕನ್ನಡದಲ್ಲಿ ಪ್ರಥಮಾ ವಿಭಕ್ತಿ ಇದೆಯಾದರೂ ಅದಕ್ಕೆ ಒಂದು ಪ್ರತ್ಯೇಕ ಪ್ರತ್ಯಯ ಇಲ್ಲ, ಪ್ರಕೃತಿಯೇ ಪ್ರಥಮಾ ವಿಭಕ್ತಿಯಾಗುತ್ತದೆ. (೨) ಕನ್ನಡದಲ್ಲಿ ಪಂಚಮಿ ವಿಭಕ್ತಿಯೂ ಇಲ್ಲ, ಪ್ರತ್ಯಯವೂ ಇಲ್ಲ. ತೃತೀಯೆ ಅಥವಾ ಮತ್ತಾವುದಾದರೂ ವಿಭಕ್ತಿ ಇದರ ಕಾರ್ಯವನ್ನು ನಿರ್ವಹಿಸುತ್ತದೆ. (೩) ಸಂಬೋಧನಾ ವಿಭಕ್ತಿಯಲ್ಲೂ, ಪ್ರಥಮಾ ವಿಭಕ್ತಿಯಲ್ಲಿ ಇರುವಂತೆ ಪ್ರಕೃತಿಯನ್ನೇ ಬಳಸುವರು. (೪) ಕನ್ನಡದ ಕೆಲವು ವಿಭಕ್ತಿಗಳಿಗೆ ಆರೇಳು ಪ್ರತ್ಯಯಗಳಿರುವಂತೆ ತೋರಿದರೂ, ಅವುಗಳಲ್ಲಿ ಒಂದೊ ಎರಡೋ ವಿಭಕ್ತಿ ಪ್ರತ್ಯಯವೆಂಬ ಹೆಸರಿನಿಂದ ಕರೆಸಿಕೊಳ್ಳಲು ಅರ್ಹತೆ ಪಡೆದಿವೆಯೇ ಹೊರತು ಉಳಿದವುಗಳೆಲ್ಲವನ್ನೂ ಕೇವಲ ಅನುಸರ್ಗ ಅಥವಾ ಮೂಲ ಪ್ರತ್ಯಯದ ವ್ಯತ್ಯಸ್ತರೂಪಗಳೆಂದು ಕರೆಯಬಹುದು. ಇಲ್ಲವಾದರೆ ನಾವು ಹತ್ತಿಪ್ಪತ್ತು ವಿಭಕ್ತಿ ಪ್ರತ್ಯಯಗಳನ್ನು ಒಪ್ಪಬೇಕಾದೀತು.

[1] K. V. Subbaiah, *A Comparative Grammar of Dravidian Languages*, I.A., 1910–1911.

(೫) ವಿಭಕ್ತಿ ಪ್ರತ್ಯಯಗಳೆಲ್ಲಾ ಹಿಂದೆ ಸ್ವತಂತ್ರ ಪದಗಳಾಗಿದ್ದುವೆಂದು ಹೇಳುವ ಹೇಳಿಕೆಯನ್ನು ಕೆಲವು ಪ್ರತ್ಯಯಗಳಿಗೆ ಮಾತ್ರ ಅನ್ವಯಿಸಬಹುದು; ಉಳಿದ ಪ್ರತ್ಯಯ ಗಳನ್ನು ಸ್ವತಂತ್ರ ಪದಗಳಾಗಿದ್ದುವೆಂಬುದನ್ನು ಸಾಧಿಸುವುದು ಕಷ್ಟ. (೬) ಕೆಲವು ವಿಭಕ್ತಿಗಳ ಕೆಲವು ಪ್ರತ್ಯಯಗಳು ಇಂದಿಗೂ ತಮ್ಮ ಮೊದಲಿನ ರೂಪದಲ್ಲಿಯೇ ರೂಢಿಯಲ್ಲಿದ್ದರೆ ಇನ್ನು ಕೆಲವು ದಿನ(ಜನ) ಬಳಕೆಯಿಂದ ತಪ್ಪಿಹೋಗಿವೆ. (೭) ಭಾಷೆ ಯಲ್ಲಿ ಆಗುವ ಅನೇಕ ಮಾರ್ಪಾಟುಗಳಂತೆ ಈ ವಿಭಕ್ತಿ ಪ್ರತ್ಯಯಗಳೂ ಕಾಲಕಾಲಕ್ಕೆ ಪರಿವರ್ತನೆ ಪಡೆದಿವೆ. (೮) ಹೊಸಗನ್ನಡದಲ್ಲಿ ಕೆಲವು ವಿಭಕ್ತಿಗಳಿಗೆ ಹೊಸ ಪ್ರತ್ಯಯ ಗಳು ಸೇರಿವೆ. (೯) – ಉಳ್, – ಒಳ್, – ಒಳಗೆ ಮತ್ತು – ಅಲ್ಲಿ ಎಂಬ ಪ್ರತ್ಯಯ ಗಳನ್ನು ಮಾತ್ರ ಸ್ವತಂತ್ರ ಪದಗಳೆಂದು ಸುಲಭವಾಗಿ ಗುರುತಿಸಬಹುದು.

ಕನ್ನಡ ಭಾಷೆ ಹಂತ ಹಂತವಾಗಿ ಪೂರ್ವದ ಹಳಗನ್ನಡದಿಂದ ಹಳಗನ್ನಡ, ಹಳಗನ್ನಡದಿಂದ ನಡುಗನ್ನಡ, ನಡುಗನ್ನಡದಿಂದ ಹೊಸಗನ್ನಡ—ಹೀಗೆ ಬೆಳೆದುಬಂದಿದೆ. ಱಆಗಳು ಳರಗಳಾಗಿ ಬೆರೆತುಹೋದುವು, ವ್ಯಂಜನಾಂತಗಳು ಸ್ವರಾಂತಗಳಾದುವು. ಇದರಂತೆ ವಿಭಕ್ತಿ ಪ್ರತ್ಯಯಗಳೂ ದೀರ್ಘದಿಂದ ಹ್ರಸ್ವವೂ, ದ್ವಿತ್ವದಿಂದ ಲಘುವೂ ಆದುವು. ಜೀವಂತ ಭಾಷೆಯ, ಆಡುನುಡಿಯ ಅಭಿವೃದ್ಧಿ ಹಾಗೂ ಅನುಕೂಲಗಳಿಗೆ ಈ ಬಗೆಯ ಎಲ್ಲ ಮಾರ್ಪಾಟುಗಳೂ ಅಗತ್ಯ, ಸಹಜ.

# ಸರ್ವನಾಮಗಳು

ಸರ್ವನಾಮಗಳು ಭಾಷೆಯ ಅಚಲವಾದ, ಅಭೇದ್ಯವಾದ ಭಾಗಗಳು. ಯಾವುದೇ ಭಾಷೆಯ ಸಂಬಂಧ ಸ್ವರೂಪವನ್ನು ನಿರ್ಧರಿಸುವಲ್ಲಿ ನೆರವಾಗುವ ವ್ಯಾಕರಣಾಂಶಗಳಲ್ಲಿ ಸರ್ವನಾಮಗಳು ಅತ್ಯಂತ ಸಹಕಾರಿಯಾಗಿವೆ. ಸರ್ವನಾಮ ಭಾಷೆಯ ಸಂಬಂಧವನ್ನು ಕುರಿತು ನಿರ್ದಿಷ್ಟ ನಿಲುವನ್ನು ಸೂಚಿಸುತ್ತದೆಂದು ಭಾಷಾವಿಜ್ಞಾನಿಗಳು ಆಧಾರಗಳಿಂದ ತೋರಿಸಿದ್ದಾರೆ. ಭಾಷೆಯಲ್ಲಿ ಸರ್ವನಾಮಗಳ ಬಳಕೆ ಹೆಚ್ಚು. ಆದರಿಂದಾಗಿ ಅವುಗಳು ಸ್ಥಿರವಾಗಿರಲು ಸಾಧ್ಯವಿದೆ. ಸಂಖ್ಯಾವಾಚಿ ಹಾಗೂ ವಿಭಕ್ತಿ ಪ್ರತ್ಯಯಗಳಿಗಿಂತ ಸರ್ವನಾಮ ರೂಪಗಳು ಸ್ಥಿರ. ಸರ್ವನಾಮಗಳ ರೂಪಗಳಲ್ಲಿ ಧ್ವನಿವ್ಯತ್ಯಾಸಗಳಾಗಿರ ಬಹುದು, ಆದರೆ ಆ ರೂಪಗಳೇ ಮುಂದುವರಿದಿರುತ್ತವೆ. ಸರ್ವನಾಮಗಳನ್ನು ಅನ್ಯ ಭಾಷೆಯಿಂದ ಸ್ವೀಕರಿಸುವುದು ಅಪರೂಪ. ಭಾಷೆಯಲ್ಲಿ ಮೊಟ್ಟಮೊದಲು ಕಾಣಿಸಿ ಕೊಂಡ ಮಾತುಗಳು ಸರ್ವನಾಮಗಳು, ಅದರಲ್ಲಿಯೂ ದರ್ಶಕ ಸರ್ವನಾಮಗಳು ಎಂಬ ಅಭಿಪ್ರಾಯವಿದೆ.

ದ್ರಾವಿಡ ಭಾಷೆಗಳಲ್ಲಿನ ಸರ್ವನಾಮ ಲಿಂಗವನ್ನೂ, ವಚನವನ್ನೂ ತೋರಿಸುವ ವೈಶಿಷ್ಟ್ಯವನ್ನು ಪಡೆದಿವೆ. ಇಂಗ್ಲಿಷ್ ಭಾಷೆಯ ಸರ್ವನಾಮಗಳಿಗೆ ಲಿಂಗವಿವಕ್ಷೆಯಿಲ್ಲ ವೆಂದೂ, ಸರ್ವನಾಮಗಳಲ್ಲಿ ಲಿಂಗ ನಿರ್ದೇಶನ ಕಾಣಿಸಿದರೂ ಅದು ಲಿಂಗವಿವಕ್ಷೆಗೆ ಸಂಬಂಧಪಡದ ವಿಚಾರವೆಂದೂ ಕೆಲವು ವಿದ್ವಾಂಸರ ಹೇಳಿಕೆ. ಹಾಗೆ ನೋಡು ವುದಾದರೆ ವ್ಯಾಕರಣದ ವಿವರಣೆಗೆ ಬರುವ ಲಿಂಗವ್ಯವಸ್ಥೆಯೇ ಇಂಗ್ಲಿಷಿನಲ್ಲಿ ಇಲ್ಲವೆಂದು ಹೇಳಬಹುದು.

ದ್ರಾವಿಡ ಭಾಷೆಗಳ ಸರ್ವನಾಮಗಳ ವಿವರವನ್ನು ಕುರಿತು ವಿವೇಚಿಸುವ ಮೊದಲು ಈ ಗುಂಪಿನ ಕೆಲವು ಸರ್ವನಾಮಗಳನ್ನು ಹೋಲಿಸಿ ನೋಡಬಹುದು :

| | ಕನ್ನಡ | ತಮಿಳು | ತೆಲುಗು |
|---|---|---|---|
| ಉತ್ತಮಪುರುಷ : | ನಾನು | ನಾನ್-ಯಾನ್ | ನೇನು |
| | ನಾವು | ನಾಮ್-ನಾಂಗಳ್ | ಮೇಮು |

| | | | |
|---|---|---|---|
| ಮಧ್ಯಮಪುರುಷ : | ನೀನು | ನೀ | ನೀವು |
| | ನೀವು | ನೀಂಗಳ್ | ಮೀರು |
| ಪ್ರಥಮಪುರುಷ : | ಅವನು/ಅವಳು | ಅವನ್-ಅವಳ್ | ವಾಡು/ಆವಿಡ (ಅದಿ) |
| | ಅದು | ಅದು | ಅದಿ |
| | ಅವರು | ಅವರ್ಗಳ್ | ವಾರು |
| | ಅವು | ಅವೈಗಳ್ | ಅವಿ |
| ಕನ್ನಡ | | ಗೋಂಡಿ | ಬ್ರಾಹೂಈ |
| ಉತ್ತಮಪುರುಷ : | ನಾನು | ನನಾ | ಈ(ಕನ) |
| | ನಾವು | ನಮೆತ್ | ನಾನ್ |
| ಮಧ್ಯಮಪುರುಷ : | ನೀನು | ನಿಮೆ | ನೀ |
| | ನೀವು | ಮೀರೆತ್ | ನುಮ್ |
| ಪ್ರಥಮಪುರುಷ : | ಅವನು/ಅವಳು | ವೊರ್/ಹದ್ | ಒದ್/ಒದ್ |
| | ಅದು | ಅದ್ | ಒದ್ |
| | ಅವರು | ವೊರ್ | ಒದ್ |
| | ಅವು | ಔ(ಅವು) | ಒಫ್ಕ್ |

ದ್ರಾವಿಡ ಭಾಷೆಗಳಲ್ಲಿ ಉತ್ತಮಪುರುಷ, ಮಧ್ಯಮಪುರುಷ ಮತ್ತು ಆತ್ಮಾರ್ಥಗಳಲ್ಲಿ ಪುಂಸ್ತ್ರೀ ನಪುಂಸಕ ಲಿಂಗಗಳ ವಿವೇಚನೆ ಇಲ್ಲ; ಕೇವಲ ಪ್ರಥಮಪುರುಷದಲ್ಲಿ ಮಾತ್ರ ಆ ವಿವೇಚನೆ ಇದೆ. ಉತ್ತಮ, ಮಧ್ಯಮ, ಪ್ರಥಮ—ಈ ಮೂರು ಸರ್ವನಾಮಗಳಲ್ಲಿ ವ್ಯತ್ಯಾಸ ಕಾಣುವುದು ವಿಭಕ್ತಿ ಪ್ರತ್ಯಯಗಳ ಕಿರಿಯ ಮತ್ತು ದೀರ್ಘ ರೂಪಗಳಲ್ಲಿ. ದ್ರಾವಿಡ ಭಾಷೆಗಳಲ್ಲಿ ಪ್ರಶ್ನಾರ್ಥಕ ಮತ್ತು ಸಂಬಂಧಸೂಚಕ (ವಾಚಕ) ಗಳಲ್ಲಿ ಅಷ್ಟಾಗಿ ಭೇದ ಕಾಣುವುದಿಲ್ಲ. ಅಲ್ಲದೆ ಸರಿಯಾಗಿ ಹೇಳುವುದಾದರೆ ನಮ್ಮಲ್ಲಿ ಸಂಬಂಧಸೂಚಕ ಸರ್ವನಾಮಗಳು ಇಲ್ಲವೆಂದೇ ಹೇಳಬಹುದು :

Properly speaking, there is no relative pronoun in Kannada and the declinable participles, with the gender suffiixes–an, –aṁ, –ōn, on, –oṁ, oḷ –ata and –àtam are used to serve this purpose.[1]

ಸಂಸ್ಕೃತ, ಇರಾನಿಯನ್, ಗ್ರೀಕ್, ಫಿಜಿಯನ್ ಮತ್ತು ಇತರ ಕೆಲವು ಇಂಡೊ-ಯೂರೋಪಿಯಾ ಭಾಷೆಗಳಲ್ಲಿ ಪ್ರಶ್ನಾರ್ಥಕ ಹಾಗೂ ಸಂಬಂಧವಾಚಕಗಳು ಪ್ರತ್ಯೇಕವಾಗಿಯೇ ಇವೆ.

ಉದಾಹರಣೆಗೆ ಸಂಸ್ಕೃತದ ಈ ಎರಡು ವಾಕ್ಯಗಳನ್ನು ನೋಡಿ :

[1] G. S. Gai, *HGOK*, 946, p. 107.

೧. ಕಃ ಕರೋತಿ (ಪ್ರಶ್ನಾರ್ಥಕ) ಯಃ ಕರೋತಿ

೨. ಯಃ ಶ್ರಣೋತೇಸಃ ವಿದ್ವಾನ್ (ಸಂಬಂಧಸೂಚಕ)

ಯ (ಯಸ್, ಯಾ, ಯದ್), ಯತರ, ಯತಿ, ಯಾವಂತ್,

ಯಥಾ, ಯತ್ರ, ಯದಾ, ಯದಿ . . . . ಇತ್ಯಾದಿ.

ನಮ್ಮ ನುಡಿಯಲ್ಲಿ ಆವ, ಯಾವ, ಯಾರು ; ಆರ್, ಆವನ್, ಆವಳ್––ಇವನ್ನು ಕೃದಂತಗಳಾದ ಬಂದ, ಹೋದ—ಮೊದಲಾದ ಪದಗಳಿಗೇ ಸೇರಿಸಿಬಿಡುತ್ತೇವೆ. ಕೇಶಿರಾಜ ಉದಾಹರಿಸುವ ಸಂಸ್ಕೃತಾನುಕರಣೆಯ ಈ ವಾಕ್ಯವನ್ನು ನೋಡಿ :

ಆವನಧಿಕಪುಣ್ಯನವನೇ ಸೇವ್ಯಂ

[ಆವನ್ + ಅಧಿಕ + ಪುಣ್ಯನ್ + ಅವನೇ + ಸೇವ್ಯಂ]

ಯಾವನು ಮಾಡುವನೋ ಅವನು ಉಣ್ಣುವನು

ಈ ವಾಕ್ಯದಲ್ಲಿ ಸಂಬಂಧಾರ್ಥಕ ಸರ್ವನಾಮವಿದೆಯೆಂದು ತೋರುವುದಾದರೂ ಇಲ್ಲಿ ಎರಡು ಸರ್ವನಾಮಗಳು ಸೇರಿ ಒಂದು ಸಂಬಂಧಸೂಚಿತವಾಗಿದೆಯೆಂಬುದನ್ನು ಗಮನಿಸಬೇಕು—ಆವನ್ . . . ಅವನೇ . . . : ಆವನ್ ಎಂಬುದು ಪ್ರಶ್ನಾರ್ಥಕ ಸರ್ವನಾಮ. ಇದು ಹಳಗನ್ನಡದ ಮಾತಾಯಿತು. ಇನ್ನು ಹೊಸಗನ್ನಡದ ಉದಾಹರಣೆಯಲ್ಲೂ ಯಾವನು ಎಂಬುದು ಪ್ರಶ್ನಾರ್ಥಕ ಸರ್ವನಾಮರೂಪ. ಇದರಂತೆ ಬಂದ, ಹೋದ––ಎಂಬ ಕೃದಂತಗಳನ್ನು ಉಪಯೋಗಿಸಿಕೊಂಡು ಸಂಬಂಧಾರ್ಥಕ ಸರ್ವನಾಮದ ಕೊರತೆಯನ್ನು ಪರಿಹರಿಸಿಕೊಳ್ಳುತ್ತೇವೆ :

ಬಂದವನನ್ನು ಬರಹೇಳು

ಹೋದವನನ್ನು ಕರೆಹೇಳು . . . ಇತ್ಯಾದಿ.

ಯಾವನು ಮಾಡುವನೋ ಅವನು ಉಣ್ಣುವನು ಎಂಬುದನ್ನು ಮಾಡಿದವನು ಉಣ್ಣುವನು ಎಂದು ಹೇಳುತ್ತೇವೆ. ಯಾವನೋ ಅವನು, ಯಾವುದೋ ಅದು—ಎಂಬ ಸಂಬಂಧಾರ್ಥಕ ಸರ್ವನಾಮ ಸ್ವರೂಪದಲ್ಲಿರುವ ಯಾವನ್ (ಆವನ್), ಯಾವುದು (ಆವುದು) ಇವು ಪ್ರಶ್ನಾರ್ಥಕ ಸರ್ವನಾಮಗಳು. ಆದರೆ ಸಂಸ್ಕೃತದಲ್ಲಿ ಯತ್-ತತ್, ಮರಾಠಿ ಜೊ-ತೊ ಇಂಥ ರೂಪಗಳ ಚಿರಪರಿಚಯ ಇಲ್ಲವೇ ಅನುಕರಣದಿಂದ ಇದೇ ಮಾದರಿಯನ್ನು ಅನುಸರಿಸಿ ಯಾವನೋ ಅವನು, ಯಾವುದೋ ಅದು ಎಂಬ ಸಂಬಂಧಾರ್ಥಕ ರಚನೆ ರೂಪಗೊಂಡಂತೆ ತೋರುತ್ತದೆ. ಆದುದರಿಂದ ಭಾಷಾ ವಿಜ್ಞಾನದ ದೃಷ್ಟಿಯಿಂದ ಕನ್ನಡದಲ್ಲಿ ಸಂಬಂಧಾರ್ಥಕ ಸರ್ವನಾಮ ಇಲ್ಲವೆನ್ನಬಹುದು. ಆದರೆ ಸಂಬಂಧವನ್ನು ಇರುವ ಸರ್ವನಾಮಗಳಲ್ಲಿ ಒಂದಕ್ಕಿಂತಲೂ ಹೆಚ್ಚಿನ ಸರ್ವನಾಮಗಳನ್ನು ಬಳಸುವುದರ ಮೂಲಕ ಸೂಚಿಸುವ ಪ್ರಯತ್ನವಿದೆ.

ಈ ಭಾಷೆಗಳಲ್ಲಿ ಕಾಣುವ ಅಭಿವ್ಯಾಪಕ ಹಾಗೂ ವ್ಯಾವರ್ತಕ ಸರ್ವನಾಮಗಳ ವಿಚಾರ ಪರಿಶೀಲಿಸಬೇಕಾದುದು. ಇದನ್ನು ಕೆಲವರು ಸಮಾವೇಶಕ ಮತ್ತು ಅಸಮಾವೇಶಕ ಸರ್ವನಾಮವೆಂದೂ ಕರೆದಿದ್ದಾರೆ. ಇಂಗ್ಲೀಷಿನಲ್ಲಿ ಇದನ್ನು Inclusive

Pronoun ಮತ್ತು Exclusive Pronoun ಎನ್ನುವರು. ಈ ಎರಡು ಬಗೆಯ— ಒಂದರಲ್ಲಿ ಎದುರಿಗಿರುವವರನ್ನು ಸೇರಿಸಿಯೂ, ಇನ್ನೊಂದರಲ್ಲಿ ಎದುರಿಗೆ ಇರುವವರನ್ನು ಬಿಟ್ಟೂ ಹೇಳುವ ಎರಡು ರೀತಿಯ ಸರ್ವನಾಮಗಳು ಜಗತ್ತಿನ ಹಲವು ಭಾಷೆಗಳಲ್ಲಿ ಇಲ್ಲ. ದ್ರಾವಿಡ ಭಾಷೆಗಳಲ್ಲಿ ಕಾಣುವ ಅಭಿವ್ಯಾಪಕ ಮತ್ತು ವ್ಯಾವರ್ತಕ ಸರ್ವನಾಮುಗಳ ವಿಂಗಡಣೆ ಹಾಗೂ ವರ್ಗೀಕರಣದ ಈ ಕ್ರಮ ಮುಂಡಾವರ್ಗದ ಭಾಷೆಗಳಲ್ಲೂ ಬಳಕೆಯಲ್ಲಿದೆ.[1]

ಕನ್ನಡ ಭಾಷೆಯಲ್ಲಿ ಈ ಎರಡು ಬಗೆಯ ಸರ್ವನಾಮ ವರ್ಗೀಕರಣ ವಿಭಾಗ ಇಲ್ಲವೆಂದು ಒಂದುನೂರು ವರುಷದ ಹಿಂದೆ ರಾಬರ್ಟ್ ಕಾಲ್ಡ್‌ವೆಲ್ ಅಭಿಪ್ರಾಯಪಟ್ಟಿದ್ದ :

> In all Dravidian dialects, with the exception of Canarese, there are two plurals of the pronoun of the first person, of which one denotes, not only the party of the speaker, but also the party addressed, and may be called the plural inclusive; the other excludes the party addressed and may be called the plural exclusive.[2]

ಇದೇ ರೀತಿ ಥಾಮಸ್ ಬರೊ ಕೂಡ ಕನ್ನಡ, ಗೋಂಡಿ, ಬ್ರಾಹೂಈ ಭಾಷೆಗಳಲ್ಲಿ ಈ ದ್ವಿವಿಧವಾದ ವಿಂಗಡಣೆ ಇಲ್ಲವೆಂದು ೧೯೪೩ರ ಲೇಖನದಲ್ಲಿ ಬರೆದುದುಂಟು.[3] ಈಗ ಅವರು ತಮ್ಮ ಅಭಿಪ್ರಾಯವನ್ನು ಮಾರ್ಪಡಿಸಿಕೊಂಡಿರಬಹುದು. ಕನ್ನಡದ ಕೆಲವು ವಿದ್ವಾಂಸರೂ ಕಾಲ್ಡ್‌ವೆಲ್ಲನ ಅಭಿಪ್ರಾಯವನ್ನೇ ಅನುಮೋದಿಸಿದ್ದಂತೆ ತೋರುತ್ತದೆ. ಕನ್ನಡ ಕೈಪಿಡಿಯ 'ಭಾಷಾ ಚರಿತ್ರೆ' ಭಾಗದಲ್ಲಿ ಇದರ ಪ್ರಸ್ತಾಪವಿಲ್ಲ.

ಆದರೆ ದಿವಂಗತ ರಾ. ನರಸಿಂಹಾಚಾರ್ಯರು ಕನ್ನಡ ಭಾಷೆಯಲ್ಲೂ ಈ ವಿಭಾಗ ಕ್ರಮವಿದೆಯೆಂದು ಮೊದಲು ಬರೆದು ತೋರಿಸಿದರು.

> It is believed that Kannada, too, does not possess this feature. I think Kannada does possess two forms of the plural of the personal pronoun of the first person just like its sister languages of Southern India. And this not only in old languages but also in Modern.[4]

ಅಲ್ಲಿಂದ ಮುಂದೆ ಗೋವಿಂದಸ್ವಾಮಿ ಗಾಯಿಯವರೂ, ಜೂಲ್ಸ್‌ಬ್ಲಾಕ್ ಅವರೂ ಈ ವಿಚಾರದಲ್ಲಿ ಹೆಚ್ಚಿನ ಮಾಹಿತಿಯನ್ನು ಒದಗಿಸಿದರು. ಈ ದ್ವಿವಿಧವಾದ ಸರ್ವನಾಮು

---

[1] ಕೊರ್ಕು, ಸಂತಾಲಿ, ಹೋ, ಮುಂಡರಿ...ಇ. ಇವು ಮುಂಡಾವರ್ಗದ ಭಾಷೆಗಳು.

[2] *ACGODLS*, 1951, p. 414.

[3] T. Burrow, *Dravidian Studies*, BSOAS XI, 1943–46, *Intial Y and N in Dravidian*, p. 84.

[4] R. N., *History of Kannada Language*, p. 84.

ವರ್ಗೀಕರಣ ಕನ್ನಡದಲ್ಲಿ ಅದರಲ್ಲಿಯೂ ಹಳಗನ್ನಡದಲ್ಲಿ ಎಷ್ಟರಮಟ್ಟಿಗೆ ಇದ್ದಿತೆಂಬುದು ನಿಜವಾಗಿಯೂ ವಿಚಾರಾರ್ಹ.

ಪಂಪಭಾರತ ಮೊದಲಾದ ಹಳೆಯ ಕಾವ್ಯಗಳಿಂದ ಆಧಾರಗಳನ್ನು ಇತ್ತು ಈ ವಿಚಾರದಲ್ಲಿ ಸಂಶೋಧನೆ ನಡಸಿದ ಗಾಯಿಯವರು ಹೀಗೆ ಬರೆಯುತ್ತಾರೆ:

> My subsequent investigation of this problem with reference to 10th C.A.D. has lead me to believe that in Old Kannada there should have been a clear distinction between the inclusive and exclusive 1st person plural....in the following instances (63 out of a total of 72) we find 'em' used as the exclusive first person plural.[1]

ಎಮ್ ಎಂಬುದರ ಜೊತೆಗೆ ಇದೇ ಪ್ರಕಾರ ನಾಮ್ ಎಂಬುದೂ ಅಭಿವ್ಯಾಪಕ ಸರ್ವನಾಮವಾಗಿ ಬರುವುದನ್ನೂ ಹಳೆಯ ಕಾವ್ಯಗಳಲ್ಲಿ ಕಾಣಬಹುದು.

ಕನ್ನಡದ ಉಪಭಾಷೆಯಾದ ಹವ್ಯಕ ಕನ್ನಡದಲ್ಲಿ ಕೂಡ ಈ ವ್ಯವಸ್ಥೆಯಿದೆ. ಪ್ರಾಧ್ಯಾಪಕ ಜೂಲ್ಸ್ ಬ್ಲಾಕ್ ದ್ರಾವಿಡ ಭಾಷೆಗಳಲ್ಲಿ ಕಾಣುವ ಈ ವಿಭಾಗ ಕ್ರಮವನ್ನು ಉದಾಹರಣೆಗಳನ್ನಿತ್ತು ವಿವರಿಸಿದ್ದಾರೆ; ಕೆಲವನ್ನು ದೃಷ್ಟಾಂತಕ್ಕಾಗಿ ಇಲ್ಲಿ ಪರಿಶೀಲಿಸಬಹುದು.[2] ಉತ್ತಮಪುರುಷ ಬಹುವಚನದಲ್ಲಿ ಈ ಎರಡು ವಿಶಿಷ್ಟ ಸರ್ವನಾಮಗಳು ಬೇರೆಬೇರೆ ದ್ರಾವಿಡ ಭಾಷೆಯಲ್ಲಿ ಬಳಕೆಯಾಗಿರುವ ಪರಿ ಇಂತಿದೆ:

| | ವ್ಯಾವರ್ತಕ | ಅಭಿವ್ಯಾಪಕ |
|---|---|---|
| ಹಳೆಯ ತ. | ಯಾಮ್/ಎಮ್ – | ನಾಮ್/ನಮ್ |
| ತ. | ನಾಂಗಳ್ | ನಾಮ್ |
| ಹಳೆಯ ತೆ. | ಏಮು/ಮಾ – | ಮನಮು/ಮ – |
| ತೆ. | ಮೇಮು | ಮನಮು |
| ಕುಈ | ಆಮು/ಮಾ – | ಆಜು/ಮಾ – |
| ಹಳೆಯ ಕ. | ಆಮ್/ಎಮ್ – | ನಾಮ್/ನಮ್ > (ಹೊ.ಗ) ನಾವು |
| ಹವ್ಯಕ ಕ. | /ಎಂಗೊ | ನಾವು |
| ಬಡಗ | ಎಂಗ | ನಂಗ |
| ಕುರುಖ್ | (ಎನ್)/ಏಮ್ – | ನಾಮ್/ನಮ್ |

[1] G. S. Gai, *Bulletin of Deccan College*, Vol. 1, 1940, p. 411.

[2] J. B., *The Grammatical Structure of Dravidian Languages*, p. 31.

| | | |
|---|---|---|
| ಮಲ್ತೊ. | ಏಮ್ | ನಾಮ್ |
| ತುಳು. | ಯೆಂಕುಲು/ -ಳು | ನಮ |
| ಮ. | ನಾಂಗಳ್ | ನಾಮ್/ನೋಮ್ |
| ಕೋಲಾಮಿ. | ಆಮ್ | ನೇಂಡ್ |
| ಬ್ರಾಹೂಈ | — | ನನ್ |
| ಕೋತ. | ಏಮ್ - | ಅಮ್ - |
| ಪರ್ಜಿ. | ಆಮ್ | ಅಮೊರ್ |

> This full correspondence of form and meaning cannot be mere coincidence, and can definitely be held to indicate the existence of the distinction in primitive Dravidian.[1]

ಎಂದು ಭಾಷಾವಿಜ್ಞಾನಿಗಳು ಖಚಿತವಾಗಿ ತಿಳಿಸಿದ್ದಾರೆ. ಈ ಅಭಿವ್ಯಾಪಕ ಮತ್ತು ವ್ಯಾವರ್ತಕ ಸರ್ವನಾಮಗಳನ್ನು ದ್ರಾವಿಡ ಭಾಷೆಗಳಲ್ಲಿ ಗುರುತಿಸಿದರೂ ಸ್ಟೆನ್‌ಕೊನೊ (Sten Konow), ಅದರ ವಿವರಣೆ ನೀಡುವಾಗ ಎಡವಿರುವುದು ಎದ್ದು ಕಾಣುತ್ತದೆ.

> .... the exclusive form of Kurukh, Kui and Telugu is essentially identical with the inclusive Tamil and Malayalam.[2]

ಎಂಬ ಆತನ ಹೇಳಿಕೆ ವಸ್ತುಸ್ಥಿತಿಯ ತದ್ವಿರುದ್ಧ ನಿರೂಪಣೆಯಾಗಿದೆ.

ಹಳಗನ್ನಡ ಸರ್ವನಾಮಗಳಲ್ಲಿ ಆಮ್ ಬಂದೆವು ಮತ್ತು ನಾಮ್ (>ನಾವು) ಎಂಬುದಕ್ಕೆ ವ್ಯತ್ಯಾಸವಿತ್ತೆಂಬುದು ಸ್ಪಷ್ಟವಾದುದರಿಂದ ಮೊದಲಿಗೆ ಕನ್ನಡದಲ್ಲಿಯೂ ಈ ಸಮಾವೇಶಕ ಮತ್ತು ಅಸಮಾವೇಶಕ ಸರ್ವನಾಮಗಳು ರೂಢಿಯಲ್ಲಿದ್ದುವು. ಕನ್ನಡದ ಹಳೆಯ ಗದ್ಯ ಗ್ರಂಥವಾದ ವಡ್ಡಾರಾಧನೆಯಲ್ಲೇ ಈ ಅಭಿವ್ಯಾಪಕ ಹಾಗೂ ವ್ಯಾವರ್ತಕ ಸರ್ವನಾಮಗಳ ಸ್ಪಷ್ಟ ಆಧಾರವಿದೆ. ನಾಮ್, ನಮ್ಮನ್, ನಮಗೆ—ಎಂಬ ಅಭಿವ್ಯಾಪಕ ಸರ್ವನಾಮ ರೂಪಗಳೂ; ಆಮ್, ಎಮ್ಮನ್, ಎಮಗೆ, ಎಮ್ಮ—ಎಂಬ ವ್ಯಾವರ್ತಕ ಸರ್ವನಾಮ ರೂಪಗಳೂ ವಡ್ಡಾರಾಧನೆಯಲ್ಲಿ ಪ್ರಯೋಗವಾಗಿವೆ.[3]

---

[1] T. Burrow, *Dravidian Studies V*, BSOAS XI.

[2] *LSI*, Vol. IV, 1906, p. 293.

[3] ಅಭಿವ್ಯಾಪಕ ಮತ್ತು ವ್ಯಾವರ್ತಕ ಸರ್ವನಾಮಗಳ ವಿಚಾರವಾಗಿ ಒಂದು ಹೆಚ್ಚಿನ ಮಾತಿಂತಿದೆ: ಆಮ್/ನಾವು ಅಭಿವ್ಯಾಪಕ, ನಾಮ್/ನಾವುಗಳು ವ್ಯಾವರ್ತಕವೆಂದು ಕವಿಚರಿತೆಕಾರರು ಹೇಳಿದರೆ, ಗಾಯಿಯವರು ಆಮ್/ಎಮ್ ಎಂಬುದು ವ್ಯಾವರ್ತಕವೆಂದಿದ್ದಾರೆ. ಹ. ಗ. ಹೊತ್ತಗೆಗಳಲ್ಲಿ ಆಮ್, ನಾಮ್ ರೂಪಗಳು ವ್ಯಾವರ್ತಕ ಹಾಗೂ ಅಭಿವ್ಯಾಪಕಾರ್ಥದಲ್ಲಿ ಪ್ರಯೋಗವಾಗಿವೆ. ಮೇಲೆ ಹೇಳಿದ ವಡ್ಡಾರಾಧನೆಯಲ್ಲೇ ಇಂತಹ ಉದಾಹರಣೆಗಳಿವೆ. ಜೋಡಿ ರೂಪಗಳು (ನೀರುಳ್ಳಿ/ಈರುಳ್ಳಿ) ದ್ರಾವಿಡ ಭಾಷೆಗಳಲ್ಲಿ ಬಳಕೆಯಾಗುವುದು ಸರ್ವೇಸಾಮಾನ್ಯವಾದುದರಿಂದ ಅಭಿವ್ಯಾಪಕ-ವ್ಯಾವರ್ತಕದ ಅಸ್ತಿತ್ವ ಅನುಮಾನವೆಂಬ ಅಭಿಪ್ರಾಯವೂ ಇದೆ.

ಹೊಸಗನ್ನಡದಲ್ಲಿ ಈ ವಿಂಗಡಣೆ ಹಳಗನ್ನಡದಲ್ಲಿ ಕಾಣುವ ಪ್ರಮಾಣದಲ್ಲಿ ಇಲ್ಲ. ಅಭಿವ್ಯಾಪಕ ಸರ್ವನಾಮದ ಹಳೆಯ ರೂಪಗಳು—ನಾಮ್/ನಮ್ –> ನಾವು ಎಂಬ ಹೊಸ ರೂಪದಲ್ಲಿ ಐಕ್ಯವಾಗಿರುವಂತೆ ತೋರುತ್ತದೆ. ತಮಿಳಿನ ಹಳೆಯ ವ್ಯಾಕರಣವಾದ ತೊಲ್ಕಾಪ್ಪಿಯಮ್‌ನಲ್ಲಿ ಯಾಮ್/ನಾಮ್ ಎಂಬ ರೂಪಗಳು ಸಿಗುತ್ತವೆ ; ಆದರೆ ಅವುಗಳ ನಡುವಿನ ಅಂತರ ಅಷ್ಟು ಸ್ಪಷ್ಟವಾಗಿ ಸೂಚಿತವಾಗಿಲ್ಲ.[1]

ಇದುವರೆಗೆ ಉದಾಹರಿಸಿದ ದ್ರಾವಿಡ ಭಾಷೆಗಳಲ್ಲಿ, ಅಭಿವ್ಯಾಪಕ ವ್ಯಾವರ್ತಕ ಸರ್ವನಾಮಗಳ ಪಟ್ಟಿಯಲ್ಲಿ, ಗೋಂಡಿ ಭಾಷೆಯಲ್ಲಿ ಕಾಣುವ ಅಭಿವ್ಯಾಪಕ ಸರ್ವನಾಮ ರೂಪವಾದ ಅಪುಲ್ / ಅಪ್ಲೋ—ಇವು ಹೊಸ ರೂಪಗಳು ; ಇತರ ದ್ರಾವಿಡ ಭಾಷೆಗಳೊಡನೆ ತಾಳೆಯಾಗದ ನವೀನ ರೂಪಗಳು. ಆದುದರಿಂದ ಇವು ಹೊರಭಾಷೆಯ—ಪರಭಾಷೆಯ ಪ್ರಭಾವದಿಂದ ನುಸುಳಿದ ಎರವಲು ಆಕೃತಿಮಾಗಳೆನ್ನಬಹುದು. ಹೀಗಿದ್ದಲ್ಲಿ ಗೋಂಡಿ ಭಾಷೆಯಲ್ಲಿ, ನೆರೆಹೊರೆಯ ಭಾಷೆಗಳಾದ ಮುಂಡಾ ಭಾಷೆಗಳ ಸಂಸರ್ಗದಿಂದ, ಈ ಎರಡು ಆಕೃತಿಮಾಗಳು ಹುಟ್ಟಿರಬಹುದು. ತೌಲನಿಕ ವ್ಯಾಸಂಗವೂ ಇದನ್ನೇ ಸ್ಪಷ್ಟಪಡಿಸುತ್ತದೆ.

ಉದಾಹರಣೆಗೆ ಈ ಹೋಲಿಕೆಗಳನ್ನು ನೋಡಿ :

| | ಸರ್ವನಾಮರೂಪ | |
|---|---|---|
| ಮುಂಡಾ ಭಾಷೆಗಳು | ಕೊರ್ಕು–ಅಬುಂಗ್ | |
| | ಮುಂಡರೀ–ಅಬು | ಗೋಂಡಿ—ಅಪ್ಲೋ < ಅಪುಲ್ |
| | ಸಂತಾಲಿ–ಅಬೊ | |

ಈ ಹೋಲಿಕೆಗಳಿಂದ ಬ>ಪ ಆಗಿರುವುದು ಕಾಣುತ್ತದೆ. ಪಕಾರ ಬಕಾರಗಳು ಓಷ್ಠ್ಯ ವರ್ಣಗಳು, ಪರಸ್ಪರ ಪಲ್ಲಟವಾಗುವುದು ಸಹಜ ಅಥವಾ ಸಾಧ್ಯ. ಅಲ್ಲದೆ ಉಳಿದ ದ್ರಾವಿಡ ಭಾಷೆಗಳಲ್ಲಿ ಇಂತಹ ರೂಪಗಳು ಇಲ್ಲ, ಮುಂಡಾ ಭಾಷೆಗಳಲ್ಲಿ ಸಂಬಂಧಪಟ್ಟ ಪದಗಳು ಇವೆ. ಈ ಎಲ್ಲ ಕಾರಣಗಳಿಂದ ಗೋಂಡೀ ಭಾಷೆಯ ಅಭಿವ್ಯಾಪಕ ಸರ್ವನಾಮ ರೂಪವಾದ ಅಪುಲ್ / ಅಪ್ಲೊ ಮುಂಡಾ ಭಾಷೆಗಳ ಪ್ರಭಾವವೆನ್ನಬಹುದು.

ಇವಕ್ಕೆ ಸಂಬಂಧಿಸಿದಂತೆ ಇನ್ನೂ ಕೆಲವು ಸಂದೇಹಗಳು ತಲೆದೋರಿವೆ. ಈ ಸಮಾವೇಶಕ ಮತ್ತು ಅಸಮಾವೇಶಕ ಸರ್ವನಾಮಗಳು ಮೂಲತಃ ದ್ರಾವಿಡ ಭಾಷೆಗಳಲ್ಲಿ ಇದ್ದುವೆ ? ಅಥವಾ ಬೇರೆ ಕಡೆಯಿಂದ, ಬೇರೆ ಭಾಷೆಯಿಂದ ಬಂದಿದೆಯೆ ? ಈ ಪ್ರಶ್ನೆಗಳು ವಿಚಾರ ಪರಿಪ್ಲುತವಾಗಿದ್ದು ವಿಚಾರಮಂಥನಕ್ಕೆ ಎಡೆಮಾಡಿಕೊಟ್ಟಿವೆ. ಈ ಎರಡು ತೆರನಾದ ಸರ್ವನಾಮಗಳನ್ನು ಕುರಿತು—ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಈ

[1] ತೊಲ್ಕಾಪ್ಪಿಯಮ್ ವ್ಯಾಕರಣಕ್ಕೆ ಐದು ಜನರು ಟೀಕೆ ಬರೆದಿದ್ದಾರೆ: ಇವರಲ್ಲಿ ನಚ್ಚಿನಾರಕ್ಕಿನಿಯರ್ ಎಂಬಾತ ನಾಮ್ ಎಂಬುದು ಅಭಿವ್ಯಾಪಕ ಬಹುವಚನವೆಂದೂ, ಯಾಮ್ ಎಂಬುದು ವ್ಯಾವರ್ತಕವೆಂದೂ ಹೇಳಿದ್ದಾನೆ. ನೋಡಿ ಸೊಲ್ಲಧಿಗಾರಮ್–೧೬೨

ವಿಂಗಡಣೆಯೇನಿದ್ದರೂ ಸುಬಂತಗಳಿಗೆ ಮಾತ್ರ ಸೀಮಿತವಾಗಿದೆಯೇ ಹೊರತು ಕ್ರಿಯಾ ರೂಪಗಳಲ್ಲಿ ಕಾಣುವುದಿಲ್ಲ; ಆದರೆ ಉತ್ತರ ದ್ರಾವಿಡ ಭಾಷೆಗಳಲ್ಲಿ ಸುಬಂತ ಹಾಗೂ ಕ್ರಿಯಾ ರೂಪಗಳೆರಡರಲ್ಲೂ ಈ ವಿಭಜನೆಯಿದೆ. ಬಹುಶಃ ಮುಂಡಾ ಭಾಷೆಗಳ ಗಾಢ ಪ್ರಭಾವವೇ ಉತ್ತರದ ದ್ರಾವಿಡ ಭಾಷೆಗಳಲ್ಲಿನ ಈ ವ್ಯವಸ್ಥೆಗೆ ಕಾರಣವಿರಬಹುದು—ಎಂಬ ಊಹೆ ವ್ಯಕ್ತವಾಯಿತು.

ಈ ಊಹೆಯನ್ನೂ ಬಲಪಡಿಸುವ ಮತ್ತೊಂದು ಆಧಾರವೆಂದರೆ ಬ್ರಾಹೂಈ ಭಾಷೆಯಲ್ಲಿ ಈ ವಿಂಗಡಣೆ ಇಲ್ಲದಿರುವುದು. ಇದು ಸಮಾವೇಶಕ ಹಾಗೂ ಅಸಮಾವೇಶಕ ಸರ್ವನಾಮ ದ್ರಾವಿಡಭಾಷೆಗಳಲ್ಲಿ ಸಹಜವಾಗಿ ಮೂಡಿದ ಗುಣವಲ್ಲವೆಂಬುದನ್ನು ತೋರಿಸುತ್ತದೆ—ಎಂದು ವಿದ್ವಾಂಸರು ವಿವರಿಸಿದ್ದಾರೆ.[1] ಈ ಬಗೆಯ ದ್ವಿವಿಧ ವಿಭಾಗ ಗುಜರಾತಿ, ಸಿಂಧೀ ಭಾಷೆಗಳಲ್ಲಿ ಇದೆಯಾದರೂ ಸಂಸ್ಕೃತ ಅಥವಾ ಇತರ ಯಾವುದೇ ಇಂಡೋ-ಯೂರೋಪಿಯಾ ಪರಿವಾರದ ಭಾಷೆಗಳಲ್ಲೂ ಇಲ್ಲ; ಮರಾಠಿ, ಗುಜರಾತಿ, ಸಿಂಧೀ ಭಾಷೆಗಳಲ್ಲಿ ಮಾತ್ರ ಈ ವರ್ಗೀಕರಣ ತಲೆದೋರಲು ದ್ರಾವಿಡ ಭಾಷೆಗಳೇ ಕಾರಣವೆ? ಅಥವಾ ಮುಂಡಾ ಭಾಷೆಗಳು ಕಾರಣವೆ? ಮಧ್ಯಏಷಿಯಾದ ಎಲ್ಲ ಭಾಷೆಗಳಲ್ಲೂ ಈ ವಿಭಾಗವಿದೆ. ಮಂಚೂ, ಮಂಗೋಲಿಯಾ, ಉತ್ತರ ಚೀನಿ ಭಾಷೆ, ಆಸ್ಟ್ರೇಲಿಯಾದ ಆದಿವಾಸಿಗಳ ಭಾಷೆ, ಹಾಗೂ ಅಮೇರಿಕದ ಕೆಲವು ಭಾಷೆಗಳು, ಪಾಲಿನೇಷಿಯಾ ಭಾಷೆಗಳು—ಈ ಎಲ್ಲ ಭಾಷೆಗಳಲ್ಲೂ ಅಭಿವ್ಯಾಪಕ ಮತ್ತು ವ್ಯಾವರ್ತಕ ಸರ್ವನಾಮಗಳ ವಿಂಗಡಣೆ ಇದೆ. ಉದಾ :

| | ಅಭಿವ್ಯಾಪಕ | ವ್ಯಾವರ್ತಕ |
|---|---|---|
| ಗುಜರಾತಿ | ಆಪಣಿ | ಹವೆ |
| ಮಂಚು | ಬೆ | ಮೂ |
| ಉತ್ತರ ಚೀನಿ | ತ್ಸಾ (ಮೆನ್) | ವೊ (ಮೆನ್) |

ರಾಬರ್ಟ್ ಕಾಲ್ಡ್‌ವೆಲ್ ದ್ರಾವಿಡ ಭಾಷೆಗಳಲ್ಲಿ ಕಾಣುವ ಈ ವ್ಯವಸ್ಥೆಯನ್ನು ಕುರಿತು ಹೇಳಿರುವ ವಿವರಣೆಯನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದು; ಅಭಿವ್ಯಾಪಕ-ವ್ಯಾವರ್ತಕ ವಿಂಗಡಣೆ

> .... is one of those points which seem to connect the Dravidian family with the Scythian group.[2]

ಎಂದು ಆತ ಭಾವಿಸಿದ್ದಾನೆ. ಗೋಂಡ್ ಭಾಷೆಯಲ್ಲಿ ಕಾಣಿಸಿರುವ ಅಭಿವ್ಯಾಪಕ ಸರ್ವನಾಮಕ್ಕೆ ಮುಂಡಾ ಭಾಷೆಯ ಸಂಪರ್ಕವೇ ಕಾರಣವಿರಬೇಕೆಂದು ನೋಡಿದೆವು. ಅಲ್ಲದೆ

---

[1] F. B. J. Kuiper, *Notes on Dravidian Morphology*, Acta Orientalia, 20, 1948.

[2] *ACGODLS*, ನಾಲ್ಕನೆಯ ಮುದ್ರಣ, ಪು. ೪೧೪.

ಮೂಲ ಮುಂಡಾ ಭಾಷೆಯು ಮೂಲ ದ್ರಾವಿಡ ಭಾಷೆಯ ಮೇಲೆ ಒಂದೆರಡು ವಿಚಾರಗಳಲ್ಲಿ ಸ್ಪಷ್ಟವಾದ ಪ್ರಭಾವ ಬೀರಿರುವುದು ನಿಜ. ಇದೂ ಅಲ್ಲದೆ ಮೂಲ ದ್ರಾವಿಡ ಭಾಷೆಯಷ್ಟೇ ಮೂಲ ಮುಂಡಾ ಭಾಷೆಗಳೂ ಹಳೆಯವು ಅಥವಾ ಇನ್ನೂ ಹಳೆಯವು. ಹೀಗಾಗಿ ಈ ಸರ್ವನಾಮಗಳಲ್ಲೂ ಮೂಲ ಮುಂಡಾ ಭಾಷೆ ಮೂಲ ದ್ರಾವಿಡ ಭಾಷೆಯ ಮೇಲೆ ಪ್ರಭಾವ ಬೀರಿರಬಹುದು; ಬ್ರಾಹೂಈ ಭಾಷೆ ಈ ಪ್ರಭಾವ ಬೀಳುವ ವೇಳೆಗೆ ಬೇರೆಯಾಗಿದ್ದಿರಬಹುದು. ಜೂಲ್ಸ್‌ಬ್ಲಾಕ್ ಕೂಡ ಇದು ಮುಂಡಾ ಭಾಷೆಗಳ ಪ್ರಭಾವವೆಂದೇ ವಿವರಿಸಿದ್ದಾನೆ.

ಶಬ್ದರೂಪ ರಚನೆಯ ದೃಷ್ಟಿಯಿಂದ ವಿವೇಚಿಸಿದಾಗ ದ್ರಾವಿಡ ಭಾಷೆಗಳಲ್ಲಿನ ಈ ಅಭಿವ್ಯಾಪಕ-ವ್ಯಾವರ್ತಕ ವಿಭಾಗವೇನಿದ್ದರೂ ಕೇವಲ ಆಕೃತಿಮಾಗಳ ಪರಿವರ್ತನೆ ಅಷ್ಟೆ. ಆದರೆ ಮುಂಡಾ ಗುಂಪಿನ ಭಾಷೆಗಳಲ್ಲಿ ಈ ವ್ಯವಸ್ಥೆಯೇ ಬೇರೆ ತೆರನಾಗಿದೆ. ಅಲ್ಲಿ ಒಂದೊಂದಕ್ಕೂ ಬೇರೆ ಪದಗಳಿವೆ. ನಮ್ಮಲ್ಲಿ ಆಮ್ ಬಂದೆವು, ನಾಮ್ ಬಂದೆವು—ಎಂದು ಹೇಳುವಾಗ ಆಮ್-ನಾಮ್‌ಗಳಲ್ಲಿ ವ್ಯತ್ಯಾಸವಿದೆಯೇ ಹೊರತು 'ಬಂದೆವು' ಎಂಬುದು ಹಾಗೆಯೇ ಇದೆ, ಸಮಾನವಾಗಿದೆ. ಆದರೆ ಮುಂಡಾ ಭಾಷಾ ವರ್ಗದಲ್ಲಿ ಅದಕ್ಕೂ ಬೇರೆ ಬೇರೆ ಪದಗಳಿವೆ. ಆದುದರಿಂದ ಈ ವಿಭಾಗಕ್ರಮ ಎಷ್ಟರ ಮಟ್ಟಿಗೆ ದ್ರಾವಿಡ ಅಥವಾ ದ್ರಾವಿಡೇತರವೆಂಬುದು ಚರ್ಚಾಸ್ಪದ ವಿಷಯ. ಈ ಕ್ಷೇತ್ರ ದಲ್ಲಿ ಇನ್ನೂ ಹೆಚ್ಚಿನ ಆಧಾರಗಳು ದೊರೆತ ಹೊರತು ಏನನ್ನೂ ಸದೃಢವಾಗಿ ಹೇಳು ವಂತಿಲ್ಲ. ಸ್ಟೆನ್‌ಕೊನೊ ಕೂಡ ಈ ದ್ವಿವಿಧವಿಭಾಗ ಮುಂಡಾವರ್ಗದ ಭಾಷೆಗಳ ಪ್ರಭಾವದಿಂದ ಮೂಡಿದೆಯೆಂದೇ ವಿವರಿಸಿದ್ದಾನೆ. ಬ್ರಾಹೂಈ ಭಾಷೆಯಲ್ಲಿ ಈ ವಿಭಾಗ ಇಲ್ಲದಿರುವುದಕ್ಕೆ ಬಲೋಚೀ ಭಾಷೆಯ ಪ್ರಭಾವವೇ ಕಾರಣವೆಂದೂ, ಇರಾನೀ ಭಾಷೆ ಗಳಲ್ಲಿ ಈ ವಿಭಾಗ ಇಲ್ಲವೆಂದೂ ಎಮಿನೊ ವಾದ.[1]

ಇನ್ನು ಆತ್ಮಾರ್ಥಕ ಸರ್ವನಾಮಗಳನ್ನು ಪರಿಶೀಲಿಸಬಹುದು. ಇಂಡೊ-ಯೂರೋಪಿಯಾ ವರ್ಗದ ಹಳೆಯ ಸ್ಥಿತಿಯಲ್ಲಿ ಆತ್ಮಾರ್ಥಕ ಸರ್ವನಾಮವಿದ್ದರೂ ಈಗ ಇಲ್ಲವಾಗಿದೆ; ಸಂಸ್ಕೃತ ಭಾಷೆಯ–ಸ್ವ/ಸ–, ಲ್ಯಾಟಿನ್ನಿನ–ಸೇ/ಸಿಬಿ ಇತ್ಯಾದಿ. ದ್ರಾವಿಡಭಾಷೆಗಳಲ್ಲಿ ಆತ್ಮಾರ್ಥಕ ಸರ್ವನಾಮ ಹಿಂದೆಯೂ ಇತ್ತು, ಈಗಲೂ ಇದೆ.

### ಆತ್ಮಾರ್ಥಕ ಸರ್ವನಾಮಗಳು

| | ಏಕವಚನ | ಬಹುವಚನ |
|---|---|---|
| ತಮಿಳು | ತಾನ್ | ತಾಮ್ |
| ಕನ್ನಡ | ತಾನ್ | ತಾಮ್ |
| ಕುರುಖ್ | ತಾನ್ | ತಾನ್ |

[1] M. B. Emeneau, *Brahui and Dravidian Comparative Grammar*, p. 56.

| | | |
|---|---|---|
| ತೆಲುಗು | ತಾನು | ತಾಮ್ |
| ಕೊಲಾಮಿ | ತಾನ್/ತನ್ | ತಾಮ್/ತಮ್ |
| ತುಳು | ತಾನು | ತಂಕುಳು |
| ಕೊಡಗ | ತಾನು | ತಂಗ |
| ಕುಈ | ತಾನು | ತಾರು / ತಾಇ |
| ಗೋಂಡ್ | ತನಾ | ತಮ್ಮಾ / ತಮ್ಮೋರ್ |
| ಬ್ರಾಹೂಈ | ತೇನ್ | ತೇನ್–ತೇನ್ |
| ಕೋತ | ತಾನ್/ತನ್[1] | ತಾಮ್/ತಮ್ |
| ಪರ್ಜಿ | ತಾನ್ | ತಾಮ್ |

ದ್ರಾವಿಡ ಭಾಷೆಗಳಲ್ಲಿ ಎನ್, ನಿನ್, ತನ್/ಎನ್ನ, ನಿನ್ನ, ತನ್ನ ಈ ಮೂರೂ ಸರ್ವನಾಮ ರೂಪಗಳು ಒಟ್ಟಿಗೆ ಹೋಗುತ್ತವೆ. ಕನ್ನಡದ ಹಳೆಯ ಗದ್ಯ ಗ್ರಂಥವಾದ ವಡ್ಡಾರಾಧನೆಯಲ್ಲಿ ಆತ್ಮಾರ್ಥಕ ಸರ್ವನಾಮುಗಳು ಸ್ವರಾದಿಯಾಗಿ ಸಿಗುವುದಕ್ಕಿಂತಲೂ ವ್ಯಂಜನಾದಿಯಾಗಿ ಪ್ರಯೋಗವಾಗಿರುವುದು ತೋರುತ್ತದೆ. ವಡ್ಡಾರಾಧನೆಯಲ್ಲಿ ತಾನ್, ತನ್ನಂ, ತನಗೆ, ತನ್ನ—ಎಂಬ ಏಕವಚನ ರೂಪಗಳೂ; ತಾಮ್, ತಮ್ಮ, ತಮ್ಮೊಳ್ ಎಂಬ ಬಹುವಚನ ರೂಪಗಳೂ ಸಿಗುತ್ತವೆ. ಆದರೆ ಈ ರೂಪಗಳನ್ನು ನೋಡಿ :

| | ಏಕವಚನ | ಬಹುವಚನ |
|---|---|---|
| ತಮಿಳು | ಯಾನ್/ಎನಕ್ಕು/ಎನ್ನೈ | ಯಾಮ್/ನಾಮ್ |
| ಕನ್ನಡ | ಆನ್/ಎನಗೆ (೯) | ಆಮ್/ನಾಮ್ |
| ತೆಲುಗು | ಏನು / ನೇನು | ಮೇಮು |
| | ನನ್ನಕು / ನಾಕು | ಮನಮ್ (ಮು) |

ತಮಿಳಿನಲ್ಲಿ ಯಾನ್/ಯಾಮ್ ಎಂಬ ಆತ್ಮಾರ್ಥಕ ಪದಗಳಿವೆ; ಪದದ ಆದಿಯಲ್ಲಿ, ತಮಿಳಿನಲ್ಲಿ, ಯಕಾರವಿದೆ. ಉಳಿದ ದ್ರಾವಿಡ ಭಾಷೆಗಳಲ್ಲಿ ಇಲ್ಲ. ತಮಿಳಿನಲ್ಲಿ ಯಕಾರ ಸಮೇತ ಪದಗಳನ್ನೇ ಹೆಚ್ಚು ಪರಿಗಣಿಸುತ್ತಾರೆ.

ತ. ಯಾನೈ/ಕ ಆನೆ. ಆದರೆ ಈ ಯಾನ್/ಯಾಮ್ ಎಂಬ ಎರಡು ಸರ್ವನಾಮ ರೂಪಗಳಲ್ಲಿನ ಮೊದಲನೆಯ ವರ್ಣ ಮೂಲದ್ರಾವಿಡ ಭಾಷೆಯಲ್ಲಿಯೂ 'ಯಾ' ಆಗಿ ಇತ್ತೇ ? ಅಥವಾ ಆ್ಯನ್ (an) ಎಂಬಂತೆ ಇತ್ತೊ ? ಎಂಬ ಸಮಸ್ಯೆ ಸಹಜವಾಗಿಯೇ ತಲೆದೋರುತ್ತವೆ. ಬಹುಶಃ ಉಳಿದ ದ್ರಾವಿಡ ಭಾಷೆಗಳಲ್ಲಿ ಇರುವಂತೆ ನಕಾರ ಪದದ ಮೊದಲಲ್ಲಿ ಇದ್ದಿತೆಂದು ಊಹಿಸಬಹುದು. ಆದರೆ ಕೆಲವು ರೂಪಗಳಲ್ಲಿ ಸ್ವರ ಪ್ರಾರಂಭ

[1] *Kota Texts*, Part one, 1944, p. 24.

ವಿರುವಾಗ ವ್ಯಂಜನಾರಂಭವನ್ನು ಹೇಗೆ ಊಹಿಸುವುದು ?—ಎಂದು ಪ್ರಶ್ನಿಸಬಹುದು. ಇದಕ್ಕೆ ಬೇರೆ ಕೆಲವು ಪದಗಳ ಉದಾಹರಣೆಯನ್ನಿತ್ತು ವಿವರಿಸಬೇಕಾಗುತ್ತದೆ. ಕೆಲವು ಪದಗಳಲ್ಲಿ ನೀರ್ / ಈರ್ ನಣ್ಣು / ಅಣ್ಪು, ನೀರುಳ್ಳಿ / ಈರುಳ್ಳಿ—ಹೀಗೆ ನಕಾರ ಸಹಿತ ವಾಗಿಯೂ ನಕಾರ ರಹಿತವಾಗಿಯೂ ಎರಡೆರಡು ರೂಪಗಳು ಇರುವಂತೆ, ಈ ಸರ್ವ ನಾಮಗಳಲ್ಲೂ ನಕಾರ ಸಮೇತ ರೂಪಗಳು ಮೊದಲು ಮೂಲದ್ರಾವಿಡ ಭಾಷೆಯಲ್ಲಿ ಇದ್ದಿರಬಹುದು. ಏನೇ ಆದರೂ ಇನ್ನೂ ಅಧಿಕ ಮಾಹಿತಿಗಳು ದೊರೆಯದ ಹೊರತು ಇದನ್ನು ಸರಿಯಾಗಿ ನಿರ್ಧರಿಸುವಂತಿಲ್ಲ.

ಕನ್ನಡ ಭಾಷೆಯಲ್ಲಿನ ಸರ್ವನಾಮಗಳ ಸ್ವರೂಪ :

| | ಹಳಗನ್ನಡ | ಹೊಸಗನ್ನಡ | ಮೂಲರೂಪಗಳು |
|---|---|---|---|
| ಉತ್ತಮ ಪುರುಷ : | ಆನ್ / ಆಮ್<br>ನಾನ್ / ನಾಮ್ | ನಾ, ನಾನು / ನಾವು | ಎನ್ / ಎಮ್<br>(ನನ್ / ನಮ್) |
| ಮಧ್ಯಮ ಪುರುಷ : | ನೀನ್ / ನೀಮ್ | ನೀ, ನೀನು, ನೀವು | ನಿನ್ / ನಿಮ್<br>(ಇನ್, ಇಮ್,<br>ಇರ್) |
| ಪ್ರಥಮಪುರುಷ : | ತಾನ್ / ತಾಮ್ | ತಾ, ತಾನು, ತಾವು | ತನ್ / ತಮ್<br>(ಅನ್, ಅಳ್, ಅರ್) |

| | ಹಳಗನ್ನಡ | ಹೊಸಗನ್ನಡ | ಮೂಲರೂಪಗಳು |
|---|---|---|---|
| ಸಂಬಂಧಾರ್ಥಕ | — | — | — |
| ಪ್ರಶ್ನಾರ್ಥಕ | ಆವನ್/ಆವಳ್<br>ಆರ್, ಏನ್<br>ಏವುದು, ಏವುವು | ಯಾವನು, ಯಾವಳು<br>ಯಾವುವು, ಏ(ಯೇ)ನು<br>ಏನು, ಯಾವುದು<br>ಯಾವನು, ಯಾವುವು | <br>ಎದು, ಎವನ್<br>ಆ-ಏ- >ಯಾ- |

ಬಹುವಚನದಲ್ಲಿ ಪುರುಷಾರ್ಥಕ ಸರ್ವನಾಮಗಳು ಕನ್ನಡದಲ್ಲಿ ಬಹಳ ವ್ಯವಸ್ಥಿತ ವಾಗಿವೆ.

> In Canarese the plurals of all the personal pronouns are formed in the classical dialect with perfect and beautiful regularity. . . .[1]

ಉತ್ತಮಪುರುಷದ ಸರ್ವನಾಮ ರೂಪಗಳಲ್ಲಿ ಆನ್, ಆಮ್ ಎಂಬುದು ದಕ್ಷಿಣಮಾರ್ಗ ವಾಚಕವೆಂದೂ, ನಾನ್, ನಾಮ್ ಎಂಬುದು ಉತ್ತರಮಾರ್ಗವಾಚಕವೆಂದೂ

[1] *ACGODLS*, p. 404.

15

ಅಭಿಪ್ರಾಯವಿದೆ. ನಾನು ಎಂಬ ಸರ್ವನಾಮ ತೆಲುಗಿನಲ್ಲಿದೆ-ನೇನು (ತೆ); ಆನ್ ಎಂಬ ಸರ್ವನಾಮ ತಮಿಳಿನಲ್ಲಿದೆ. ಆದರೆ ಇಷ್ಟರಿಂದಲೇ ಈ ಹೇಳಿಕೆ ಗ್ರಾಹ್ಯವೆಂದು ತಿಳಿಯಲಾಗುವುದಿಲ್ಲ. ಎನ್ ಎಂಬುದು ಉತ್ತಮ ಪುರುಷ ಸರ್ವನಾಮದ ಏಕವಚನದ ಮೂಲರೂಪವೆಂದು ಹೇಳಬಹುದು :

ನೋಡು + ವ + ಎನ್ < ನೋಟ್ + ವ + ಎನ್ = ನೋಟ್ಪೆನ್.

ಕನ್ನಡದಲ್ಲಿ ಹಳೆಯ ಹೊತ್ತಗೆಯಾದ ವಡ್ಡಾರಾಧನೆಯಲ್ಲಿ ಉತ್ತಮಪುರುಷ ಸರ್ವನಾಮ ರೂಪಗಳು ಇಂತಿವೆ :

| ಏಕವಚನ | ಬಹುವಚನ |
|---|---|
| ಆನ್, ಎನ್ | ಆಮ್, ನಾಮ್ |
| ನನ್ | ಎಮ್, ನಮ್ |

ವಾಸ್ತವವಾಗಿ ಕನ್ನಡ ಶಾಸನ ಸಾಹಿತ್ಯ ಮತ್ತು ಇತರ ಸಾಹಿತ್ಯ ಗ್ರಂಥಗಳ ಅಭ್ಯಾಸದಿಂದ ಎನ್—ಎಂಬುದೇ ಪ್ರಾಚೀನ ರೂಪವೆಂಬುದು ಸ್ಪಷ್ಟವಾಗುತ್ತದೆ. ತಮಿಳು ಭಾಷೆಯ ಹಳೆಯ ವ್ಯಾಕರಣ ಕೃತಿ 'ತೊಲ್ಕಾಪ್ಪಿಯಮ್' ಗ್ರಂಥದಲ್ಲಿ ಯಾನ್— ಎಂಬ ಒಂದೇ ರೂಪವನ್ನು ಉತ್ತಮಪುರುಷ ಏಕವಚನ ಸರ್ವನಾಮವಾಗಿ ಹೇಳಿದೆ. ಆದರೆ ಅದರ ತರುವಾಯದ ವ್ಯಾಕರಣ ಗ್ರಂಥಗಳಾದ ನನ್ನೂಲ್, ವೀರಶೋಳಿಯಮ್ ಮೊದಲಾದ ಕೃತಿಗಳಲ್ಲಿ ನಾನ್ ಎಂಬುದನ್ನೂ ಹೇಳಿದೆ. ಒಬ್ಬಿಬ್ಬ ವಿದ್ವಾಂಸರು ಈ 'ನಾನ್' ಎಂಬ ಏಕವಚನ ಸರ್ವನಾಮರೂಪ 'ನಾಮ್' ಎಂಬ ಬಹುವಚನದ ರೂಪಸಾದೃಶ್ಯದಿಂದ ಬಂದುದೆಂದು ಹೇಳುವರು.

ಇವೆಲ್ಲಾ ನೋಡಿದಾಗ 'ಪ್ರಥಮಾವಿಭಕ್ತಿರೂಪ'ವು ವಿಭಕ್ತಿಪ್ರತ್ಯಯಗಳ ಹಿಡಿತಕ್ಕೆ ಸಿಕ್ಕದೆ ಇದ್ದುದರಿಂದ ದೀರ್ಘವೂ ರೂಪಾಂತರಗಳೂ ಸಂಭವಿಸಿದುವು[1] ಎಂಬ ಹೇಳಿಕೆ ಸಮಂಜಸವಾಗಿರುವಂತೆ ತೋರುತ್ತದೆ. ಇದೂ ಅಲ್ಲದೆ ಸರ್ವನಾಮಗಳಲ್ಲಿ ಆನ್-ಆಮ್, ನಾನ್-ನಾಮ್ ಹೀಗೆ ಜೋಡಿ ರೂಪಗಳು ಇರುವಂತೆ, ಇನ್ನೂ ಬಹಳ ಹಿಂದೆ ನೀಮ್-* ನೀರ್-* ಈರ್ ಎಂಬ ಸರ್ವನಾಮಗಳೂ ಇದ್ದಿರಬಹುದೆಂದು ಊಹಿಸಬಹುದು. ಇದು ಅಸಂಭವವೇನೂ ಅಲ್ಲ. ತಮಿಳಿನಲ್ಲಿ ನೀವು ಎಂಬುದಕ್ಕೆ 'ನೀರ್' ಎಂಬ ರೂಪವೂ ಇದೆ; ತುಳು ಭಾಷೆಯಲ್ಲೂ ನೀವು ಎಂಬುದಕ್ಕೆ 'ಈರ್' ಎಂಬ ಬಹುವಚನ ರೂಪವಿದೆ- ಈರ್ ಏ (ಯೇ) ರ್ ? = ನೀವು ಯಾರು ?- ; 'ಈ' ಎಂಬ ಏಕವಚನ ರೂಪ ತುಳುವಿನಲ್ಲೂ, ಗೋಂಡ್ ಭಾಷೆಯಲ್ಲೂ ಇದೆ. ತಮಿಳು, ತೆಲುಗು, ಕುಯಿ ಭಾಷೆಗಳಲ್ಲೂ 'ಈರ್' ಎಂಬ ರೂಪವಿದೆ; ಮಧ್ಯಮ

1 ಕನ್ನಡ ಕೈಪಿಡಿ, ಮೂರನೆಯ ಮುದ್ರಣ, ಪುಟ ೩೪೫.

ಪುರುಷ ಬಹುವಚನ ಸರ್ವನಾಮ ರೂಪಗಳನ್ನು ಕೆಲವು ದ್ರಾವಿಡ ಭಾಷೆಗಳಲ್ಲಿ ಇರುವುದನ್ನು ಹೀಗೆ ತೋರಿಸಬಹುದು :

| | | ತಮಿಳು | ತೆಲುಗು | ತುಳು | ಕುಈ |
|---|---|---|---|---|---|
| | | ನೀರ್ | ಈರು | ಈರ್ | ಈರು |
| | | ನೀಯಿರ್/ನೀವಿರ್ | ಮೀರು | — | — |
| ಆಖ್ಯಾತ ಪ್ರತ್ಯಯಗಳು | { | – ಈರ್ | – ರು | – ಅಗ್ | – ಏರು |
| | | – ಇರ್ | – ರಿ | | |

ಆದುದರಿಂದ ಕನ್ನಡದಲ್ಲೂ ಪೂರ್ವಸ್ಥಿತಿಯಲ್ಲಿ ಮಧ್ಯಮಪುರುಷ ಏಕವಚನ ನೀಮ್/-ಇಮ್ ಇದ್ದಂತೆ ಬಹುವಚನ *ನೀರ್/-ಇರ್ ಎಂಬುದು ಇದ್ದಿರಬೇಕೆಂದು ಸಬಲವಾದ ಕಾರಣಗಳಿಂದ ಊಹಿಸಬಹುದು.* ಇರ್ > ಈರ್ > ನೀರ್ ಎಂಬ ವಿಕಾಸವಾಗಿರಬಹುದು. ಈ ವಿಚಾರದಲ್ಲಿ ಇನ್ನೂ ಹೆಚ್ಚಿನ ಸಂಶೋಧನೆ ನಡೆಯಬೇಕಾಗಿದೆ. ಕನ್ನಡ ಕಾವ್ಯಗಳಲ್ಲಿ ಬರುವ ಇತರ ಸರ್ವನಾಮ ರೂಪಗಳು :

| | | | | | |
|---|---|---|---|---|---|
| | ಅ + ಅನ್ | ಇ + ಅನ್ | ಉ + ಅನ್ | | |
| ಪುಲ್ಲಿಂಗ : | ಅವನ್ | ಇವನ್ | ಉವನ್ | ಆವನ್ | ಪೆಜನ್ |
| | ಆತನ್ < *ಆ–ಈತನ್ | | ಊತನ್ | ಏವನ್ / ಯಾವನ್ | |

[ಕುಈ. ಅಆನು/ ಅಆರು : ತು. ಆಯೆ / ಆರು : ಗೋಂ. ಓಲ್/ ಆರ್ ತೆ ವಾಂಡು / ವಾನು : ತ. ಅವಣ್ : ಕುರುಖ್. ಆರ್ / ಓರ್ : ಕೊಡಗು ಆಯೆ].

| | | | | | |
|---|---|---|---|---|---|
| ಸ್ತ್ರೀಲಿಂಗ : | ಅವನ್ | ಇವಳ್ | ಉವಳ್ | ಆವಳ್ | ಪೆಜಳು |
| | ಆಕೆ | ಈಕೆ | ಊಕೆ | ಏವಳ್ | |

ತೆ. ಆಮೆ / ಆತೆ ಈಮೆ / ಈಪೆ [ಹ.ತೆ. ನಲ್ಲಿ ಆಕೆ, ಈಕೆ ರೂಪಗಳೂ ರೂಢಿಯಲ್ಲಿದ್ದುವು]

| | | | | | |
|---|---|---|---|---|---|
| ನಪುಂಸಕಲಿಂಗ : | ಆದು | ಇದು | ಉದು | ಆವುದು | ಪೆಜತು |
| | ಅವು | ಇವು | ಉವು | ಏವುದು / ಯಾವುದು | |

ದ್ರಾವಿಡ ಭಾಷೆಗಳಲ್ಲಿ ಈ ನಿರ್ದೇಶಕ ಸರ್ವನಾಮಗಳು ಮೂಲರೂಪವನ್ನು ಗುರುತಿಸಲು ಸಾಧ್ಯವಿದೆ. ಇ–, [ಎ –], ಅ–, ಒ –, ಉ – ಎಂಬುವು ನಿರ್ದೇಶಕ ಸರ್ವನಾಮಗಳ ಮೂಲರೂಪಗಳೆಂದು ಹೇಳಬಹುದು. ಕುಈ ಭಾಷೆಯಲ್ಲಿ ಇ, ಎ, ಅ, ಒ ಎಂಬ ನಾಲ್ಕು ವಿಧವೂ ಬಳಕೆಯಲ್ಲಿದೆ; 'ಉ' ಉಳಿದ ದ್ರಾವಿಡ ಭಾಷೆಗಳಲ್ಲಿದೆ. ಕೆಲವು ಭಾಷೆಗಳಲ್ಲಿ ಮೊದಲಿಗೆ ಇದು ಭಾಷೆಯ ಬೆಳವಣಿಗೆಯ ಯಾವುದೋ ಒಂದು ಘಟ್ಟ

ದಲ್ಲಿ ಬಳಕೆ ತಪ್ಪಿದೆ. ಉದಾಹರಣೆಗೆ ಇಂದಿನ ಕನ್ನಡ ಮತ್ತು ತಮಿಳು ಭಾಷೆಗಳಲ್ಲಿ 'ಉ'–ಎಂಬ ರೂಪ ತಪ್ಪಿಹೋಗಿದೆ. ಪಂಪಭಾರತಕ್ಕಿಂತಲೂ ಹಿಂದಿನಿಂದಲೂ ಉದು, ಉವು, ಊಕೆ, ಊಮನೆ, ಉವಳ್, ಊವರ್—ಎಂಬ ರೂಪಗಳು ರೂಢಿಯಲ್ಲಿದ್ದು ಮಲ್ಲಿಕಾರ್ಜುನನಲ್ಲೂ (ಸೂಕ್ತಿ ಸುಧಾರ್ಣವ) ಮತ್ತು ಕೇಶಿರಾಜನಲ್ಲೂ ಪ್ರಯೋಗ ವಾಗಿದ್ದರೂ ಅನಂತರ ಅಪರೂಪವಾಗತೊಡಗಿದವು. ಮೂಲದ್ರಾವಿಡ ಭಾಷೆಗೆ *ಅ–, *ಇ–, *ಉ– ಎಂಬುದನ್ನು ಪುನರ್ ರಚಿಸಲು ಇರುವ ಆಧಾರಗಳು:

/*ಅ-/ಕ. ಅದು: ಕುರುಖ್. ಆ-/ಆದ್: ಬ್ರಾ. ದಾ (ದ್): ತೆ. ಅದಿ: ನಾ. ಅ–, ಅವ್‌ನ್ಡ್: ಕೊಡ. ಅದು: ತು. ಆ: ಗೋಂ. ಅದ್: ಕುಈ. ಅ–: ಪರ್ಜಿ. ಅ–/ಆ–

*/ಇ/ ಕ. ಇದು: ಕುರು. ಈ–/ಇದ್: ಬ್ರಾ. ಈ: ತೆ. ಇದಿ: ಪರ್ಜಿ ಇ–/ ಈ–ಕೊಡ. ಇದು/ಎ (ದ್): ತು. ಈ: ಗೋಂ. ಇದ್: ಕುಈ. ಇ–; ನಾ. ಇ–, ಇವ್‌ನ್ಡ್ */ಉ/ಕ. ಉದು: ಕುರು. ಹೂ: ಬ್ರಾ. ಒ (ದ್): ಪ. ಊ– <*ಉ – ತೆ, ತು, ಗೋಂ, ಕುರು ಭಾಷೆಗಳಲ್ಲಿ ಈ ರೂಪ ನಶಿಸಿಹೋಗಿದೆ.

ಹ. ಗ: ಉಲ್ಲಿ, ಉಲ್ಲಿದ, ಉದು, ಉಮ್, ಉನರ್

ಪ್ರಶ್ನಾರ್ಥಕ ಸರ್ವನಾಮ ಎಲ್ಲ ದ್ರಾವಿಡ ಭಾಷೆಗಳಲ್ಲೂ ಸಮಾನವಾಗಿಲ್ಲವಾದರೂ ಎ– ಅಥವಾ ಯ – ಎಂಬ ಮೂಲದಿಂದ ಬಂದಿರಬಹುದು.

*ಎ/ಯ > ಆ /ಏ ಅಥವಾ ಯಾ:

| | |
|---|---|
| ತ. | ಯಾರ್, ಯಾಆರ್, ಆರ್ |
| ಕ. | ಆರ್, ಯಾರ್ |
| ಬ್ರಾ. | ಆರಾ, ದೇರ್ |
| ತು. | ದಾ, ದಾನೆ |
| ಕೊಡ. | ಯೇವು |
| ತೆ. | ಯೇರು |
| ಹ.ಗ. | ಏನ್, ಏತ –, ಏವುದು |
| ಕುರು. | ನೇ / ಏ |
| ಮಲ್ತೊ. | ನೆರೆ |
| ಪ. | ಎ –, ಎಙಓತ್ (ಎಷ್ಟು), ಏರ್– |

ಎಲ್ಲ ದ್ರಾವಿಡ ಭಾಷೆಗಳನ್ನೂ ಪರಿಶೀಲಿಸಿದಾಗ ಉತ್ತರದ ದ್ರಾವಿಡ ಭಾಷೆಗಳಲ್ಲಿ /ಏ/– ಎಂಬುದೂ, ದಕ್ಷಿಣ ದ್ರಾವಿಡ ಭಾಷೆಗಳಲ್ಲಿ /ಯೇ/–ಎಂಬುದೂ ಕಂಡು ಬರುತ್ತದೆ. ಆದರೆ ಕುರುಖ್ ಮತ್ತು ಮಲ್ತೊ ಭಾಷೆಗಳಲ್ಲಿ /ನ್/– ರೂಪವೂ, ಬ್ರಾಹೂಈ ಭಾಷೆಯಲ್ಲಿ /ದೇ/– ರೂಪವೂ ಇದೆ. ಅಂಥ (ಪ. ಆತ), ಇಂಥ

(ಪ. ಈತ), ಎಂಥ (ಪ. ಏತ)- ಎಂಬ ಸರ್ವನಾಮಗಳೂ ಕನ್ನಡದಲ್ಲಿ ಬಳಕೆಯಲ್ಲಿವೆ. ದ್ರಾವಿಡ ಭಾಷೆಗಳ ಸರ್ವನಾಮಗಳು ಆ, ಈ, ಊ, ಏ ಎಂಬ ದರ್ಶಕ ಸ್ವರಗಳಿಂದ ಬಗೆಬಗೆಯಾಗಿ ರೂಪಗೊಂಡಿವೆಯೆಂಬ ಅಭಿಪ್ರಾಯವೂ ಇದೆ. ಇವುಗಳ ಹ್ರಸ್ವರೂಪವನ್ನೂ ಇಟ್ಟುಕೊಂಡರೆ ಈ ಅಭಿಪ್ರಾಯ ಹೆಚ್ಚು ಬಲಗೊಳ್ಳುತ್ತದೆ. ಕನ್ನಡದಲ್ಲಿನ ಎಂಟು ಸರ್ವನಾಮಗಳನ್ನು ಕೇಶಿರಾಜ ಕೊಟ್ಟಿದ್ದಾನೆ: ಅದು, ಇದು, ಉದು, ಆವುದು, ಎಲ್ಲದು, ಪೆಱತು, ಏನ್, ಪೆಱದು: ಆದರೆ ಹೊಸಗನ್ನಡದಲ್ಲಿ ಮಧ್ಯ ದರ್ಶಕ ಸರ್ವನಾಮವಾದ ಉದು / ಊ ಬಳಕೆಯಲ್ಲಿಲ್ಲ.

ಅದು, ಅವಂ, ಆತಂ, ಆಕೆ, ಆನ್, ಆ
ಇದು, ಇವಂ, ಇವಳ್, ಈಕೆ, ಈನ್, ಈ
ಉದು, ಉವಂ, ಉವಳ್, ಊಕೆ, ಊನ್, ಊ

ಇನ್ನೊಂದು ಸರ್ವನಾಮ ರೂಪವಾದ ತಾನ್ ವಿಚಾರದಲ್ಲಿ ಕೆಲವು ಅಭಿಪ್ರಾಯಗಳಿವೆ. ತರ್ > ತಾ: ತಾ > ತರ್: ತಾನ್ > ತಾ: ತಾ > ತಾನ್—ಇವುಗಳಲ್ಲಿ ಯಾವುದರಿಂದ ಯಾವುದು ರೂಪಗೊಂಡಿತೆಂಬುದು ವಿಚಾರ. ತಾ > ತಾನ್ ಆಗಿದೆಯೆಂಬುದೊಂದು ಅಭಿಪ್ರಾಯದನಸರು ತಾ ಎಂಬ ವಸ್ತುದರ್ಶಕ ಸರ್ವನಾಮ ಮೂಲ ರೂಪದಿಂದ ತು > ದು ಆಗಿದೆ. ಆ/ಅ, ಈ/ಇ, ಊ/ಉ ಎಂಬ ನಪುಂಸಕ ದರ್ಶಕ ಸರ್ವನಾಮಗಳಿಗೆ ಈ ದು (< ತು < ತಾ) ಸೇರಿ ಆದು/ಅದು, ಈದು / ಇದು, ಊದು / ಉದು ರೂಪಗಳು ಉಂಟಾಗಿವೆ. ತಾ > ತಾನ್ > ತನ್: ಈ ತನ್ ಸರ್ವನಾಮ ರೂಪ ದರ್ಶಕ ಆ ಈ ಊ ಎಂಬ ಸ್ವರಗಳಿಗೆ ಸೇರಿ

ಆತನ್ ಈತನ್ ಊತನ್

ತೆ. ಆತನ್ಡು, ಅತನ್ಡು } ಅತಡು ಈತನ್ಡು, ಇತನ್ಡು } ಇತಡು

ಇಲ್ಲಿನ – ತ- ಕಾರ ಸಂಸ್ಕೃತದಿಂದ ಬಂದುದೆಂಬ ಕಾಲ್ಡ್ವೆಲ್ಲರ ಅಭಿಪ್ರಾಯ ಅಮಾನ್ಯ. ಇದು ಮೂಲದ್ರಾವಿಡದ ಬೆಳವಣಿಗೆ.

ಹಳಗನ್ನಡ ಕಾವ್ಯಗಳಲ್ಲಿ ಕಾಣುವ – ಕುಂ, – ಗುಂ ಪ್ರತ್ಯಯಗಳಲ್ಲಿ /– ಕು / ಎಂಬುದನ್ನು ಸರ್ವನಾಮವೆಂದೇ ಪರಿಗಣಿಸಬೇಕೆಂಬ ತಿಳಿವಳಿಕೆಯಿದೆ, ಮೇಲೆ ಹೇಳಿದ – ದು ಎಂಬುದರಂತೆ. ಇದಕ್ಕೆ ಪೋಷಕವಾಗಿ ಆಕೆ, ಈಕೆ, ಊಕೆ. ಇದರ ನಿಷ್ಪತ್ತಿ ಕು > ಕೆ: ತ. ಕೈ, ತಂಗೈ = ತಂಗೆ, ಮಂಗೈ = ಹುಡುಗಿ.

ಭಾಷಾವಿಜ್ಞಾನದ ಆಧಾರದಿಂದ ಜಗತ್ತಿನ ಭಾಷೆಗಳನ್ನು ಪರಿಶೀಲಿಸಿದರೆ ಪುರುಷಾರ್ಥಕ ಸರ್ವನಾಮಗಳು, ಅದರಲ್ಲಿಯೂ ಉತ್ತಮಪುರುಷದ ಪ್ರತ್ಯಯಗಳೇ ಅತ್ಯಂತ ಪ್ರಾಚೀನವೆಂದು ಪ್ರಾಜ್ಞರು ತಿಳಿಸಿದ್ದಾರೆ:

Surveying language as a whole, the bulk of purely linguistic evidence seems to give some justification for the inference that the personal pronoun is the most primitive of all the parts of speech, earlier even than the epithe to logue; and that of these pronouns, the one for the first person was the earliest.[1]

ದ್ರಾವಿಡ ಭಾಷೆಗಳಲ್ಲಿ ಪುರುಷವಾಚಕ ಸರ್ವನಾಮಗಳೇ ರೂಪಾಂತರಗೊಂಡು ಆಖ್ಯಾತ ಪ್ರತ್ಯಯಗಳೆಂಬ ಹೆಸರಿನ ಪುರುಷವಾಚಕ ಪ್ರತ್ಯಯಗಳಾಗಿ ಧಾತುಗಳಿಗೆ ಹತ್ತುತ್ತವೆಂಬುದನ್ನು ಗಮನಿಸಬಹುದು. ಅಲ್ಲದೆ ಈ ಆಖ್ಯಾತ ಪ್ರತ್ಯಯಗಳು ಧಾತುಗಳಿಗೆ ಮಾತ್ರವಲ್ಲದೆ ಗುಣವಚನ, ನಾಮಪದ ಮತ್ತು ಸಂಖ್ಯಾವಾಚಕಗಳಿಗೂ ನೇರವಾಗಿ ಸೇರುತ್ತವೆ.

[1] Louis H. Gray, *Foundations of language*, p. 177.

# ದ್ರಾವಿಡ ಭಾಷೆಗಳಲ್ಲಿ ವಚನ

ಬ್ರಿಟಿಷ್ ಕೊಲಂಬಿಯದ ಭಾಷೆಗಳಲ್ಲಿ ಒಂದಾದ ಮತ್ತು ಇಂಡಿಯನ್ ಭಾಷೆಯಾದ ನ್ಯಾಸ್ (Nass) ಎಂಬ ಭಾಷೆಯಲ್ಲಿ ಬಹುವಚನ ರೂಪಗಳನ್ನು ನಾಲ್ಕು ವಿಧವಾದ ಪ್ರತ್ಯೇಕ ಬಗೆಗಳಲ್ಲಿ ವಿಂಗಡಣೆ ಮಾಡಿಕೊಳ್ಳುವರು :

(೧) ನಾಮಪದಗಳು ಹಾಗೂ ಧಾತುಗಳು ಬಹುವಚನದಲ್ಲಿ ಎರಡು ಬಾರಿ ಉಚ್ಚಾರ ಹೊಂದುವುವು. ಅಂದರೆ ಒಂದೇ ಪದವನ್ನು ಅಥವಾ ಪದದ ಭಾಗವನ್ನು ಎರಡು ಸಲ ಹೇಳಿದರೆ ಅದು ಬಹುವಚನವೆಂದು ಅರ್ಥ.

ಉದಾ : ಗ್ಯತ್ - ಎಂದರೆ ವ್ಯಕ್ತಿ - ಏಕವಚನ
ಗಿಗ್ಯತ್ - ಎಂದರೆ ಜನರು - ಬಹುವಚನ

(೨) ಶಬ್ದಗಳಿಗೆ ಉಪಸರ್ಗಗಳನ್ನು ಕೂಡಿಸಿ ಬಹುವಚನ ರೂಪಗಳನ್ನು ಸಿದ್ಧಿಸುವರು.

ಉದಾ : ಅನ್'ಒನ್ ಎಂದರೆ ಕೈ - ಏಕವಚನ
ಕಅನ್'ಒನ್ ಎಂದರೆ ಕೈಗಳು - ಬಹುವಚನ

(೩) ಶಬ್ದಗಳ ನಡುವಿನ ಸ್ವರಗಳನ್ನು ಪರಿವರ್ತಿಸುವುದರ ಮೂಲಕ ಬಹುವಚನಗಳನ್ನು ಮಾಡಿಕೊಳ್ಳುವುದು.

ಉದಾ : ಗ್ಸ್ವಾಲ - ಎಂದರೆ ಗಡಿಯಾರ - ಏಕವಚನ
ಗ್ಸ್ವಿಲ - ಎಂದರೆ ಗಡಿಯಾರಗಳು - ಬಹುವಚನ

(೪) ಶಬ್ದಗಳಿಗೆ ಪ್ರತ್ಯಯಗಳನ್ನು ಸೇರಿಸಿ ಬಹುವಚನ ರೂಪಗಳನ್ನು ಸಾಧಿಸುವರು.

ಉದಾ : ವಕಿ - ಎಂದರೆ ಸೋದರ - ಏಕವಚನ
ವಕಿತ್ವ - ಎಂದರೆ ಸೋದರರು - ಬಹುವಚನ

ದ್ರಾವಿಡ, ಟರ್ಕಿಷ್, ಜಾರ್ಜಿಯನ್, ಹಂಗೇರಿಯನ್, ಇಂಗ್ಲಿಷ್ - ಮೊದಲಾದ ಭಾಷೆಗಳಲ್ಲಿ ಎರಡೇ ವಚನ. ಇಂಗ್ಲಿಷಿನಲ್ಲಿ ಏಕವಚನ, ಬಹುವಚನ ಎಂಬ ಎರಡೇ

ವಚನಗಳಾದರೂ ಕೆಲವು ಪದಗಳು ಏಕವಚನ ಮತ್ತು ಬಹುವಚನಗಳೆರಡರಲ್ಲೂ ಒಂದೇ ರೂಪದಲ್ಲಿರುತ್ತವೆ. ಆ ಬಗೆಯ ಪದಗಳನ್ನು ಸಂದರ್ಭ ನೋಡಿಕೊಂಡು ಏಕವಚನ ಅಥವಾ ಬಹುವಚನವೆಂದು ನಿರ್ಧರಿಸಬೇಕು. ಉದಾಹರಣೆಗೆ deer, sheep ಮುಂತಾದ ಪದಗಳು. -s(z),-es,-en— ಇವು ಇಂಗ್ಲಿಷಿನಲ್ಲಿ ವಿಶೇಷ ರೂಢಿಯಲ್ಲಿರುವ ಬಹುವಚನ ಪ್ರತ್ಯಯಗಳು. ಉದಾ: Books, Boxes, Oxen. ಕೆಲವೊಮ್ಮೆ ಪದಗಳ ಅಂತರಂಗದಲ್ಲಿ ವ್ಯತ್ಯಾಸ ಉಂಟಾಗುತ್ತದೆ—goose,—geese.

ಗ್ರೀಕ್ ಮತ್ತು ಸಂಸ್ಕೃತದಲ್ಲಿ ಮೂರು ವಚನಗಳು ಇರುವುದು ಸುಪ್ರಸಿದ್ಧವಾದ ವಿಷಯ ಏಕ, ದ್ವಿ, ಮತ್ತು ಬಹುವಚನಗಳು. ಮುಂಡಾ ಭಾಷೆಗಳಲ್ಲೂ ದ್ವಿವಚನ ವಿಭಾಗವಿದೆ. ವಿದ್ವಾಂಸರ ಅಭಿಪ್ರಾಯದಂತೆ, ಸಂಸ್ಕೃತದಲ್ಲೂ ಮೊದಲಿಗೆ ಎರಡೇ ವಚನಗಳಿದ್ದು, ಅನಂತರ ಕೆಲವು ಯುಗ (ಳ) ವಸ್ತುಗಳಿಗೆ ಮಾತ್ರ ದ್ವಿವಚನ ಅನ್ವಯಿಸತೊಡಗಿ, ಮುಂದೆ ಎರಡೆರಡು ವಸ್ತು ಅಥವಾ ವ್ಯಕ್ತಿಗಳನ್ನು ಹೇಳುವ ವೆಲ್ಲವೂ ದ್ವಿವಚನಗಳಾಗಿ ಉಳಿದುವೆಂದು ಹೇಳಬಹುದು. ಫಿಜ್ಞಿಯನ್ ಎಂಬ ಭಾಷೆ ಯಲ್ಲಿ ಏಕವಚನ, ದ್ವಿವಚನ, ತ್ರಿವಚನ ಮತ್ತು ಬಹುವಚನವೆಂಬ ನಾಲ್ಕು ಬಗೆಯ ವಚನಗಳಿವೆ.

ಮೂಲತಃ ಎಲ್ಲ ದ್ರಾವಿಡ ಭಾಷೆಗಳಲ್ಲೂ ಬಹುಮಟ್ಟಿಗೆ ಏಕವಚನ ಮತ್ತು ಬಹುವಚನವೆಂಬ ಎರಡೇ ವಿಭಾಗವಿರುವುದು ಸ್ಪಷ್ಟ. ಕನ್ನಡ ಭಾಷೆಯಲ್ಲಂತೂ ಎರಡೇ ವಚನಗಳು. ಇದಕ್ಕೆ ಶಾಸನಗಳ ಆಧಾರವೂ ಇದೆ. ಕನ್ನಡದ ಮೊಟ್ಟಮೊದಲು ದೊರೆತ ಗ್ರಂಥವಾದ ಕವಿರಾಜ ಮಾರ್ಗದಲ್ಲೂ "ವಚನಮೇಕ ಬಹು ಕ್ರಮ ದಿಂದೆರಟ್ಟಿೞ" (೧-೧೧೪) ವೆಂದು ತಿಳಿಸಿದೆ.

Kannada has only two numbers—Sg (Singular) and Pl (Plural) The singular may be either the stem itself or the stem with the Gender suffix (which denotes number also) or the stem with the case-termination added to it.[1]

ಬಹುವಚನ ರೂಪಗಳನ್ನು ಮಾಡುವಾಗ ದೇಶ್ಯ ಅಥವಾ ಅನ್ಯದೇಶೀಯ ಪದ ಗಳೆಂಬ ತಾರತಮ್ಯವಿಲ್ಲದೆ ಎಲ್ಲ ಪದಗಳಿಗೂ ಕನ್ನಡ-ದ್ರಾವಿಡದ ಬಹುವಚನ ಪ್ರತ್ಯಯಗಳು ಸೇರುತ್ತವೆ. ಸಂಸ್ಕೃತ ಭಾಷಾ ಮರ್ಯಾದೆಯನ್ನು ಅನುಸರಿಸಿದ ಕೇಶಿರಾಜ, ಕನ್ನಡದಲ್ಲಿ ಎರಡೇ ವಚನಗಳೆಂದು ಸ್ಪಷ್ಟವಾಗಿ ಹೇಳಿದರೂ, ದ್ವಿವಚನ ಉಚಿತವಾಗಿ ಬರುತ್ತದೆಯೆಂದು ತಿಳಿಸಿದ್ದಾನೆ:

ಏಕದ್ವಿತ್ವ ಬಹುತ್ವ ಮ
ನೇಕ ದ್ವಿಬಹುತ್ವ ವಸ್ತುಗಳ್ಗಾ ಚರಿಪರ್ ।

[1] *HGOK*, p. 24.

ಸ್ತ್ರೀಕಾರಂ ಕನ್ನಡದೊಳ
ಗೇಕ ಬಹುತ್ವಂ ದ್ವಿವಚನಮನುಚಿತವೆ ಬರ್ಕುಂ ॥[1]

ಹೀಗೆಂದು ಸೂತ್ರದಲ್ಲಿ ಹೇಳಿದಮೇಲೂ ಮನಸ್ಸಿಗೆ ಸಮಾಧಾನವಾಗದೆ ಮತ್ತೆ ಏಕ ಬಹುತ್ವಂಗಳ್ ಕನ್ನಡದೊಳತಿ ವ್ಯಕ್ತಂಗಳ್; ದ್ವಿವಚನಮನೌಚಿತ್ಯದಿಂದಱವುದು' ಎಂದು ವೃತ್ತಿಯಲ್ಲಿ ವಿವರಿಸಿ ಈ ಔಚಿತ್ಯದ ದ್ವಿವಚನಕ್ಕೆ ಭೀಮಾರ್ಜುನರ್, ರಾಮ ಲಕ್ಷ್ಮಣರ್, ನಕುಲಸಹದೇವರ್—ಎಂಬ ಉದಾಹರಣೆಗಳನ್ನಿತ್ತಿದ್ದಾನೆ. ಅವನು ಇನ್ನೊಂದು ಸೂತ್ರದಲ್ಲೂ ವಚನಪ್ರಯಕ್ಕೆ ಉದಾಹರಣೆಗಳನ್ನು ಕೊಡುತ್ತಾ ದ್ವಿವಚನಕ್ಕೆ ಮೆಲ್ಲನಿರ್ವರ್ ನುಡಿದರ್ ಎಂದು ಹೇಳಿದ್ದಾನೆ.[2] ಆದರೆ ಭಾಷಾಶಾಸ್ತ್ರದ ದೃಷ್ಟಿಯಿಂದ ಕನ್ನಡದಲ್ಲೂ, ಇತರ ಎಲ್ಲ ದ್ರಾವಿಡ ಭಾಷೆಗಳಲ್ಲಿ ಇರುವಂತೆ ಎರಡೇ ವಚನ ಗಳು. ಇಲ್ಲಿ ಕೇಶಿರಾಜನ ಹೇಳಿಕೆ ತಪ್ಪಾಗಿದೆ.

ವಾಸ್ತವವಾಗಿ ಈ ಏಕವಚನ-ಬಹುವಚನವೆಂಬ ವಿಂಗಡಣೆ ಮೇಲ್ತರಗತಿಯ ಮಹತ್ ಶಬ್ದಗಳ ವಿಭಾಗದಲ್ಲೇ ಹೊರತು ಅಮಹತ್ ವಿಭಾಗದಲ್ಲಿ ಅಲ್ಲವೆನ್ನಬಹುದು. ಹಳೆಯ ತಮಿಳು ಮತ್ತು ಕುರುಖ್ ಭಾಷೆಗಳು ಈ ಮಾತಿಗೆ ಉತ್ತಮ ನಿದರ್ಶನ. ಇದಲ್ಲದೆ ಈ ಏಕವಚನ ಮತ್ತು ಬಹುವಚನಗಳ ವ್ಯತ್ಯಾಸ ಅಮಹತ್‌ನಲ್ಲಿ ಸ್ಪಷ್ಟವಾಗಿ ಗೋಚರವಾಗುವುದೂ ಇಲ್ಲ. ಜಾತ್ಯೇಕ ವಚನವೇ ಇದಕ್ಕೆ ಕಾರಣವಿರಬಹುದು.

ಆನೆ ಬಂದುವು – ಬಹುವಚನ
ಆನೆ ಬಂದುದು – ಏಕವಚನ

ಈ ಉದಾಹರಣೆಗಳನ್ನು ಗಮನಿಸಿದರೆ ಇಲ್ಲಿ ನಾಮಪದದ ವಚನ ಯಾವುದೆಂಬುದನ್ನು ಕ್ರಿಯಾಪದದ ಮೂಲಕ ತಿಳಿಯಬೇಕಾಗಿದೆಯೆಂಬುದು ಗೊತ್ತಾಗುತ್ತದೆ. ಈ ಗೊಂದ ಲಕ್ಕೆ ಕಾರಣವೇನೆಂದರೆ ಅಮಹತ್ ವಿಭಾಗದಲ್ಲಿ ಮೊದಲಿಗೆ ಲಿಂಗವ್ಯವಸ್ಥೆಯಾಗಲಿ, ವಚನ ವಿಂಗಡಣೆಯಾಗಲಿ – ಯಾವುದೂ ಇರಲಿಲ್ಲ, ಅದೇನಿದ್ದರೂ ಅನಂತರ ಬಂದ ವಿಭಾಗ ಅಷ್ಟೆ.

ಅಮಹತ್ ವಿಭಾಗದಲ್ಲೂ ವಚನ ವ್ಯವಸ್ಥೆ ತಲೆದೋರಿದಾಗ ಜೋಡಿಸುತ್ತಿದ್ದ ಬಹುವಚನ ಪ್ರತ್ಯಯಗಳೆಂದರೆ – ಕಳ್, – ಗಳ್; ಮನೆಗಳ್, ಮಕ್ಕಳ್, ಮರಗಳ್. ಆದರೆ ತರುವಾಯ ಈ/ – ಗಳ್/ ಎಂಬ ಪ್ರತ್ಯಯ ಅಮಹತ್ ಜಾತಿಯಿಂದ ಜಿಗಿದು ಮಹತ್ ಜಾತಿಗೂ ಬೆರೆಯಿತು. /–ಗಳ್/ ಪ್ರತ್ಯಯ ಮಹತ್ ಜಾತಿಗೆ ಸೇರಿತಷ್ಟೇ ಅಲ್ಲ, ಮಹತ್ ವರ್ಗದಲ್ಲಿ ಮೊದಲಿಂದಲೂ ಇದ್ದ ಪ್ರತ್ಯಯಗಳನ್ನು ಜಾಗಬಿಟ್ಟು ಬೇರೆಡೆಗೆ ಹೋಗುವಂತೆ ಮಾಡಿತು. ಅಣ್ಣಂದಿರ್, ತಂದೆವಿರ್, ತಾಯ್ವಿರ್ – ಎಂಬ ಪದಗಳಿಗೆ – ಗಳ್ ಪ್ರತ್ಯಯ ಸೇರಿದಮೇಲೆ,

---

1 ಶಮದ, ಎರಡನೆಯ ಅವೃತ್ತಿ, ೧೯೬೪, ಸೂತ್ರ ೧೦೪, ಪುಟ ೧೦೯–೧೧೦
2 ಅದೇ., ಪುಟ ೧೦೭ (ಸೂತ್ರ ೧೧೦ಕ್ಕೆ ಉದಾಹರಣೆ)

ಅಣ್ಣಂಗಳ್, ತಂದೆಗಳ್, ತಾಯ್ಗಳ್ ಎಂದಾದುವು.

ಇನ್ನು ಕೆಲವು ಪದಗಳಲ್ಲಿ ಮೊದಲೇ ಇದ್ದ ಬಹುವಚನ ಪ್ರತ್ಯಯದ ಮೇಲೆ ಈ ಕಳ್ ಪ್ರತ್ಯಯವೂ ಕುಳಿತುಕೊಂಡಿತು:

ಉಪಾಧ್ಯಾಯರ್ಕಳ್, ದೇವರ್ಕಳ್
ಆವರ್ಗಳ್, ಸ್ತ್ರೀಯರ್ಕಳ್

ದ್ರಾವಿಡ ಭಾಷೆಗಳ ಬಹುವಚನ ಪ್ರತ್ಯಯಗಳಲ್ಲಿ – ಕ್ ಎಂಬುದು ಸರ್ವವ್ಯಾಪಕವಾದ ಪ್ರಾಚೀನ ಪ್ರತ್ಯಯ. ಕೆಲವು ಬಹುವಚನ ಪ್ರತ್ಯಯಗಳು, ದ್ರಾವಿಡಭಾಷಾ ಪರಿವಾರದ ಬೇರೆಬೇರೆ ಭಾಷೆಗಳಲ್ಲಿ ಇಂತಿವೆ:

(ಕನ್ನಡ) – ಅರ್, – ಆರ್, – ಗಳ್, –ವು, – ಆಗ (ವಡ್ಡಾರಾಧನೆ, ಪು. ೭೪)
– ಇರ್ – ದಿರ್, – ವಿರ್, – ಕಳ್, – ಅವು, [ತಾಯ್‌ತಂದೆವಿರ್: ಬಲ್ಲಿರ್ ವಡ್ಡಾ, ೨]
[– ಆರ್ > – ಅರ್] – ಕ್ಕಳ್

(ತಮಿಳು) – ಆರ್, – (ಅ) ರ್, – ಕಳ್
– ಅ, – ಗಳ್, – ಗ

(ಮಲೆಯಾಳಮ್) – ಕಳ್
(ತೆಲಗು) – ಆ, –ಲು, – ರು, – ತುಲು
(ಕೊಡಗು) – ರ್, – ರ, – ಳ, – ನ್ಗ (ಅಣ್ಣಂಗ = ಅಣ್ಣಂದಿರು)
(ಗೋಂಡಿ) – ಕ್, – ಲ್, – ರ್, – ಸ್ಕ್
(ಕುರುಖ್) – (ಅ) ರ್, – ಗೋಟ್ಟೀ (? < ಸಂ. ಗೋಷ್ಠೀ)
(ಕುಈ) – ಕ, – ಸ್ಕ್, – ರು, – ಗ, – ಸ್ಕ
(ಬ್ರಾಹೂಈ) – ಕ್, – ಸ್ಕ್ – ಕ, – ಆಕ್
(ಹವ್ಯಕ. ಕ) – ಗೊ, – ಕೊ
(ಕೋತ) – ಕುಳ್, – ಗುಳ್
(ತುಳು) – ಕ್ಳು, – ಳು
(ಕೋಲಾಮಿ) – ಕುಲ್, – ಲ್, – ಉಲ್, – ಸಿಲ್
(ಪರ್ಜಿ) – ಕುಲ್, – ಲ್, – ಉಲ್, – ಇಲ್, – ಚಿಲ್, – ತಿಲ್

ಈ ಎಲ್ಲ ಪ್ರತ್ಯಯಗಳಲ್ಲಿ /– ಕಳ್/ ಎಂಬ ಬಹುವಚನ ಪ್ರತ್ಯಯವನ್ನು, ಭಾಷಾ ವಿಜ್ಞಾನಿಗಳು ವಿಮರ್ಶಿಸುತ್ತಾ, ಇದು ಒಂದೇ ಆಕೃತಿಮಾ ಆಗಿ ತೋರಿದರೂ ವಾಸ್ತವವಾಗಿ ಇದರಲ್ಲಿ ಎರಡು ಬಹುವಚನ ಪ್ರತ್ಯಯಗಳಿವೆಯೆಂದು ಸ್ಪಷ್ಟಪಡಿಸಿದ್ದಾರೆ.

ಪೂರ್ವ ದ್ರಾವಿಡ ಭಾಷೆಯಲ್ಲಿ – ಕ್, ಮತ್ತು – ಲ್ ಎಂಬ ಸ್ವತಂತ್ರವಾದ ಎರಡು ಬೇರೆಬೇರೆ ಬಹುವಚನ ಪ್ರತ್ಯಯಗಳಿದ್ದುವೆಂದು ನಿಚ್ಚಳವಾಗಿ ಕಾಣುತ್ತದೆ. ಇಂದಿಗೂ ಕೆಲವು ದ್ರಾವಿಡ ಭಾಷೆಗಳಲ್ಲಿ ಇವುಗಳ ಇರುವಿಕೆಯನ್ನು ಗುರುತಿಸಬಹುದಾಗಿದೆ. ತೆಲುಗು ಭಾಷೆಯಲ್ಲಿ – ಲ್ (>ಲು), ಎಂಬ ಬಹುವಚನ ಪ್ರತ್ಯಯವೂ, ಗೋಂಡಿ ಮತ್ತು ಬ್ರಾಹೂಈ ಭಾಷೆಯಲ್ಲಿ – ಕ್ ಎಂಬ ಬಹುವಚನ ಪ್ರತ್ಯಯವೂ, ಇಂದಿಗೂ ಬಳಕೆಯಲ್ಲಿವೆ.

'ಕ್ + ಲ್' ಎಂಬ ಪ್ರತ್ಯಯಗಳೆರಡೂ ಸೇರಿ 'ಕಲ್' ಎಂದಾಗಬೇಕಲ್ಲವೆ? ಹಾಗಾದರೆ ಕನ್ನಡ ಮತ್ತು ತಮಿಳು ಭಾಷೆಗಳಲ್ಲಿ – ಕಳ್, – ಗಳ್ ಎಂದು ಇದೆಯಲ್ಲ? ಈ ವ್ಯತ್ಯಾಸಗಳಿಗೆ ಸಮಾಧಾನವೇನು?—ಎಂಬ ಪ್ರಶ್ನೆಗಳು ಮೂಡ ಬಹುದು. ವಾಸ್ತವವಾಗಿ ಕ್ + – ಲ್ ಗಳು ಸೇರಿದಮೇಲೆ ಆದ – ಕಲ್ ಎಂಬ ಪ್ರತ್ಯಯ ಪರ್ಜಿ, ಕೋಲಾಮಿ, ನಾಯ್ಕಿ – ಮೊದಲಾದ ದ್ರಾವಿಡ ಭಾಷೆಗಳಲ್ಲಿ ಉಳಿದಿದೆ. ತೆಲುಗು ಭಾಷೆಯಲ್ಲೂ – ಕುಲು ಎಂಬ ಬಹುವಚನ ಪ್ರತ್ಯಯ ರೂಪವಿದೆ. ಎರಡು ಬಹುವಚನ ಪ್ರತ್ಯಯಗಳನ್ನು ಸೇರಿಸುವುದು ಸಾಧ್ಯವೆ? ಇಂಥ ಇತರ ಉದಾಹರಣೆಗಳೇನಾದರೂ ಬೇರೆ ಉಂಟೆ?—ಎಂದರೆ 'ಹೌದು' ಎಂದು ಉತ್ತರ ಸಿದ್ಧ. ಏಕೆಂದರೆ ಇದಕ್ಕೆ ನಿದರ್ಶನ ಹುಡುಕಲು ಬೇರೆ ಭಾಷೆಗಳ ವರೆಗೆ ಯಾತ್ರೆ ಮಾಡಬೇಕಾದುದಿಲ್ಲ. ಕನ್ನಡದಲ್ಲೇ ಕೆಲವು ಉದಾಹರಣೆಗಳಿವೆ.

ಉಪಾಧ್ಯಾಯರ್ಕಳ್ ; ದೇವರರ್ಕಳ್

ಈ ಎರಡು ಉದಾಹರಣೆಗಳಲ್ಲಿ ಉಪಾಧ್ಯಾಯ, ದೇವ–ಎಂಬ ಪದಗಳಿಗೆ /-ಅರ್/ + /-ಕಳ್/ ಎಂಬ ಎರಡು ಬಹುವಚನ ಪ್ರತ್ಯಯಗಳನ್ನು ಸೇರಿಸಿದ್ದೇವೆ. ಈಗ ಅದು 'ಅರ್ + –ಕ್ + –ಲ್' (>ಳ್) ಸೇರಿ ಆದ ಮೂರು ಪ್ರತ್ಯಯಗಳ ಒಂದು ಪ್ರತ್ಯಯಗುಚ್ಛ—ಅರ್ಕಳ್ ಎಂದು ಹೇಳಬಹುದು. ಆದುದರಿಂದ ಕಳ್ ಎಂಬ ಬಹುವಚನ ಪ್ರತ್ಯಯ ಮೇಲುನೋಟಕ್ಕೆ ಒಂದೇ ಪ್ರತ್ಯಯದಂತೆ ತೋರಿದರೂ, ಆಂತರ್ಯದಲ್ಲಿ ಅದು ಎರಡು ಪ್ರತ್ಯಯಗಳ ಜೋಡಿರೂಪ.

> It may be observed here that Goṇḍ makes its termination of the inferior nouns only with the guttural suffix. Inversely it is seen that Telugu had, besides –kuḷu –in which it has generalised. In the same way Tuḷu has –kaḷu –lu. If Telugu were alone, one would easily have imagined that the termination –kulu >–lu.was an irregular construction of the termination. But the comparison with Goṇḍ supported by Kui and Brahui shows that –kaḷ –kulu must have resulted from a plurality of

terminations peculiar to the southern group. The guttural alone is common, to the whole family.[1]

ಕ್ ಪ್ರತ್ಯಯವೊಂದು ಬಹುಮಟ್ಟಿಗೆ ಎಲ್ಲ ದ್ರಾವಿಡ ಭಾಷೆಗಳಲ್ಲೂ ಕಾಣುವುದರಿಂದ ಕಂಠ್ಯಧ್ವನಿ/-ಕ್/ಒಂದೇ ಅಮುಹತ್ ವರ್ಗದಲ್ಲಿ ಸಾಮಾನ್ಯವಾಗಿ ಬಹುವಚನಪ್ರತ್ಯಯವೆಂದು ಹೇಳಬಹುದು.—ಕುಲ್ ಎಂಬುದು ಕೂಡ ಎರಡು ಬಹುವಚನ ಪ್ರತ್ಯಯಗಳನ್ನೊಳಗೊಂಡಿದೆ: -ಕ್ + -ಉಲ್. ಪರ್ಜಿಭಾಷೆಯಲ್ಲಿ ಕಾಣುವ-ತಿಲ್ ಎಂಬುದು –ಚಿಲ್ ಎಂಬುದರ ರೂಪಾಂತರವಿರಬೇಕು. ಈ ವಿವರಣೆಯನ್ನು ಘೋಷಿಸುವ ಕೆಲವು ಉದಾಹರಣೆಗಳನ್ನು ನೋಡಬಹುದು:

| | ಏಕವಚನ | ಬಹುವಚನ |
|---|---|---|
| ಬ್ರಾಹೂಈ | ಉರಾ (ಮನೆ) | ಉರಾಕ್ |
| | ಬಾ (ಬಾಯಿ) | ಬಾಕ್ |
| | ಪೂ (ಹುಳು) | ಪೂಕ್ |
| | ಮಸಿಙ್ (ಮಗಳು) | ಮಸಿಂಕ್ |
| ನಾಯ್ಕಿ | ತಲ್ (ತಲೆ) | ತಲ್ಕು |
| ಕುಈ | ಕಜು (ಕೈ) | ಕಕ |
| | ಕೋರು (ಕೋಣ) | ಕೋರ್ಕ್ |
| | ಕಾಱು (ಹಣ್ಣು) | ಕಾಂಗ (–ಕ>–ಗ್) |
| ಗೋಂಡಿ | ಕೈ (ಕೈ) | ಕೈಕ್ |
| | ಪುಲ್ಲಿ (ಪುಲಿ>ಹುಲಿ) | ಪುಲ್ಕ್ |
| | ಮಲ್ (ನವಿಲು) | ಮಲ್ಕ್ |
| | ಮರ್ಸ್ (ಕೊಡಲಿ) | ಮರ್ಸ್ಕ |
| ತೆಲುಗು | ಮ್ರಾನು (>ಮಾನು) | ಮ್ರಾಂಕುಲು |
| | ಮೊಱುಂಗು | ಮೊಱುಂಗುಲು |
| | ಕೊಲಂಕು | ಕೊಲಂಕುಲು |
| ತಮಿಳು | ಎನ್ನೋರ್ | ಎನ್ನೋರ್ಗಳ್ |
| | ಅರಸನ್ | ಅರಸರ್ಗಳ್ |
| | ಕೈ | ಕೈಗಳ್ |
| | ಮಗು--ಪುಲ್ಲಿಂಗ | |
| ಕನ್ನಡ | ಮಗು ಮಗಳು–ಸ್ತ್ರೀಲಿಂಗ | ಮಕ್ಕಳ್ |
| | ಮಗು–ನಪುಂ | |

[1] Jules Bloch, *GSODLS*, p. 10.

| | |
|---|---|
| ಅವು | ಅಕಳ್ |
| ಅಕ್ಕನ್ | ಅಕ್ಕಂಗಳ್ |
| ಅದು | ಅವು |

ಎಲ್ಲ ದ್ರಾವಿಡ ಭಾಷೆಗಳಲ್ಲಿನ ವಚನವ್ಯವಸ್ಥೆಯನ್ನು ಸಮೀಕ್ಷಿಸಿದ ತರುವಾಯ ಪ್ರಾಧ್ಯಾಪಕ ಜೂಲ್ಸ್‌ಬ್ಲಾಕ್ ಹೇಳುವ ಮಾತುಗಳು ಇವು:

> As regards number, the aspects is what philologists are inclined to consider as evolved ; in fact, it admits only of the singular and the plural, whereas even in India there had been in Indo-Āryan and there is even to-day in Muṇda a dual number.[1]

ಇವಲ್ಲದೆ /-ಮ್/ ಎಂಬುದೂ ದ್ರಾವಿಡ ಭಾಷೆಗಳ ಬಹುವಚನ ಪ್ರತ್ಯಯವಿದ್ದಿರಬೇಕೆಂದು ಭಾವಿಸಿದ್ದಾರೆ; ನೀಮ್, ನಾಮ್....ಇ; ಮತ್ತು ಇದು ಕೆಲವು ಭಾಷೆಗಳಲ್ಲಿ ವರ್ಣಪಲ್ಲಟಗೊಂಡು ಪದದ ಕೊನೆಯ ಸ್ಥಾನದಿಂದ ಪದದ ಪ್ರಾರಂಭ ಸ್ಥಾನಕ್ಕೆ ಬಂದಿದೆ; ಉದಾ: ತೆ. ಮೆಮು, ಮೇಮು, ಮನಮು ಇತ್ಯಾದಿ. ಇದು ವಿಚಾರಮಾಡಬೇಕಾದ ಸೂಚನೆ. ಮೂಲದ್ರಾವಿಡ ಭಾಷೆಯ ಬಹುವಚನ ಪ್ರತ್ಯಯಗಳಾಗಿ - ರ್ ಮ್ ಗಳನ್ನು ಪುನರ್ ರಚಿಸಿಕೊಳ್ಳಬೇಕೆಂಬ ಸೂಚನೆ ಕೂಡ ಇದೆ.

honorific plural suffix
ಗೌರವಾರ್ಥಕ ಬಹುವಚನ ಪ್ರತ್ಯಯ

ಗೌರವಾರ್ಥದಲ್ಲಿ—ಅವರು ಹೆಚ್ಚು ಬಳಕೆಯಲ್ಲಿದೆ: ತಂದೆಯವರು, ತಾಯಿಯವರು, ಅಣ್ಣನವರು,

| | | |
|---|---|---|
| ಮಹಾಜನರುಗಳು : | ಅವರುಗಳು : | ತಾವುಗಳು |
| ಮಹಾಶಯರುಗಳು : | ಇವರುಗಳು : | ನೀವುಗಳು |

ಇಲ್ಲಿ ಎರಡು ಬಹುವಚನ ಪ್ರತ್ಯಯಗಳು ಮೂಲ ಆಕೃತಿಗೆ ಸೇರಿವೆ. ಹಿಂದೆ ಈ ಬಗೆಯ ಉದಾಹರಣೆ ನೋಡಿದೇವೆ.

ಉಪಾಧ್ಯಾಯರ್ಕಳ್, ದೇವರ್ಕಳ್

ಈ ಎಲ್ಲ ವಿವೇಚನೆಯನ್ನು ಸಮೀಕ್ಷಿಸಿದಾಗ ಮೂಲದ್ರಾವಿಡ ಭಾಷೆಗೆ ಒಟ್ಟು ಐಯ್ದು ಬಹುವಚನ ಪ್ರತ್ಯಯಗಳನ್ನಾದರೂ ಇಟ್ಟುಕೊಳ್ಳಬೇಕೆಂದು ತೋರುತ್ತದೆ:
*-ಕ್ *-ಕಳ್ *-ರ್ *- ಚಿಲ್ *-ಮ್

[1] *The Grammatical Structure of Dravidian Languages*, p. 125.

೩೩

# ಗುಣವಾಚಕಗಳು

ದ್ರಾವಿಡ ಭಾಷೆಗಳಲ್ಲಿ ಕಾಣುವ ಈ ಗುಣವಾಚಕದ ಬಗೆಗೂ ಸಾಕಷ್ಟು ಚರ್ಚೆ ಇದೆ. ಕಾಲ್ಡ್‌ವೆಲ್, ಜೂಲ್ಸ್‌ಬ್ಲಾಕ್, ಆಲ್‌ಫ್ರೆಡ್ ಮಾಸ್ಟರ್, ಟಿ. ಬರೊ, ರಾ. ನರಸಿಂಹಾಚಾರ್ ಮುಂತಾದ ವಿದ್ವಾಂಸರು ಈ ವಿಚಾರದಲ್ಲಿ ತಮ್ಮ ತಮ್ಮ ಅಭಿಪ್ರಾಯಗಳನ್ನು ಸೂಚಿಸಿದ್ದಾರೆ. ದ್ರಾವಿಡ ಭಾಷೆಗಳಲ್ಲಿ ಗುಣವಾಚಕಗಳೆಂದೇ ಬೇರೆ ಇಲ್ಲ, ಗುಣವಾಚಕಗಳು ನಾಮಪದಗಳೇ ಎಂದು ಕಾಲ್ಡ್‌ವೆಲ್ ಹಿಂದೆ ಹೇಳಿದುದನ್ನು ಜೂಲ್ಸ್‌ಬ್ಲಾಕ್ ಅನುಮೋದಿಸುತ್ತಾನೆ.

> . . . . as there are no Adjectives, there are no comparatives and superlatives at all. It is therefore the substitute of a great part of our grammar.[1]

ಎಂಬುದು ಜೂಲ್ಸ್‌ಬ್ಲಾಕ್‌ನ ತೀರ್ಮಾನ. ಆದರೆ ಬರೊ, ಎ. ಮಾಸ್ಟರ್, ರಾ. ನರಸಿಂಹಾಚಾರ್—ಇವರು ಇದನ್ನು ಒಪ್ಪುವುದಿಲ್ಲ. ಇವರ ಹೇಳಿಕೆಗಳನ್ನು ಕ್ರಮವಾಗಿ ಅಲ್ಲಲ್ಲಿ ಪ್ರಸ್ತಾಪಿಸಬಹುದು.

ಕನ್ನಡ ವ್ಯಾಕರಣಗಳಲ್ಲಿ ಇನಿದು, ಒಳ್ಳಿತು ಮೊದಲಾದ 'ದು'ಕಾರಾಂತ ಮತ್ತು 'ತು'ಕಾರಾಂತ ರೂಪಗಳನ್ನು ಉದಾಹರಣೆಯಾಗಿ ಕೊಟ್ಟು ವಿದ್ವಾಂಸರು ಅವನ್ನು ಗುಣವಾಚಕಗಳ ಪ್ರಕೃತಿರೂಪಗಳೆಂದು ಕರೆದಿರುವುದು ಕಾಣುತ್ತದೆ. ಆದರೆ ಇದು ಅಂಗೀಕಾರಾರ್ಹ ವಿವರಣೆಯೆ ? ಈ ಹೇಳಿಕೆ ಸಮರ್ಥಕವಾಗಿದೆಯೆ ? ನೋಡಬೇಕು. ಭಾಷಾಶಾಸ್ತ್ರಜ್ಞಾನದ ದೃಷ್ಟಿಯಿಂದ ಈ ನಿರೂಪಣೆ ಸರಿಯಾಗಿದೆಯೆ ಎಂದು ನೋಡಿದರೆ, ಈ ಗುಣವಾಚಕಗಳ ನಿಜವಾದ ಪ್ರಕೃತಿರೂಪ ಇನ್ (>ಇನಿದು) ಒಳ್ (>ಒಳ್ಳಿತು) ಎಂದು ಕಾಣುತ್ತದೆ. ಹಾಗಾದರೆ ಈ ಪದಗಳ ತುದಿಯಲ್ಲಿರುವ ದು, ತು ಗಳು ಯಾವುವು ? ಈ ತು ದು ಗಳು, ಅನ್-ಅಳ್‌ಗಳಂತೆ ಕೇವಲ ಲಿಂಗಸೂಚಕ ಪ್ರತ್ಯಯಗಳೇ ಹೊರತು ಗುಣವಾಚಕದ ಅಭಿನ್ನ ಅಂಗವಲ್ಲವೆನ್ನಬಹುದು. ಒಳ್ಳಿದನ್ ಒಳ್ಳಿದಳ್ ಒಳ್ಳಿದರ್ ಎಂಬ ಪದಗಳಲ್ಲಿ ಅನ್ (ಒಳ್+ಅನ್>ಒಳ್ಳಿದನ್)

[1] *The GSODLS*, p. 101.

ಮತ್ತು ಅಳ್ (ಒಳ್ + ಅಳ್ > ಒಳ್ಳಿದಳ್), ಅರ್ (ಒಳ್ + ಅರ್ > ಒಳ್ಳಿದರ್) —ಎಂಬ ಪ್ರತ್ಯಯಗಳು ಲಿಂಗಸೂಚಕವಾಗಿ ಸೇರಿರುವಂತೆ ಇನಿದು (ಇನ್ + ದು) ಒಳ್ಳಿತು (ಒಳ್ + ತು) ಪದಗಳಾಗಿವೆ. ಆದರೆ ಕಿಟೆಲ್ ಒಳ್ಳಿತು ಪದಕ್ಕೆ ಬೇರೆ ರೀತಿಯ ನಿಷ್ಪತ್ತಿ ಕೊಟ್ಟಿದ್ದಾನೆ. ಆತನ ಅಭಿಪ್ರಾಯದಂತೆ ಒಳ್ + ತು > ಒಳ್ತು > ಒಳಿತು > ಒಳ್ಳಿತು ಆಗಿದೆ. ಇದನ್ನು ವಿವರವಾಗಿ ಪರಿಶೀಲಿಸಬೇಕಾಗುತ್ತದೆ.

ಕರ್ಮುಗಿಲ್, ಬೆಳ್ಗೊಡೆ ಮುಂತಾದ ಕೆಲವು ಸಮಾಸಪದಗಳಲ್ಲಿಯೂ, ಬೆಳ್ಪು, ಇಂಪು, ತಣ್ಪು, ಕರ್ಪು ಮೊದಲಾದ ಭಾವನಾಮಗಳಲ್ಲಿಯೂ ಕರ್ರನೆ, ತೆಳ್ಳನೆ, ಬೆಳ್ಳನೆ—ಮುಂತಾದ ಈ ಕ್ರಿಯಾ ವಿಶೇಷಣಗಳಲ್ಲಿಯೂ ಗುಣವಾಚಕದ ಪ್ರಕೃತಿ ರೂಪಗಳು ಎದ್ದು ಕಾಣುತ್ತವೆ. ಹೀಗಿದ್ದೂ ಗುಣವಾಚಕ ನಾಮಪದಗಳಲ್ಲಿ ಅಂತರ್ಗತ ವಾಗುವುವೆಂದು ಕಾಲ್ಡ್‌ವೆಲ್ ಹೇಳಿದ್ದಾನೆ, ಜೂಲ್ಸ್‌ಬ್ಲಾಕ್ ಅನುಮೋದಿಸಿದ್ದಾನೆ. ಇದಕ್ಕೆ ಆಧಾರವೋ ಎಂಬಂತೆ ಕನ್ನಡದ ವೈಯಾಕರಣಿ ಕೇಶಿರಾಜನೂ, ಬಾಯಿಬಿಟ್ಟು ಸ್ಪಷ್ಟವಾಗಿ ಏನನ್ನೂ ಹೇಳದಿದ್ದರೂ, ಗುಣವಚನವನ್ನು ನಾಮಪ್ರಕರಣದಲ್ಲಿಯೇ ಹೇಳಿದ್ದಾನೆ. ಆದರೆ ಈ ಬಗೆಯ ಹೇಳಿಕೆಯನ್ನು ಎ. ಮಾಸ್ಟರ್, ಬರೊ ಮತ್ತು ರಾ. ನರಸಿಂಹಾಚಾರ್‌ಅವರು ವಿರೋಧಿಸಿದ್ದಾರೆ. ಅವರು ದ್ರಾವಿಡ ಭಾಷೆಯಲ್ಲಿ ಶುದ್ಧ ಗುಣವಾಚಕಗಳು ಇವೆಯೆಂದೇ ಪ್ರತಿಪಾದಿಸಿದ್ದಾರೆ.

ದ್ರಾವಿಡ ಭಾಷೆಗಳಲ್ಲಿ ಶುದ್ಧ ಗುಣವಾಚಕಗಳು ಉಂಟೆಂದು ವಿವರಿಸಿದ ವಿದ್ವಾಂಸರ ಅಭಿಪ್ರಾಯದ ತಿರುಳು ಇಂತಿದೆ: ಇಂಗ್ಲಿಷ್ ಭಾಷೆಯ ಗುಡ್ (Good), ಲಾಂಗ್ (Long) ಷಾರ್ಟ್ (Short) ಮೊದಲಾದ ಗುಣವಾಚಕಗಳಷ್ಟೇ ಶುದ್ಧವಾದ ಗುಣ ವಾಚಕಗಳು ತೆಲುಗು ಭಾಷೆಯಲ್ಲಿ ಮಾತ್ರವಲ್ಲದೆ ಕನ್ನಡ, ತಮಿಳು ಭಾಷೆಗಳಲ್ಲೂ ಕೆಲವು ಮಟ್ಟಿಗೆ ದೊರೆಯುತ್ತವೆ. ಉದಾ: ನನ್ಮೈ (ತಮಿಳು), ನಲ್ಮೆ (ಕನ್ನಡ). ಇಂಥ ಕಡೆಗಳಲ್ಲೆಲ್ಲಾ ಭಾವನಾಮ ಪ್ರತ್ಯಯಗಳಾದ ಮೈ (ತ) ಅಥವಾ ಮೆ (ಕ) ಎಂಬುದನ್ನು ತೆಗೆದು ಹಾಕಿದರೆ ಉಳಿಯುವ ಪದ ನಲ್ - ಎಂಬುದು. ಇದು ಶುದ್ಧ ಗುಣವಾಚಕವೇ ಹೊರತು ನಾಮವಿಶೇಷಣವಲ್ಲ.

ಈ ಬಗೆಯ ಮೇಲಿನ ವಿವರಣೆ ಪರಿಭಾವನೆಗೆ ಅರ್ಹವಾಗಿದೆ. ಕರ್ (>ಕರ್ಪು), ಕೂರ್ (>ಕೂರ್ಮೆ), ಮೆಲ್ (>ಮೆಲ್ಲಿತು), ತಣ್ (>ತಣ್ಪು), ನುಣ್ (>ನುಣ್ಪು)—ಮೊದಲಾದ ಗುಣವಾಚಕಗಳು ತಮಿಳು ಮತ್ತು ಕನ್ನಡ ಭಾಷೆ ಗಳೆರಡಕ್ಕೂ ಸಮನಾಗಿವೆ. ತಮಿಳು ಭಾಷೆಯಲ್ಲಿ ಕಾಣುವ ಪೆರುವ್ವೈಯಾನ್, ಅಥವಾ ಹಳಗನ್ನಡದಲ್ಲಿ ಕಾಣುವ ಪಣಮುಳ್ಳ, ಪಿರಿದಾದ, ಶುಭವಾದ—ಮುಂತಾದ ರೂಪಗಳು ಶುದ್ಧ ಗುಣವಾಚಕ ಪ್ರತಿಪಾದನೆಗೆ ಅಪವಾದಗಳಂತಿವೆ ಎಂಬುದೇನೋ ನಿಜ. ಆದರೆ ಇವು -ಆನ, -ಆದ, -ಉಳ್ಳ ಮೊದಲಾದ ಸಂಬಂಧಸೂಚಕ ಪ್ರತ್ಯಯ ಗಳನ್ನು ಹೊತ್ತ ನಾಮಪದಗಳು. ಯಾವ ಭಾಷೆಗಳಲ್ಲಿ ಗುಣವಾಚಕಗಳು ಅಧಿಕ ಸಂಖ್ಯೆ ಯಲ್ಲಿ ಇಲ್ಲವೋ ಆ ಭಾಷೆಗಳು ಅಂಥ ಕೊರತೆಯನ್ನು ಹೋಗಲಾಡಿಸಿಕೊಳ್ಳಲು ಇಂಥ

ರೂಪಗಳನ್ನು ಸಿದ್ಧಮಾಡುವುದು ಸಹಜ. ಕನ್ನಡ ಹಾಗೂ ಇತರ ದ್ರಾವಿಡ ಭಾಷೆಗಳಲ್ಲಿ ಈ ತೆರನಾಗಿ ನಾಮಪದಗಳಲ್ಲಿ ಅಂತರ್ಗತವಾಗದೆ ಪ್ರತ್ಯೇಕವಾಗಿ, ಸ್ವತಂತ್ರವಾಗಿ ನಿಂತ ಕೆಲವು ಶುದ್ಧ ಗುಣವಾಚಕಗಳೂ ಇವೆ. ಗುಣವಾಚಕಗಳಿಗೆ ಕೆಲವು ಉದಾಹರಣೆಗಳು :

ಕೋಲಾಮಿ : ಪುಲ್ಲೆ (= ಪುಳಿ), ದೂ (= ದೊಡ್ಡ), ತೆಲ್ಮಿ (= ಬಿಳಿಯ) ....ಇತ್ಯಾದಿ.

ಪರ್ಜಿ : ಪುನ್ (= ಪೊಸ), ವಿಲ್ (= ಬೆಳ್), ಪಯ್ (= ಪಚ್ಚ), ಕೊಜಬ್ (= ಎಳೆಯ), ಆಟ (= ಹಳೆಯ), ನೆಟ್ರೊ (< ನೆತ್ತರ್ = ರಕ್ತವರ್ಣ), ಬೆರ್ತೊ (= ಪೆಱಿಯ), ಪಿಟೆತ್ (= ಪುಟ್ಟ), ಇಲೆ (= ಎಳೆ).

ತಮಿಳು : ಅರು, ಇಳ, ಇನ್, ಕಡು, ಕುಱು, ಕರು, ಕೂರ್, ಕೊಡು, ತಣ್, ತೆಳ್, ನಡು, ನಱು, ನಲ್, ನಳಿ, ನುಣ್, ನೆಡು, ನೇರ್, ಪಶು, ಪಟಿ, ಪುದು, ಪೆರು, ಮೆಲ್, ವಟ್ಟಂ, ವೆಂ, ವಲ್, ವೆಳ್, ಶಿಱು, ಶೆಂ.

ತೆಲುಗು : ಎಱ್ಱ, ಚಿನ್ನ, ನಲ್ಲ, ಪೆದ್ದ, ಪುಲ್ಲ, ಮಂಚಿ.

ಕನ್ನಡ : ಅರು, ಆಳ, ಎಳ, ಇನ್, ಕಡು, ಕರ್, ಕುಱು, ಕೂರ್, ಕುಡು, ಎತ್ತರ, ತಣ್, ತೆಳ್, ನಡು, ನಱು, ನಲ್, ನಳಿ, ನುಣ್, ನಿಡು, ನೇರ್, ಪಸು [ಪಂದಲೆ, ಪಚ್ಚೆಲೆ], ಪಟಿ, ಪೊಸ, ಪೆರ್ (ಪೇರಡವಿ), ಮೆಲ್, ಬಟ್ಟ ಬೆಂ, ಬಲ್, ಬೆಳ್, ಕಿಱು, (ಕಿತ್ತೆಸಟಬ್), ಕೆಂಪು, ಚಿಕ್ಕ, ದೊಡ್ಡ, ಹಳದಿ, ಬಿಳಿ, ಹೊಸ, ಬಡ

ಆದುದರಿಂದ ಕಾಲ್ಡ್‌ವೆಲ್‌ನ ಹೇಳಿಕೆಯನ್ನು ಪುನರ್ ಪರಿಶೀಲಿಸಿ ಸ್ವಲ್ಪ ತಿದ್ದಿಕೊಳ್ಳಬೇಕಾಗುತ್ತದೆ ;

> Tamil and Kannada as well as Telugu to some extent, possess words which are as much entitled to be called adjectives as good, long, short, etc., are in English.[1]

ಎಂಬ ಹೇಳಿಕೆಯನ್ನು ಅನುಮೋದಿಸಬೇಕಾಗುತ್ತದೆ.

ಕೇಶಿರಾಜ ಕೂಡ ಗುಣವಾಚಕಗಳು ಒಳವು ಎಂದೇ ತಿಳಿಸಿದ್ದಾನೆ :

ಒಳ್ಳಿತು ಮೆಲ್ಲಿತು ಬೆಟ್ಟಿತು
ತೆಳ್ಳಿತು ಬಿಸಿದಸಿದು ಕಡಿದು ನಿಡಿದಿನಿದೆಂಬಿಂ ।

---

[1] R. Narashimachar, *History of Kannada Language*, p. 76.

ತುಳ್ಳುವು ತುಪು ಕಡೆಯೆನೆ ಕೈ
ಕೊಳ್ಳಿಂ ಗುಣವಾಚಿ ಮೇಣ್ ತುಕಾರಂ ದ್ವಿತ್ವಂ ॥

ಇವಲ್ಲದೆ ಅಸಿದು, ಕಡಿದು, ಕರಿದು, ಪಟಿದು, ಬಿಳಿದು, ಬಿಸಿದು; ಅಗಲಿತ್ತು, ಉದ್ದಿತ್ತು, ಕೂರಿತ್ತು, ಗುಂಡಿತ್ತು....ಇತ್ಯಾದಿ ಪದಗಳನ್ನು ಕೊಟ್ಟಿದ್ದಾನೆ.[1]

ಸಂಸ್ಕೃತ ಮೊದಲಾದ ಇಂಡೊ-ಆರ್ಯನ್ ಭಾಷೆಗಳಲ್ಲಿ ವಿಶೇಷ್ಯದ ಲಿಂಗ, ವಚನ, ವಿಭಕ್ತಿಗಳು ವಿಶೇಷಣಕ್ಕೂ ಸೇರುತ್ತವೆ.

ಉದಾಹರಣೆಗೆ ಈ ವಾಕ್ಯವನ್ನು ನೋಡಿ :

ಪ್ರಥಮವಯಸಿ ಪೀತಂ ತೋಯಂ ಅಲ್ಪ ಸಂತಃ।

ಈ ವಾಕ್ಯದಲ್ಲಿ 'ತೋಯಂ' ಎಂಬುದು ವಿಶೇಷ್ಯ, ಮತ್ತು 'ಅಲ್ಪ' 'ಪೀತಂ'—ಎಂಬ ಪದಗಳು ವಿಶೇಷಣಗಳು. ಕನ್ನಡದಲ್ಲಿ ಇದನ್ನೇ ಅನುಸರಿಸಿ, ಒಂದು ವೇಳೆ ಯಾರಾದರೂ ಹೀಗೆ:

ಒಳ್ಳಿದನ್ ಮಗನ್—(ಪುಲ್ಲಿಂಗ)
ಒಳ್ಳಿದಳ್ ಮಗಳ್—(ಸ್ತ್ರೀಲಿಂಗ)

ಎಂದು ಬರೆದರೆ ಈ ರೂಪಗಳ ಬಳಕೆ ಬಹುಶಃ ತಪ್ಪಾಗುತ್ತದೆ. ಏಕೆಂದರೆ ಕನ್ನಡದಲ್ಲಿ ಹೀಗೆ ಬರೆಯುವ ಪದ್ಧತಿಯಿಲ್ಲ, ಅಷ್ಟೇಕೆ ಸಿಥಿಯನ್ ಭಾಷಾ ಪರಿವಾರದಲ್ಲೂ ಈ ನಿಯಮ ರೂಢಿಯಲ್ಲಿಲ್ಲ. ಅಲ್ಲಿಯೂ, ನಮ್ಮಲ್ಲಿ ಇರುವಂತೆ, ಪ್ರಕೃತಿಯೂ ವಿಶೇಷಣವಾಗಬಹುದು. ಆದರೆ ಕನ್ನಡ ಭಾಷೆಯಲ್ಲಿ ಕಾಣಬರುವ ಈ ವಿಶೇಷಣದ ಬಳಕೆ ಇಂಗ್ಲಿಷ್ ಭಾಷೆಯ ಗುಣವಾಚಕವನ್ನು ನೆನಪಿಗೆ ತರುತ್ತದೆ.

ಉದಾಹರಣೆ :

ತಲೆನೋವು (ಕ): headache (ಇಂ)
ತಲೆಯಾಳು (ಕ): headman (ಇಂ)

ಸಂಸ್ಕೃತ ಭಾಷೆಯಲ್ಲಿ ಗುಣವಾಚಕಕ್ಕೆ ತರ, ತಮ– ಪ್ರತ್ಯಯಗಳು ಹತ್ತುತ್ತವೆ:

| | | |
|---|---|---|
| ಕಷ್ಟ | ಕಷ್ಟತರ | ಕಷ್ಟತಮ |
| ಸುಂದರ | ಸುಂದರತರ | ಸುಂದರತಮ |

ಆದರೆ ಕನ್ನಡ ಭಾಷೆಯಲ್ಲಿ, ಸಹಜವಾಗಿ ನೋಡಿದರೆ, ಈ ಕ್ರಮವಿಲ್ಲ. ಆದರೆ ಇದೇ ಭಾವವನ್ನು ಪ್ರಕಾರಾಂತರಗಳಿಂದ ಸೂಚಿಸುವ ಪದ್ಧತಿಯಿದೆ. ಅಲ್ಲದೆ ಕೆಲವೊಮ್ಮೆ ವಿಭಕ್ತಿ ಪ್ರತ್ಯಯಗಳಿಂದಲೂ ತೋರಿಸುವುದುಂಟು.

ಉದಾಹರಣೆಗೆ ಈ ವಾಕ್ಯಗಳನ್ನು ನೋಡಿ:

---

[1] ಶಮದ, ೧೯೬೪, ಸೂತ್ರ ೭೭, ಮತ್ತು ೮೭ರ ಪ್ರಯೋಗ, ಪುಟ ೯೨

ಅವನಿಂ ಪಿರಿಯಂ
ಇವನಿಗಿಂತ ಅವನು ದೊಡ್ಡವನು
ಎಲ್ಲರೊಳೊಳ್ಳಿದಂ
ಇವನನ್ನು ನೋಡಿದರೆ ಅವನೇ ಉತ್ತಮ

ಕನ್ನಡ ಗುಣವಚನಗಳು, ಸಂಸ್ಕೃತ ಗುಣವಚನಗಳಂತೆ ಅವು ವರ್ಣಿಸುವ ನಾಮ ಪದದ ಲಿಂಗ, ವಚನ ಹಾಗೂ ವಿಭಕ್ತಿಗಳನ್ನು ಪಡೆಯುವ ಅಗತ್ಯವಿಲ್ಲ. ಇದನ್ನು ಒಂದು ಉದಾಹರಣೆಯೊಡನೆ ವಿಷದೀಕರಿಸಬಹುದು.

ಸಂ. ಅಹೋ ಪಾವನೀ ಭಾಗೀರಥೀ ಪ್ರವಹತಿ
ಕ. ಪಾವನೆಯಾದ ಭಾಗೀರಥಿಯು ಪ್ರವಹಿಸುತ್ತಾಳೆ.

ಈ ಒಂದು ದೃಷ್ಟಿಯಿಂದ ಕನ್ನಡಭಾಷೆ ಸಂಸ್ಕೃತಕ್ಕಿಂತಲೂ ಮುಂದುವರಿದಿದೆಯೆನ್ನ ಬಹುದು. ಕಾರಣವೇನೆಂದರೆ ನಾಮಪದಗಳ ಲಿಂಗ ಹಾಗೂ ವಚನಗಳ ವಿವಕ್ಷೆಯಲ್ಲಿ, ಗುಣವಚನಗಳ ಹಿತಮಿತವಾದ ಪ್ರಯೋಗಗಳಲ್ಲಿ ಸಂಸ್ಕೃತಕ್ಕಿಂತ ಕನ್ನಡವೇ ಹೆಚ್ಚು ಸಮಂಜಸವಾಗಿ, ಸುಭಗವಾಗಿ ತೋರುತ್ತದೆ.

ಎರಡನೆಯದಾಗಿ ಕನ್ನಡ ಗುಣವಚನಗಳು ಬಹುವಾಗಿ ಮೊದಲು ಆಖ್ಯಾತ ಪ್ರತ್ಯಯಗಳನ್ನು ಹೊಂದಿ ಕ್ರಿಯಾರ್ಥ ಸೂಚಿಸುತ್ತವೆಂಬುದನ್ನೂ ಗಮನಿಸಬೇಕು.

ಉದಾಹರಣೆಗೆ:

ನಾನು ಸುಂದರನಾಗಿದ್ದೇನೆ
ನಾನು ಒಳ್ಳೆಯವನಾಗಿದ್ದೇನೆ

ಎಂಬ ವಾಕ್ಯಗಳಲ್ಲಿ ಆಗಿದ್ದೇನೆ (<√ಆಗು) ಎಂಬ ಕ್ರಿಯಾರ್ಥವನ್ನು ಬಿಟ್ಟು ಗುಣ ವಾಚಕಗಳಿಗೇ ಆಖ್ಯಾತ ಪ್ರತ್ಯಯಗಳನ್ನು ಸೇರಿಸಿ ಕ್ರಿಯಾರೂಪವನ್ನು ಸಿದ್ಧಪಡಿಸಲೂ ಸಾಧ್ಯವಿದೆ. ಹಳಗನ್ನಡ ಕಾವ್ಯಗಳಲ್ಲಿ ಇಂಥ ಅನೇಕ ಪ್ರಯೋಗಗಳು ದೊರೆಯು ತ್ತವೆ.

ಆವನ್ ಒಳ್ಳಿದನೆಮ್
ನೀನ್ ಸುಂದರನಯ್

ಕಾರಕ ಎಂಬುದು ಗುಣವಚನದ ರೂಪ, ವಿಶೇಷಣ ರೂಪಗಳಂತೆ. ಅವುಗಳನ್ನು ಕಾರಕ ರೂಪಗಳೆಂದೂ ಕರೆಯುವರು. ಚಿಕ್ಕ ದೊಡ್ಡ ಎಂಬುವು ವಿಶೇಷಣ ರೂಪಗಳು. ಅವು ವಾಕ್ಯದಲ್ಲಿ ನಾಮಪದಕ್ಕೆ ವಿಶೇಷಣವಾಗಿ ಬರುತ್ತವೆಯೇ ಹೊರತು ಸ್ವತಂತ್ರವಾಗಿ ಬರುವುದಿಲ್ಲ. ಈ ವಿಶೇಷಣರೂಪಕ್ಕೆ ಅವನು, ಅವಳು, ಅವರು, ಅದು—ಎಂಬುವು ಸೇರಿದರೆ ಆಗ ಬರುವ ರೂಪಗಳು ಗುಣವಾಚಕಗಳ ಕಾರಕರೂಪಗಳಾಗುತ್ತವೆ.

ಉದಾ: ಚಿಕ್ಕವನು, ಚಿಕ್ಕವಳು, ಚಿಕ್ಕವರು, ಚಿಕ್ಕದು, ಚಿಕ್ಕವು

ಇದರಂತೆ: ದೊಡ್ಡವನು, ಎಳೆಯವನು
ಬಿಳಿಯವನು, ಕಿರಿಯವನು
ಹಿರಿಯವನು, ಹೊಸಬನು
ಹಳಬನು, ಅಂಥವನು
ಇಂಥವನು, ಎಂಥವನು

ಅಷ್ಟು, ಇಷ್ಟು, ಎಷ್ಟು ಎಂಬ ಗುಣವಾಚಕಗಳು, ದೊಡ್ಡದು ಎಂಬಂತೆ, ಏಕವಚನದಲ್ಲಿ ಮಾತ್ರ; ಕೆಲವು, ಹಲವು ಎಂಬ ಗುಣವಾಚಕಗಳು ಬಹುವಚನದಲ್ಲಿ ಮಾತ್ರ ನಡೆಯುತ್ತವೆ.

ದ್ರಾವಿಡ ಭಾಷೆಗಳ ಗುಣವಾಚಕ ಪದ್ಧತಿಯೇ ಮುಂಡಾ ಭಾಷೆಗಳಲ್ಲೂ ಇರುವಂತೆ ತೋರುತ್ತದೆ.

Adjectives are of the same kind in both the families (The Dravidian and the Munda). The same is, however, the case in almost all agglutinative languages.[1]

ದ್ರಾವಿಡ ಭಾಷೆಗಳಲ್ಲಿ ಗುಣವಚನ ನಾಮಪದದಿಂದ ಪ್ರತ್ಯೇಕವಾದುದೇನೂ ಅಲ್ಲವೆಂದು ಹೇಳಬಹುದು. ಅಂದರೆ ಗುಣವಾಚಕದಿಂದ ನಾಮಪದವನ್ನು ಸಾಧಿಸಬಹುದು. ಅಂದರೆ ದ್ರಾವಿಡ ಭಾಷೆಗಳಲ್ಲಿ ಮೂಲಧಾತುಗಳನ್ನು ಕ್ರಿಯಾಪದವಾಗಿಯೂ, ಗುಣವಾಚಕವಾಗಿಯೂ, ಮತ್ತು ನಾಮಪದವಾಗಿಯೂ ಬಳಸಬಹುದು:

√ಬೆಳ್ > ಬಿಳಿಯ, ಬೆಳ್ಪು > ಬಿಳುಪು, ಬೆಳ್ಳಗೆ
√ನಲ್ > ನಲ್ಲ, ನಲ್ಮೆ

ಇದರಂತೆ ಬೆಚ್ [> ಬಿಸಿ(ದು)], ಪಚ್ [ಪಸಿ(ದು)], ಕೆಚ್ [ಕಿಸಿ(ದು)] ಇವು ಗುಣವಾಚಕ ಪ್ರತ್ಯಯಗಳು. ಹಿಂದಿನ ಕನ್ನಡದಲ್ಲಿ ಸಮಾಸದಲ್ಲೂ ಇದು ಕಾಣಸಿಗುತ್ತದೆ—ಉದಾ: ಬೆಳ್ನೊರೆ. ಇವಲ್ಲದೆ ನಾಮಪದವೂ ಅಲ್ಲದ, ಪ್ರಕೃತಿಯೂ ಅಲ್ಲದ ಕೆಲವು ಗುಣವಾಚಕಗಳು ಕನ್ನಡದಲ್ಲಿ ಇದ್ದುವೆಂದೂ ಹೇಳಬಹುದು.

ಭಾಷೆಗಳ ಪೂರ್ವಸ್ಥಿತಿಯನ್ನು ಅವಲೋಕಿಸುತ್ತಾ, ವಿದ್ವಾಂಸರು, ಮೊದಲಿಗೆ ನಾಮಪದಗಳಾಗಲಿ, ಗುಣವಾಚಕಗಳಾಗಲಿ ಇರದೆ ಕೇವಲ ವಿವರಣಾತ್ಮಕ ಪದಗಳಿದ್ದುವೆಂದು ಭಾವಿಸಿದ್ದಾರೆ.

Grammatically nouns and adjectives are identical; their functional differentiation, where by nouns became names of

[1] *LSI*, Vol. 4, 1906, p. 3

beings or things, adjectives words modyfying nouns, was a later development, even though it appeared before the dawn of history. Instead of the adjective being derived from the noun, the noun would seem to derive from the adjective, if we are to rely .... on the term descriptive as a characteristic common to them both.[1]

ದ್ರಾವಿಡ ಭಾಷೆಗಳಲ್ಲಿ ಹೆಚ್ಚಿನ ಗುಣವಾಚಕಗಳು ಯಾವ ರಚನಾತ್ಮಕ ವ್ಯತ್ಯಾಸವೂ ಇಲ್ಲದೆ, ಕೇವಲ ಸ್ಥಾನಬಲದಿಂದ ಮಾತ್ರ ಗುಣವಾಚಕಗಳಾದ ನಾಮಪದಗಳೆಂಬ ತಿಳುವಳಿಕೆ ಪರಿಭಾವಿಸತಕ್ಕದ್ದು.

ಪೊನ್ ಅರಿದು = ಚಿನ್ನ ಸಿಗುವುದು ಕಷ್ಟ
ಪೊನ್ ಮುಡಿ = ಚಿನ್ನದ ಕಿರೀಟ

ಇಲ್ಲಿ ಮೊದಲು ನಾಮಪದವಾಗಿ ಬಂದ ಪೊನ್, ಯಾವ ವ್ಯತ್ಯಾಸವೂ ಇಲ್ಲದೆ ಎರಡನೆಯ ವಾಕ್ಯದಲ್ಲಿ ಗುಣವಾಚಕವಾಗಿ ಬಂದಿದೆ. ಆದರೆ ಚಿಕ್ಕ, ಚಿಲ್, ಪೆರ್ (< ಪೆರು) ಮತ್ತು ಹಿಂದೆ ಉದಾಹರಿಸಿದ ವಿಶೇಷಣಗಳು, ದ್ರಾವಿಡ ಭಾಷೆಗಳಲ್ಲಿ ವಿಶೇಷಣಗಳ ಇರುವಿಕೆಯನ್ನು ಸಾರುತ್ತವೆ. ಪೆರು ಎಂಬ ಶಬ್ದ ಗುಣವಚನವೇ ಹೊರತು ನಾಮಪದವಲ್ಲ; ಪೆರುಮೈ ಎಂಬುದು ನಾಮಪದ. ಆದುದರಿಂದ ಶಬ್ದಾರ್ಥ ಹಾಗೂ ಆಕೃತಿಕ ನಿಟ್ಟಿನಿಂದ ಕೂಡ ವಿಶೇಷಣಗಳನ್ನೂ ಒಂದು ಪ್ರತ್ಯೇಕ ವರ್ಗವೆಂದು ಪರಿಗಣಿಸಬಹುದು. ನಾಮಪದಗಳ ಗುಣಗಳನ್ನು ಹೇಳಿದರೆ ವಿಶೇಷಣಗಳು ಒಂದು ನಿರ್ದಿಷ್ಟ ಗುಣವನ್ನಷ್ಟೇ ಹೇಳುತ್ತವೆ.

---

[1] Louis H. Grey, *Foundations of Language*, p. 169.

# ದ್ರಾವಿಡ ಭಾಷೆಗಳಲ್ಲಿ ಲಿಂಗವ್ಯವಸ್ಥೆ

ಭಾಷೆಗಳಲ್ಲಿ ವ್ಯಾಕರಣಶಾಸ್ತ್ರದ ಅನುಗುಣವಾಗಿ ಬರುವ ಲಿಂಗವ್ಯವಸ್ಥೆಯನ್ನು ಸಾಕ್ರಟೀಸನೇ ಮೊದಲಾದ ಕೆಲವು ಪ್ರಾಚೀನರು ಪರಿಹಾಸ್ಯ ಮಾಡಿದ್ದಾರೆ. ಅನೇಕ ಭಾಷೆಗಳ ಲಿಂಗ ವಿಂಗಡಣೆಯಲ್ಲಿ ಚಂಚಲ ಹಾಗೂ ಭ್ರಾಮಕ ಅಂಶಗಳು ಇರುವುದೇ ಈ ಅಪಹಾಸ್ಯಕ್ಕೆ ಕಾರಣವಿದ್ದಿರಬೇಕು; ಹಡಗು ಒಂದು ಭಾಷೆಯಲ್ಲಿ ನಪುಂಸಕ ಲಿಂಗವಾದರೆ ಇನ್ನೊಂದು ಭಾಷೆಯಲ್ಲಿ ಸ್ತ್ರೀಲಿಂಗ. ಆದರೆ ಈ ವೈಚಿತ್ರ್ಯಗಳನ್ನು ಈ ಲಿಂಗವಿವೇಚನೆಯನ್ನು ಕಡೆಗಾಣಿಸಲಾಗುವುದಿಲ್ಲ,

ಭಾಷೆಗೆ ಸಂಬಂಧಪಟ್ಟಂತೆ ಲಿಂಗದ ಕಲ್ಪನೆ ಮಾನವ ಬುದ್ಧಿಯ ವ್ಯವಸ್ಥಿತ ದೃಷ್ಟಿಯನ್ನು ಪ್ರತಿಬಿಂಬಿಸುವುದೆಂಬುದನ್ನು ಗಮನಿಸಬೇಕು. ವಾಕ್ಯರಚನೆಯ ಕಾಲದಲ್ಲಿ ವಾಕ್ಯದ ಪದಗಳು ಲಿಂಗಾನುಸಾರಿಯಾಗಿ ಹೊಂದಿಕೊಳ್ಳುವುದರಿಂದ, ಭಾಷೆಗೆ ಲಿಂಗ ವ್ಯವಸ್ಥೆ ಒಂದು ಬಗೆಯ ಅನುರೂಪತೆಯನ್ನು ತಂದುಕೊಡುತ್ತದೆ ಎನ್ನಬಹುದು, 'ಲೀನಂ ಅರ್ಥಂಗಮಯತೀತಿ ಲಿಂಗಂ'

ಉದಾಹರಣೆ : ರಾಮು ಬಂದ(ನು)
ಸೀತೆ ಬಂದಳು
ಹಸು ಬಂದಿತು

ಇಲ್ಲಿ ಬಂದ(ನು), ಬಂದಳು, ಬಂದಿತು—ಎಂಬ ಪದಗಳು ಅವುಗಳ ಹಿಂದೆ ಬಂದಿರುವ ಪದದ ಲಿಂಗಕ್ಕೆ ಅನುಸಾರವಾಗಿ ಬೇರೆ ಬೇರೆಯಾಗಿವೆ.

ಜಗತ್ತಿನ ಅನೇಕ ಭಾಷೆಗಳಲ್ಲಿ ಜೀವವುಳ್ಳ ಮತ್ತು ಜೀವವಿಲ್ಲದ ಅಥವಾ ಸ್ತ್ರೀಪುರುಷ ಎಂಬ ದೃಷ್ಟಿಯಿಂದ ಎರಡೇ ಲಿಂಗಭೇದ ಮಾಡಿರುವುದು ಕಾಣುತ್ತದೆ. ವಂಗ ಭಾಷೆಯಲ್ಲಿ ಸ್ತ್ರೀ ಪುರುಷರೆಂಬ ದೃಷ್ಟಿಯಿಂದ ಲಿಂಗವಿಂಗಡಣೆ ಮಾಡದೆ 'ಜೀವವುಳ್ಳ ಮತ್ತು ಜೀವವಿರದ' ಎಂಬ ದೃಷ್ಟಿಯ ಲಿಂಗವಿಭಾಗವಿದೆ.[1] ಉತ್ತರ ಇಂಡೊ-ಆರ್ಯನ್ ಭಾಷೆ

[1] S. K. Chatterji, *The Origin and Development of Bengali Language*, 1920, p. 722.

ಗಳಲ್ಲೂ ಇದೇ ತೆರನಾದ ವರ್ಗೀಕರಣವಿದೆ. ಡಚ್, ಸ್ಕ್ಯಾಂಡಿನೇವಿಯನ್, ಸ್ಪ್ಯಾನಿಷ್ ಅಲ್ಗೊಂಕ್ವಿನ್, ಇಟಾಲಿಯನ್, ಹಿಂದಿ, ಅಸ್ಸಾಮಿನ ಮಣಿಪುರಿ, ಪೋರ್ಚುಗೀಸ್ ಮತ್ತು ಫ್ರೆಂಚ್ ಈ ಭಾಷೆಗಳಲ್ಲಿ ಎರಡೇ ಲಿಂಗಗಳು ಉಪಯೋಗವಾಗಿರುವುದುಂಟು. ಆದರೆ ರಷ್ಯನ್ ಭಾಷೆಯಲ್ಲಿ ಇರುವುದು ಮೂರು ಲಿಂಗಗಳು; ರಷ್ಯನ್ ಭಾಷೆಯ ಲಿಂಗವಿಭಾಗ ಸ್ತ್ರೀಪುರುಷ ಭೇದದ ವಿಭಾಗವಾಗಿದ್ದು ಲಿಂಗವನ್ನು ಸುಲಭವಾಗಿ ಗುರುತಿಸಲು ಸಹಕಾರಿಯಾಗಿದೆ; ಆ ಭಾಷೆಯಲ್ಲಿ ವ್ಯಂಜನಾಂತ ಪದಗಳು ಪುಲ್ಲಿಂಗ ಪದಗಳು, 'ಆ' ಕಾರಾಂತ ಪದಗಳು ಸ್ತ್ರೀಲಿಂಗ ಪದಗಳು, 'ಒ'ಕಾರಾಂತ ಪದ ಗಳು ನಪುಂಸಕಲಿಂಗದ ಪದಗಳು.

> No Indian language can offer us such a consistent and unerring grammatical machinery in gender, a system in which there is a perfect co-operation between grammatical gender and sex-based gender.[1]

ಚೀನಿ ಭಾಷೆಯಲ್ಲಿ ಲಿಂಗವ್ಯವಸ್ಥೆಯೆಂಬುದು ಪ್ರತ್ಯೇಕವಾಗಿಲ್ಲ. ಪ್ರಪಂಚದ ಮತ್ತೆ ಕೆಲವು ಭಾಷೆಗಳಲ್ಲಿ ಲಿಂಗವಿವೇಚನೆಯೇ ಇಲ್ಲ—ಅಷ್ಟು ದೂರ ಏಕೆ ಹೋಗಬೇಕು? ನಮ್ಮ ದ್ರಾವಿಡಭಾಷಾಪರಿವಾರದಲ್ಲಿಯೇ ಬ್ರಾಹೂಈ ಮತ್ತು ತೊದ ಭಾಷೆ ಗಳಲ್ಲಿಯೂ ಲಿಂಗವಿವೇಚನೆ ಇಲ್ಲ. ಜರ್ಮನ್, ಲ್ಯಾಟಿನ್, ಗ್ರೀಕ್, ಸಂಸ್ಕೃತ, ಮರಾಠಿ, ಗುಜರಾತಿ, ಇಂಗ್ಲಿಷ್—ಮುಂತಾದ ಭಾಷೆಗಳಲ್ಲಿ ಲಿಂಗಗಳು ಮೂರು ವಿಧ. ಕಾಶ್ಮೀರದ ಬಳಿಯ ಹಿಮಾಲಯ ಭಾಷೆಗಳಲ್ಲೂ ಮೂರು ಲಿಂಗಗಳಿವೆ. ಇಂಗ್ಲಿಷ್ ಭಾಷೆಯಲ್ಲಿ ಕೆಲವರು ಏಳು ವಿಧವಾದ ಲಿಂಗವಿಂಗಡಣೆ ಮಾಡಿರುವುದೂ ಉಂಟು; ಕನ್ನಡದ ಕೇಶಿರಾಜ ಒಂಬತ್ತು ಬಗೆಯ ಲಿಂಗ ಹೇಳಿದಂತೆ.

ಮತ್ತೆ ಕೆಲವು ಭಾಷೆಗಳಲ್ಲಿ ಲಿಂಗವಿಭಾಗ ತುಂಬ ನವಿರಾಗಿದೆ. ಗಿಲ್ಗಿಟ್ ಉತ್ತರಕ್ಕೆ ಬಳಕೆಯಲ್ಲಿರುವ ಬರುಷಸ್ಕಿ ಭಾಷೆಯಲ್ಲಿ ಲಿಂಗವಿಭಾಗ ನಾಲ್ಕು ವಿಧವಾಗಿದೆ— ಸ್ತ್ರೀಲಿಂಗ, ಪುಲ್ಲಿಂಗ, ಜೀವವಿರುವುದು, ನಪುಂಸಕಲಿಂಗ.[2] ಆಫ್ರಿಕದ ಬಂಟೂ ಭಾಷೆಯಲ್ಲಿ ಸುಮಾರು ಇಪ್ಪತ್ತೈದರಿಂದ ಮೂವತ್ತರವರೆಗೆ ಲಿಂಗಗಳನ್ನು ವರ್ಗೀಕರಿಸ ಲಾಗಿದೆ. ಹೀಗೆ ಪ್ರಪಂಚದ ಭಾಷೆಗಳಲ್ಲಿ ಲಿಂಗವಿಂಗಡಣೆಯೇ ಇಲ್ಲದ ಭಾಷೆಗಳೂ, ಲಿಂಗವಿಂಗಡಣೆ ಅತ್ಯಂತ ಸೂಕ್ಷ್ಮತರವಾಗಿರುವ ಭಾಷೆಗಳೂ ಇವೆ. ಸ್ತ್ರೀ-ಪುರುಷರೆಂಬ ದೃಷ್ಟಿಯಿಂದ ಮಾಡಿದ ಲಿಂಗವರ್ಗೀಕರಣವನ್ನುಳ್ಳ ಭಾಷೆಗಳಲ್ಲಿ ಒಂದು ಪದ ಪುಲ್ಲಿಂಗವೋ, ಸ್ತ್ರೀಲಿಂಗವೋ ಎಂಬುದನ್ನು ಸ್ಪಷ್ಟವಾಗಿ, ಅಂದರೆ ವಾಚ್ಯವಾಗಿ ಯಾದರೂ ಹೇಳಬಹುದು, ಸೂಚ್ಯವಾಗಿ ಇಲ್ಲವೇ ಪರ್ಯಾಯವಾಗಿಯಾದರೂ ಹೇಳ

---

[1] *Turner Jubilele Volume* 1, p. 60.

[2] Lorimer, *The Burushaski Language*, 1935, p. 14–21.

ಬಹುದು. ಕನ್ನಡ ಭಾಷೆಯಲ್ಲಿ ಈ ಎರಡೂ ಬಗೆಯ ಅಭಿವ್ಯಕ್ತಿ ಇರುವುದು ಕಾಣು ತ್ತದೆ :

ಹುಡುಗ ಬಂದನು ＼ ಅವನು ಬಂದನು
ಹುಡುಗಿ ಬಂದಳು ＼ ಅವಳು ಬಂದಳು

ಇಂಗ್ಲಿಷ್ ಮತ್ತು ಇನ್ನೂ ಇತರ ಅನೇಕ ಭಾಷೆಗಳಲ್ಲಿ ಈ ಅನುಕೂಲಕರವಾದ ವ್ಯವಸ್ಥೆಯಿದೆ. ಆದರೆ ಕೆಲವು ಭಾಗಗಳಲ್ಲಿ ಹೀಗೆ ಇರುವುದಿಲ್ಲ. ಉದಾಹರಣೆಗಾಗಿ ಹೆಸರಿಸುವುದಾದರೆ ಅಸ್ಸಾಮಿನ ಲೈ (Lai) ಎಂಬ ಭಾಷೆಯಲ್ಲಿ ಲಿಂಗ ನಿರ್ದೇಶನ ಯಾವಾಗಲೂ ಸ್ಪಷ್ಟವಾಗಿಯೇ ಇರುತ್ತದೆ : ಪಥೀ ಎಂದರೆ ಗಂಡಸು, ನುಥೀ ಎಂದರೆ ಹೆಂಗಸು ; ಆದರೆ ಇಲ್ಲಿ ತರುಣ – ತರುಣಿ ಎಂಬಂತೆ ಮೇಲೆ ಹೇಳಿದ ಅನುಕೂಲವಿಲ್ಲ. ಆದರೂ ಲೈ ಭಾಷೆಯ ಈ ವ್ಯವಸ್ಥೆ ಭಾಷೆಯ ಮೂಲಸ್ಥಿತಿಯನ್ನು, ತೋರಿಸುತ್ತ ದೆಂದು ಪ್ರಾಜ್ಞರ ಅಭಿಪ್ರಾಯ :

Thus the representation of gender in this language (ie. lai) is explicit, and reveals a primitive stage in the development of gender in language.[1]

ಕೆಲವು ಭಾಷೆಗಳಲ್ಲಿ ಲಿಂಗಭೇದ ಸ್ತ್ರೀ-ಪುರುಷ ಭೇದವನ್ನು ಅನುಸರಿಸಿ ಇರುವುದಿಲ್ಲ. ಸಂಸ್ಕೃತ ಭಾಷೆಯಲ್ಲಿ ಒಂದೇ ಅರ್ಥ ಬರುವ ಮೂರು ಶಬ್ದಗಳು ಸಂದರ್ಭಕ್ಕೆ ತಕ್ಕಂತೆ ಎರಡು ಮೂರು ಲಿಂಗವಾಗುವುದೂ ಉಂಟು. ಸಂಸ್ಕೃತದಲ್ಲಿ ಮಿತ್ರ ಎಂಬ ಶಬ್ದ ನಪುಂಸಕಲಿಂಗ, ಕಳತ್ರಪದವೂ ಅಷ್ಟೆ. ಪತ್ನೀ ಎಂಬ ಶಬ್ದ ಸ್ತ್ರೀಲಿಂಗ, ಆದರೆ ಧಾರಾಃ ಎಂಬ ಪದ ಪುಲ್ಲಿಂಗ ಬಹುವಚನ. ಹಸ್ತ, ವನ ಎಂಬೆರಡು ಪದಗಳು ಅಕಾರಾಂತ ಪದಗಳೇ ಆದರೂ ಅವು ಬೇರೆ ಬೇರೆ ಲಿಂಗಕ್ಕೆ ಸೇರಿದ ಪದಗಳು ; ಹಸ್ತ ಪುಲ್ಲಿಂಗ ಪದ, ವನ ನಪುಂಸಕಲಿಂಗ ಪದ. ತಟ (ತಟಃ) ತಟಾ, ತಟೀ—ಎಂಬ ಒಂದೇ ರೂಪದ ಈ ಪದಗಳು ಮೂರು ಬೇರೆ ಬೇರೆ ಲಿಂಗದಲ್ಲಿ ಇವೆ.

ಹೀಗೆ ಒಂದೇ ವಸ್ತುವನ್ನು ಕುರಿತ ಬೇರೆ ಬೇರೆ ಪದಗಳು ಬೇರೆ ಬೇರೆ ಲಿಂಗ ದಲ್ಲಿ ಇರುವುದು ಸಂಸ್ಕೃತದಲ್ಲಿ ತೀರ ಸಾಮಾನ್ಯ. ಆದರೆ ಹೀಗೆ ಒಂದೇ ಅರ್ಥದ ಪರ್ಯಾಯ ಪದಗಳು ಬೇರೆ ಬೇರೆ ಲಿಂಗಕ್ಕೆ ಸೇರುವುದು, ವೈಲಕ್ಷಣ್ಯದ ಪರಮಾವಧಿ ; ಪ್ರಕೃತಿಯಲ್ಲಿ ಯಾವ ಲಿಂಗವ್ಯವಸ್ಥೆ ಅಥವಾ ವಿಭಾಗ ಉಂಟೋ ಆ ವ್ಯವಸ್ಥೆ ಭಾಷೆಯ ಶಬ್ದಗಳಲ್ಲಿ ಇಲ್ಲ. ಈ ವಿಭಾಗ ಉಳಿದ ಭಾಷೆಗಳಲ್ಲಿ ಇರುವಂತೆ ಇಲ್ಲಿಯೂ

[1] Siddeswar Varma, *Gender in Languages of India*, T J, Vol. 1, p. 90

ಇರಬೇಕಿತ್ತು ಎಂದು ಕೆಲವರಿಗೆ ತೋರಬಹುದು. ಆದರೆ ಅದು ಆ ಭಾಷೆಯ ನಿಯಮ.

ಜಗತ್ತಿನ ಹಲವು ಭಾಷೆಗಳಲ್ಲಿ ಇರುವ ಲಿಂಗವಿವೇಚನೆಯ ಈ ಹಿನ್ನೆಲೆಯಲ್ಲಿ ದ್ರಾವಿಡ ಭಾಷೆಗಳ ಲಿಂಗವ್ಯವಸ್ಥೆಯನ್ನು ಕುರಿತು ಪರಿಶೀಲಿಸುವುದು ಯೋಗ್ಯವಾಗಿ ತೋರುತ್ತದೆ. ದ್ರಾವಿಡದ ಲಿಂಗವ್ಯವಸ್ಥೆ ತುಂಬ ಸಿಕ್ಕು ಸಿಕ್ಕು. ಮೂಲದ್ರಾವಿಡದಲ್ಲಿ ಲಿಂಗವ್ಯವಸ್ಥೆಯಿತ್ತು. ಅದು ಮೇಲುವರ್ಗ–ಕೆಳವರ್ಗವೆಂದು ಇರ್ತೆರ. ಪುಂಸ್ತ್ರೀ ನಪುಂಸಕವೆಂಬುದು ಅನಂತರ. ದ್ವಿವಿಧದಿಂದ ತ್ರಿವಿಧ ವರ್ಗೀಕರಣ ಬೆಳೆಯಿತು. ಬ್ರಾಹೂಈ ತೊದಗಳಲ್ಲಿ ಲಿಂಗವ್ಯವಸ್ಥೆಯಿಲ್ಲ. ತಮಿಳು ಕನ್ನಡಗಳಲ್ಲಿ ತ್ರಿವಿಧ. ಉಳಿದ ಭಾಷೆಗಳಲ್ಲಿ ದ್ವಿವಿಧ. ಇದನ್ನು ವಿವರವಾಗಿ ನೋಡೋಣ: ಇಂದು ಎರಡು ದ್ರಾವಿಡ ಭಾಷೆಗಳನ್ನು ಬಿಟ್ಟು ಉಳಿದ ಎಲ್ಲ ದ್ರಾವಿಡ ಭಾಷೆಗಳಲ್ಲೂ ಲಿಂಗವ್ಯವಸ್ಥೆಯಿದೆ. ತೀರ ತೆಂಕಣ ಭಾರತದಲ್ಲಿ ಇರುವ ನೀಲಗಿರಿಯ ತೊದಭಾಷೆಯಲ್ಲಿ ಲಿಂಗವ್ಯವಸ್ಥೆಯಿಲ್ಲ. ಇದಕ್ಕೆ ಕಾರಣವೇನೋ ತಿಳಿಯದು. ಬಹುಶಃ ಈ ಭಾಷೆಯ ಬೆಳವಣಿಗೆಯ ಪ್ರಾರಂಭ ದಶೆಯಲ್ಲೇ ಈ ಲಿಂಗವ್ಯವಸ್ಥೆ ಕಳೆದು ಹೋಗಿರಬಹುದು. ಆದರೆ ಇದನ್ನು ಸ್ಪಷ್ಟವಾಗಿ ತಿಳಿಯಲು ಅಂತರ ಬಾಹ್ಯ ಪ್ರಮಾಣಗಳಾವುವೂ ಇಲ್ಲ.

ತೀರ ಉತ್ತರ ಭಾರತಕ್ಕೆ ಇರುವ, ಆದರೆ ಇಂದು ಪಾಕಿಸ್ತಾನಕ್ಕೆ ಸೇರಿರುವ ಭಾಗದ, ಬ್ರಾಹೂಈ ಭಾಷೆಯಲ್ಲೂ ಲಿಂಗವ್ಯವಸ್ಥೆಯಿಲ್ಲ. ಇದಕ್ಕೆ ಬ್ರಾಹೂಈ ಭಾಷೆಯ ಅಕ್ಕಪಕ್ಕದ ಇಂಡೊ-ಇರಾನೀ ಭಾಷೆಗಳ ಪ್ರಭಾವವೇ ಕಾರಣವೆಂದು ಕೆಲವರ ಅಭಿಪ್ರಾಯ. ಇಂಡೊ-ಯುರೋಪಿಯಾ ಭಾಷಾಪರಿವಾರದ ಮುಖ್ಯ ಶಾಖೆಗಳಲ್ಲಿ ಒಂದಾದ ಇಂಡೊ-ಇರಾನೀ ಭಾಷಾಶಾಖೆಯ ಕೆಲವು ಇರಾನೀ ಭಾಷೆಗಳು ಪೂರ್ವ ಸ್ವರೂಪದಲ್ಲಿ ಇದ್ದ ಲಿಂಗವ್ಯವಸ್ಥೆಯನ್ನು ನೀಗಿಕೊಂಡಿವೆ. ಪರ್ಶಿಯನ್, ಕುರ್ದಿಷ್, ಬಲೂಚಿ ಭಾಷೆಗಳಲ್ಲಿ ಲಿಂಗವಿಂಗಡಣೆಯಿಲ್ಲ. ಇವುಗಳ ಪ್ರಭಾವದಿಂದ ಬ್ರಾಹೂಈ ಭಾಷೆಯಲ್ಲೂ ಲಿಂಗವ್ಯವಸ್ಥೆ ಇಲ್ಲ. ಈ ಎರಡು ಭಾಷೆಗಳನ್ನು ಬಿಟ್ಟು ಉಳಿದ ದ್ರಾವಿಡ ಭಾಷೆಗಳಲ್ಲಿನ ಲಿಂಗ ವೈಶಿಷ್ಟ್ಯವನ್ನು ವಿಮರ್ಶಿಸಬಹುದು. ವಾಸ್ತವವಾಗಿ ದ್ರಾವಿಡ ಭಾಷೆಗಳಲ್ಲಿ ಲಿಂಗ ಹಾಗೂ ವಚನವನ್ನು ಸೂಚಿಸುವುದಕ್ಕೆ ಒಂದೇ ಪ್ರತ್ಯಯ ವಿರುವುದರಿಂದ ಇವೆರಡನ್ನೂ ಪ್ರತ್ಯೇಕವಾಗಿ ವಿಮರ್ಶೆಮಾಡಲು ಆಗುವುದಿಲ್ಲ. ಆದರೆ ಬೇರೆ ಬೇರೆ ಭಾಷೆಗಳಲ್ಲಿ ಇವಕ್ಕೆ ಬೇರೆ ಬೇರೆ ಪ್ರತ್ಯಯಗಳಿವೆ.

.... in all Dravidian languages gender follows sex.[1]

ಎಂಬುದಾಗಿ ವಿದ್ವಾಂಸರೊಬ್ಬರು ಹೇಳಿದ್ದಾರೆ. ಆದರೆ ದ್ರಾವಿಡ ಭಾಷೆಗಳಲ್ಲಿನ ಲಿಂಗವಿಂಗಡಣೆ ಸ್ತ್ರೀ-ಪುರುಷರೆಂಬ ಲಿಂಗಭೇದವನ್ನು ಅವಲಂಬಿಸಿಲ್ಲ, ಅಥವಾ

[1] K. V. Subbayya, *A Comparative Grammer of Dravidian Languages*, IA, 40, 40, 184.

ಜೀವವುಳ್ಳ ಹಾಗೂ ಜೀವವಿಲ್ಲದ (ನಿರ್ಜೀವ) ವಸ್ತುಗಳೆಂಬ ವ್ಯತ್ಯಾಸವನ್ನು ಆಧರಿಸಿಲ್ಲ. ಛಾಕ್ಷುಷ ದ್ರಾವಿಡ ಭಾಷೆಗಳಲ್ಲಿ ಕನ್ನಡ ಮಲೆಯಾಳ ಭಾಷೆಗಳು, ಹಾಗೂ ತಮಿಳಿನ ಒಂದೆರಡು ವ್ಯಾಕರಣ ಗ್ರಂಥಗಳು, ಸಂಸ್ಕೃತ ಭಾಷೆಯ ಆದರ್ಶದ ಹಾದಿಯಲ್ಲಿ ಹೆಜ್ಜೆಯಿಟ್ಟವೆ. ಆದರೂ ತಮಿಳು, ತೆಲುಗು, ಗೋಂಡಿ, ಮತ್ತು ಪರ್ಜಿ ಭಾಷೆಗಳಲ್ಲಿ, ವ್ಯಾಕರಣದ ದೃಷ್ಟಿಯಿಂದ, ಲಿಂಗ ಕೇವಲ ಎರಡು. ತಮಿಳು ಭಾಷೆಯಲ್ಲಿ ಮಾಡಿರುವ ದ್ವಿವರ್ಗ ಇಂತಿದೆ :




ಐತಿಹಾಸಿಕ ಬೆಳವಣಿಗೆಯ ದೃಷ್ಟಿಯಿಂದ ವಿವೇಚಿಸಿ ಹೇಳುವುದಾದರೆ ದ್ರಾವಿಡ ಭಾಷೆಗಳಲ್ಲಿ ಮೊದಲು ಲಿಂಗವ್ಯವಸ್ಥೆ ಇರಲಿಲ್ಲ; ನಾಮಪದಗಳಲ್ಲಿ ಕೂಡ ಲಿಂಗಭೇದ ವಿರಲಿಲ್ಲ; ಲಿಂಗಭೇದ ನಾಮಪದಗಳಲ್ಲಿ ಮೊದಲು ಕಾಣಿಸಿಕೊಂಡು ಕ್ರಿಯಾಪದಗಳಲ್ಲಿ ತರುವಾಯ ತಲೆದೋರಿರಬೇಕು. ಅನಂತರ ಇದ್ದುದು ಎರಡೇ ಲಿಂಗವೆಂದು ಕಾಣುತ್ತದೆ. ನಾಗವರ್ಮನಿಗಿಂತ ಹಿಂದಿನ ಹಳೆಯ ಕನ್ನಡ ವ್ಯಾಕರಣಗಳು ಇದ್ದಿರಬಹುದೆಂದು ಹೇಳಲು ಆಧಾರಗಳಿವೆಯಾದರೂ, ಅವು ಯಾವೂ ಇಂದು ದೊರೆತಿಲ್ಲ. ಹೀಗಾಗಿ ಪೂರ್ವದ ಹಳಗನ್ನಡದ ಲಿಂಗವಿವಕ್ಷೆಯನ್ನು ಕುರಿತು ಖಚಿತವಾಗಿ ಏನನ್ನೂ ಹೇಳುವಂತಿಲ್ಲ. ಆದರೆ ನಾಗವರ್ಮ, ಕೇಶಿರಾಜ, ಭಟ್ಟಾಕಳಂಕ—ಈ ಮೂವರು ಕನ್ನಡ ವೈಯಾಕರಣರೂ ಸಂಸ್ಕೃತದ ಬೆಳಕಿನಲ್ಲೇ ಬೆಳೆದವರು, ಅದರ ದಾರಿಯಲ್ಲೇ ನಡೆದವರು. ಇದರ ಪರಿಣಾಮವಾಗಿ ಸಂಸ್ಕೃತ ವ್ಯಾಕರಣ ಅವರ ಆದರ್ಶವಾಯಿತು ; ಅವರು ಕನ್ನಡ ಭಾಷೆಯ ಸ್ವರೂಪವನ್ನು ಬಿಡಿಸುವಾಗ ಸಂಸ್ಕೃತದ ಮಾನದಿಂದಲೇ ಅಳೆಯತೊಡಗಿದರು. ಕನ್ನಡ ಭಾಷೆಯ ಉದ್ದ ಅಳತೆಯನ್ನು ಸಂಸ್ಕೃತ ಭಾಷೆಯ ಆಕಾರಕ್ಕೆ ಅನುಗುಣವಾಗಿ ಎಳೆದರು, ಇಲ್ಲವೇ ಕತ್ತರಿಸಿದರು. ಕನ್ನಡ ವ್ಯಾಕರಣದ ಪರಿಭಾಷೆಯ ಪದಗಳೆಲ್ಲಾ ಸಂಸ್ಕೃತ ಭಾಷೆಯ ಪದಗಳೇ ಆಗಿವೆ; ಕನ್ನಡ ವ್ಯಾಕರಣದ ಒಟ್ಟು ಚೌಕಟ್ಟು ಸಂಸ್ಕೃತ ವ್ಯಾಕರಣದ ಪಡಿನೆಳಲು ಇಲ್ಲವೇ ನಕಲು ಪ್ರತಿಯಾಗಿದೆ.

ಹೀಗಾಗಿ ಕನ್ನಡ ಭಾಷೆಯಲ್ಲೂ ಮೂರು ಬಗೆಯ ಲಿಂಗಗಳಿವೆಯೆಂದು ಹಿಂದಿನ ವ್ಯಾಕರಣಕಾರರು ನುಡಿದರು.

ಎಂಟನೆಯ, ಹತ್ತನೆಯ ಶತಮಾನದ ಕಾಲದಲ್ಲೂ ಈ ತ್ರಿವಿಧ ಲಿಂಗವಿಂಗಡಣೆಯನ್ನು ಅನುಸರಿಸಿರುವುದು ಕಾಣುತ್ತದೆ.[1] ಕೇಶಿರಾಜ ಈ ಮೂರರ ಜೊತೆಗೆ ಇನ್ನೂ ಆರು ಸೂಕ್ಷ್ಮ ವಿಭಾಗಗಳನ್ನು ಬಿಡಿಸಿದ್ದಾನೆ. ಕೇಶಿರಾಜನಿಗೆ ಕನ್ನಡ ಭಾಷೆ ಅಂಗೈ ಮೇಲಣ ನೆಲ್ಲಿಕಾಯಿ, ಕರತಲಾಮಲಕ ಫಲ; ಆತ ಕನ್ನಡ ಭಾಷೆಯ ಸಹಜ ಸ್ವರೂಪವನ್ನು ಸಂದರ್ಶಿಸಿದ್ದಾನೆ, ಇದರಲ್ಲಿ ಸಂದೇಹವಿಲ್ಲ. ಆದರೆ ಅವನು ಕನ್ನಡ ಭಾಷೆಯ ಮೂಲಚೂಲಗಳನ್ನು ನೋಡಲು ಸಂಸ್ಕೃತದ ಕನ್ನಡಕ ಹಾಕಿಕೊಂಡನು. ಆ ಬಣ್ಣದ ಕನ್ನಡಕ ಉಪಯೋಗಿಸದೆ ಬರಿಗಣ್ಣಿನಿಂದ ಕನ್ನಡನುಡಿಯ ಸೌಷ್ಠವವನ್ನು ಅವಲೋಕಿಸಿದ್ದರೆ ಕನ್ನಡದ ಇನ್ನೂ ಅನೇಕ ಬೆರಗುಗಳನ್ನು ಗುರುತಿಸಲೂ ಹಾಗೂ ಕನ್ನಡದ ನೈಜಸ್ವರೂಪವನ್ನು ಚೆನ್ನಾಗಿ ನೋಡಲೂ ಸಾಧ್ಯವಾಗುತ್ತಿತ್ತು. ಆದುದರಿಂದ ಕೇಶಿರಾಜ ಹೇಳುವ,

> ನೀನಱಿ ಕರ್ನಾಟಕದೊಳ್
> ಪೀನಂ ಸ್ತ್ರೀ ಪುಂ ನಪುಂಸಕೋಭಯ ಪುಂ ಸ್ತ್ರೀ ।
> ಸ್ತ್ರೀನಪ್ ಸಮಸ್ತವಾಚ್ಯಾ
> ನೂನಾವ್ಯಯವೆಂದು ಲಿಂಗಮೊಂಬತ್ತು ತೆಱಂ ॥[2]

ಎಂಬ ಒಂಬತ್ತು ವಿಧವಾದ ಲಿಂಗವಿಂಗಡಣೆ ಕನ್ನಡಕ್ಕೆ ಅನಗತ್ಯ, ಅಸಹಜ. ಈ ಸಂದರ್ಭದಲ್ಲಿ ಜೂಲ್ಸ್‌ಬ್ಲಾಕನ ಮಾತುಗಳನ್ನು ನೆನಪಿಗೆ ತಂದುಕೊಳ್ಳಬಹುದು.

> .... eventhough the grammers of Kannada have borrowed from Sanskrit the three fold division in masculine, feminine and neuter, it is not the same with Tamil and Telugu.[3]

ಈ ಸೂಚನೆ ಸಮರ್ಪಕವಾಗಿದೆ.

ಚಾಕ್ಷುಷ ಭಾಷೆಗಳಾದ ತಮಿಳು ಮತ್ತು ತೆಲುಗು ಭಾಷೆಗಳ ವ್ಯಾಕರಣಕಾರರ ವಿವರಣೆಯನ್ನು ಇಲ್ಲಿ ಅಗತ್ಯವಾಗಿ ಪರಿಭಾವಿಸಬೇಕು. ತೆಲುಗು ಭಾಷೆಯ ವೈಯಾಕರಣರು ಮಹತ್ ಮತ್ತು ಅಮಹತ್ ಎಂದು ಇರ್ತೆರನಾಗಿ ಲಿಂಗವನ್ನು ವಿಭಾಗಿಸಿದ್ದಾರೆ. ಈ ಮಹತ್ – ಅಮಹತ್ ಎಂಬ ಶಬ್ದಗಳು ವಾಸ್ತವವಾಗಿ ಸಂಸ್ಕೃತ ಭಾಷೆಯ ಶಬ್ದಗಳೇ ಆದರೂ, ಇಲ್ಲಿನ ಲಿಂಗವಿವೇಚನೆ ಮಾತ್ರ ದ್ರಾವಿಡ ಭಾಷಾ ದೃಷ್ಟಿಗೆ ಅನುಗುಣವಾಗಿದೆ. ಅಲ್ಲದೆ ಇದಕ್ಕೆ ಸಂಬಂಧಪಟ್ಟಂತೆ ಇಲ್ಲಿ ಬರುವ ಒಂದೆರಡು ಅಂಶಗಳು ಗಮನಾರ್ಹವಾಗಿವೆ. ಸ್ತ್ರೀ-ಪುರುಷ ಎಂಬ ಭೇದವನ್ನು ಅನುಸರಿಸದೆ

---

[1] G. S. Gai *Hgoki*, p. 107

[2] ಶಮದ, ಸೂತ್ರ ೯೮, ಪುಟ ೧೦೩

[3] *GSODLS*, J. B. p. 5,

ಮೇಲು – ಕೆಳವರ್ಗವೆಂಬ ವಿಭಾಗಾನುಸಾರಿಯಾದ ಈ ಮಹತ್ ಮತ್ತು ಅಮಹತ್ ಎಂಬ ಎರಡು ವಿಭಾಗಗಳಲ್ಲೂ ಬಹುವಚನದಲ್ಲಿ ಸ್ತ್ರೀ-ಪುಲ್ಲಿಂಗಗಳಲ್ಲಿ ಸಮಾನವಾಗಿರುವ ಪದಗಳಿದ್ದರೂ, ಏಕವಚನದಲ್ಲಿ ಹಾಗಿಲ್ಲ. ಏಕವಚನದಲ್ಲಿ ಸ್ತ್ರೀಲಿಂಗ ಹಾಗೂ ನಪುಂಸಕಲಿಂಗಗಳಿಗೆ ಒಂದೇ ಪದವನ್ನು ಉಪಯೋಗಿಸುವರು; ಅಂದರೆ ಸ್ತ್ರೀ ವಾಚಕ ಪದ ಏಕವಚನದಲ್ಲಿರುವಾಗ ಅಮಹತ್ ವರ್ಗದೊಡನೆ ಸೇರುತ್ತದೆ. ಅದಿ- ಎಂಬ ಒಂದೇ ಪದ ಅದು ಮತ್ತು ಅವಳು ಎಂಬ ಎರಡು ಅರ್ಥ (ಪದ)ಗಳಿಗೂ ಅನ್ವಯವಾಗುತ್ತದೆ.

ಈ ಕೆಲವು ಉದಾಹರಣೆಗಳನ್ನು ಗಮನಿಸಿ:

| | ಮಹತ್ ವರ್ಗ | | ಅಮಹತ್ ವರ್ಗ |
|---|---|---|---|
| ಏಕವಚನ ಪುಲ್ಲಿಂಗ | ವಾಂಡು > ವಾಡು (= ಅವನು) | ಏಕವಚನ ಸ್ತ್ರೀಲಿಂಗ | ಅದಿ = (೧) ಅದು (೨) ಅವಳು |
| ,, | ಮಂಚಿವಾಡು (= ಒಳ್ಳೆಯವನು) | ,, | ಮಂಚಿದಿ = (೧) ಒಳ್ಳೆಯದು (೨) ಒಳ್ಳೆಯವಳು |
| ,, | ವಾನೀ (ಕಿ) (= ಅವನಿಗೆ) | ,, | ದಾನಿ (ಕಿ) = (೧) ಅದಕ್ಕೆ (೨) ಅವಳಿಗೆ |

ಆದರೆ ಬಹುವಚನದಲ್ಲಿ ಇರುವಾಗ ಮಾತ್ರ ಸ್ತ್ರೀಲಿಂಗ, ತೆಲುಗು ಭಾಷೆಯಲ್ಲಿ, ಮಹತ್ ಜಾತಿಗೇ ಸೇರುತ್ತದೆ. ಹವ್ಯಕ ಕನ್ನಡ ಹಾಗೂ ಮಲೆನಾಡ ಗೌಡ ಕನ್ನಡ ದಲ್ಲೂ ಹೀಗೆಯೇ ಇದೆ. ಪರ್ಜಿ ಭಾಷೆಯಲ್ಲಿ ಇರುವ ಲಿಂಗವ್ಯವಸ್ಥೆ ಇಂತಿದೆ. ಬಸ್ತಾರಿನ ಪರ್ಜಿ ಭಾಷೆಯಲ್ಲಿ ಕೇವಲ ಪುಲ್ಲಿಂಗ – ನಪುಂಸಕ ಎಂಬ ಎರಡೇ ಲಿಂಗ ವಿರುವುದು ಕಾಣುತ್ತದೆ:

> Parji has normally two genders, Masculine and Neuter. Nouns denoting men are masculine, nouns denoting women and all other nouns are neuter. Neuter also are nouns expressing all supernatural beings, including gods and godesses ![1]

ಆದರೆ ಪರ್ಜಿ ಭಾಷೆಯಲ್ಲೂ ಹಿಂದೆ ಮೂರು ಲಿಂಗಗಳು ಇದ್ದಂತೆ ಕಾಣುತ್ತದೆಯೆಂದು ಬಲ್ಲಿದರ ಭಾವನೆ. ಉದಾಹರಣೆಗೆ ಸ್ತ್ರೀಯರ ಬಹುವಚನ ಪ್ರತ್ಯಯವಾದ – ಅಳ್ ಪ್ರತ್ಯಯದ ಸವೆದ ರೂಪವಾದ – ಅಲ್ ಎಂಬ ಪ್ರತ್ಯಯ ಪರ್ಜಿ ಭಾಷೆಯಲ್ಲಿ ಇಂದಿಗೂ ಬಳಕೆಯಲ್ಲಿ ನಿಂತಿದೆ:

---

[1] *The Parji Language*, p. 9.

ಪೊದಲ್ (= ಅತ್ತೆ) ; ಚಾಲಲ್ (= ತಂಗಿ)
ಅಯಲ್ (= ಹೆಂಗಸು) ; ಕೇತಲ್ (= ವಿಧವೆ)
ಮುರ್ತಲ್ (= ಮುದುಕಿ)

ಈ ಆಧಾರಗಳಿಂದ ಪೂರ್ವ ಪರ್ಜಿ ಭಾಷೆಯಲ್ಲಿ ತ್ರಿವಿಧ ಲಿಂಗವಿಂಗಡಣೆ ಇದ್ದಿತೆಂದು ಹೇಳಲು ಸಾಧ್ಯವಿದೆ. ಆದರೆ ಕೆಲವು ದ್ರಾವಿಡ ಭಾಷೆಗಳಲ್ಲಿ ಮೂರು ಲಿಂಗ ವಿಭಾಗ ವಿರುವುದರಿಂದ ಮೂಲದ್ರಾವಿಡದಲ್ಲೂ ಅದರಂತೆಯೇ ಇದ್ದಿತೆಂದು ಹೇಳುವುದು ಕಷ್ಟ ವಾಗುತ್ತದೆ.

> .... the three gender system of Tamil Kannada originally prevailed in the rest of Dravidian, and the introduction of two gender system is an innovation of Telugu and the Central Dravidian languages.[1]

ಎಂಬ ಹೇಳಿಕೆಯನ್ನು ಒಪ್ಪಲು ಹಿಂಜರಿಯಬೇಕಾಗುತ್ತದೆ, ಇದನ್ನು ಪೋಷಿಸುವ ಇತರ ಸಬಲ ಆಧಾರಗಳು ಸಿಗುವ ತನಕ.

ದ್ರಾವಿಡ ಗುಂಪಿನ ಗೋಂಡಿ ಭಾಷೆಯಲ್ಲೂ, ಕುರುಖ್ ಭಾಷೆಯಲ್ಲೂ ಮತ್ತು ಕುಈ ಭಾಷೆಯಲ್ಲೂ ಸ್ತ್ರೀಲಿಂಗ ಅಮಹತ್ ಜಾತಿಗೇ ಸೇರುತ್ತದೆ. ಕನ್ನಡದ ಮುಖ್ಯ ಉಪಭಾಷೆಯಾದ ಹವ್ಯಕರ ಭಾಷೆಯಲ್ಲೂ ಪ್ರಥಮಪುರುಷ ಬಹುವಚನದಲ್ಲಿ ಲಿಂಗ ವಿಭಾಗ ತೆಲುಗಿನಂತೆಯೇ ಇದೆ; ಈ ಉಪಭಾಷೆಯಲ್ಲಿ, ಏಕವಚನದಲ್ಲಿ, ಸ್ತ್ರೀವಾಚಕ ಅಮಹತ್ ಗುಂಪಿಗೆ ಸೇರುತ್ತದೆ. ಕನ್ನಡದಿಂದ ಮೊದಲಿನಿಂದಲೂ ಪ್ರತ್ಯೇಕವಾಗಿ ನಿಂತು ಬೆಳೆದು ಬಂದಿರುವುದರಿಂದ, ಹವ್ಯಕ ಕನ್ನಡವು ಹಲವು ಹಳೆಯ ರೂಪ ಗಳನ್ನೂ, ವರ್ಗೀಕರಣದ ಪ್ರಾಚೀನ ವಿಧಾನ - ವಿಭಾಗಗಳನ್ನೂ ಉಳಿಸಿಕೊಂಡು ಬಂದಿದೆ. ಕುಈ ಭಾಷೆಯಲ್ಲಂತೂ ಕೆಳವರ್ಗಕ್ಕೆ ಸೇರಿದ ನಾಮಪದಗಳಿಗೆ ಬಹುವಚನ ರೂಪವೇ ಇಲ್ಲ. ಗೋಂಡಿ ಭಾಷೆಯಲ್ಲಿ, ಪರ್ಜಿ ಭಾಷೆಯಂತೆ, ದೇವ - ದೇವತೆಗಳನ್ನೂ ಈ ಕೆಳವರ್ಗದ, ಅಂದರೆ ಅಮಹತ್ ಅಥವಾ ಅಹಜ್ಞಾಣ್ಣೆ ವರ್ಗದ ಗುಂಪಿಗೇ ಸೇರಿಸು ವರು. ಗೋಂಡಿ ಭಾಷೆಯಲ್ಲಿರುವ ಈ ಕ್ರಮವನ್ನು ಕುರಿತು ವಿದ್ವಾಂಸರು 'ಇದು ದ್ರಾವಿಡ ಭಾಷೆಯ ಮೂಲ ಸ್ಥಿತಿಯನ್ನು ಬಿಂಬಿಸುತ್ತದೆ' ಎಂದು ಹೇಳಿದ್ದಾರೆ :

> Even the deities are classed with the inferior category. It is beyond doubt that Goṇḍ has preserved the oldest state.[2]

ಈ ಹೇಳಿಕೆಯನ್ನು ಪೋಷಿಸುವ ಆಧಾರಗಳು ಅಧಿಕ ಸಂಖ್ಯೆಯಲ್ಲಿ ಇಲ್ಲದಿದ್ದರೂ,

---

[1] *The parji Language*, ಥಾಮಸ್ ಬರೊ, ಎಸ್. ಭಟ್ಟಾಚಾರ್ಯ, ಪುಟ. ೯
[2] *The GSODLS*, ಜೂಲ್ಸ್‌ಬ್ಲಾಕ್ (೩೦), ಪುಟ ೭

ಗೋಂಡಿ ಭಾಷೆಯು ಈ ಲಿಂಗ ವಿಭಾಗ ಮೂಲ ದ್ರಾವಿಡದ ಪ್ರಾರಂಭ ಸ್ಥಿತಿಯನ್ನು ಪ್ರತಿನಿಧಿಸಿದ್ದರೆ ಅಸಂಭಾವ್ಯವೇನೂ ಅಲ್ಲ.

ಕನ್ನಡ ಭಾಷೆಯು ಹೊರತಾಗಿ, ತೆಲುಗು ಮತ್ತು ಇತರ ದ್ರಾವಿಡ ಭಾಷೆಗಳಲ್ಲಿ ಇರುವಂತೆ, ತಮಿಳು ಭಾಷೆಯಲ್ಲಿ ಮಹತ್ – ಅಮಹತ್ ವಿಭಾಗವೇ ಇದೆಯೆಂದು ತಿಳಿಸಿದೆ. ಆದರೆ ಅಲ್ಲಿ ಈ ವಿಂಗಡಣೆಗೆ ಸಂಸ್ಕೃತ ಪದಗಳನ್ನು ತೆಲುಗಿನಂತೆ ಉಪಯೋಗಿಸದೆ (ದ್ರಾವಿಡದ) ತಮಿಳು ಭಾಷೆಯ ಪದಗಳನ್ನೇ ಬಳಸಲಾಗಿದೆ. ಹಾಗೆ ನೋಡುವುದಾದರೆ ತಮಿಳು ಭಾಷೆಯು ಪಾರಿಭಾಷಿಕ ಪದಗಳಲ್ಲಿ ಬಹುಮಟ್ಟಿಗೆ ದ್ರಾವಿಡದ ಪದಗಳೇ ಇವೆಯೆಂಬುದನ್ನು ನೋಡಬಹುದು.

ಉದಾಹರಣೆ :

| | |
|---|---|
| ಸ್ವರ (ಸಂ) | ಉಯಿರ್ ಎಟುತ್ತು (ತ) |
| ವ್ಯಂಜನ (ಸಂ) | ಮೆಯ್ ಎಟುತ್ತು (ತ) |
| ಸಂಧಿ (ಸಂ) | ಪುಣರ್ಚಿ (ತ) |
| ವ್ಯಾಕರಣ (ಸಂ) | ಇಲಕ್ಕಣಮ್ (ತ) |

ಲಿಂಗವನ್ನು ತಮಿಳು ಭಾಷೆಯಲ್ಲಿ, ಈ ಮೊದಲೇ ತಿಳಿಸಿರುವಂತೆ, ಉಯಿರ್‌ತಿಣ್ಣೈ ಮತ್ತು ಅಹಜೀಣ್ಣೈ—ಅಂದರೆ ಉದಾತ್ತವರ್ಗ ಹಾಗೂ ಅನುದಾತ್ತವರ್ಗ, ಅಥವಾ ಉತ್ತಮ ಹಾಗೂ ಉತ್ತಮವಲ್ಲದ್ದು—ಎಂಬಂತೆ ವರ್ಗೀಕರಿಸಿದೆ. ತಮಿಳಿನ ಹಳೆಯ ವ್ಯಾಕರಣವಾದ ತೊಲ್ (=ಹಳೆಯ) ಕಾಪ್ಪಿಯಂ (=ಕಾವ್ಯತತ್ವ) ಎಂಬ, ಹೆಚ್ಚು ಕಡಿಮೆ ನಮ್ಮ ಕವಿರಾಜಮಾರ್ಗದಂತೆ ಇರುವ, ಕೃತಿಯಲ್ಲಿ ಈ ಇಬ್ಬಗೆಯ ವರ್ಗೀಕರಣವಿದೆ. ಮಾನವರೆಲ್ಲರೂ ಉಯರ್‌ತಿಣ್ಣೈ ಎಂಬ ವರ್ಗಕ್ಕೂ, ಉಳಿದುದು ಅಹಜೀಣ್ಣೈ ಎಂಬ ವಿಭಾಗಕ್ಕೂ ಸೇರುತ್ತಾರೆ.

ಬಹುಶಃ ಸಂಸ್ಕೃತದ 'ನಪುಂಸಕಲಿಂಗ'ದ ಪ್ರಭಾವದಿಂದ ಬಂದ ಕಲ್ಪನೆಯಾದ ಉಭಯಲಿಂಗಿಯನ್ನು ತಮಿಳಿನಲ್ಲಿ ಉಯರ್‌ತಿಣ್ಣೈ ವಿಭಾಗದಲ್ಲಿ ಸೇರಿಸುತ್ತಾರೆ; ತಮಿಳಿನಲ್ಲಿ ಇದನ್ನು 'ಪೇಡಿ' ಎನ್ನುವರು ; ಸಂಸ್ಕೃತದ ದೈವಮ್ ಪದದ ತದ್ಭವದಂತೆ ಇರುವ ತೆಯ್ವಮ್ ಎಂಬ ತಮಿಳು ಪದವೂ ಮತ್ತು ದೈವವೂ ಈ ಉಯರ್‌ತಿಣ್ಣೈ ವಿಭಾಗದಲ್ಲೇ ಸೇರುತ್ತದೆ. ಆದರೆ ಇದರಲ್ಲಿ ಮಾನವರೆಲ್ಲರೂ ಸೇರುವುದಿಲ್ಲ, ಒಂದೆರಡು ಪ್ರಮುಖ ಅಪವಾದಗಳಿವೆ. ಅಹಜೀಣ್ಣೈ ವರ್ಗಕ್ಕೆ ಸೇರಿದ ಕಲ್ಲು, ಹಕ್ಕಿ—ಮುಂತಾದ ನಿರ್ಜೀವ ಅಥವಾ ಸಾಮಾನ್ಯ ವಸ್ತುಗಳಂತೆ ಪಿಳ್ಳೈ (=ಮಗು) ಕೂಡ ಅದೇ ವರ್ಗಕ್ಕೆ ಸೇರುತ್ತದೆ.

Dravidian languages like Tamil are on the borderland of grammatical and sex-based gender. The Dravidian sex-concept, with reference to gender, is confined only to the

human, hence the Tamil gender has been aptly classified as Rational and irrational, though even here there is a little overlapping, for the Tamil words for 'boy' are to be taken as irrational, ie. neuter.[1]

ಮುಖ್ಯವಾಗಿ ದ್ರಾವಿಡ ಭಾಷೆಗಳಲ್ಲಿ ಮೇಲುವರ್ಗ—ಕೆಳವರ್ಗವೆಂಬ ಎರಡೇ ಜಾತಿಗಳಿದ್ದು, ಲಿಂಗವಿವಕ್ಷೆ ಇರುವುದು ಮೇಲುವರ್ಗದಲ್ಲಿ ಮಾತ್ರ. ಪ್ರಾಣಿಗಳು ಕೆಳವರ್ಗಕ್ಕೆ ಸೇರುವುದರಿಂದ ಅವುಗಳನ್ನು ಕುರಿತ ವಿವರಣೆಯಲ್ಲಿ ಗಂಡು-ಹೆಣ್ಣು ಎಂಬ ಭೇದವಿರುವುದಿಲ್ಲ. ಉದಾಹರಣೆಗಳನ್ನಿತ್ತು ಇದನ್ನು ಸ್ಪಷ್ಟಪಡಿಸಬಹುದು :

| ಕೆಳವರ್ಗ | ಮೇಲುವರ್ಗ |
|---|---|
| ಹಸು ಬಂತು | ಅವಳು ಬಂದಳು |
| ಎತ್ತು ಬಂತು | ಅವನು ಬಂದನು |
| ಗೂಳಿ ಬಂತು | ಮಗು ಬರುತ್ತದೆ |
| ಹೋರಿ ಬಂತು | ಮಗಳು ಬರುತ್ತಾಳೆ |
| ಎಮ್ಮೆ ಬಂತು | ಮಗ ಬರುತ್ತಾನೆ |
| ಕೋಣ ಬಂತು | ಹೆಂಗಸು ಬರುತ್ತಾಳೆ |
| ಕೋಳಿ ಬಂತು | ಗಂಡಸು ಬರುತ್ತಾನೆ |
| ನಾಯಿ ಬಂತು | ಅವರು ಬರುತ್ತಾರೆ |

ಈ ಎಲ್ಲ ದೃಷ್ಟಿಗಳಿಂದ ಮೂಲ ದ್ರಾವಿಡ ಭಾಷೆಯಲ್ಲಿ ಎರಡೇ ವರ್ಗಗಳಿದ್ದು, ನಿಜವಾದ ಲಿಂಗವಿವಕ್ಷೆ, ಸ್ತ್ರೀ ಪುರುಷವೆಂಬ ಭೇದ, ಮಹತ್ ಅಥವಾ ಮೇಲುವರ್ಗದಲ್ಲಿ ಮಾತ್ರ ಇದ್ದಿತೆಂದು ಇಂದು ಇರುವ ಅಲ್ಪ ಸ್ವಲ್ಪ ಆಧಾರಗಳ ಬೆಂಬಲದಿಂದ ಧಾರಾಳವಾಗಿ ಹೇಳಬಹುದು. ಅದರಲ್ಲಿಯೂ ಕನ್ನಡದ ವಿಚಾರವಾಗಿ ಈ ಮಾತನ್ನು ಅನುಮಾನವಿಲ್ಲದೆ ಹೇಳಬಹುದು ;

The gender of Old Kannada generally seem to agree with the natural sex-differentiations except in the case of animals which are brought under neuter gender, perhaps due to an obsessed view that the animals have not the power of rationalization.[2]

ಆರ್ಯವರ್ಗದ ಭಾಷೆಗಳಲ್ಲಿ ಲಿಂಗ ಸಾಮಾನ್ಯವಾಗಿ ಶಬ್ದಗಳನ್ನು ಅನುಸರಿಸುತ್ತದೆ. ಆದರೆ ದ್ರಾವಿಡ ಭಾಷೆಗಳಲ್ಲಿ ಹಾಗಿಲ್ಲ. ಒಂದು ದೃಷ್ಟಿಯಿಂದ ಈ ದ್ರಾವಿಡ ಭಾಷಾ

---

[1] *Turner Jubilee Volume* 1, p. 98.

[2] *HGOKI*, p. 21.

ಪರಿವಾರದಲ್ಲಿ ಸಾಧಾರಣವಾಗಿ ಲಿಂಗವಿವಕ್ಷೆಯೇ ಇಲ್ಲವೆನ್ನಬಹುದು. ಒಂದು ವೇಳೆ ಅದು ಇದ್ದಾಗಲೂ ಅರ್ಥಾನುಸಾರಿಯಾಗಿ ಮೇಲು-ಕೀಳು ಎಂಬ ಭೇದವಿರುತ್ತದೆ. ಅಂದರೆ ಲಿಂಗ ನಿರ್ಣಯ ಮಾಡುವಾಗ ದ್ರಾವಿಡರು ಒಂದು ಶಬ್ದದಿಂದ ಸೂಚಿತವಾದ ವಸ್ತು ಸಜೀವವೇ, ನಿರ್ಜೀವವೇ ? ಗಂಡೇ ಅಥವಾ ಹೆಣ್ಣೇ ?—ಎಂಬುದಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಡದೆ ಬುದ್ಧಿಶಕ್ತಿಯುಳ್ಳದ್ದೇ ಅಥವಾ ಇಲ್ಲದ್ದೇ ಎಂಬ ಭೇದಕ್ಕೆ ಮಾತ್ರ ಮಹತ್ವವಿತ್ತಿದ್ದಂತೆ ತೋರುತ್ತದೆ.

# ನಿಷೇಧಾರ್ಥಕ ಪ್ರತ್ಯಯಗಳು

ಕನ್ನಡ ಅಥವಾ ಇತರ ದ್ರಾವಿಡ ಭಾಷೆಗಳಲ್ಲಿ ಇಂದು ಇರುವ ಮತ್ತು ಹಿಂದೆ ಇದ್ದು ಕಾಲಾಂತರದಲ್ಲಿ ಬಿದ್ದುಹೋಗಿರಬಹುದಾದ ನಿಷೇಧಾರ್ಥಕ ಪ್ರತ್ಯಯಗಳ ವಿಚಾರದಲ್ಲೂ ವಿದ್ವಾಂಸರಲ್ಲಿ ವಿಪುಲವಾದ ಚರ್ಚೆ ನಡೆದಿದೆ. ವಾಸ್ತವವಾಗಿ ದ್ರಾವಿಡ ಭಾಷೆಗಳಲ್ಲಿ ನಿಷೇಧಾರ್ಥಕ ಪ್ರತ್ಯಯಗಳು ಸಮೃದ್ಧವಾಗಿ ಇಲ್ಲದಿದ್ದರೂ, ಸಾಕಷ್ಟು ಸಂಖ್ಯೆಯಲ್ಲಿವೆ.

> "In Dravidian words expressing the negation are not lacking"[1]

ಎಲ್ಲ ದ್ರಾವಿಡಭಾಷೆಗಳಲ್ಲೂ ವಿಧಿ ಮತ್ತು ಸಂಭಾವನಾ ರೂಪಗಳು ಇರುವಂತೆ ಈ ನಿಷೇಧರೂಪವು ವಿಶೇಷವಾಗಿ ಬಳಕೆಯಲ್ಲಿ ನಿಂತಿದೆ.

ದ್ರಾವಿಡ ಭಾಷೆಗಳಲ್ಲಿ, ಸಾಮಾನ್ಯವಾಗಿ, ನಿಷೇಧರೂಪಗಳನ್ನು ಧಾತು ಅಥವಾ ಪ್ರಕೃತಿಗಳಿಗೆ ಪ್ರತ್ಯಯಗಳನ್ನು ಸೇರಿಸುವುದರ ಮೂಲಕ ಸಿದ್ಧಿಮಾಡುತ್ತೇವೆ. ಸಂಸ್ಕೃತದಲ್ಲಿ ಇರುವಂತೆ ದ್ರಾವಿಡ ಭಾಷೆಗಳಲ್ಲಿ ನಿಷೇಧಾರ್ಥಕ ಪ್ರತ್ಯಯ ಪ್ರತ್ಯೇಕವಾಗಿ ನಿಲ್ಲುವುದಕ್ಕಿಂತಲೂ ಪದಗಳಲ್ಲಿಯೇ ಬೆರತು ಹೋಗುವುದು ಹೆಚ್ಚು. ಹೊಸಗನ್ನಡದಲ್ಲೇನೋ ಅಲ್ಲ, ಇಲ್ಲ, ಬೇಡ—ಎಂಬ ಪ್ರತ್ಯೇಕವಾದ ನಿಷೇಧರೂಪಗಳುಂಟು.

> This concerns vocabulary. But besides, Dravidian has at its disposal a purely morphological means of expressing the negation, it is the intercolation of a vowel, generally a (some times reduced to zero) between radical and termination .....[2]

ಕೆಲವು ಉದಾಹರಣೆಗಳನ್ನಿತ್ತು ಈ ಹೇಳಿಕೆಯನ್ನು ಸ್ಪಷ್ಟಪಡಿಸಬಹುದು :

| | | | |
|---|---|---|---|
| ಸಂಸ್ಕೃತ : | ನ ಗಚ್ಛತಿ : | ಮಾ ಲಿಖ : | ನಹಿ ನಹಿ ರಕ್ಷತಿ |
| ಕನ್ನಡ : | ಅಟ್ಟಿಸಮು : | ಅಂಜಮೆ | |

---

[1] Jules Bloch, *The GSODLS*, p. 65

[2] *The GSODLS*, p. 66

| | | |
|---|---|---|
| | ಇರವೆ : | (< ಇರಾದೆ) |
| | ಕೊಡದು : | ನಂಬಲಿ |
| | ನೋಡೆವ್ : | ಪೋಗೆನ್ (>ಪೋಗೆ> ಹೋಗೆ) |
| | ಬಾರದು : | ಮಾಡೆನ್ |
| ಬ್ರಾಹೂಈ | ಬಿಸ್ಪಕ್ | (=ಅಡಿಗೆ ಮಾಡುವುದಿಲ್ಲ) |
| | ಅಫಟ್ | (=ನಾನಲ್ಲ) |
| | ಅವಟ್ | (=ಕೊಟ್ಟಿಲ್ಲ) |
| | ತಕೇನು | (=ನಾನು ಪಡೆಯುವುದಿಲ್ಲ) |
| | ತಾಕತಿ | (=ನೀವು ನಡೆದಿಲ್ಲ) |
| | ತ. ಮರಮ್ ಇಲ್ಲೈ; | ಕಂಡಿಲೇನ್ : ಕಾಣೇನ್ : ಶಯ್ಯಾದ |
| | ತೆಕೊಟ್ಟಲೇದು ; | ಕೊಟ್ಟಡಮುಲೇದು |
| | ವೀಡುಕಾದು : | ಜೀಯುನು : ಜೀಯುವು |
| | ಗುಹೋನ್ | (=ತೆಗೆದುಕೊಳ್ಳುವುದಿಲ್ಲ) |

ಆದುದರಿಂದ ನಿಷೇಧವೆಂಬುದು ದ್ರಾವಿಡ ಭಾಷೆಗಳಲ್ಲಿ ಒಂದು ವ್ಯವಸ್ಥಿತವಾದ ಕ್ರಿಯಾರೂಪವೆಂದು ಈ ಮೇಲೆ ಉದಾಹರಿಸಿದ ಹಲವು ರೂಪಗಳ ಆಧಾರದಿಂದ ತೀರ್ಮಾನಿಸಬಹುದು. ದ್ರಾವಿಡ ಭಾಷೆಗಳಲ್ಲಿ ಬಹಳ ಹಿಂದಿನಿಂದಲೂ ನಿಷೇಧರೂಪಗಳು ಇದ್ದುವು. ಅಷ್ಟೇ ಅಲ್ಲ ದ್ರಾವಿಡ ಭಾಷೆಗಳಲ್ಲಿ ನಿಷೇಧ ಪ್ರತ್ಯಯಗಳೇ ಬೇರೆ ಇವೆ. ನಿಷೇಧ ಪದಗಳು ಕ್ರಿಯಾಪದಗಳಿದ್ದಂತೆಯೇ ಹೊರತು ಅವು ಕ್ರಿಯಾ ವಿಶೇಷಣಗಳಲ್ಲ—They are not adverbs, but verbs. ಬ್ರಾಹೂಈ ಕುರುಖ್, ಮತ್ತು ಗೋಂಡೀ ಭಾಷೆಯ ಉಪಭಾಷೆಗಳು—ಈ ಭಾಷೆಗಳಲ್ಲಿ ಕಾಣುವ ನಿಷೇಧಾರ್ಥಕ ಪದಗಳು ಕ್ರಿಯಾ ವಿಶೇಷಣಗಳಾಗಿವೆ ನಿಜ. ಆದರೆ ಅದಕ್ಕೆ ಬೇರೆ ಕಾರಣಗಳುಂಟು. ಆ ಭಾಷೆಗಳಲ್ಲಿ ಕಾಣುವ ನಿಷೇಧಾರ್ಥಕ ಕ್ರಿಯಾ ವಿಶೇಷಣಗಳು ಪರಭಾಷೆಯ, ವಿಶೇಷವಾಗಿ ಇಂಡೋ ಆರ್ಯನ್ ಭಾಷೆಗಳ ಪದಗಳು. ಅನ್ಯಭಾಷೆಯ ಪ್ರಭಾವವೇ ಆ ಪದಗಳು ಕಾಣಿಸಿದುದಕ್ಕೆ ಪ್ರಧಾನ ಕಾರಣ.

> At any rate the result is that in Tamiḻ and Kannaḍa the negation is expressed in a manner to be confounded with the affirmation. In these languages, in fact, there is no formal difference between a pronominalised noun and a nagative verb : Kānēn may signify one principle, 'I have eyes' as also, 'I do not see' so it is not extraordinary that the negative formation should tend to reduce it self.[1]

[1] *The GSODLS*, p. 67.

17

ಕನ್ನಡದ ಕೆಲವು ನಿಷೇಧಾರ್ಥಕ ಪ್ರತ್ಯಯಗಳು ಇಂತಿವೆ :

—ಅ—,ಅ,—ಇಲ್ಲ ತವನಿಧಿ (ವಡ್ಡಾ, ಪು. ೧೭)
—ಅದೆ, (ನೋಡದೆ—ಈಯದೆ)—ಅದೆ,—ಅಲ್ಲಿ,—ಅಂ, ತಿನ್ನಂ, ಕೊಳ್ಳಂ
—ಎನ್,—ಎ,—ಅದೆ, ಕೊಳ್ಳೆ (ವಡ್ಡಾ, ಪುಟ. ೧೭) ತಿನ್ನದ, ಕೊಳ್ಳದ

| | | |
|---|---|---|
| ಅಲ್ಲಂ ಅಲ್ಲೈ, ಅಲ್ಲೆನ್ | (ಪು. ಏಕ. ವಚನ) | >/-ಅಲ್/ |
| ಅಲ್ಲಳ್ | (ಸ್ತ್ರೀ ಏಕವಚನ) | |
| ಅಲ್ಲ, ಅಲ್ಲದು, ಅಲ್ತು | (ನಪುಂ ಏವಚನ) | |
| ಅಲ್ಲರ್ ಅಲ್ಲಿರ್ ಅಲ್ಲೆವು | (ಬಹುವಚನ) | |

ಹಳಗನ್ನಡವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ವಿವೇಚಿಸಿದರೆ, ಹಳಗನ್ನಡದಲ್ಲಿ ಸಾಮಾನ್ಯವಾಗಿ ಧಾತುಗೆ /-ಅ/, /-ಅದೆ/-ಎಂಬ ಪ್ರತ್ಯಯಗಳೂ, ಕ್ರಿಯಾಪದಕ್ಕೆ /-ಅಲ್ಲಂ/, /-ಇಲ್ಲ/-ಎಂಬ ಪ್ರತ್ಯಯಗಳೂ ಸೇರುವುದರಿಂದ ನಿಷೇಧಕ್ರಿಯೆ ವ್ಯಕ್ತವಾಗುತ್ತಿತ್ತೆಂದು ತಿಳಿದು ಬರುತ್ತದೆ. /-ಅಲ್ತು/ ಎಂಬ ಪ್ರತ್ಯಯವು ಅಪರೂಪವಾಗಿ ನಿಷೇಧಾರ್ಥದಲ್ಲಿ ಕ್ರಿಯಾಪದಕ್ಕೆ ಸೇರುತ್ತಿತ್ತು :

ನೋಡಿದನಲ್ತು (ಪುಲ್ಲಿಂಗ)
ನೋಡಿದಳಲ್ತು (ಸ್ತ್ರೀಲಿಂಗ)
ನೋಡಿದುದಲ್ತು (ನಪುಂಸಕಲಿಂಗ)

—ಅಲ್ ಎಂಬುದು ಒಂದು ಪ್ರತಿಷೇಧದ ವಿಧಿಸೂಚಕಪ್ರತ್ಯಯವಾಗಿತ್ತು ಹಳಗನ್ನಡದಲ್ಲಿ (ಶಾಂತಿ ಪು ೪-೨೪). ಇವಲ್ಲದೆ ಹಳಗನ್ನಡದಲ್ಲಿ ಕೆಲವು ನಿಷೇಧರೂಪಗಳು ಲಿಂಗ-ವಚನಗಳೆಂಬ ವಿವಕ್ಷೆಯಿಲ್ಲದೆ ಕೇವಲ ಅಧ್ಯಾಹಾರದಂತೆ ಪ್ರಯೋಗಗೊಂಡಿರುವುದೂ ಕಾಣುತ್ತದೆ. ಉದಾಹರಣೆಗೆ ಆಗ, ಬೇಡ, ಸಲ್ಲ—ಎಂಬ ನಿಷೇಧರೂಪಗಳನ್ನು ನೋಡಬಹುದು ; ಇವು ಲಿಂಗವಚನಾದಿ ವಿವಕ್ಷೆಗೆ ಒಳಗಾಗದೆ ಅವ್ಯಯದಂತೆ ಬಳಕೆಯಾಗುತ್ತಿದ್ದುವು.—ಅಮೆ ಎಂಬ ನಿಷೇಧಾರ್ಥಕ ಭಾವನಾಮ ಪ್ರತ್ಯಯವು ಹಳಗನ್ನಡ ಕಾವ್ಯಗಳಲ್ಲಿ ಪ್ರಯೋಗವಾಗಿದೆ. ಉದಾ : ಆದಿ.ಪು—೫-೯೫, ಪಂಪಭಾ—೧-೫೬ ಧರ್ಮಾಮೃತ-೮-೯೪, ಮತ್ತು ಹಿಂದೆಯೇ ಹೇಳಿರುವಂತೆ ಕನ್ನಡದ ಎರಡು ನಿಷೇಧರೂಪಗಳಾದ ಇಲ್ಲ ಮತ್ತು ಅಲ್ಲ ಎಂಬ ಪದಗಳಿಗೆ ಸಂಸ್ಕೃತದಲ್ಲಿ ಇಲ್ಲದ ಒಂದು ಹೆಚ್ಚಿನ ಅರ್ಥವ್ಯಕ್ತಿ ಇರುವುದನ್ನು ವಿಶೇಷವಾಗಿ ಗುರುತಿಸಬೇಕು. ಇವುಗಳಲ್ಲಿ ಇಲ್ಲ ಎಂಬ ನಿಷೇಧರೂಪ ಗುಣದ ಅಭಾವವನ್ನು ಅಭಿವ್ಯಕ್ತಪಡಿಸಿದರೆ ಅಲ್ಲ ಎಂಬ ಪದ ವಸ್ತುವಿನ ಅಸ್ತಿತ್ವದ ಅಭಾವವನ್ನು ತಿಳಿಸುತ್ತದೆ. ಉದಾ : ಅವನು ಕೆಟ್ಟವನಲ್ಲ, ಅವಳು ಸುಂದರಳಲ್ಲ (ಗುಣವಿಷಯ) ಅವನು ಮನೆಯಲ್ಲಿಲ್ಲ, ಅವಳು ಮುಟ್ಟಾಗಲಿಲ್ಲ—ಇವು ಅಸ್ತಿತ್ವದ ನಿಷೇಧವನ್ನು ಸೂಚಿಸುತ್ತವೆ.

# ಕರ್ಮಣಿ ಪ್ರಯೋಗ

ದ್ರಾವಿಡಭಾಷೆಗಳಲ್ಲಿ ಕರ್ಮಣಿ ಪ್ರಯೋಗವಿಲ್ಲದಿದ್ದರೂ ಅಲ್ಲಲ್ಲಿ ಇಂದಿಗೂ ಹೇಗೋ ಬಾಯಿಮಾತಿನಿಂದ ಬರವಣಿಗೆಯವರೆವಿಗೂ ಪ್ರವೇಶ ಗಿಟ್ಟಿಸಿಕೊಂಡಿದೆ. ಆದರೆ ಕರ್ಮಣಿ ಪ್ರಯೋಗ ದ್ರಾವಿಡಭಾಷೆಗಳ ಬುಡಕಟ್ಟಿಗೆ ಸಹಜವಾಗಿ ಹೊಂದಿಕೊಂಡು ಬಂದಿಲ್ಲ. ಇದು ಅನ್ಯಭಾಷೆಯ, ಬಹುಶಃ ಇಂಡೋ-ಆರ್ಯನ್ ಕುಟುಂಬದ ಸಂಸ್ಕೃತ ಭಾಷೆಯ ಪ್ರಭಾವ ಮತ್ತು ಅನುಸರಣೆಯಿಂದ ಬಂದಿದೆ. ಸಂಸ್ಕೃತ, ಇಂಗ್ಲಿಷ್—ಮೊದಲಾದ ಭಾಷೆಗಳಲ್ಲಿ ಕರ್ಮಣಿ ಪ್ರಯೋಗ ತೀರಾ ಸಾಧಾರಣ ಮತ್ತು ಸ್ವಾಭಾವಿಕ. ಆ ಭಾಷೆಗಳಲ್ಲೂ ಅದರಲ್ಲೂ ಇಂಗ್ಲಿಷ್ ಭಾಷೆಯಲ್ಲಿ ಕರ್ಮಣಿ ಪ್ರಯೋಗವನ್ನು ತಪ್ಪಿಸಿ ಅದೇ ಅರ್ಥವನ್ನು ಬೇರೆ ಬಗೆಯಿಂದ ಅಷ್ಟೇ ಸಮರ್ಥವಾಗಿ—ಸಮಂಜಸವಾಗಿ ವ್ಯಕ್ತಪಡಿಸಬಹುದು. ನಿದರ್ಶನಕ್ಕಾಗಿ ಈ ಕೆಳಗಿನ ವಾಕ್ಯಗಳನ್ನು ಗಮನಿಸಿ:

Ravana was killed by Rama

ಇದು passive voice—ಕರ್ಮಣಿ ಪ್ರಯೋಗದಲ್ಲಿರುವ ವಾಕ್ಯ. ಆದರೆ ಈ ವಾಕ್ಯವನ್ನು ಬದಲಾಯಿಸಿ

Rama killed Ravana

ಎಂದೂ ಬರೆಯಬಹುದು. ಇದೇ ರೀತಿಯಲ್ಲಿ All mad dogs were killed by servents ಮುಂತಾದ ವಾಕ್ಯಗಳನ್ನು ಬದಲಾಯಿಸಬಹುದು. ಆದರೆ ಹೀಗೆ ಬದಲಾಯಿಸಿ ಹೇಳುವ ಅಗತ್ಯ ಅವರಿಗೆ ಅಷ್ಟಾಗಿ ಕಾಣುವುದಿಲ್ಲ. ಏಕೆಂದರೆ ಕರ್ಮಣಿ ಪ್ರಯೋಗ ಸಾಮಾನ್ಯವಾದುದರಿಂದ ಕೃತಕವೆನಿಸುವುದಿಲ್ಲ. ಸಂಸ್ಕೃತ ಭಾಷೆಯಲ್ಲಂತೂ ಕರ್ಮಣಿ ಪ್ರಯೋಗ ಅದರ ಅವಿಭಾಜ್ಯ ಅಂಶದಂತೆ ಬೆರೆತು ಹೋಗಿದೆ. ಬಹುಶಃ ಮೂಲ ಇಂಡೊ-ಯೂರೋಪಿಯಾ ಭಾಷೆಯಲ್ಲೇ ಕರ್ಮಣಿ ಪ್ರಯೋಗವಿದ್ದಿರಬೇಕು. ಸಂಸ್ಕೃತದಂತೆ ಗ್ರೀಕ್, ಲ್ಯಾಟಿನ್, ಇಂಗ್ಲಿಷ್, ಜಪಾನ್ ಮತ್ತು ಯುರಲ್ ಭಾಷೆಗಳಲ್ಲೂ ಈ ಪ್ರಯೋಗವಿದೆ—ಟರ್ಕಿಷ್, ಹಂಗೇರಿಯನ್, ಫಿನ್ನಿಷ್. ಸಂಸ್ಕೃತದಲ್ಲಿ ಹಿಂದಿನಿಂದಲೂ ಈ ಕರ್ಮಣಿ ಪ್ರಯೋಗವಿದೆ; ಯ (< ಯಾ ?) ಎಂಬ ನಿಪಾತ ಸಾಮಾನ್ಯವಾಗಿ ಸೇರುತ್ತದೆಯಾದರೂ ಬೇರೆ ಬಗೆ

ಯಲ್ಲೂ ಇದು ರೂಪಗೊಳ್ಳುತ್ತದೆ. ಕ್ರಿಯಾಪದವು ಕರ್ತೃಗಾಮಿಯಾದಾಗ ಕರ್ತರೀ ಪ್ರಯೋಗವೂ, ಕ್ರಿಯಾಫಲವು ಕರ್ಮಗಾಮಿಯಾದಾಗ ಕರ್ಮಣೀಪ್ರಯೋಗವೂ ಉಂಟಾಗುತ್ತೆನ್ನಬಹುದು.

| | | |
|---|---|---|
| ತ್ಯೇನ | ತ್ಯಕ್ತೇನ | ಭುಂಜೀತಾ[1] |
| ಮಯ್ಯೈವೇತೇ | ವಿಹಿತಾ | ಪೂರ್ವಮೇವಮ್[2] |
| ಹನುಮತಾ | ಸೀತಾ | ದೃಷ್ಟಾ |
| ರಾಮೇಣ | ರಾವಣಃ | ಅಹನ್ಯತ |
| ಮಯಾಕಿಂ | ಕರ್ತವ್ಯಂ ? | ಮಯಾ ಪುಸ್ತಕಂ ಪಠಿತಮ್ |

ಹಿಂದಿ ಭಾಷೆಯಲ್ಲೂ ಕರ್ಮಣಿ ಪ್ರಯೋಗ ಸಹಜವೆಂಬಂತೆ ಸೇರಿಹೋಗಿದೆ :

ರಾಮನೇ ರೋಟಿ ಖಾಯಿ

ಆದರೆ ಕನ್ನಡ ಅಥವಾ ಇತರ ದ್ರಾವಿಡಭಾಷೆಗಳಲ್ಲಿ ಈ ಕರ್ಮಣಿ ಪ್ರಯೋಗ ಕೃತಕವಾಗಿ ಕಾಣುತ್ತದೆ. ಅಲ್ಲದೆ ಹೀಗೆ ಅಸಹಜವಾಗಿ ಕಾಣುವುದರ ಜೊತೆಗೆ ಶ್ರುತಿ ಕಷ್ಟವಾಗಿಯೂ ಇರುತ್ತದೆ. ಹೀಗಿದ್ದೂ ದ್ರಾವಿಡಭಾಷೆಗಳಲ್ಲಿ ಕ್ವಚಿತ್ತಾಗಿ ಈ ಪ್ರಯೋಗವಾಗಿರುವುದು ಮತ್ತು ಪ್ರಯೋಗವಾಗುತ್ತಿರುವುದು ಪ್ರಸಿದ್ಧವಾಗಿದೆ.

ಕನ್ನಡ ಭಾಷೆಯ ಬಹು ಹಳೆಯ ಹಾಗೂ ಮೊಟ್ಟಮೊದಲನೆಯ ಶಾಸನವಾದ ಪಲ್ಮಿಡಿ ಶಾಸನದಲ್ಲೇ ಕರ್ಮಣಿ ಪ್ರಯೋಗದ ನಿದರ್ಶನವಿದೆ. ಆ ಶಾಸನದ ನಾಲ್ಕನೆಯ ಸಾಲಿನಲ್ಲೇ "(ಪ)ಶುಪತಿಯೆನ್ದು ಪೊಗಟೆಪ್ಪೊಟ್ಟಣಪಶುಪತಿ" ಎಂಬ ಕರ್ಮಣಿ ಪ್ರಯೋಗದ ಪದಪುಂಜವಿದೆ.[3] ಪಂಪಪೂರ್ವ ಗದ್ಯಗ್ರಂಥವೆಂದು ಊಹಿಸಲಾಗಿರುವ ವಡ್ಡಾರಾಧನೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲೇ ಕರ್ಮಣಿ ಪ್ರಯೋಗವಿದೆ ;

| | | |
|---|---|---|
| ತಿನೆಪಡು (೨) | ಮೂಗರಿಯಪಟ್ಟು (೧೯) | ಕೊಲೆಪಡು (೨೨) |
| ಕೋಳ್ಪಟ್ಟೆನ್ (೨೩) | ಮುಚ್ಚಪಟ್ಟ (೩೦) | ಕಾದಲಿಸೆ ಪಡುವ (೩೨) |
| ಕಟ್ಟೆಪಟ್ಟ (೩೫) | ಪೂಜಿಸೆಪಟ್ಟ (೩೮) | ಕೀಲಿಜುಯೆಪಟ್ಟ (೫೦) |
| ಸೈರಿಸೆಪಟ್ಟ (೫೩) | ಬಾಧಿಸೆಪಟ್ಟ (೫೬) | ಪೂಜಿಸೆಪಡುವರ್ (೮೬) |

ನೆಗೞೆಪಟ್ಟು (೮೭) ಕೈಕೊಳೆಪಟ್ಟು (೧೦೬)

ಮುಂತಾದ ಇನ್ನೂ ಹತ್ತಾರು ಕರ್ಮಣಿ ಪ್ರಯೋಗದ ಪದಗಳಿವೆ.

---

[1] ಇದು ಈಶಾವಾಸ್ಯದ ಪ್ರಯೋಗ

[2] ಭಗವದ್ಗೀತೆ ವಿಶ್ವರೂಪದರ್ಶನ

[3] ಅತ್ಯಂತ ಪ್ರಾಚೀನ ಕನ್ನಡ ಶಾಸನ, ಪ್ರ. ಕ ೨೦-೩, ಪುಟ ೩೯ ಲೇ. ದಿವಂಗತ ಎಂ. ಎಚ್. ಕೃಷ್ಣ

ಹಾಗೆಂದರೆ ಕನ್ನಡದಲ್ಲಿ ಪೂರ್ವದ ಹಳಗನ್ನಡದಲ್ಲೂ, ಹಳಗನ್ನಡದಲ್ಲೂ ಕರ್ಮಣಿ ಪ್ರಯೋಗವಾಗಿರುವುದಕ್ಕೆ ಉದಾಹರಣೆಗಳಿವೆ. ಆದರೆ ಪಂಪ–ಪೊನ್ನ–ರನ್ನರ ಕಾವ್ಯಗಳಲ್ಲಿ ಕರ್ಮಣಿ ಪ್ರಯೋಗ ಇಲ್ಲವೆನ್ನುವಷ್ಟು ಕಡಮೆಯಿದೆ. ನಾಗವರ್ಮ, ಕೇಶಿರಾಜ, ಭಟ್ಟಾಕಳಂಕರ ಕೃತಿಗಳಲ್ಲೂ ಕರ್ಮಣಿ ಪ್ರಯೋಗ ಕ್ವಚಿತ್ತಾಗಿ ಕಾಣುತ್ತದೆ. ನಡುಗನ್ನಡಕಾಲದ ಕಾವ್ಯಗಳಲ್ಲಿ ಇದರ ಪ್ರಯೋಗ ಬರಬರುತ್ತಾ ಕಡಮೆಯಾದಂತೆ ನಿದರ್ಶನಗಳಿಂದ ಸ್ಪಷ್ಟವಾಗುತ್ತದೆ. ೧೫ನೆಯ ಶತಮಾನದ ಭೀಮಕವಿಯ ಬಸವಪುರಾಣದಲ್ಲಿನ ಈ ಸಾಲುಗಳನ್ನು ನೋಡಿ :

ಎಂದು ಕೇಳಲ್ಪಟ್ಟುದಲ್ಲಾ ।
ಮುಂದೆ ಕಾಣಲ್ಪಟ್ಟುದಲ್ಲಾ ।[1]

ಆದರೆ ಈ ಬಗೆಯ ಮೂಲೆ ಮೂಲೆಯಾದ ಕರ್ಮಣಿ ಪ್ರಯೋಗ ಆ ಕಾವ್ಯದಲ್ಲೇ ಕಡಮೆ, ಆ ಕಾಲದ ಸಾಹಿತ್ಯದಲ್ಲೂ ಕಡಮೆ. ಕಳೆದ ಶತಮಾನ ಹಾಗೂ ಈ ಶತಮಾನದ ಆರಂಭಕಾಲದ ಕೆಲವು ಅನುವಾದ ಕೃತಿಗಳಲ್ಲಿ—ನಾಟಕಗಳಲ್ಲಿ ಕರ್ಮಣಿ ಪ್ರಯೋಗವಾಗಿದೆ, ಅಲ್ಪಪ್ರಮಾಣದಲ್ಲಿ ಉದಾ : ಅನ್ಯಕ್ರಾಂತಾ ಮನಸ್ಕನಾದ ಎನ್ನಿಂದ ನೀನು ಈಕ್ಷಿಸಲ್ಪಡಲಿಲ್ಲವು : . . . ಇತ್ಯಾದಿ. ಸಂಸ್ಕೃತ ವಿದ್ವಾಂಸರು ಕನ್ನಡದಲ್ಲಿ ಬರೆದಾಗ ಅಥವಾ ಭಾಷಣ ಮಾಡುವಾಗ, ಕರ್ಮಣಿ ಪ್ರಯೋಗ ಸಾಮಾನ್ಯವಾಗಿ ಇರುತ್ತದೆ.

ಶಾಸ್ತ್ರೀಯವಾದ ಪ್ರಯೋಗಗಳಿಗೂ, ಬಿಗಿಯಾದ ಹೇಳಿಕೆಗಳಿಗೂ ಕರ್ಮಣಿ ಪ್ರಯೋಗನೇ ಒಳ್ಳೆಯದೆಂದು ವಿದ್ವಾಂಸರ ಭಾವನೆ ; ನೋಡಲ್ಪಟ್ಟಿದೆ, ಮಾಡಲ್ಪಟ್ಟಿದೆ, ರಚಿಸಲ್ಪಟ್ಟಿದೆ, ಕೇಳಲ್ಪಟ್ಟಿದೆ, ಬರೆಯಲ್ಪಟ್ಟಿದೆ, ಹೇಳಲ್ಪಟ್ಟಿದೆ—ಮುಂತಾದ ಮಾತುಗಳು ಅವರಿಗೆ ಸರಾಗ, ಸಹಜ. ಬೆಂಗಳೂರಿನ ಮಲ್ಲೇಶ್ವರಂ ಬಡಾವಣೆಯ ೧೧ನೆಯ ಕ್ರಾಸ್ ರಸ್ತೆಯಲ್ಲಿರುವ ಒಂದು ಪುಸ್ತಕದಂಗಡಿಯ ಮುಂದೆ ಬಹಳ ದಿವಸಗಳಿಂದಲೂ—ಸುಮಾರು ೧೯೫೮ ರಿಂದಲೂ "ಇಲ್ಲಿ ಹಳೆಯ ಪುಸ್ತಕಗಳು ಕೊಳ್ಳಲ್ಪಡುತ್ತವೆ ಹೊಸ ಪುಸ್ತಕಗಳು ಮಾರಲ್ಪಡುತ್ತವೆ" ಎಂಬ ಪ್ರಕಟಣೆಯನ್ನು ನಾಗರೀಕರು ಗಮನಿಸಿರಬಹುದು. 'ಹಳೆಯ ಪುಸ್ತಕಗಳನ್ನು ಕೊಳ್ಳುತ್ತೇವೆ, ಹೊಸ ಪುಸ್ತಕಗಳನ್ನು ಮಾರುತ್ತೇವೆ. ಎಂದು ಚೆನ್ನಾದ ರೀತಿಯಲ್ಲಿ ಬರೆಸಬಹುದಿತ್ತು. 'ಇಲ್ಲಿ ಟೈಪು ಮಾಡಲ್ಪಡುತ್ತೆ' ಎಂಬುದಂತೂ ಮೈಸೂರು—ಬೆಂಗಳೂರುಗಳಲ್ಲಿ ಹಲವು ಕಡೆ ಕಾಣುವ ಜಾಹಿರಾತು, ಕೇವಲ 'ಟೈಪು ಮಾಡುತ್ತೇವೆ, ಎಂದರೆ ಆದ ನಷ್ಟವೇನು ? ದಿನನಿತ್ಯ ಬಾನುಲಿಯ ಕೇಂದ್ರದಿಂದ 'ಇಲ್ಲಿಗೆ ದೆಹಲಿಯಿಂದ ಬಿತ್ತರಿಸಲ್ಪಟ್ಟ ಕನ್ನಡ ವಾರ್ತಾಪ್ರಸಾರ ಮುಕ್ತಾಯವಾಯಿತು' ಎಂದು ಕೇಳುವೆವು. ಬಿತ್ತರಿಸಲ್ಪಟ್ಟ ಎಂಬುದನ್ನು ಪ್ರಸಾರಗೊಂಡ ಅಥವಾ ಬಿತ್ತರಗೊಂಡ ಎಂದು ಹೇಳಬಹುದು.[2]

---

1 ಬಸವಪುರಾಣ : ೬೦–೩೦

2 ಈ ಬಗೆಯ ಸಲಹೆಕೊಟ್ಟು ಹಲವು ಪತ್ರಗಳನ್ನು ಬರೆದಮೇಲೆ ಈಗ ಇದನ್ನು ನಿಲ್ಲಿಸಿದ್ದಾರೆ.

ತಮಿಳಿನ ಸಂಘಂ ಕಾಲದ ಸಾಹಿತ್ಯದಲ್ಲಿಯೂ, ಇಂದಿನ ಕೆಲವು ಗ್ರಾಮ್ಯರೂಪದ ತಮಿಳು ಭಾಷೆಯಲ್ಲೂ ಕರ್ಮಣಿ ಪ್ರಯೋಗ ಬಳಕೆಯಲ್ಲಿದೆ. ಇದರ ಬಗೆಗೆ ಬರೆಯುತ್ತಾ ಬಿ.ಎಂ.ಶ್ರೀ ಮತ್ತು ಟಿ. ಎಸ್. ವೆಂಕಣ್ಣಯ್ಯನವರು, 'ತಮಿಳಿನಲ್ಲಿ ಇದು ಹೆಚ್ಚಾಗಿ ಪ್ರಚಾರದಲ್ಲಿದ್ದು ಕನ್ನಡಕ್ಕೆ ಬಂದಿರಬಹುದು'[1] ಎಂದು ಊಹಿಸಿದ್ದಾರೆ. ಆದರೆ ಈ ಊಹೆ ಅಷ್ಟು ಸಮಂಜಸವಾಗಿ ತೋರುವುದಿಲ್ಲ. ಸಂಸ್ಕೃತ ಭಾಷೆಯ ನೇರ ಪ್ರಭಾವ ಹಾಗೂ ಅನುಕರಣೆಯಿಂದಲೇ ಇದು ಕನ್ನಡವನ್ನು ಪ್ರವೇಶಿಸಿತೆಂದು ಹೇಳುವುದು ಹೆಚ್ಚು ಸರಿಯಾದೀತು.

> None of the Dravidian dialects possess any passive particle or suffix, or any means of expressing passivity by direct inflexional changes; the signification of the passive voice is, neverthe-less, capable of being expressed in a variety of ways[2]

ಕರ್ಮಣಿ ಪ್ರಯೋಗವನ್ನು ಅಲ್ ಪ್ರತ್ಯಯ ಸಹಿತವಾದ ಪಡು ಎಂಬ ಸಹಾಯಕ ಕ್ರಿಯಾಪದದಿಂದ ಗುರುತಿಸಬಹುದು. 'ಪಡು' ಎಂಬುದೇ ದ್ರಾವಿಡಭಾಷೆಗಳಲ್ಲಿ ಪ್ರಯೋಗವಾಗಿದೆ. ಕ್ರಿಯಾಧಾತುಗಳಿಗೆ ಪಡು ಎಂಬ ಪ್ರತ್ಯಯವನ್ನು ಕೂಡಿಸಿ ಸಮಾಸಪದ ಮಾಡುವ ಈ ಪದ್ಧತಿ ಚಾಕ್ಷುಷ ದ್ರಾವಿಡಭಾಷೆಗಳಲ್ಲಿ ಬಹು ಹಿಂದಿನಿಂದಲೂ ಇದ್ದಿತೆಂದು ಕಾಣುತ್ತದೆ. ಇಂತಹ ಅನೇಕ ಪ್ರಯೋಗಗಳು ಈ ನಾಲ್ಕು ಪ್ರಮುಖ ಭಾಷೆಗಳ ಅನೇಕ ಗ್ರಂಥಗಳಲ್ಲಿ ಸಿಗುತ್ತವೆ.

ಆದರೆ ಈ ಬಗೆಯ ರೂಪಗಳಿಗೆ ಹಿಂದಿನ ವ್ಯಾಕರಣಕಾರರು ಅಷ್ಟಾಗಿ ಗಮನ ವಿತ್ತಂತೆ ತೋರುವುದಿಲ್ಲ; ವಿಶೇಷ ಪ್ರಾಧಾನ್ಯ ಕೊಡಬೇಕಾದ ಯಾವ ಮಹತ್ವವೂ ಈ ಸಮಾಸ ಪದಗಳಲ್ಲಿ ಅಡಗಿರುವಂತೆ ಅವರಿಗೆ ಅನ್ನಿಸಲಿಲ್ಲ. ಸಂಸ್ಕೃತದ ತೀರ ನಿಕಟಪರಿಚಯದ ಪರಿಣಾಮವಾಗಿ ದ್ರಾವಿಡಭಾಷೆಗಳ ನಡುವೆ ಮೆಲ್ಲಗೆ ನುಸುಳಿಕೊಂಡು ಕರ್ಮಣಿ ಪ್ರಯೋಗದ ಕೊನೆಯಲ್ಲಿ—ಉತ್ತರಾರ್ಧದಲ್ಲಿ ಪಡು (< ಪಟ್ಟು) ಪದ ಅಥವಾ ಪ್ರತ್ಯಯವಿದ್ದರೂ, ಮೊದಲಲ್ಲಿ—ಪೂರ್ವಾರ್ಧದಲ್ಲಿ ವಿಶೇಷವಾಗಿ ಅಲ್, ಮತ್ತು ಸಾಮಾನ್ಯವಾಗಿ ಅನ್ ಹಾಗೂ ಅಪರೂಪವಾಗಿ—ಅ—ಎ ಎಂಬುವು ಇರುತ್ತವೆ:

ತೆ. ಚೇಯನ್‌ಪಡು; ಕಲಿಯಬಡುನು: (ನನ್ನಯ್ಯ ಭಾರತದಲ್ಲೂ ಕರ್ಮಣಿ ಪ್ರಯೋಗವಿದೆ.)

ತ. ತೆರಿಯಪ್ಪಡುವಮ್, ಅಡಿಕ್ಕಪಟ್ಟಾನ್

ಕ. ಮುಚ್ಚಿಪಟ್ಟು, ಪೂಜಿಸೆಪಡು

। ವಾಕ್ಯರಚನೆಯಲ್ಲಿ ಕರ್ಮಕ್ಕೆ ಪ್ರಾಧಾನ್ಯ ಕೊಟ್ಟು ಕರ್ತೃವಿನ ವಿವಕ್ಷೆಯನ್ನು

1 ಕನ್ನಡ ಕೈಪಿಡಿ, ಭಾಗ–೧, ಪು. ೩೬೧ ಮೂರನೆಯ ಮುದ್ರಣ.

2 *ACGDOLS*, P. 463

ಸರಿಯಾಗಿ ಪರಿಗಣಿಸದೆ ಹೋಗುವುದು ಈ ಕರ್ಮಣಿ ಪ್ರಯೋಗಕ್ಕೆ ಮೂಲಕಾರಣ. ಆದರೆ ಕನ್ನಡದಲ್ಲಿ ಕರ್ಮಣಿ ಪ್ರಯೋಗಕ್ಕಿಂತಲೂ ಕರ್ತರಿ ಪ್ರಯೋಗವೇ ಹೆಚ್ಚು ಸಾಧುವಾಗಿ, ಸಹಜವಾಗಿ, ಹಾಗೂ ಸ್ವಾಭಾವಿಕವಾಗಿ ಹೊಂದಿಕೊಳ್ಳುತ್ತದೆ. ಇಂದಿಗೂ ನಮ್ಮಲ್ಲಿ ಕೆಲವು ಹಿರಿಯರ ಬರಹ ಹಾಗೂ ಮಾತುಗಳಲ್ಲಿ ಕರ್ಮಣಿ ಪ್ರಯೋಗಕ್ಕೆ ಅವಕಾಶ ಕೊಡುತ್ತಿರುವುದನ್ನು ಗಮನಿಸಬಹುದು. ಅವರು ಮನಸ್ಸುಮಾಡಿ ಎಚ್ಚರ ವಹಿಸಿದರೆ ಅದನ್ನು ಅತ್ಯಂತ ಸುಲಭವಾಗಿ ತಪ್ಪಿಸಬಹುದು. ಬಹಳ ಹಿಂದೆಯೇ ಈ ಬಗೆಯ ವಾಕ್ಯರಚನೆ ಬೇಡವೆಂದು ಕನ್ನಡಿಗರಲ್ಲಿ ಅರಿಕೆ ಮಾಡಿಕೊಂಡ 'ಶ್ರೀ'ಯವರ ಮಾತುಗಳು ಮನನೀಯವಾಗಿವೆ: ಕನ್ನಡದ ಮಾತನ್ನು ಆಡುವ ಜನರ ಮನಸ್ಸಿಗೆ ಈ ಕರ್ಮಣಿ ರೂಪ ಹಿಡಿಸುವುದಿಲ್ಲ; ಇದು ನಮಗೆ ಒಗ್ಗುವುದಿಲ್ಲ, ಇದನ್ನು ಬಿಡುವುದೇ ಉತ್ತಮ."[1]

1 ಕನ್ನಡಿಗರ ಒಳ್ಳೆಯ ಸಾಹಿತ್ಯ, ಭಾಗ ೧, ೧೯೪೩, ಪು. ೩೫.

# ಕ್ರಿಯಾಪದ

ಕ್ರಿಯಾಪದಗಳು ಕೂಡ ಸರ್ವನಾಮ ಸಂಖ್ಯಾವಾಚಕಗಳಂತೆ ಒಂದು ಭಾಷೆಯ ಸ್ಥಿರಾಂಶಗಳೆನ್ನಬಹುದು. ಭಾಷೆಯ ಮೊದಲ ಹಂತದಲ್ಲಿ ಮಾನವ, ಧಾತುಗಳನ್ನೇ ಕ್ರಿಯಾಪದಗಳಾಗಿ ಬಳಸುತ್ತಿದ್ದಿರಬಹುದು. ಇಂದಿಗೂ ಮಕ್ಕಳ ಮಾತಿನಲ್ಲಿ ಇದನ್ನು ನೋಡಬಹುದು. ವಿಧ್ಯರ್ಥದಲ್ಲಿನ ಮಧ್ಯಮಪುರುಷದ ಕ್ರಿಯಾರೂಪಗಳಲ್ಲಿ ಕೂಡ ಇದು ಕಂಡುಬರುತ್ತದೆ.

ದ್ರಾವಿಡ ಭಾಷೆಗಳಲ್ಲಿ ಕ್ರಿಯಾಪದವೇ ಇಲ್ಲವೆಂಬ ಮಾತಿದೆ. ಇದರ ಹುರುಳು ಕ್ರಿಯಾರ್ಥವುಳ್ಳ ಧಾತುಗಳೇ ಇಲ್ಲವೆಂದಲ್ಲ ; ನೋಡು, ಬೇಡು ಮುಂತಾದುವು ನೂರಾರಿವೆ. ಧಾತುಗೆ ಸೇರುವ ಅಮ್ ಅರ್ ಅಯ ಎನ್ ಎವು ಆಖ್ಯಾತ ಪ್ರತ್ಯಯಗಳು ಸರ್ವನಾಮಗಳು. ಈ ಪ್ರತ್ಯಯಗಳು ಧಾತುಗಳಿಗೇ ಅಲ್ಲದೆ ನಾಮಪದ, ಗುಣವಚನ ಸಂಖ್ಯಾವಾಚಕಗಳಿಗೂ ಸೇರುತ್ತವೆ. ಕನ್ನಡ ಮತ್ತು ಇತರ ದ್ರಾವಿಡ ಭಾಷೆಗಳಲ್ಲಿ ಕ್ರಿಯಾಪದಗಳು ಕ್ರಿಯಾತ್ಮಕ ಧಾತುಗಳೇ ಆಗಿರಬೇಕಿಲ್ಲ. ಧಾತುಗಳು ಗುಣವಾಚಕ ರೂಪಕ್ಕೆ ರೂಪಾಂತರಗೊಂಡು ಸರ್ವನಾಮ ಪಡೆದು ವಾಕ್ಯದಲ್ಲಿ ಎರಡು ನಾಮಪದಗಳಿಂದ ಕಾರ್ಯನಿರ್ವಾಹವಾಗುವಂತೆ ಮಾಡುತ್ತವೆ. ದ್ರಾವಿಡಭಾಷೆಗಳಲ್ಲಿ ಸರ್ವನಾಮದ ಮೂಲರೂಪಗಳು ಆಖ್ಯಾತಪ್ರತ್ಯಯವಾಗಿ ಬೆಳೆದಿವೆ. ಈ ಆಖ್ಯಾತಪ್ರತ್ಯಯಗಳು ಧಾತುಗಳೊಡನೆ ಸೇರಿ ಕ್ರಿಯಾಪದಗಳು ಏರ್ಪಡುವುದಲ್ಲದೆ ನಾಮಪದಗಳಿಗೆ ಸೇರಿ ಕ್ರಿಯಾಪದಗಳ ಅರ್ಥ ಸಿದ್ಧಮಾಡುತ್ತವೆ. ಆದುದರಿಂದ ಕ್ರಿಯಾಪದವೆಂದರೆ ಸರ್ವನಾಮದಿಂದ ಕೂಡಿದ ಗುಣವಾಚಕವೇ ಆಗಿದೆ. ಉದಾ :

ಅವನ್ ಬಂದನ್, ಅವನೊಳ್ಳಿದನ್,
ಆನ್ ಕೇಶವನೆನ್ ; ಆನ್ ಪೆಜಿನ್
ಇವರ್ ಒಳರ್, ಇವರ್ ನಲ್ಲರ್
ನೀನ್ ಬೆಡಂಗನಯ್ ನೀನಾರ್

ಇಲ್ಲಿನ ಮಾತುಗಳಲ್ಲಿರುವ ಎರಡೆರಡು ಅಂಗಗಳೂ ನಾಮಪದಗಳೇ. ಇಲ್ಲಿ ಕ್ರಿಯಾಪದ

ವೆನ್ನಿಸಿಕೊಳ್ಳುವ ಶಬ್ದವೂ ನಾಮಪದವೇ. ಕ್ರಿಯಾಪದಗಳಿಗೂ ವಿಭಕ್ತಿ ಸೇರುತ್ತದೆ: ಮಾಡಿದುದಜಿನ್.

ಆದರಿಂದ ವಿಧಿರೂಪಗಳನ್ನು ಬಿಟ್ಟರೆ ಉಳಿದ ಪೂರ್ಣಕ್ರಿಯೆಗಳೆಲ್ಲಾ ನಾಮಪದಗಳು. ವಿಧಿರೂಪಗಳಲ್ಲೂ ಧಾತುಪ್ರಯೋಗ ಹೊರತು ಉಳಿದವು ಭಾವನಾಮ ಇಲ್ಲವೇ ಕೃದಂತ ರೂಪಗಳು: ಬೇಡಿದಪವನ್, ಮಾಡಿದಪವನ್ ಎಂಬುವನ್ನು ಕ್ರಿಯಾರೂಪಗಳೆನ್ನುವುದಕ್ಕಿಂತ ಗುಣವಚನಗಳೆಂದು ಹೇಳಬಹುದು: ಅವಂ ಎಂತಹಂ? ಅವಂ ಬೇಡಿದಪವನ್, ಅವಂ ಮಾಡಿದಪವನ್.

ದ್ರಾವಿಡಭಾಷೆಗಳಲ್ಲಿ ಮೊದಲಿಗೆ ಕರ್ತ್ರರ್ಥದ ಮೂಲ ಸರ್ವನಾಮವನ್ನು ಧಾತುವಿಗೆ ಸೇರಿಸಿ ಕಾಲವ್ಯತ್ಯಾಸವಿಲ್ಲದೆ ಕ್ರಿಯಾರೂಪಗಳನ್ನು ಮಾಡುವ ರೂಢಿಯಿದ್ದಿರಬಹುದು. ಹಳಗನ್ನಡದಲ್ಲಿ ಕ್ರಿಯಾಪದಗಳಿಗೆ ಸೇರುವ-ಕು,-ಕುಂ > -ಗು, ಗುಂ ಎಂಬ ಪ್ರತ್ಯಯಗಳನ್ನು ನೋಡಿ. ಹೊಸಗನ್ನಡದಲ್ಲಿ ಇವು ಬಳಕೆಯಲ್ಲಿಲ್ಲ. ಇವುಗಳಿಂದಾದ ರೂಪಗಳ ಪಳೆಯುಳಿಕೆಗಳನ್ನು-ಬೇಕು (<ವೇಳ್ಕುಂ) ಸಾಕು (<ಸಾಲ್ಗುಂ) ಎಂಬ ಮಾತುಗಳಲ್ಲಿ ಕಾಣಬಹುದು. ಈ ಪ್ರತ್ಯಯಗಳು ಪುರುಷ ವಚನ ಲಿಂಗಭೇದವಿಲ್ಲದೆ ಕ್ರಿಯಾಪದಗಳಿಗೆ ಸೇರುತ್ತಿದ್ದುವು.

ಉಚ್ಚಾರಭೇದದಿಂದಾಗಿ '-ಕು,-ಕುಂ,-ಗು,-ಗುಂ'ಗಳು > ವ, ಗ, ಕ ಗಳಾಗಿ ವ್ಯತ್ಯಾಸವಾಗಿರುವಂತೆ ತೋರುತ್ತದೆ. ಕನ್ನಡದ ಕೆಯ್/ಗೆಯ್ ಧಾತುವಿನಿಂದ ರೂಪಗೊಂಡ ಗೆಯ್ಗುಂ ಎಂಬ ಅನ್ಯಪುರುಷ ಕ್ರಿಯಾಪದಕ್ಕೆ ಸಮಾನರೂಪಗಳು: ತ. ಚೆಯ್ಯುಂ -ಶೆಯ್ಯುಂ. ಉಚ್ಚಾರ ಸೌಲಭ್ಯಕ್ಕಾಗಿ ತಮಿಳಿನಲ್ಲಿ ಯಕಾರ ವಕಾರಗಳು ಬರುತ್ತವೆ, ತೆಲುಗಿನಲ್ಲಿ ಗಕಾರವಿದೆ. ತಮಿಳಿನಲ್ಲಿ ಕೆಲವೊಮ್ಮೆ ಗಕಾರವುಂಟು: ಶೆಯ್ವೇನ್—ಶೆಯ್ಗೇನ್.

ಧಾತುಗಳಿಗೆ ಲಿಂಗ ವಚನ ಪುರುಷ ವ್ಯತ್ಯಾಸ ಸೂಚಿಸುವ ಪ್ರತ್ಯಯಗಳನ್ನು ಹಚ್ಚುವುದು ತಡವಾಗಿ ರೂಢಿಗೆ ಬಂದಿರಬಹುದು. ಕ್ರಿಯಾರೂಪಗಳೇರ್ಪಡುವ ಹಂತದಲ್ಲೇ ಕಾಲಭೇದದ ಕಲ್ಪನೆ ಕುಡಿಯಿಟ್ಟಿರಬೇಕು. ಆಗ, ಮೇಲೆ ಹೇಳಿದ,-ಕುಂ,-ಗುಂ ಪ್ರತ್ಯಯ ಸೇರುವ ಕ್ರಿಯಾರೂಪಗಳು ವರ್ತಮಾನ ಭವಿಷ್ಯತ್‌ಕಾಲ ಸೂಚಕಗಳಾಗಿಯೂ, ಪುರುಷ ಪ್ರತ್ಯಯಗಳು ಸೇರಿ ಆದ ಕ್ರಿಯಾರೂಪಗಳು ಭೂತಕಾಲ ಸೂಚಕಗಳಾಗಿಯೂ ಬಳಕೆಗೆ ಬಂದಿರಬಹುದು.

ದ್ರಾವಿಡ ಭಾಷೆಗಳಲ್ಲಿ ಒಂದೊಂದು ಕ್ರಿಯಾಪದ ಕೂಡ ಒಂದೊಂದು ವಾಕ್ಯದಂತೆ ಪ್ರಯೋಗವಾಗುವುದುಂಟು: ನೋಡಿದೆನು (=ನಾನು ನೋಡಿದೆನು), ಕೇಳಿದಳು (=ಅವಳು ಕೇಳಿದಳು), ಬಂದನು (=ಅವನು ಬಂದನು). ಹೀಗೆಯೇ ಒಂದೇ ಮಾತು ನಾಮವಾಚಕ ಕ್ರಿಯಾವಾಚಕ ಎರಡೂ ಆಗಬಹುದು (ಕಟ್ಟು, ಮೆಟ್ಟು, ನುಡಿ).

ಕ್ರಿಯಾಪದಗಳಲ್ಲಿ ಮೂರು ಅಂಶಗಳನ್ನು ಗುರುತಿಸಬಹುದು: ಧಾತು, ಕಾಲಸೂಚಕ ವಿಕರಣ (ಆಗಮ), ಪುರುಷಪ್ರತ್ಯಯ. ಧಾತುವನ್ನು, ಕೇಶಿರಾಜನ ಮಾತಿ

ನಲ್ಲಿ ಹೇಳುವುದಾದರೆ, 'ಪ್ರತ್ಯಯವಿಲ್ಲದ ಕ್ರಿಯಾರ್ಥದ ಮೂಲರೂಪ'ವೆಂದು ವಿವರಿಷ ಬಹುದು. ಆಗಮ ಮತ್ತು ಪ್ರತ್ಯಯಗಳನ್ನು ಪಡೆದ ಕ್ರಿಯಾಪದಗಳನ್ನು ಇಂತು ವರ್ಗೀಕರಿಸಿದ್ದಾರೆ: (೧) ಭೂತಕಾಲದ ಕ್ರಿಯಾರೂಪ (೨) ವರ್ತಮಾನಕಾಲದ ಕ್ರಿಯಾರೂಪ (೩) ಭವಿಷ್ಯದ್ ಕಾಲದ ಕ್ರಿಯಾರೂಪ (೪) ನಿಷೇಧಾರ್ಥದ ಕ್ರಿಯಾರೂಪ (೫) ವಿಧ್ಯರ್ಥದ ಕ್ರಿಯಾರೂಪ.

ಕೇಶಿರಾಜ ಧಾತುಗಳನ್ನು ಕಂಡುಕೊಳ್ಳುವ ದಾರಿ ತೋರಿದ್ದಾನೆ. ಕ್ರಿಯೆ ಅರ್ಥದ ಮೂಲಂ, ಪ್ರತ್ಯಯ ರಹಿತಂ ಧಾತು, ಅದಂ ಅಭಾವ ಕ್ರಿಯೆಯೊಳ್ ನಿಯತಂ ನಿಶ್ಚಯಿಪುದು (ಸೂತ್ರ ೨೧೬). ಕೇಳದಂ, ನೋಡಿದಂ, ಮಾಡಿದಂ ರೂಪಗಳಿಗೆ ಅಭಾವಕ್ರಿಯೆ ಕೇಳಂ, ನೋಡಂ, ಮಾಡಂ. ಇವುಗಳಿಂದ ಧಾತುಗಳಾದ ಕೇಳು, ನೋಡು, ಮಾಡು ಎಂಬುವನ್ನೂ ಕಾಣಬಹುದು. ಇಲ್ಲವೇ ಇನ್ನೊಂದು ಹಾದಿಯಿದೆ. ವಿಧ್ಯರ್ಥದ ರೂಪಗಳ ಮೂಲಕ ಧಾತುಗಳನ್ನು ಸುಲಭವಾಗಿ ಗುರುತಿಸಬಹುದು. ಬಹುವಾಗಿ ವಿಧ್ಯರ್ಥದ ಮಧ್ಯಮಪುರುಷ ಏಕವಚನ ರೂಪಗಳಲ್ಲಿ ಧಾತುವೇ ಪ್ರಯೋಗವಾಗುತ್ತದೆ: ನೀವ್ ನೋಡು,-ಕೇಳ್,-ಬೇಡು,-ಮಾಡು,-ಸಾಯ್. ಕೇಶಿರಾಜ 'ಪರಿಣಮಿಸಿರ್ಕುಂ ಪ್ರಕೃತಿ ಸ್ವರೂಪದಿಂ ಮಧ್ಯಮೈಕ ವಚನಮ್ ವಿಧಿಯೊಳ್' ಎಂದಿದ್ದಾನೆ. ಮೂಲ ದ್ರಾವಿಡಭಾಷೆಯ ಕ್ರಿಯಾಧಾತುಗಳು ಏಕಾಕ್ಷರಿಗಳಾಗಿದ್ದುವೆಂದು ತಿಳಿದು ಬರುತ್ತದೆ. ಬೇರೆ ಬೇರೆ ದ್ರಾವಿಡಭಾಷೆಗಳಲ್ಲಿ ಈ ಏಕಾಕ್ಷರೀ (Monosyllabic) ಧಾತುಗಳು ವಿವಿಧ ರೀತಿಯಲ್ಲಿ ಬದಲಾವಣೆಯಾಗಿವೆ. ಉದಾಹರಣೆಗೆ ಕನ್ನಡ ಇಂದಿನ, ಅಷ್ಟೇಕೆ ನಡುಗನ್ನಡಾನಂತರ, ಧಾತುಗಳು ಬಹ್ವಕ್ಷರಿಗಳಂತೆ ತೋರುತ್ತವೆ. ಆದರೆ ಈ ಕನ್ನಡದ ಧಾತುಗಳೂ ಮೊದಲಿಗೆ ವ್ಯಂಜನಾಂತಗಳಾಗಿದ್ದುವು. ಅವುಗಳ ಮೂಲರೂಪಗಳು ಏಕಾಕ್ಷರಿಗಳಾಗಿದ್ದುವೆಂಬುದನ್ನೂ ಪುನರ್ ರಚಿಸುವುದು ಸುಲಭ ಸಾಧ್ಯವಿದೆ. ಇದಕ್ಕೆ ಕೆಲವೊಮ್ಮೆ ಜ್ಞಾತಿ ಭಾಷೆಗಳ ಜ್ಞಾತಿರೂಪಗಳೊಡನೆ ತುಲನಾತ್ಮಕ ಅಭ್ಯಾಸದ ಆಗತ್ಯವಿದೆ. ಆದರೂ ಕೆಲವು ದ್ರಾವಿಡ ಭಾಷೆಗಳಲ್ಲಿ ಹಾಗೂ ಪ್ರತಿಯೊಂದೂ ದ್ರಾವಿಡ ಭಾಷೆಯ ಕೆಲವು ರೂಪಗಳಿಗೆ ಹೊರಗಿನ ಯಾವ ನೆರವೂ ಇಲ್ಲದೆ ಆಯಾ ಮಾತಿನ ಮೂಲರೂಪವನ್ನು ಆಯಾ ಭಾಷೆಯ ಹಳೆಯ ಹೊತ್ತಗೆಗಳ ಹಾಗೂ ಶಾಸನಗಳ ಆಧಾರದಿಂದ ತಿಳಿಯಬಹುದು.

ಕನ್ನಡ ಭಾಷೆಯ ಉದಾಹರಣೆಯನ್ನೇ ಇಟ್ಟುಕೊಳ್ಳೋಣ. ಕೇಶಿರಾಜ ತನ್ನ ಶಬ್ದಮಣಿದರ್ಪಣದಲ್ಲಿನ ಧಾತುಪ್ರಕರಣದಲ್ಲಿ ಕೆಲವು ಧಾತುಗಳನ್ನು ಕೊಟ್ಟಿದ್ದಾನೆ. ಅವುಗಳಲ್ಲಿ ಕೆಲವನ್ನು ಪರಿಶೀಲಿಸಿದರೆ:

೧. ಕೆಲವು ಧಾತುಗಳು ಸ್ವರಾಂತಗಳು

೨. ಅನೇಕ ಧಾತುಗಳು ವ್ಯಂಜನಾಂತಗಳು, ಆದರೆ ಸ್ಪರ್ಶವ್ಯಂಜನಾಂತವಲ್ಲ

೩. ಸ್ಪರ್ಶಾಂತ ಧಾತುಗಳು ಸ್ವರಾಂತವಾದಾಗ ಏಕಾಕ್ಷರಿಗಳು ದ್ವ್ಯಕ್ಷರಿ ಧಾತುಗಳಾಗಿವೆ: ಕಟ್ಟು, ತಪ್ಪು, ಮೆಟ್ಟು

೪. ಹೊಸಗನ್ನಡದಲ್ಲಿ ಕ್ರಿಯಾಧಾತುಗಳೆಲ್ಲ ಸ್ವರಾಂತಗಳು

ಏಕಾಕ್ಷರೀ ಧಾತುಗಳಾಗಿದ್ದುದಕ್ಕೆ ಕೆಲವು ಉದಾ : ಆರ್ (=ಶಕ್ತನಾಗು), ಇರ್, ಈ, ಉಣ್, ಕಾಣ್, ಕೊಯ್, ತಿನ್, ನೋನ್, ಪಣ್, ಪೂಣ್, ಬಯ್, ಬೆಯ್, ವಿಾ, ಮುಯ್, ಸಾಯ್, ಇವು ಸವ, ವಸ, ವ್ಸ ಸವ್ಸ ಮಾದರಿಯವು. ಇವು ಮುಂದೆ ಸ್ವ ವಸ್ವ ವ ಸ ವ ಸ ಮಾದರಿಯ ಧಾತುಗಳಾದುವು.

ಮೂಲದ್ರಾವಿಡದ ಏಕಾಕ್ಷರೀ ಕ್ರಿಯಾಧಾತುಗಳು ಹೊಸಗನ್ನಡದಲ್ಲಿ ಹಾಗೂ ಇಂದಿನ ಇತರ ದ್ರಾವಿಡ ಭಾಷೆಗಳಲ್ಲಿ ಎರಡಕ್ಷರ ಇಲ್ಲವೇ ಮೂರಕ್ಷರ ಕ್ರಿಯಾ ಪ್ರಕೃತಿಗಳಾಗಿವೆ. ಇಂಥ ಸಂದರ್ಭಗಳಲ್ಲೂ ಅವುಗಳ ಮೂಲರೂಪವನ್ನು ಪತ್ತೆಮಾಡಬಹುದು. ಇದಕ್ಕೆ ನಾಲ್ಕು ಚಾಕ್ಷುಷ ಭಾಷೆಗಳ ಗ್ರಂಥಸ್ಥ ಆಧಾರಗಳಲ್ಲದೆ ಉಳಿದ ಇಪ್ಪತ್ತು ಶ್ರಾವಣ ಭಾಷೆಗಳ ಶಬ್ದರೂಪಗಳನ್ನೂ ಗಮನಿಸಬೇಕಾಗುತ್ತದೆ. ಕೆಲವೊಮ್ಮೆ ಉಪಭಾಷೆಗಳ ರೂಪಗಳೂ ಇಂಥ ಮೂಲರೂಪ ನಿರ್ದೇಶನಕ್ಕೆ ನೆರವಾಗುತ್ತವೆ.

ಕ್ರಿಯಾಧಾತುಗಳ ಮೂಲ ಸ್ವರೂಪವನ್ನು ಕಂಡುಹಿಡಿಯುವ ಪ್ರಯತ್ನದಲ್ಲಿ ಅವುಗಳಿಗೆ ಸೇರಿರುವ ವಿವಿಧ ಪ್ರಕೃತಿಸಾಧಕ ಪ್ರತ್ಯಯಗಳನ್ನೂ ಗುರುತಿಸಬಹುದು. ಈ ಪ್ರಕೃತಿ ಸಾಧಕ ಪ್ರತ್ಯಯಗಳೂ ಕೂಡ ಅನೇಕ ಸಲ ಪರಿಚಯವೇ ಆಗದಂತೆ ಧಾತುಗಳೊಂದಿಗೆ ಹೆಣೆದುಕೊಂಡಿರುತ್ತವೆ. ಕೆಲವು ಉದಾ :

| | |
|---|---|
| ಇಟ್ಟ್—ಎಟಿಕಿ—ಎ | ಬಲ್—ಬಲಿ—ಇ |
| ತಿಣಿ—ತಿಣಿಕು—ಕು | ಜೆವಿ—ಬೆವರು—ರು |
| ತಿರಿ—ತಿರುಗು—ಗು | ಸವೆ—ಸವಜು—ಜು |

ಕೇಶಿರಾಜ 'ಕ ಜ ಟ ತ ಪ'ಗಳ ಪರದ ದಕಾರಕ್ಕೆ ಪೂರ್ವರೂಪ ಬರುತ್ತದೆಂದೂ, ಧಾತುವಿನ ಕಡೆಯ ವರ್ಣೋಪೇತ ತೃತೀಯಾಕ್ಷರಕ್ಕೆ ಪ್ರಥಮತ್ವವೆಂದೂ ತಿಳಿಸಿದ್ದಾನೆ. ಕೇಶಿರಾಜ ಕೊಡುವ ಉದಾ :

| | | |
|---|---|---|
| ಉಗು : ಒಕ್ಕಂ, | ಪುಗು : ಪೊಕ್ಕ, | ನಗು : ನಕ್ಕಂ |
| ಇಸು : ಎಚ್ಚಂ, | ಪಸು : ಪಚ್ಚ, | ಬಿಸು : ಬೆಚ್ಚಂ |
| ನಡು : ನಟ್ಟಂ, | ಮುಡು : ಮುಟ್ಟಂ, | ಕಿಡು : ಕೆಟ್ಟಂ |
| ಕಿಜು : ಕೆತ್ತಂ, | ಪೆಜು : ಪೆತ್ತಂ, | ಗಿಜು : ಗೆತ್ತಂ |

ಆದರೆ ಇಲ್ಲಿ ಕಾಲಾರ್ಥದಲ್ಲಿ ಕೇಶಿರಾಜ ಭಾವಿಸಿದಂತೆ ದಕಾರದ ಆಗಮವಿಲ್ಲ. ಅಲ್ಲದೆ ತೃತೀಯಾಕ್ಷರಕ್ಕೆ ಪ್ರಥಮತ್ವವೂ ಆಗಿಲ್ಲ. ಇಲ್ಲಿ ಧಾತುಗಳ ಕಡೆಯ ವರ್ಣ ಸ್ವರಾಘಾತ ಕಾರಣದಿಂದಾಗಿ ದ್ವಿತ್ವವಾಗಿದೆ, ನಿಜ. ಅದು ಪುರುಷ ಪ್ರತ್ಯಯ ಬಂದುದರಿಂದ ಮಾತ್ರ. ದ್ರಾವಿಡಭಾಷಾ ಶಾಸ್ತ್ರಕಾರರು ದ್ರಾವಿಡಭಾಷೆಗಳ ಭೂತಕಾಲ ಕ್ರಿಯಾ ರೂಪಗಳನ್ನು ಧಾತುವಿನ ಕಡೆಯ ವರ್ಣದ್ವಿತ್ವ ಪಡೆದು ಆದ ಕ್ರಿಯಾರೂಪಗಳೆಂದೂ,

ಕಾಲ ಸೂಚಿಸುವ ಆಗಮಗಳಿಂದಾದ ಕ್ರಿಯಾರೂಪಗಳೆಂದೂ ಇರ್ತೆರನಾಗಿ ಒಡೆದಿದ್ದಾರೆ.

ದ್ರಾವಿಡಭಾಷೆಗಳಲ್ಲಿನ ಭೂತಕಾಲ ಕ್ರಿಯಾರೂಪಗಳ ಸಂಧಿಕಾರ್ಯ ಕ್ರಿಯಾಪದಗಳಲ್ಲಲ್ಲದೆ ಸಮಸ್ತ ಪದಗಳಲ್ಲೂ ಉಂಟು. ದ್ವಿತ್ವಹೊಂದದ ಕಡೆಗಳಲ್ಲಿ ದೀರ್ಘರೂಪಗಳು ಬರುತ್ತವೆ: ಪಿರಿ, ಪೇರ್. ಶಕಟರೇಫದ್ವಿತ್ವ ಬಂದಾಗ ವಿಜಾತೀಯ ಸಂಯುಕ್ತವರ್ಣಗಳು ಸಜಾತೀಯಗಳಾಗಿವೆ:

ಕುಱ್ಱ್; ಕುತ್ತ್ (ಕುತ್ತೆಸಳ್)
ಕಿಱ್ಱ್: ಕಿತ್ತ್ (ಕಿತ್ತಡಿ)
ಅಱ್ಱ್; ಅತ್ತು (ಕಾಲಸೂಚಕ ವಿಕರಣದ ಮುಂದೆ ಬರುವ ಪ್ರತ್ಯಯ)

ನಮ್ಮ ವೈಯಾಕರಣರ ಅಭಿಪ್ರಾಯದಂತೆ ಮೂರು ಕಾಲಗಳಿವೆ: ಭೂತ, ವರ್ತಮಾನ, ಭವಿಷ್ಯತ್ತು. ಇವುಗಳಿಗೆ ಕ್ರಮವಾಗಿ ದ, ದಪ, (ಉತ್ತ; ವ ಉತ್ತಾ) ವ (ಉವ) ಪ್ರತ್ಯಯಗಳು ಆಗಮವಾಗುತ್ತವೆ. ಉದಾ:

ಉಕಾರಾಂತ ಧಾತುಗಳಿಗೆ—ದ, ದಪ;—ಇ—ಆಗಮ; ಮಾಡಿದ, ನೋಡಿದ, ವಾಟಿದ ಓಡಿಸಿದ

| | |
|---|---|
| ಎ, ಇಕಾರಾಂತ ಮತ್ತು ವ್ಯಂಜನಾಂತ ಧಾತುಗಳಿಗೂ, ಭವಿಷ್ಯತ್‌ಕಾಲದ ವಕಾರಕ್ಕೂ | ಆಗಮವಿಲ್ಲ |

| | | |
|---|---|---|
| ಪಡೆದವ್: | ಪಡೆ + ದ + ಅವ್ | ಇಲ್ಲಿ ಪಡೆ ಧಾತು, ಅವ್, ಎವ್ ಪುರುಷ ಪ್ರತ್ಯಯಗಳು, ದ ದಪ ವ ಕಾಲಸೂಚಕ ಆಗಮಗಳು |
| ಪಡೆದಪವ್: | ಪಡೆ + ದಪ + ಅವ್ | |
| ಪಡೆವೆವ್: | ಪಡೆ + ವ + ಎವ್ | |

ಆದರೆ ವಾಸ್ತವವಾಗಿ ಆದಿಸ್ವರ ದೀರ್ಘವಾದ ಉಕಾರಾಂತ ಧಾತುಗಳಿಗೆ 'ದ' ಸೇರಿದಾಗ 'ಇ' 'ತ' 'ಪ' 'ನ' ಆಗಮವಾಗಬಹುದು: ಏಱಿದಾರ್ (ಏಱ್ +)ಮಾಡಿದಾನ್, ನೋಡಿದವ್, ಆಡಿದವ್—ಇತ್ಯಾದಿ; ಹೊಗ: ಆಡಿದನು, ನೋಡಿದನು, ಮಾಡಿದನು. ಇದರಂತೆ ಭೂತನ್ಯೂನರೂಪ (Participles) ಗಳಲ್ಲೂ; ಆಗಿ, ಇಕ್ಕಿ, ಏರಿ. ಹೀಗೆಯೇ,

ಸತ್ತರ್ (ಸಯ್ + ದ + ಅರ್); ಸತ್ತನು, ಸೋತು, ಇತ್ತು, ನಿಂತುಕೊಂಡು (ಕೊಳ್ + ದ + ಉ), ಕಂಡು (ಕಾಣ್ + ದ + ಉ) ಉಂಡು.

ಇದೆ, ಇವೆ ಎಂಬ ಕ್ರಿಯಾಪದಗಳಿಗೆ ಅದೆ, ಅವೆ ಎಂಬ ಜೋಡಿ ರೂಪಗಳುಂಟು. ಭೂತಕಾಲದಲ್ಲಿ ಪ್ರಥಮಪುರುಷ ನಪುಂಸಕ ಏಕವಚನದ–ಇತು–ಪ್ರತ್ಯಯ ಧಾತುವಿಗೆ

ಸೇರುವಾಗ ಕೆಲವು ಕಡೆ ಕಾಲಪ್ರತ್ಯಯ (ದ) ಬರದು: ಇಳಿಯಿತು, ಅಲ್ಲಾಡಿಸಿತು, ತೊಳೆಯಿತು, ಮೇಯಿತು, ಹೋಯಿತು. ಕಾಲಪ್ರತ್ಯಯ ಸೇರುವ ಕೆಲವು ಶಬ್ದಗಳಿಗಿರುವ ಜೋಡಿ ರೂಪಗಳು: ಬಂದಿತು, ಬಂತು; ಬಿದ್ದಿತು, ಬಿತ್ತು; ಇದ್ದಿತು, ಇತ್ತು; ಸಂದಿತು, ಸಂತು. ಕನ್ನಡದಲ್ಲಿ—ಇಸು ಎಂಬ ಪ್ರತ್ಯಯ ಪ್ರೇರಣಾರ್ಥದಲ್ಲಿ ಪ್ರಕೃತಿಗಳಿಗೆ ಸೇರುತ್ತದೆ.

ಅಲ್ಲದೆ ವರ್ತಮಾನಕಾಲದ ರೂಪಗಳೂ ಭವಿಷ್ಯತ್‌ಕಾಲದ ರೂಪಗಳೂ ಅರ್ಥಭೇದವಿಲ್ಲದೆ ಬಳಕೆಯಾಗುವುದೂ ಉಂಟು. ಈ ಎರಡು ಕಾಲಗಳನ್ನೂ ತೋರಿಸುವುದಕ್ಕೆ ವರ್ತಮಾನವೆಂದು ತಿಳಿದ ರೂಪಗಳೇ ಉಪಯೋಗದಲ್ಲಿವೆ.

ಉತ್ತರ ನಾಳೆ ಹೇಳುತ್ತಾರೆ,—ಹೇಳುವರು;—ತಿಳಿಸುತ್ತಾರೆ,
ತಿಳಿಸುವರು;—ಹೋಗುತ್ತದೆ,—ಹೋಗುವುದು

ಮೂಲದ್ರಾವಿಡಕ್ಕೆ ಸಂಬಂಧಿಸಿದಂತೆ ಎರಡು ಕಾಲಗಳನ್ನು ಇಟ್ಟುಕೊಳ್ಳುವುದು ಸೂಕ್ತ, ಭೂತ ಮತ್ತು ಭೂತೇತರ ಎಂದು. ಇದರ ಸಮರ್ಥನೆಗಾಗಿ ಕೆಲವು ದ್ರಾವಿಡ ಭಾಷೆಗಳಲ್ಲಿ ವರ್ತಮಾನಕಾಲ ನಿರ್ದೇಶಿಸುವ ಪ್ರತ್ಯಯಗಳಿಲ್ಲದಿರುವುದನ್ನು ಗಮನಿಸಬೇಕು. ಸಂಸ್ಕೃತದ ಪ್ರಭಾವದಿಂದ, ಕನ್ನಡದಲ್ಲಿ ಉಂಟೆಂದು ಹೇಳಿದ '-ಕುಂ,-ಗುಂ'ಗಳು ವರ್ತಮಾನದಂತೆ ಭವಿಷ್ಯತ್ತನ್ನೂ ಹೇಳುತ್ತವೆಂಬುದನ್ನು ನೋಡಿದ್ದೇವೆ.

ಕಾಲವಾಚಕ ಪ್ರತ್ಯಯಗಳ ಬಗೆಗೆ ಎರಡು ಮಾತು. ಭೂತಕಾಲ ಹಾಗೂ ಭೂತೇತರಕಾಲ ಪ್ರತ್ಯಯಗಳಲ್ಲಿ ರೂಪಭೇದಗಳಿವೆ. ಭೂತಕಾಲ ಪ್ರತ್ಯಯಗಳು *-ನ್ತ್-ಮೂಲದಿಂದ ಬಂದಿವೆಯೆಂದು ತಿಳಿಯಬಹುದು. ಕನ್ನಡದಲ್ಲಿ ಇದರ ಅನುನಾಸಿಕತ್ವ ಬಹುವಾಗಿ ಮರೆಯಾಗಿ-ತ-ಆಗಿದೆ. ಈ ಪ್ರತ್ಯಯ ಕೂಡ ಪರಿಸರದಿಂದಾಗಿ ಮಾರ್ಪಾಡುಪಡೆದಿದೆ.

ತ { ತ, ದ, ಡ
  { ಟ, ಕ.

ಭೂತಕಾಲ ವಿಕರಣವಾದ 'ದ'ದ ಜೊತೆಗೆ 'ಇ' ಯನ್ನು ಅಡಕಮಾಡುವುದು ಸರಿಕಾಣದೆಂಬ ಅಭಿಪ್ರಾಯವೂ ಇದೆ.

ಭವಿಷ್ಯತ್ತಿಗೆಂದು ಕೇಶಿರಾಜಾದಿಗಳು ಹೇಳಿದ ವ, ಪ, ಪ್ಪ, ಬ-ಗಳಿಗೆ ವ ಒಂದನ್ನು ಮೂಲ ಆಕೃತಿಯಾಗಿಟ್ಟು ಉಳಿದುವನ್ನು ಪರಿಸರಾನುಸಾರಿಯಾಗಿ ಬದಲಾದ ಆದರ ಉಪ ಆಕೃತಿಗಳೆಂದು ತಿಳಿಯಬಹುದು; ತಮಿಳಿನಲ್ಲಿ ಗ್ ಇದೆ. ಇದರಂತೆ ಆಗು ಎಂಬುದನ್ನು ಮೂಲ ಆಕೃತಿಯೆಂದು ಇಟ್ಟುಕೊಂಡು ಅಪ್ಪ, ಆಪ, ದಪ್ಪ, ದಪ ದಹ (ನಡುಗನ್ನಡರೂಪ)—ಎಂಬುವನ್ನು ಭವಿಷ್ಯದ್ ಉಪರೂಪ (ಪ್ರತ್ಯಯ)ಗಳೆಂದು ತಿಳಿಯಬಹುದು.

ಇನ್ನು ಸಕರ್ಮಕ ಅಕರ್ಮಕಗಳಲ್ಲೂ ಕೆಲವು ವಿಚಾರಗಳನ್ನು ಗುರುತಿಸಬಹುದು. ಸಕರ್ಮಕ ಕ್ರಿಯಾಪದವನ್ನು ಏಕವಚನದ ವಿಧಿರೂಪದಲ್ಲಿ ಬಳಸುತ್ತೇವೆ. ಅಕರ್ಮಕ ಕ್ರಿಯಾಪದಕ್ಕೆ /-ಇಸು/ ಪ್ರತ್ಯಯ ಸೇರಿಸಿದರೆ ಸಾಕು. ಅದು ಸಕರ್ಮಕ ಕ್ರಿಯಾಪದ ವಾಗುವುದು. ತ. ನಲ್ಲಿ-ತು,-ವಿ ಪ್ರತ್ಯಯಗಳು ಕ. ದ-ಇಸುವಿಗೆ ಸಮಾನವಾಗಿ ವರ್ತಿಸುತ್ತವೆ. ಸಕರ್ಮಕ ಅಕರ್ಮಕಗಳಲ್ಲಿ ಕ್ರಿಯಾಪ್ರಕೃತಿಗಳಲ್ಲಿ ನಡೆವ ವ್ಯಂಜನ ಪಲ್ಲಟ ಗಮನಾರ್ಹ. ಇದಕ್ಕೆ ಸಂಬಂಧಿಸಿದ ಒಂದು ನಿಯಮವಿಂತಿದೆ: ಅಕರ್ಮಕ ಪ್ರಕೃತಿಗಳ ಅಂತ್ಯದಲ್ಲಿ ಬರುವ ಅನುನಾಸಿಕ ಹಾಗೂ ಸಮಾನಸ್ಥಾನೀ ಸ್ಪರ್ಶಯುಕ್ತ ವ್ಯಂಜನಗುಚ್ಛ ದ್ವಿಸ್ಪರ್ಶವಾಗಿ ಪರಿವರ್ತನೆಗೊಂಡು ಆ ಪ್ರಕೃತಿ ಸಕರ್ಮಕವಾಗುವುದು. ಅಂದರೆ ಪ್ರಕೃತಿಯಲ್ಲಿ ಅರ್ಥವ್ಯತ್ಯಾಸ ತಲೆದೋರುವುದು.

ಈ ಬಗೆಯಲ್ಲಿ ಅಕರ್ಮಕ-ಸಕರ್ಮಕ ಅರ್ಥವ್ಯತ್ಯಾಸ ಉಂಟುಮಾಡುವ ವ್ಯಂಜನ ಪಲ್ಲಟ ಹಲವು ಪ್ರಕೃತಿಸಾಧಕ ಪ್ರತ್ಯಯಗಳಲ್ಲೂ ಉಂಟು. ಕನ್ನಡಭಾಷೆಗೆ ಸಂಬಂಧ ಪಟ್ಟಂತೆ ಆಗಿರುವ ವ್ಯತ್ಯಾಸವಿದು: ಕನ್ನಡದ ಬಹುಮಟ್ಟಿನ ಕ್ರಿಯಾರೂಪಗಳಲ್ಲಿ ಅಕರ್ಮಕ ಪ್ರಕೃತಿಗಳ ಅನುಸ್ವಾರ ಮರೆಯಾಗಿದೆ. ಅದಕ್ಕೆ ಪರವಾಗುವ ಸ್ಪರ್ಶ ಘೋಷ ವಾಗಿಯೇ ಅನೇಕ ಕಡೆ ಉಳಿದುಬಂದಿದೆ. ಇದರಂತೆ ಕ. ದಲ್ಲಿ ಬಹುವಾಗಿ ಸಕರ್ಮಕ ಪ್ರಕೃತಿಗಳ ದ್ವಿಸ್ಪರ್ಶ ತನ್ನ ದ್ವಿತ್ವವನ್ನು ನೀಗಿಕೊಂಡಿದೆ. ಆದರೆ ಅಘೋಷತ್ವವನ್ನು ಕಾಪಾಡಿಕೊಂಡಿದೆ.

/-ಗುಟ್ಟು/ ಎಂಬುದು ಪ್ರತ್ಯಯವಾಗಿ ಸೇರಿ ಕೆಲವು ಅನುಕರಣ ಕ್ರಿಯಾಪದಗಳು ರೂಪಗೊಂಡಿವೆ: ಕಿರುಗುಟ್ಟು, ಗುರುಗುಟ್ಟು, ಗುಸು-, ಗೊಣ-, ದುರು- ಕ್ರಿಯಾ ಪದದ ಅರ್ಥ ಹೆಚ್ಚು ಗಟ್ಟಿಯಾಗುವಂತೆ, ನಿರುಕಾಗುವಂತೆ /-ಬಿಡು/ ಸೇರುತ್ತದೆ: ಬಿಟ್ಟುಬಿಡು, ನೋಡಿಬಿಡು, ಮಾಡಿ-, ಕೊಂದು-, ಕೇಳಿ-, ಚಚ್ಚಿ-, ತಿಳಿದು-, ಬಡಿದು-, ಸಾಯಿಸಿ-, ಹೊಡೆದು-. ಕೆಲವು ಧಾತುಗಳು ಮುಂದೆ ನಾಮಪದ ಗಳಾಗಿ ಅರ್ಥವ್ಯಾಪ್ತಿ ಪಡೆದಿವೆ:

ಕಟ್ಟು=೧. ಕೂಡಿ ಹಾಕು, ಒಂದು ಮಾಡು, ೨. ಬೀಡಿಕಟ್ಟು, ಎಲೆ-ಒಕ್ಕಟ್ಟು
ಮೆಟ್ಟು=೧. ತುಳಿ ೨. ಎಕ್ಕಡ
ಹಾಡು=೧. ಹಾಡುಗಾರಿಕೆ ೨ ಹಾಡು (=ಪದ)

# ಸಂಖ್ಯಾವಾಚಕ

ತೌಲನಿಕ ಅಧ್ಯಯನದಿಂದ ಹನ್ನೊಂದು ಸಂಖ್ಯಾವಾಚಕಗಳನ್ನು ಮಾತ್ರ ಮೂಲ ದ್ರಾವಿಡಕ್ಕೆ ಆರೋಪಿಸಬಹುದು. ಅವು ಒಂದರಿಂದ ಹತ್ತು ಮತ್ತು ನೂಱರ ಸಂಖ್ಯೆ. ಅವುಗಳಲ್ಲಿ ನೂಱು ಸಂಖ್ಯೆಯ ಶಬ್ದವನ್ನು ಬಿಟ್ಟರೆ ಉಳಿದ ಸಂಖ್ಯಾವಾಚಕಗಳಿಗೆ ಜೋಡಿ ರೂಪಗಳಿವೆ:

೧. ವಿಶೇಷಣರೂಪ

೨. ನಾಮಪ್ರಕೃತಿ ರೂಪ

ನಾಮವಾಚಕಗೊಳಿಸುವ (Nominalizing) ಪ್ರತ್ಯಯ—ತ್—ಇಲ್ಲವೇ—ಕ್—ದ ಮೊದಲು ಬರುವ ರೂಪಗಳು ನಾಮಪ್ರಕೃತಿಗಳು. ಒಂದು ಸಂಖ್ಯಾವಾಚಕ ಸಮಾಸ ಶಬ್ದದ ಮೊದಲ ಅಂಶವಾಗಿ ಮಾತ್ರ ವಿಶೇಷಣರೂಪ ಬರುವುದನ್ನು ಗಮನಿಸ ಬೇಕು. ನೂಱು ಎಂಬ ಸಂಖ್ಯಾವಾಚಕ ಗುಣಾಕಾರದ ಸಮಾಸದಲ್ಲಿ ಪೂರ್ವಪದವಾಗಿ ಬರದೇ ಉತ್ತರಪದವಾಗಿ ಬರುತ್ತದೆ. ಆದರೆ ಕೂಡುವುದರಲ್ಲಿ ಪೂರ್ವ ಪದವಾಗಿ ಬರು ತ್ತದೆ. ಅದಕ್ಕೆ ವಿಶೇಷಣ ರೂಪವೆಂದು ಬೇರೆಯಿಲ್ಲ. ನಾಮವಾಚಕಗೊಳಿಸುವ ಪ್ರತ್ಯಯಗಳು ವಿಶೇಷಣರೂಪಗಳಿರುವ ಸಂಖ್ಯೆಯ ಶಬ್ದಗಳಿಗೆ ಮಾತ್ರ ಬರುವುದರಿಂದ ನೂಱು ಸಂಖ್ಯೆಗೆ ಆ ಪ್ರತ್ಯಯಗಳೂ ಇಲ್ಲ.

ಭಾಗ, ಕೊಂಚ, ಕಡಮೆ ಎಂದು ತಿಳಿಸುವ ಶಬ್ದಗಳಾದ ಕಾಲು< ಕಾಲ್, ಅರ/ಅರೆ—ಇವು ದೇಹಾಂಗಗಳ ಶಬ್ದಗಳಾಗಿದ್ದು, ಅರ್ಥವಿಕಾಸ ಹೊಂದಿವೆ. ಅರೆ ಎಂಬರ್ಥ ದಲ್ಲಿ ಸಂಸ್ಕೃತದ ಅರ್ಧ ಶಬ್ದವೇ ಹೆಚ್ಚಾಗಿ ಬಳಕೆಯಲ್ಲಿದೆ. ಮುಕ್ಕಾಲು (೩/೪) ಎಂಬ ಶಬ್ದ ಕೂಡ ಮೂರು + ಕಾಲು ಸೇರಿ ಆಗಿದೆ.

ಮೂಲದ್ರಾವಿಡ ಸಂಖ್ಯಾವಾಚಕಗಳ ಸ್ವರೂಪ ನಿರ್ದೇಶನ ಸ್ಥೂಲವಾಗಿ ಇಂತಿದೆ :

| | ವಿಶೇಷಣರೂಪ | ವಿಭಕ್ತಿಪ್ರಕೃತಿ ರೂಪ | ವಿಭಕ್ತಿಪ್ರಕೃತಿಗೆ ಬರುವ ರೂಪ |
|---|---|---|---|
| ಒಂದು | ಒರು [ವ | ಒನ್ತ್ತು ; ಒನ್ಜು | ಒನ್ [ತ್ |
| | ಓರ್ [ಸ | ಒಕ್ಕ್ | ಒರ್ [ಕ್ |

| | | | |
|---|---|---|---|
| ಎರಡು | ಇರು [ವ | ಇರಣ್ಟು/ಣ್ಡು | ಇರಳ್ > ಇರಣ್ [ತ್ |
| | ಈರ್ [ಸ | | ಇರಟ್ [ಇತರೆಡೆಗಳಲ್ಲಿ |
| ಮೂರು | ಮು [ವ | ಮೂನ್ತು-/ಮೂನ್ಱು | ಮೂನ್ [ತ್ |
| | ಮೂ [ಸ | | |
| ನಾಲ್ಕು | ನಾಲು [ವ | ನಾಲ್ಕು | ನಾಲ್ [ಕ್ |
| | ನಾಲ್ [ಸ | ನಾಂಕು/-ಗು | ನಾನ್ [ಕ್ |
| ಐದು | (ಯ್) ಚೈವ್ [ವ | ಚೈಮ್ತು | ಚೈವ್ [ತ್ |
| | (ಯ್) ಚೈ [ಸ | ಚೈಮ್ಕು | ಚೈಮ್ [ಕ್ |
| ಆರು | (ಯ) ಚಱು [ವ | ಚಾಱುತು | ಚಾಱು [ತ್/ಕ್ |
| | (ಯಾ) ಚಾಱು [ಸ | | |
| ಏಳು | ಏೞು [ವ | ಏೞ್ತು | ಏೞ್ [ತ್/ಕ್ |
| | ಏೞು [ಸ | | |
| ಎಂಟು | ಎಣ್ [ಸ/ವ | ಎಟ್ಟು | ಎಟ್ [ತ್<br>[ಎೞ್ > ಎೞ್ಟ್<br>> ಎಟ್] |
| ಒಂಬತ್ತು | ತೊಣ್ [ವ | ತೊಣ್ಟು | ತೊಣ್ [ತ್ |
| | ತೊಳ್ [ಸ | | |
| ಹತ್ತು | ಪನ್ [ಸ | ಪನ್ತು ; ಪತ್ತು | ಪನ್ [ತ್ |
| | | ಪತು | ಪತ್ [ತ್ |
| ನೂರು/ ನೂಱು | ನೂಱು | ನೂಱು | ನೂಱು |

ದಕ್ಷಿಣ ದ್ರಾವಿಡಭಾಷೆಗಳ, ಒಂದರಿಂದ ಎಂಟರತನಕ, ಹತ್ತು ಮತ್ತು ನೂರು ಈ ಸಂಖ್ಯೆಗಳಿಗೆ ಮೂಲದ್ರಾವಿಡ ಸಂಖ್ಯಾಆಕೃತಿಮಾಗಳನ್ನು ದಶಮಾನ ಪದ್ಧತಿಗೆ ಮೂಲ ಸರಳ ಆಕೃತಿಗಳೊಡನೆ ಪುನರ್ ರಚಿಸಲು ಸಹಾಯಕವಾಗಿವೆ. ಒಂಬತ್ತು ಎಂಬುದು ಹತ್ತರಲ್ಲಿ ಕಳೆಯುವಿಕೆಯಿಂದ, ವ್ಯವಕಲನ ಪದ್ಧತಿಯಿಂದ, ರೂಪಗೊಂಡಿದೆ. ಸಾವಿರ ಎಂಬ ಸಂಖ್ಯೆಯ ಮೂಲ ಆಕೃತಿಮಾವನ್ನು ಇಂಡೋ-ಆರ್ಯನ್ ಭಾಷೆಯಿಂದ ಸ್ವೀಕರಿಸಲಾಗಿದೆ. ಅದರಂತೆ ಸಾವಿರಕ್ಕಿಂತ ಹೆಚ್ಚಿನ ಮೊತ್ತ ಹೇಳುವ ಲಕ್ಷ, ಕೋಟಿ ಆಕೃತಿಮಾಗಳೂ ಆರ್ಯಭಾಷೆಯಿಂದ ಸ್ವೀಕರಣ ರೂಪಗಳು.

ದಕ್ಷಿಣ ದ್ರಾವಿಡ ಭಾಷೆಗಳನ್ನು ಬಿಟ್ಟು ಉತ್ತರ ಮತ್ತು ಮಧ್ಯದ್ರಾವಿಡ ಭಾಷೆಗಳಲ್ಲಿ ಸಂಖ್ಯಾವಾಚಕಗಳ ಪರಿಸ್ಥಿತಿ ಬೇರೆ. ಅಲ್ಲಿನ ಎಲ್ಲ ಭಾಷೆಗಳಲ್ಲೂ ಒಂದು ಮತ್ತು ಎರಡು ಸಂಖ್ಯೆ ಹೇಳುವ ಶಬ್ದಗಳು ದ್ರಾವಿಡವೇ. ಆದರೆ ಅಲ್ಲಿಂದ ಆಚಿನ ಶಬ್ದಗಳಲ್ಲಿ ವ್ಯತ್ಯಾಸಗಳಿವೆ. ಮಲ್ತೊ, ಕುವಿ ಮತ್ತು ಕುಈ ಭಾಷೆಗಳಲ್ಲಿ ಮೂರು ಮತ್ತು

ಅನಂತರದ ಸಂಖ್ಯಾವಾಚಕಗಳೆಲ್ಲಾ ದ್ರಾವಿಡೇತರ. ಬ್ರಾಹೂಇ ಭಾಷೆಯಲ್ಲಿ ನಾಲ್ಕರ ನಂತರದ ಶಬ್ದಗಳು ಹೀಗಾಗಿವೆ. ಕುರುಖ್‌ನಲ್ಲಿ ಅಯ್ದು ಮತ್ತು ಅನಂತರದವು ಸ್ವೀಕರಣ ಶಬ್ದಗಳು. ಆರು ಮತ್ತು ತರುವಾಯದ ಶಬ್ದಗಳು ಕೋಲಾಮಿಯಲ್ಲೂ, ಏಳು ಮತ್ತು ಆಮೇಲಿನ ಶಬ್ದಗಳು ಪರ್ಜಿಯಲ್ಲೂ, ಎಂಟು ಮತ್ತು ಆಮೇಲಿನವು ಲೆಚ್ಮಜಿಯುವರು ವಿವರಿಸಿರುವ ಕುಈ ಭಾಷೆಯಲ್ಲೂ ದ್ರಾವಿಡೇತರ ರೂಪಗಳು. ನಾಯಿಕಿ, ಒಲಲ್ಲಾರಿ, ಪೊಯು, ಕೊಂಡ ಮುಂಡ ಭಾಷೆಗಳ ವಿವರ ಸಾಲದು. ಕೋಲಾಮಿಯಲ್ಲಿ ತೆಲುಗಿನಿಂದ ಸ್ವೀಕರಣ ಹೆಚ್ಚು.

ಒಂದು : ಎಲ್ಲ ದ್ರಾವಿಡ ಭಾಷೆಗಳಲ್ಲಿ ಒರು. ತೆಲುಗು ಭಾಷೆಯಲ್ಲಿ ಮಾತ್ರ ಒಕ. ಒರ್ ಎಂಬುದು ಮೂಲ. ಒರು ರೂಪಕ್ಕೆ—ಉ ಎಂಬುದು ಸೇರುವುದು, ಬಹುಶಃ ಉಚ್ಚಾರ ಸೌಲಭ್ಯಕ್ಕಾಗಿ. ಸಮಾಸದಲ್ಲಿ—ಉ ಬಿದ್ದುಹೋಗುತ್ತದೆ. ಆದರೆ ತಮಿಳಿನಲ್ಲಿ ಸಮಾಸದಲ್ಲೂ—ಉ ಇದೆ; ಒರುವನ್, ಒರುವಳ್. ವಿಶೇಷಣರೂಪ ಒರ್ ಎಂದು ಇಟ್ಟುಕೊಳ್ಳಬಹುದು. ತುಳುವಿನಲ್ಲಂತೂ ಒರ್ ಎಂಬುದೇ ವಿಶೇಷಣ ರೂಪ. ಒರಿ=ಒಬ್ಬನು, ಒರ=ಒಮ್ಮೆ. ಸ್ವರಗಳು ಮುಂದೆ ಬಂದರೆ ಆಗ ಒರ್ > ಓರ್‌ಆಗುತ್ತದೆ. ಆದಿಹ್ರಸ್ವಸ್ವರ ದೀರ್ಘಸ್ವರವಾಗುತ್ತದೆ.

ತ. ಒರು + ಉಡಲ್ = ಓರುಡಲ್
ಕ. ಒರ್ + ಒಡಲ್ = ಓರೊಡಲ್

ಆದರೆ ತಮಿಳಿನಲ್ಲಿ ವ್ಯಂಜನಗಳು ಪರವಾದಾಗಲೂ ದೀರ್ಘತೆಯುಂಟು. ಕನ್ನಡದಲ್ಲಿಲ್ಲ; ಓರ್‌ನಾಟ್, ಓರ್‌ಮಾನ್ಯೆ, ಒರು, ಒರ್, ಓರ್ ಎಂಬ ರೂಪಗಳಲ್ಲಿ ಸಾಮಾನ್ಯ ರೇಫವಿದೆ. ಆದರೆ ತಮಿಳಿನಲ್ಲಿ ಒಂಟಿ ಎಂಬರ್ಥದಲ್ಲಿ ಒಱ್ಱೈ ಎಂಬ ರೂಪವಿದೆ. ಅದು ಒರ್ ಇಂದ ಬಂದುದೇ ಎಂಬ ಅನುಮಾನ ಬರುತ್ತದೆ. ಆದರೆ ಕೆಲವು ಜ್ಞಾತಿಭಾಷೆಗಳಲ್ಲಿ ಶಕಟ ರೇಫವಿರುವ ರೂಪಗಳಿವೆ. (ಗೋಂ. ಒಱಾಳ್ = ಒಬ್ಬನು). ಅಲ್ಲದೆ ಒಂದು ಎಂಬ ಸಂಖ್ಯೆಯನ್ನು ಹೇಳುವ ಎಲ್ಲ ದ್ರಾವಿಡ ಭಾಷೆಗಳ ಶಬ್ದಗಳಲ್ಲೂ ಒ : ಒ ಸ್ಪಷ್ಟ ಧ್ವನ್ಯಾತ್ಮಕ ಸಮಾನತೆ ಕಂಡುಬರುತ್ತದೆ. ಎರಡು ಅಪವಾದಗಳಿವೆ. ಕುಈ ಭಾಷೆಯಲ್ಲಿ ವಿಶೇಷಣರೂಪ ರ. (ಹೋ. ಬೆಹಿಸ್ತನ್. ವಿಶೇಷಣ ರೂಪ ಇರ್ರ್/ರ) ಕುರುಖ್‌ನಲ್ಲಿ ಉನ್ತಾ ಎಂದಿದೆ. ತುಲನಾತ್ಮಕ ಸಮೀಕ್ಷೆಯಿಂದ *ಒನ್ಱು : ವಿಶೇಷಣರೂಪ *ಒರ್/*ಓರ್ ಎಂದು ಪುನರ್ ರಚಿಸುವ ಸಾಧ್ಯತೆಯಿದೆ. ಒನ್ಱು ನಪುಂಸಕಲಿಂಗದ ರೂಪ; ಒರು ವ್ಯಂಜನಗಳು ಪರವಾದಾಗ ನಿಲ್ಲುವ ರೂಪ; ಓರ್ ಸ್ವರಗಳು ಪರವಾದಾಗ ಅಲ್ಲದೇ ತ್ ಪರವಾದಾಗ ಒನ್ ರೂಪವೂ ಉಂಟು.

ಒನ್ [ತ್. ಒರ್ [ತ, ಒರು [ವ, ಓರ್ [ಸ.
ಒನು ರೂಪಕ್ಕೆ ಮೂಲ *ಒನ್—+ *—ನ್—ತ್—*ನ್ ಇಲ್ಲಿ ದಂತ್ಯ ಧ್ವನಿ ತ್ ವರ್ತ್ಸ್ಯಧ್ವನಿ ಱ್ ಆಗಿದೆ. ಏಕೆಂದರೆ ಒನ್—ಕಡೆಯಲ್ಲಿ ವರ್ತ್ಸ್ಯ ಅನುನಾಸಿಕ ಧ್ವನಿಯಿದೆ. ಆದುದರಿಂದ ಸಮರೂಪಧಾರಣೆ ಸಹಜ. ಇರು/ಈರ್ ಸಾಮ್ಯದ ಮೇಲೆ ಒರು/ಓರ್ (ಱ್→ರ್) ಬಂದಿರಬಹುದೆಂಬ ಭಾವನೆಯೂ ಇದೆ. ತೆ. ಒಕ ಎಂಬುದು ಸಂಸ್ಕೃತದ ಏಕದಿಂದ ಇಲ್ಲವೇ ಏಕದಸಾಮ್ಯದಿಂದ ಬಂದಿಲ್ಲವೆಂದು ತೋರುತ್ತದೆ. ಒಕ್ಕ-ಶಬ್ದದ ಮೂಲಾರ್ಥ ತೆಲುಗು ಭಾಷೆಯಲ್ಲಿ ವ್ಯತ್ಯಾಸಹೊಂದಿದೆ.

ಒಂದು ಎಂಬ ಸಂಖ್ಯಾವಾಚಕಕ್ಕೆ 'ಒರ್' ಎಂಬುದು ವಿಶೇಷಣರೂಪವಾಗಿರುವದರಿಂದ ಒರ್ ಎಂಬುದೇ ಮೂಲರೂಪವಿರಬಹುದು. ಇದು ಒಂದು ಅಥವಾ ಏಕತೆಯನ್ನು ಸಂಕೇತಿಸುತ್ತದೆ. ಒನು > ಒರು ಎಂಬುದಕ್ಕಿಂತ ಒರು > ಒನು ರೂಪಗೊಂಡಿರುವ ಸಂಭವವೇ ಹೆಚ್ಚು. ಒಂದು ಎಂಬ ಸಂಖ್ಯೆಗೆ ಇರುವ ಮೂಲ ಶಬ್ದ ಮೊದಲಿಗೆ ನಾಮಪದವಾಗಿತ್ತೆಂದೂ; ಅದು (ಒರ್) ಶಾಖೆಗಳಿಲ್ಲದ ಒಂದು ಅಖಂಡ ಅಂಶವಾಗಿತ್ತೆಂದೂ—ಎರಡು ಅಭಿಪ್ರಾಯಗಳಿವೆ. ಮಲೆಯಾಳಮ್ ಭಾಷೆಯ ಒನ್ನ್—ರೂಪ: ಇದು ಒನು ರೂಪದಿಂದ ಉಚ್ಚಾರ ಮರ್ಯಾದೆಗಾಗಿ ಒನ್ನ್—ಆಗಿದೆ—ಒರ್← ಒನು← ಒನ್ದ್ರು← ಒನ್ದು← ಒಣ್ಣ← ಒನ್ನ್—ಹೋ. ಮ. ಮೂನ್ನ್—(ಮೂರು).

ಎರಡು: ಇದಕ್ಕೆ *ಇರಣ್ಡು ಎಂಬುದು ಮೂಲರೂಪ. ವಿಶೇಷಣರೂಪ *ಇರ್/ *ಈರ್. ಇರಣ್ಡು ಶಬ್ದಕ್ಕೆ *ಇರಣ್—(ಇರ್—ಅಣ್—) ಎಂಬ ವಿಭಾಗ ಸಾಧ್ಯ, ಹೋ. ತ. ಇರಣೈ=ಜೋಡಿ. 'ಇರು' ರೂಪ ವ್ಯಂಜನಗಳು ಪರವಾದಾಗ; ಈರ್ ರೂಪಸ್ವರಗಳು ಪರವಾದಾಗ. ಇಲ್ಲಿ ಕೂಡ *ಇರಣ್ಡು <*ಇರಣ್—+* —ತು (ದಂತ್ಯ 'ತ್' ಪ್ರತಿವೇಷ್ಟಿತ 'ಣ್'ಡೊಡನೆ ಸಮರೂಪಧಾರಣೆ ಪಡೆದಿದೆ). ಅಲ್ಲದೆ—ತು ಪ್ರತ್ಯಯ ಅಯ್‌ನ್‌ತು (→ಅಯ್‌ನ್ದು) ಪತ್ತು ಸಂಖ್ಯಾವಾಚಿಗಳಲ್ಲಿ ನಂತೆ ಇಲ್ಲಿ ಗುರುತಿಸಲು ಸುಲಭಸಾಧ್ಯವಾಗದು. ಇರಳ್ <ಇರಣ್ [ತ್→ ಇರಟ್ಟ್—ಎಂಬ ವಿಕಾಸವನ್ನು ತೋರಿಸಿದ್ದಾರೆ. ವರ್ಣಪಲ್ಲಟದಿಂದಾಗಿ ತೆಲುಗು ಭಾಷೆಯಲ್ಲಿ 'ರೆಣ್ಡು' ರೂಪವಿದೆ. ಕೊಲಾಮಿ, ನಾಯ್ಕಿ, ಒಲ್ಲಾರಿ ಭಾಷೆಗಳಲ್ಲಿ ಎರಡು ವಸ್ತುಗಳು ಎಂಬ ಅರ್ಥದಲ್ಲಿ ಬರುವ ಜ್ಞಾತಿರೂಪಗಳು ಇಂತಿವೆ: ಕೋಲಾ, ನಾಯ್ಕಿ, ಇನ್ದಿಱ್ಗ್, ಒಲ್ಲಾರಿ ಇನ್ಡಿ. ಕೋಲಾಮಿ, ನಾಯ್ಕಿ ಮತ್ತು ಪರ್ಜಿ (ಇರ್ಡು) ಭಾಷೆಗಳು ದ್ರಾವಿಡಭಾಷಾಪರಿವಾರದ ಒಂದು ಉಪ

ಶಾಖೆಯಂತಿರುವುದರಿಂದ ಅವುಗಳಿಗೆ *ಇನ್—ಇ—ಎಂಬ ಮೂಲರೂಪವನ್ನು ಕಲ್ಪಿಸಬಹುದು. ಇದು ಒನ್ರು, ಮೂನು ರೂಪಗಳ ಪ್ರಭಾವಿತ ರೂಪವೆನ್ನ ಬಹುದು. ಸಮಾಸಗಳಲ್ಲಿ ಬರುವ ಎರಟಟ್ ಎಂಬ ರೂಪ ಕನ್ನಡಕ್ಕೆ ವಿಶೇಷ ವಾದುದು : ಹೋ. ಎರಟುಮಾತು. ಕ. ಎರಡು ಎಂಬುದೇ ಮೂಲರೂಪವಾಗಿದ್ದು (ಇದಕ್ಕೆ *ಇರಡು ಮೂಲರೂಪವಿರಬಹುದು), ಅನಂತರದ ರೂಪವಾಗಿ ಇರಣ್ಡು ಬಂದಿರಬಹುದೆಂದೂ ಅಭಿಪ್ರಾಯವಿದೆ. ಇದರಲ್ಲಿ ಡ್ > ಣ್ಡ್ ಆಗುವಾಗ ಅನುನಾಸಿಕತ್ವ ಬಂದಿರುವುದು ಉಚ್ಚಾರ ಸೌಲಭ್ಯಕ್ಕಾಗಿ. ಇದರಂತೆ ಇರಟ್ಟಿ ಎಂಬ ರೂಪ ಕೂಡ ಎರಡು ಎಂಬ ರೂಪದಿಂದ ಬಂದಿದೆ. —ಡ್ಡ > —ಟ್ಟ —ಇದು ನಿಯಮಕ್ಕೆ ಅನುಸಾರವಾಗಿದೆಯೆಂದೂ ವಿವರಣೆಯಿದೆ; ಇರು/ಈರ್ : ಒರು/ಓರ್ ಇರುವಂತೆ. ಇಲ್ಲಿ ಕೂಡ ಇರು (ಇರ್+ಉ) ಶಬ್ದಾಂತ್ಯದ—ಉ ಬಿಟ್ಟದ್ದರಿಂದ ಆದರ ಕೊರತೆ ಹೋಗಿಸಲು ಆದಿಸ್ವರ ದೀರ್ಘವಾಗಿದೆ (ಈರ್). (೧) ಈರ್ (= ನೋಡುವುದು) ಧಾತುವಿನಿಂದ ಇರಾ (= ರಾತ್ರಿ) ಇರುಳ್ (=ಕತ್ತಲೆ) ಶಬ್ದಗಳು ಬಂದಿರುವಂತೆ ಎರಡು ಸಂಖ್ಯಾವಾಚಕ ಶಬ್ದ ರೂಪಿತವಾಗಿದೆಯೆಂದೂ, (೨) ಈರ್ (= ಸೀಳು, ಕವಲೊಡಿ) ಎಂಬುದರಿಂದ ಎರಡು ಸಂಖ್ಯಾವಾಚಕ ಬಂದಿದೆಯೆಂದೂ ಎರಡು ಅಭಿಪ್ರಾಯಗಳಿವೆ.

ಈ ಸಂಖ್ಯಾವಾಚಕದ ಧ್ವನಾತ್ಮಕ ಸಮಾನತೆಯಲ್ಲಿ ತೆಲುಗು (ರೆಡ್ಡು) ಕನ್ನಡ (ಎರಟಟ್) ವಲ್ಲದೆ ಕೋತ ಭಾಷೆಯ ರೂಪಗಳಲ್ಲೂ ಒಂದೆರಡು ಸಂದೇಹಗಳಿವೆ. ಅದರಲ್ಲೂ ಕೋತ. ಎಯದ್ ವಿವರಣೆಯಲ್ಲಿ ತೊಡಕಿದೆ. ಇದು ಸ್ವೀಕರಣ ರೂಪವಲ್ಲ. ಪ್‌ಧ್ವನಿ ಡ್ ಧ್ವನಿಯು ಬದಲು ಬಂದಿದೆ. ಇದು ಕೋತ ಭಾಷೆಯಲ್ಲೇ ಮೂರು ಎಂಬ ಸಂಖ್ಯಾವಾಚಕಕ್ಕೆ ಇರುವ ಮೂನ್‌ದ್ ಶಬ್ದದ ಸಾಮ್ಯದಿಂದ ಬಂದಿರಬೇಕು. ಜೊತೆಗೆ ಒದ್ (=ಒಂದು) ಕೂಡ, ಮೂನ್‌ದ್ (=ಮೂರು) ಇರುವಂತೆ, ಎಯದ್ ರೂಪದಲ್ಲಿನ ದ್ ಕ್ಕೆ ಮಾದರಿಯಾಗಿದೆ. ಈ ಸಾಮ್ಯರೂಪ ಸಿದ್ಧಿಸಿರಬಹುದಾದ ರೀತಿ :

ಒಂದು→ಒದ್

ಮೂರು→ಮೂನ್‌ದ್ರ್

ಆದುದರಿಂದ—ಎರಡು→ಎಯ್‌ದ್

ಆದರೂ ಕೋತ ಭಾಷೆಯ ಎಯದ್ ರೂಪದಲ್ಲಿರುವ—ಯ್—ಧ್ವನಿಗೆ ವಿವರಣೆ ಕಷ್ಟ. *ಎರಣ್ಟ್—ಇ→*ಎಡ್‌ಯ್→ಎಯ್‌ದ್ ಆಗಿರಬಹುದು.

ಮೂರು : *ಮೂನು : *ಮೂಜ್—ನ್—ಜ್—ಇದು ಕನ್ನಡದಲ್ಲಿ ಆದ ಸರಳೀ ಕರಣ, ಮ್ > ನ್, ನ್ತ್ > ದ್ ಆದಂತೆ ವಿಶೇಷಣರೂಪ ಮೂನ್ [ತಾ←

ಮೂನ್ರು (ಮೂನ್ದು)
ಮು—ರೂಪ ವ್ಯಂಜನಗಳು ಪರವಾದಾಗ
ಮೂ—ರೂಪ ಸ್ವರಗಳು ಪರವಾದಾಗ
ಕನ್ನಡದಲ್ಲಿರುವ ಮೂಱು ಎಂಬ ರೂಪ ಮೂನು ಎಂಬ ಅನುನಾಸಿಕದ ರೂಪಕ್ಕಿಂತ ಹಳೆಯ ಮೂಲರೂಪವಿರಬಹುದೆಂದೂ ಭಾವಿಸಲಾಗಿದೆ. ಅಂದರೆ ಒರು > ಒನು ಆದಂತೆ ಮೂಱು > ಮೂನು ಆಗಿರಬಹುದೆಂದು. ರ್ > ಡ್ ಆಗುವುದು ತೆಲುಗು ಭಾಷೆಯಲ್ಲಿ ಸಾಮಾನ್ಯ. ಅದರಂತೆ. ಮೂಱು > ಮೂರು > ಮೂಡು ಆಗಿರಬಹುದು. ಈ ಸಂಖ್ಯಾವಾಚಕ ಶಬ್ದಗಳಲ್ಲಿ ಸ್ಪಷ್ಟ ಧ್ವನ್ಯಾತ್ಮಕ ಸಮಾನತೆ ಕಂಡುಬರುತ್ತದೆ. ಕೋತ ಮತ್ತು ಕೊಡಗು ಭಾಷೆಗಳಲ್ಲಿ ಕ್ರಮವಾಗಿ *ನ್ಱ್→ನ್‌ದ್→ನ್‌ದ್ ಆಗಿದೆ.

ನಾಲ್ಕು: * ನಾಲ್: ವ್ಯಂಜನ ಪರವಾದಾಗ * ನಾಲ್ ಅಲ್ಲದೆ * ನಾನ್ ಎಂಬ ರೂಪವು ನಿಲ್ಲುತ್ತದೆ. ಉದಾ: ನಾಲ್ಕು, ನಾನ್ಗು (ತೊದ ನೋನ್ಗ್). ಕುರುಖ್ ಭಾಷೆಯಲ್ಲಿ 'ನಾಖ್' ಎಂಬ ರೂಪವಿದೆ. ಇದರ ಆಧಾರದಿಂದ *ನಾ—ಅಷ್ಟನ್ನೇ ಇಟ್ಟುಕೊಳ್ಳಬಹುದೆ? ಹೋ. ಕ. ನಾಕು. ಸ್ವರ ಪರವಾದಾಗ ನಾಲ್ ಮತ್ತು ವ್ಯಂಜನಪರವಾದಾಗ ನಲು ಎಂಬ ವಿಶೇಷಣ ರೂಪಗಳುಂಟು.

ಅಯ್ದು: ಅಯ್ದು ಎಂಬ ಸಂಖ್ಯಾವಾಚಕಕ್ಕೆ ಪುನರ್ ರಚನೆ *ಚ್—ಆಗುತ್ತದೆ. ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಶಬ್ದಾದಿಯ ಈ ಧ್ವನಿ ಮರೆಯಾಗಿದೆ. ಆ ಈ ಧ್ವನಿ ಮಧ್ಯಭಾರತದ ಕೆಲವು ದ್ರಾವಿಡ ಭಾಷೆಗಳಲ್ಲಿ ಉಳಿದಿದೆ.
ಉದಾ:

| | |
|---|---|
| ಕೋಲಾಮಿ | ಸೆಗುರ್ = ಅಯ್ವರು. |
| ಪರ್ಜಿ | ಚೆವಿರ್ = ಅಯ್ವರು. |
| ಗೋಂಡಿ | ಸೈಯುಂಗ್/ಹಯುಂಗ್ = ಅಯ್ದು. |
| ಕುಈ | ಸಿಂಗಿ = ಅಯ್ದು. |

ಶಬ್ದಾದಿಯಲ್ಲಿ *ಚ್—/ *ಯ್ ಎರಡನ್ನೂ ಪುನರ್ ರಚಿಸುವ ಸಾಧ್ಯತೆ ಉಂಟೆಂಬ ಅಭಿಪ್ರಾಯವೂ ಇದೆ. ಬಹುಶಃ ದಕ್ಷಿಣ ದ್ರಾವಿಡಕ್ಕೆ ಯ್ ಇಲ್ಲವೇ *ಆಯ್‌ನ್‌ತು→ಅಯ್‌ನ್ದು→ಅಯ್ದು (→ಐದು) ಸಾಧ್ಯವಿರಬಹುದು. ಮೂಲ ದ್ರಾವಿಡಕ್ಕೆ ಮಾತ್ರ,

ಚೈಮ್ [ತ್→ಚೈಮ್ತು/ಚೈಮ್ದು
ಚೈಮ್ [ಕ್→ಚೈಮ್ಕು

ಎಂಬೆರಡು ರೂಪಗಳನ್ನು ತೋರಿಸಬಹುದು. ಇವುಗಳಲ್ಲಿ ಚೈಮ್ ವಿಶೇಷಣ

ರೂಪವಾಗಿ ನಿಲ್ಲುವಂತೆ. ಚೈ—/ಚಯ್—ಎಂಬಷ್ಟನ್ನೇ ವಿಶೇಷಣರೂಪವನ್ನಾಗಿ ಪರಿಗಣಿಸಬಹುದು.

ಆರು < ಆಱು: ಎಂಬ ಸಂಖ್ಯಾವಾಚಕಕ್ಕೂ ಶಬ್ದಾದಿಯ ಪುನರ್ ರಚನೆ * ಚ್—ಎಂದಾಗುತ್ತದೆ. ಮೇಲೆ ಹೇಳಿದ ಸಂಖ್ಯಾವಾಚಕಕ್ಕೆ ಆದಂತೆ, ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಈ ಧ್ವನಿ ಮರೆಯಾಗಿದೆ. ಮಧ್ಯಭಾರತದ ಕೆಲವು ದ್ರಾವಿಡ ಭಾಷೆಗಳಲ್ಲಿ ಉಳಿದಿದೆ. ಉದಾ:

ಗೋಂಡಿ. ಸಾರುಂಗ್/ಹಾರುಂಗ್/ಹ—

ಕುಯಿ. ಸಜ್ಜಿ

ಮೂಲದ್ರಾವಿಡಕ್ಕೆ ಪುನರ್‌ರಚಿತ ರೂಪ *ಚಾಱು, ಚಾಱುತು. ಇದಕ್ಕೆ ವಿಶೇಷಣರೂಪ ಸ್ವರಗಳು ಪರವಾದಾಗ ಚಾಱು, ವ್ಯಂಜನಪರವಾದಾಗ ಚಱು. ಶಬ್ದಾದಿಯ ಧ್ವನಿಯಾಗಿ *ಚ್—ಜೊತೆಗೆ *ಯ್—ಧ್ವನಿಯ ಸಾಧ್ಯತೆಯನ್ನೂ ಯೋಚಿಸಿದ್ದಾರೆ.

ಏಳು < ಏೞು: * ಏೞ್ [ತ್ / ಕ್. ವಿಶೇಷಣರೂಪ. ಸ್ವರಗಳು ಪರವಾದಾಗ ಏೞು, ವ್ಯಂಜನಗಳು ಪರವಾದಾಗ ಏೞ್.

ಎಂಟು: *ಎಟ್ಟು/ಎೞ್ [ತ್. ವಿಶೇಷಣರೂಪ *ಎಣ್. ಇದರಲ್ಲಿ *ಎಳ್ತ→*ಎೞ್ಟ→ಎಟ್ಟ್→ಎಟ್ಟು ಎಂಬ ಸಾಧ್ಯತೆಯನ್ನೂ ತೋರಿಸಿದ್ದಾರೆ.

ಒಂಬತ್ತು: ಅಯ್ದು ಮತ್ತು ಆರನ್ನು ಬಿಟ್ಟರೆ ದ್ರಾವಿಡ ಭಾಷೆಗಳಲ್ಲಿ ತೊಡಕಾದ ಸಂಖ್ಯಾವಾಚಕವೆಂದರೆ ಒಂಬತ್ತು. ಮೂಲ ದ್ರಾವಿಡಕ್ಕೆ *ತೊಳ್ ಮತ್ತು* ತೊಣ್ ಎಂಬುದನ್ನು ಪುನರ್ ರಚಿಸಲಾಗಿದೆ. ಇದರಲ್ಲಿ ವ್ಯಂಜನಗಳು ಪರವಾದಾಗ ತೊಣ್ ಮತ್ತು ಸ್ವರಗಳು ಪರವಾದಾಗ ತೊಳ್ ಎಂಬ ರೂಪಗಳನ್ನಿಟ್ಟುಕೊಳ್ಳುವ ಸಾಧ್ಯತೆಯನ್ನು ಸೂಚಿಸಿದ್ದಾರೆ. ಅಲ್ಲದೆ ತೊಳ್ ಎಂಬ ಆಕೃತಿಮಾಗೆ ಒನ್, ತೊಣ್, ತೊಳ್ ಎಂಬುವು ಉಪಾಕೃತಿಗಳು.

ತೊಳ್ { ಒನ್ / ತೊಳ್ / ತೊಣ್ }

ಹತ್ತು < ಪತ್ತು: * ಪತ್ತು. *ಪನ್ [ತ್→ಪನ್ತು / *ಪತ್ [ತ್→ಪತ್ತು ಪತು/ಪದು

ವಿಶೇಷಣರೂಪ ಸ್ವರಗಳು ಪರವಾದಾಗ *ಪನ್—

ನೂರು < ನೂಱು: *ನೂಱ್

ದಕ್ಷಿಣ ದ್ರಾವಿಡ ಭಾಷೆಗಳಲ್ಲಿರುವ ಸಂಖ್ಯಾವಾಚಕಗಳಲ್ಲಿ ಒಂದರಿಂದ ಎಂಟರ ತನಕ, ಹತ್ತು, ಮತ್ತು ನೂರು—ಈ ಸಂಖ್ಯೆಗಳಿಗೆ ಮೂಲ ದ್ರಾವಿಡ ಸಂಖ್ಯಾ ಆಕೃತಿ ಮಾಗಳನ್ನು ದಶಮಾನ ಪದ್ಧತಿಗೆ ಮೂಲ ಸರಳ ಆಕೃತಿಗಳೊಡನೆ ಪುನರ್ ರಚಿಸಲು ಸಹಾಯಕವಾಗಿವೆ. ಒಂಬತ್ತು ಎಂಬುದು ಹತ್ತರಲ್ಲಿ ಕಳೆಯುವಿಕೆಯಿಂದ, ವ್ಯವಕಲನ ಮಾದರಿಯಲ್ಲಿ ರೂಪಗೊಂಡಿದೆ. ಸಾವಿರ ಎಂಬ ಸಂಖ್ಯೆಯ ಮೂಲ ಆಕೃತಿಮಾವನ್ನು ಇಂಡೋ–ಆರ್ಯನ್ ಭಾಷೆಯಿಂದ ಸ್ವೀಕರಿಸಲಾಗಿದೆ. ಆದರಂತೆ ಸಾವಿರಕ್ಕಿಂತ ಹೆಚ್ಚಿನ ಮೊತ್ತ ಹೇಳುವ ಲಕ್ಷ, ಕೋಟಿ ಆಕೃತಿಮಾಗಳೂ ಸ್ವೀಕೃತ. ದಕ್ಷಿಣ ದ್ರಾವಿಡ ಬಿಟ್ಟು ಉತ್ತರದ್ರಾವಿಡ ಭಾಷೆಗಳಲ್ಲಿ ಸಂಖ್ಯಾವಾಚಕಗಳ ಪರಿಸ್ಥಿತಿ ಬೇರೆ. ಅಲ್ಲಿನ ಎಲ್ಲ ಭಾಷೆಗಳಲ್ಲೂ ಒಂದು ಮತ್ತು ಎರಡು ಸಂಖ್ಯೆಗಳ ಶಬ್ದಗಳು ದ್ರಾವೇ. ಅಲ್ಲಿಂದ ಆಚಿನ ಶಬ್ದ ಗಳಲ್ಲಿ ವ್ಯತ್ಯಾಸಗಳಿವೆ. ಮಲ್ಟೊ ಕುವಿ ಮತ್ತು ಕುಈ ಭಾಷೆಗಳಲ್ಲಿ ಮೂರು ಮತ್ತು ಅನಂತರದವು ದ್ರಾವಿಡೇತರ. ಬ್ರಾಹೂಯಿ ಭಾಷೆಯಲ್ಲಿ ನಾಲ್ಕರ ನಂತರದ ಶಬ್ದಗಳು ಹೀಗಾಗಿವೆ. ಕುರುಖ್‌ನಲ್ಲಿ ಆಯ್ದು ಮತ್ತು ಅನಂತರದವು ಸ್ವೀಕರಣ ಶಬ್ದಗಳು. ಆರು ಮತ್ತು ತರುವಾಯದ ಶಬ್ದಗಳು ಕೊಲಾಮಿಯಲ್ಲೂ, ಏಳು ಮತ್ತು ಮೇಲಿನ ಶಬ್ದಗಳು ಪರ್ಜಿಯಲ್ಲೂ, ಎಂಟು ಮತ್ತು ಆಮೇಲಿನವು ಲೆಚ್ಮಜೀ ಅವರು ವಿವರಿಸಿರುವ ಕುಈ ಭಾಷೆಯಲ್ಲೂ ದ್ರಾವಿಡೇತರ ಸಂಖ್ಯಾವಾಚಕಗಳು.

ಕೇಶಿರಾಜ ಸಂಖ್ಯಾವಾಚಕ ಹಾಗೂ ಪರಿಮಾಣವಾಚಕಗಳನ್ನು ನಾಮಪ್ರಕರಣದಲ್ಲಿ ತಿಳಿಸಿದ್ದಾನೆ.

| ಹ. ಗ. | ನ. ಗ. | ಪ್ರತ್ಯಯ | ಹ. ಗ. | ಹೊ. ಗ. |
|---|---|---|---|---|
| ಅನಿತು | ಅನಿಸು : ಆಸು | + —ಟು | ಅಂತುಟು | ಅಷ್ಟು |
| ಇನಿತು | ಇನಿಸು : ಈಸು | | ಇಂತುಟು | ಇಷ್ಟು |
| ಎನಿತು | ಎನಿಸು : ಏಸು | | ಎಂತುಟು | ಎಷ್ಟು |

/—ಟು/ ಪ್ರತ್ಯಯ ಸೇರಿದಮೇಲೆ ಶಬ್ದಗಳು ಮತ್ತೆ ರೂಪಾಂತರ ಹೊಂದಿವೆ. ಇವುಗಳಲ್ಲಿ ಕೆಲವು ಗ್ರಾಮ್ಯರೂಪಗಳಂತಿವೆ :

ಆಟು : ಆಟೊಂದು
ಈಟು : ಈಟೊಂದು
ಏಟು : ಏಟೊಂದು
ಓಟು : ಒಷ್ಟು / ಒಷ್ಟೊ : ಓಸು / ಓಸೊಂದು : ಓಸಾಳು

ಹಳಗನ್ನಡದಲ್ಲಿ—ಅನೆಯ ಎಂಬುದು ಸಂಖ್ಯೆಗೂ ಪರಿಮಾಣಕ್ಕೂ ಸೇರುತ್ತಿದ್ದ ಪ್ರತ್ಯಯ. ತೆಲುಗು —ಅವ (ಮೂಡವ), ತ. —ಆಮ್ (ಮೂನ್ರಾಮ್), ತೆ. —ಟ (ಮೊದಟ) ತ. —ಲ್(ಮುದಲ್), ಕ. ಮೊದಲು ಇವೆಲ್ಲಾ *ಮು—ದಿಂದ

ಮುಸ್—, ಮುನ್ನ—, ಮುದಲ ಎಂಬಂತೆ ವಿಕಾಸವಾಗಿರಬಹುದು. ದ್ರಾವಿಡದ ಈ ಮು— ಸಂಸ್ಕೃತದಲ್ಲಿ ಪ್ರ—ಸಂವಾದಿಯಂತಿದೆ.

ಹ. ಗ. ಪ್ರಯೋಗ : ಅನಿತನೆಯಂ, ಒಂದನೆಯಂ

ಹೊ. ಗ. ಪ್ರಯೋಗ: ಅಷ್ಟನೆಯ, ಒಂದನೆಯ

ಅಲ್ಲದೆ ಹೊಸಗನ್ನಡದಲ್ಲಿ ಅನೆಯ ಪ್ರತ್ಯಯ > ಅನೇ/ಅನೆ ಎಂದಾಗಿರುವುದೂ ಉಂಟು.

ಉದಾ :

ಒಂದನೇ ತರಗತಿ : ಒಂದನೆ (ಒಂದ್ನೆ) ಪುಸ್ತಕ
ಎರಡನೇ ಮನೆ : ಎರಡನೆ (ಎರಡ್ನೆ) ಮನೆ
ಮೂರನೇ ಮಗು : ಮೂರನೆ (ಮೂರ್ನೆ) ಮಗು

ಸಂಖ್ಯಾವಾಚಕಗಳಲ್ಲಿ ಅನೆಯ ಎಂಬ ಪ್ರತ್ಯಯ ಸೇರಿದ ಶಬ್ದಗಳು ನಾಮಪದಗಳಿಗೆ ವಿಶೇಷಣಗಳಾಗುತ್ತಿದ್ದವು. —ಮಡಿ ಎಂಬ ಪ್ರತ್ಯಯವೂ ಸೇರುತ್ತಿತ್ತು : ಒರ್ಮಡಿ, ಇರ್ಮಡಿ, ಇಮ್ಮಡಿ, ಮುಮ್ಮಡಿ, ನಾಲ್ಮಡಿ, ನೂರ್ಮಡಿ, ಸಾಸಿರ್ಮಡಿ. —ಪಟ್ಟು ಎಂಬುದೂ ಉಂಟು : ಒಂದು ಪಟ್ಟು, ಎರಡು ಪಟ್ಟು, ನೂರ್ಪಟ್ಟು.

ಹಳೆಗನ್ನಡದಲ್ಲಿ ಸಂಖ್ಯಾವಾಚಕಗಳ ಮೂಲ ಆಕೃತಿಗಳು ಪ್ರತ್ಯಯಗಳನ್ನು ಪಡೆದು ಪುರುಷವಾಚಕಗಳಾಗುತ್ತಿದ್ದವು: ಒರ್ವನ್, ಒರ್ವಳ್, ಇರ್ವರ್, ಮೂವರ್, ನಾಲ್ವರ್, ಅಯ್ವರ್, ನೂರ್ವರ್.

ಇವುಗಳಲ್ಲಿ ಕೆಲವು ಮಾತ್ರ ಹೊಸಗನ್ನಡದಲ್ಲಿ ಬಳಕೆಯಲ್ಲಿವೆ : ಒಬ್ಬ(ನು), ಒಬ್ಬಳು, ಇಬ್ಬರು, ಮೂವರು, ನಾಲ್ವರು, ಅಯ್ವರು. ಆದರೆ ಹೊಸಗನ್ನಡದಲ್ಲಿ ಬಹು ಮಟ್ಟಿಗೆ ಮೂರರಿಂದ ಮುಂದಿನ ಸಂಖ್ಯಾವಾಚಕಗಳ ಪುರುಷವಾಚಕಗಳು ರೂಢಿಯಲ್ಲಿಲ್ಲ. ಮೂರರ ತರುವಾಯದ ಪುರುಷವಾಚಕ ಸಂಖ್ಯಾರೂಪಕ್ಕೆ ಮಂದಿ ಇಲ್ಲವೆ ಜನ ಎಂಬ ಶಬ್ದಗಳನ್ನು ಸೇರಿಸುವರು : ಆರು ಜನರು, ಸಾವಿರಾರು ಮಂದಿ. ಕೆಲವರು, ಹಲವರು, ಎಲ್ಲರೂ > ಎಲ್ಲರೂ > ಎಲ್ರೂ ಎಂಬ ರೂಪಗಳ ಜೊತೆಗೆ ಅನೇಕರು ಎಂಬ ಸಂಸ್ಕೃತ ಶಬ್ದವನ್ನು ಸಂಖ್ಯಾಪುರುಷವಾಚಕವನ್ನಾಗಿ ಹೊಸಗನ್ನಡದಲ್ಲಿ ಬಳಸುತ್ತೇವೆ. ಹಳಗನ್ನಡದಲ್ಲಿ ಇವುಗಳಲ್ಲಿ ಒಂದೊಂದಕ್ಕೂ ಒಂದಕ್ಕಿಂತ ಹೆಚ್ಚು ರೂಪಗಳಿದ್ದವು.

ಕೆಲವರು : ಕೆಲವರ್, ಕೆಲಂಬರ್, ಕೆಲಬರ್, ಕೆಲರ್
ಹಲವರು : ಪಲವರ್, ಪಲಂಬರ್, ಪಲಬರ್, ಪಲರ್
ಎಲ್ಲರೂ : ಎಲ್ಲರ್, ಎಲ್ಲವರ್

ಕಾಲವಾಚಕಕ್ಕೆ ಸೇರಿದಂತೆ ಹಳಗನ್ನಡದಲ್ಲಿ ಒರ್ಮೆ, ಇರ್ಮೆ, ಪಲರ್ಮೆ, ಸಾಸಿರ್ಮೆ ಶಬ್ದಗಳಿದ್ದುವು. ಇವುಗಳಲ್ಲಿ ಹೊಸಗನ್ನಡದಲ್ಲಿ 'ಒಮ್ಮೆ' ಎಂಬ ಶಬ್ದ ಮಾತ್ರ ಉಳಿದು ಬಂದಿದೆ. ಮಿಕ್ಕ ಮಾತುಗಳಿಗೆ ಪಡಿಯಾಗಿ –ಸಾರಿ, –ಬಾರಿ, –ಸಲ, –ತಡವೆ, –ತಡ, –ಸರ್ತಿ, –ದಫ(ಪ), –ಕಿತ್ತ, –ವೇಳೆ ಮೊದಲಾದುವು ಬಳಕೆಯಲ್ಲಿವೆ.

# ಮೂಲದ್ರಾವಿಡ ಭಾಷೆಯ ಧ್ವನಿವ್ಯವಸ್ಥೆ

ಎರಡು ಇಲ್ಲವೇ ಹೆಚ್ಚು ಭಾಷೆಗಳಲ್ಲಿ ಒಂದೇ ಪರಿಸರದಲ್ಲಿ ಧ್ವನಿವ್ಯತ್ಯಾಸಗಳು ನಡೆದಿದ್ದರೆ ಅಂತಹ ಭಾಷೆಗಳನ್ನು ಒಂದು ಗುಂಪಿಗೆ ಸೇರಿದ ಭಾಷೆಗಳೆಂದು ಹೇಳಬಹುದು. ಅಂತಹ ಭಾಷೆಗಳಲ್ಲಿ ಆಗಿರುವ ವ್ಯತ್ಯಾಸಗಳ ಆಧಾರದ ಮೇಲೆ ಅವುಗಳಿಗೆ ಮೂಲವಾಗಿದ್ದಿರಬಹುದಾದ ಭಾಷೆಯನ್ನು ಪುನರ್ ರಚಿಸಬಹುದು. ಕನ್ನಡ, ತೆಲುಗು, ತಮಿಳು, ಮಲೆಯಾಳ ಮೊದಲಾದ ಭಾಷೆಗಳಿಗೂ ಇದೇ ರೀತಿ ಮೂಲವಾಗಿದ್ದಿರಬಹುದಾದ ಭಾಷೆಯನ್ನು ಪುನರ್ ರಚಿಸುವ ಪ್ರಯತ್ನ ನಡೆದಿದೆ. ಆ ಪುನರ್ ರಚಿತ ಮೂಲಭಾಷೆಯನ್ನು ಮೂಲದ್ರಾವಿಡವೆಂದು ನಿರ್ದೇಶಿಸಿದೆ. ಆ ಮೂಲದ್ರಾವಿಡ ಧ್ವನಿವ್ಯವಸ್ಥೆಯ ವಿಚಾರ ನೋಡೋಣ.

ಈ ಶತಮಾನದ ಮೊಟ್ಟಮೊದಲನೆಯ ದಶಕದಲ್ಲೇ ಮೂಲದ್ರಾವಿಡ ಭಾಷೆಯ ಧ್ವನಿವ್ಯವಸ್ಥೆಯನ್ನು ಕುರಿತು ವಿವೇಚಿಸುತ್ತಾ ಕೆ. ವಿ. ಸುಬ್ಬಯ್ಯ ಎಂಬ ವಿದ್ವಾಂಸ ಲೇಖನ ಬರೆದನು.[1] ಆತ ಆ ವಿದ್ವತ್‌ಪೂರ್ಣ ಉಪಯುಕ್ತ ಲೇಖನದಲ್ಲಿ ನಿರೂಪಿಸಿದ ಒಂದೆರಡು ಅಂಶಗಳು ದೋಷಯುಕ್ತವಾಗಿರುವುದು ತರುವಾಯದ ಸಂಶೋಧಕರಿಗೆ ಸಕಾರಣವಾಗಿ ತೋರಿಬಂದಿದೆ. ಆದರೂ ಪ್ರಾರಂಭದ ಪ್ರಯತ್ನವನ್ನು ಅಲ್ಲಗಳೆಯುವಂತಿಲ್ಲ. ಆದುದರಿಂದ ಆಧುನಿಕ ಧ್ವನಿವಿಜ್ಞಾನಿಗಳ ದೃಷ್ಟಿಯಲ್ಲಿ ಮೂಲದ್ರಾವಿಡ ಭಾಷೆಯ ಧ್ವನಿವ್ಯವಸ್ಥೆಯನ್ನು ನಿರೂಪಿಸುವ ಮೊದಲು ಹಿಂದಿನ ಅಭಿಪ್ರಾಯಗಳನ್ನು ಪರಿಶೀಲಿಸುವುದು ಅಗತ್ಯ. ಮೂಲದ್ರಾವಿಡ ಭಾಷೆಯ ಸ್ವರಗಳನ್ನು ಹ್ರಸ್ವ, ದೀರ್ಘ, ಹಾಗೂ ಅನುನಾಸಿಕ ಸ್ವರಗಳೆಂದು ಮೂರು ತೆರನಾಗಿ ವರ್ಗೀಕರಿಸಿದ್ದಾರೆ.

| | | |
|---|---|---|
| ಸ್ವರಗಳು : | ಹ್ರಸ್ವ ಸ್ವರ : | ಅ ಇ ಉ ಎ ಒ |
| | ದೀರ್ಘ ಸ್ವರ : | ಆ ಈ ಊ ಏ ಓ ಲ್ಯ |
| | ಅನುನಾಸಿಕ ದೀರ್ಘಸ್ವರ : ಲ್ಯ[2] | |

[1] K. V. Subbayya, *A Primer of Dravidan Phonology, IA*: Vol. XXXVIII, 1909, pp. 159, 188, 201

[2] ಇದು ಏ ಮತ್ತು ಅ ಗಳ ನಡುವಣ ಧ್ವನಿ.

ಮೂಲ ದ್ರಾವಿಡ ಭಾಷೆಯ ಸ್ವರವ್ಯವಸ್ಥೆ ಸರಳವೂ, ಸುಲಭವೂ ಆಗಿತ್ತು. ಅದರಲ್ಲಿ ಸಂಧ್ಯಕ್ಷರಗಳು ಇದ್ದಂತೆ ತೋರುವುದಿಲ್ಲ. ಹಾಗೆಯೇ ಸ್ವರಾತ್ಮಕ ವ್ಯಂಜನಗಳೂ (Vocalic consonants) ಇದ್ದಂತೆ ಕಾಣುವುದಿಲ್ಲ. ಬಹುಮಟ್ಟಿಗೆ ಈ ಸ್ವರಗಳೆಲ್ಲದರ ಉಚ್ಚಾರಣೆಯೂ ಇಟಾಲಿಯನ್ ಭಾಷೆಯ ಸ್ವರಗಳ ಉಚ್ಚಾರಣೆಯಂತೆ ಇದ್ದಿರಬಹುದು. ಇವುಗಳಲ್ಲಿ (ಋ) ಌ ಎಂಬ ದೀರ್ಘಸ್ವರದ ಉಚ್ಚಾರ ಇಂಗ್ಲಿಷಿನ cat, bat, man ಮುಂತಾದ ಪದಗಳಲ್ಲಿ ಮಧ್ಯೆ ಬರುವ ಸ್ವರದ ಉಚ್ಚಾರದಂತೆ. ಮೂಲ ದ್ರಾವಿಡ ಭಾಷೆಯ ಈ ಸ್ವರಗಳು ಹೆಚ್ಚಿನ ವ್ಯತ್ಯಾಸಗಳನ್ನು ಅನಂತರದಲ್ಲಿ ಪಡೆದಿಲ್ಲವಾದರೂ, ಈ ಸ್ವರಗಳು ಬೇರೆ ಬೇರೆ ದ್ರಾವಿಡ ಭಾಷೆಗಳಲ್ಲಿ, ವಿಶೇಷವಾಗಿ ಚಾಕ್ಷುಷ ದ್ರಾವಿಡ ಭಾಷೆಗಳಲ್ಲಿ, ಹೇಗೆ ಮಾರ್ಪಾಟು ಪಡೆದಿದೆ ಎಂಬುದನ್ನು ಸಂಗ್ರಹರೂಪದಲ್ಲಿ ಹೀಗೆ ತೋರಿಸಬಹುದು:

(೧) ಪೂರ್ವದ್ರಾ–ಅ > ಐ (ತ); ಌ (ಮ); ಎ (ಕ); ಎ (ತು); ಅ (ತೆ)
ಉದಾ: ತಲೈ. ತ: ತಲ್ಯಾ. ಮ: ತಲೆ. ಕ: ತಲೆ. ತು: ತಲ. ತೆ. ತಲ

(೨) ಪೂರ್ವದ್ರಾ ಌ > ಯಾ, ಆ (ತ); ಆ (ಮ); ಆ, ಏ, ಯಾ (ಕ) ಏ, ಆ, (ತು); ಏ (ತೆ)
ಉದಾ: ಆಡು. ತ: ಆಡು. (ಮ): ಆಡು. ಕ: ಏಡು. ತು: ಏಟ. ತೆ.

(೩) ಪೂರ್ವದ್ರಾ ಌ̃ > ಯಾ, ನಾ, ಞಾ, (ತ); ಞ್ (ಮ); ಆ, ನಾ, ನೆ (ಕ) ಯಾ, ನಾ, ನೆ (ತು); ಏ, ನೇ ನಾ, (ತೆ).
ಉದಾ: ಯಾನ್, ನಾನ್. ತ; ಞಾನ್. ಮ; ಅನು. ತು; ಆನು, ನಾನು. ಕ; ಏನು, ನೇನು. ತೆ.

ಈ ಌ ಎಂಬ ಧ್ವನಿಮಾ ಮೂಲದ್ರಾವಿಡದಿಂದ ಬೇರೆ ಬೇರೆ ದ್ರಾವಿಡ ಭಾಷೆಗಳಲ್ಲಿ ಸೇರುವಾಗ ಕೆಲವು ಕಡೆ ಅನುನಾಸಿಕತ್ವವನ್ನು ಕಳೆದುಕೊಂಡಿದೆ—ಎಂದು ಕೆ. ವಿ. ಸುಬ್ಬಯ್ಯ ವಿವರಿಸಿದ್ದರೆ, ಈ ಹೇಳಿಕೆಯನ್ನು ಥಾಮಸ್ ಬರೊ ಮೊದಲಾದ ಇತರ ಪ್ರಾಜ್ಞರು ವಿರೋಧಿಸಿದ್ದಾರೆ. ಅವರ ಅಭಿಪ್ರಾಯದಂತೆ ಮೂಲದ್ರಾವಿಡದಲ್ಲಿ ಌ ಎಂಬ ಧ್ವನಿಮಾ ಇತ್ತೆಂಬುದು ನಂಬುವುದು ಸಾಧ್ಯವಿಲ್ಲ:

This theory does not account adequately. . . .Subbayya's attempt to explain it on these lines does not fit in

ಎಂದೂ, ಮತ್ತು

'...This ingenious theory is unacceptable...'[1]

ಎಂದೂ ಬರೋ ಸಕಾರಣವಾಗಿ ನಿರೂಪಿಸಿದ್ದಾರೆ:

(೪) ಮೂಲದ್ರಾವಿಡ ಅ-, ಇ-, ಎ- } ನಡುಗನ್ನಡ ಹಾಗೂ ಹೊಸಗನ್ನಡದಲ್ಲಿ ಮಹಾ > ಪ್ರಾಣ ಧ್ವನಿಯಾಯಿತು. ಕೆಲವೊಮ್ಮೆ, ಹ-, ಹಿ-, ಹೆ-ಎಂದು ಆದದ್ದು ಮರಾಠಿ ಮತ್ತು ತುಳು ಭಾಷೆಗಳ ಪ್ರಭಾವದಿಂದಲೇ ಎಂದು ಕಾಣು ತ್ತದೆ—ಆ ಭಾಷೆಗಳಲ್ಲಿ ಮಹಾಪ್ರಾಣ ಧ್ವನಿಗಳ ಬಳಕೆ ಅಧಿಕ.

ಉದಾ: ಅಡಪ್ಪಮ್. ತ; ಹಡಪ್ಪ. ಕ; ಹಡಪ್ಪ. ತು
ಅಪ್ಪಳ. ತ; ಹಪ್ಪಳ. ಕ; ಹಪ್ಪಳ. ತು

ಇವರಂತೆ ಕನ್ನಡದಲ್ಲಿ ಅ/ಹ ಕಾರದ ರೂಪಗಳು ಇನ್ನೂ ಕೆಲವು ಇವೆ:

ಅಡಪ/ಹಡಪ; ಅಲಸಂದಿ/ಹಲಸಂದಿ
ಅಡದಿ/ಹಡದಿ; ಅಡಬೆ/ಹಡಬೆ

(೫) ಮೂಲದ್ರಾವಿಡ ಇ + ಉ > ಎ (ಕ), ಎ (ತು), ಒ (ತೆ)
ಒ (ಹೊಸ. ತ), ಒ (ಹೊಸ. ಮ)

ಆದರೆ ಈ ವ್ಯತ್ಯಾಸ ಈ ಧ್ವನಿಗಳ ಎದುರಿಗೆ ಮೂರ್ಧನ್ಯ ಹಾಗೂ ಕೋಮಲ ಧ್ವನಿಗಳು (liquids) ಇದ್ದು, ಅವು – ಅ – ಸ್ವರದೊಡನೆ ಬಂದಾಗ ಮಾತ್ರ ಆಗುತ್ತದೆ.

ಉದಾ: ಇಡಮ್. ತ; ಇಡ್ಯಾ. ಮ; ಎಡ. ಕ;
ಎಡ. ತು; ಎಡಮು. ತೆ;

ಇವಲ್ಲದೆ ದ್ರಾವಿಡ ಭಾಷೆಗಳಲ್ಲಿ ಪದದ ಆದಿಯ ವ್ಯಂಜನಧ್ವನಿ ಹೊರಟುಹೋಗಿ ಅದರ ಮೇಲಿನ ಸ್ವರಮಾತ್ರ ನಿಲ್ಲುವುದು ಒಂದು ವಿಶೇಷ ಪರಿವರ್ತನೆಯೆನ್ನಬಹುದು. ಇದು ಸರ್ವತ್ರ ನಡೆಯುವ ಮಾರ್ಪಾಟಲ್ಲದಿದ್ದರೂ, ಕೆಲವು ಕಡೆಗಳಲ್ಲಿ ಗಮನಾರ್ಹ ಕ್ರಿಯೆಯಾಗಿ ಗೋಚರಿಸುತ್ತದೆ. ಈ ವ್ಯತ್ಯಾಸ ಎಲ್ಲ ದ್ರಾವಿಡ ಭಾಷೆಗಳಲ್ಲೂ ಸಾಮಾನ್ಯವಾಗಿ ಕಂಡುಬರುತ್ತದೆ:

---

[1] *Dravidian Studies*, V. BSOAS—XI

ಕ. ನೀರುಳ್ಳಿ > ಈರುಳ್ಳಿ/ಉಳ್ಳಾಗಡ್ಡೆ (-ಡ್ಡಿ).
ಚಿಗುರು > ಇಗುರು ; ಸೀರು > ಈರು (ಈರಣಿಗೆ)
ತೊಗರ್ > ಒಗರ್ : ತೊಡನೆ > ಒಡನೆ
ತ. ನಿನ್ಮೈ > ಇನ್ಮೈ : ನೀರ್ > ಈರ್
ಮ. ಚಿಮ > ಇಮ
ತು. ಸೀಮೆ > ಇಮೆ
ತೆ.[1] ಪುಡುಕು > ಉಡುಕು (ಉಡುಕುನೀಳ್ಳು)

ಮೂಲದ್ರಾವಿಡ ವ್ಯಂಜನಗಳು :

| ಸ್ಪರ್ಶಗಳು | | ಓಷ್ಠ್ಯ | ದಂತ್ಯ | ಮೂರ್ಧನ್ಯ | ಪೂರ್ವ | ಪಶ್ಚ |
|---|---|---|---|---|---|---|
| | ಅಘೋಷ | ಪ್ | ತ್ | ಟ್ | ಕ್[2] | ಕ್ |
| | ಅಘೋಷ | ಬ್ | ದ್ | ಡ್ | ಗ್[2] | ಗ್ |

| ನಿರಂತರಗಳು | | ಓಷ್ಠ್ಯ | ದಂತ್ಯ | ಮೂರ್ಧನ್ಯ | ಪೂರ್ವ | ಪಶ್ಚ |
|---|---|---|---|---|---|---|
| | ಅಘೋಷ | ವ್[3] | | | | |
| | ಘೋಷ | ವ್ | | ೞ್ | | |

[1] ತೆಲುಗು ಭಾಷೆಯಲ್ಲಿ ಇಂಥ ಇನ್ನೂ ಕೆಲವು ಪದಗಳಿವೆ :

ನೀಲುಗು > ಈಲುಗು': ನೆಗಯು > ಎಗಯು: ಪೂನು > ಊನು
ಪೊಲೆಯು > ಒಲೆಯು: ಪೊಂದು > ಒಂದು: ನೇನಿ > ಏನಿ.

ಇವುಗಳಲ್ಲಿ ನೇನಿ, ಏನಿ ಎಂಬ ಎರಡೂ ರೂಪಗಳು ನನ್ನಯ್ಯನ ಮಹಾಭಾರತದಲ್ಲಿ ದೊರೆಯುತ್ತವೆ.

[2] ಪೂರ್ವಧ್ವನಿಗಳಾದ ಕ್, ಗ್, ಙ–ಗಳನ್ನು ತಾಲವ್ಯ ಧ್ವನಿಗಳೆಂದೂ ಕರೆಯುವರು. ಈ ಮೂರು ಧ್ವನಿಗಳ ಉಚ್ಚಾರ ಮೂಲ ಇಂಡೊ–ಜರ್ಮನಿಕ್ ಭಾಷೆಗಳ (Proto Indo-Germanic) ತಾಲವ್ಯ ಧ್ವನಿಗಳಂತೆ. ಅಂದರೆ ಕಠಿನ ತಾಲುವಿನ ಮೇಗ ನಾಲಗೆಯ ಮಧ್ಯ ಭಾಗ ಸ್ಪರ್ಶಿಸುವುದರಿಂದ ಇವುಗಳ ಧ್ವನಿ ಮೂಡುತ್ತದೆ. ಕೇಳುವಾಗ ಈ ಧ್ವನಿಗಳು ಮೃದುವಾದ ಕಂಠ್ಯ ಧ್ವನಿಗಳಂತೆ ಇರುತ್ತವೆ; ಇಂಗ್ಲಿಷಿನ kid, get—ಎಂಬ ಪದಗಳಲ್ಲಿ ಬರುವಂತೆ ಈ ಧ್ವನಿಯೂ ಕೇಳಿಬರುತ್ತದೆ.

[3] ಇದು ಅಘೋಷ (voiceless) ಹಾಗೂ ಉಭಯೋಷ್ಠ್ಯ ಧ್ವನಿ. ಇಂಗ್ಲಿಷಿನ which, when ಎಂಬ ಪದಗಳ ಪ್ರಾರಂಭದಲ್ಲಿ ಬರುವ wh ಎಂಬ ಉಚ್ಚಾರದಂತೆ ಇವರ ಉಚ್ಚಾರ.

| | | | | | | |
|---|---|---|---|---|---|---|
| ಅನುನಾಸಿಕಗಳು | ಮ್ | ನ್ | ಣ್ | | ಞ್ | ಙ್ |
| ಕೋಮಲ ಧ್ವನಿಗಳು | | ಲ್ | ಳ್ | | | |
| | | ರ್ | ಱ್ | | | |
| ಅರ್ಧ ಸ್ವರಗಳು | | | | | ಯ್ | |

ಇಲ್ಲಿ ಒಂದು ವಿವರಣೆಯಂತೂ ತೀರ ತಪ್ಪಾಗಿದೆ. ಮೂಲ ದ್ರಾವಿಡ ಭಾಷೆಯಲ್ಲಿ ಘೋಷ ಸ್ಪರ್ಶಗಳು ಇರಲಿಲ್ಲ. ಕೆ. ವಿ. ಸುಬ್ಬಯ್ಯ ಈ ಅಂಶವನ್ನು ಗಮನಿಸಲಿಲ್ಲ.

ಮೂಲದ್ರಾವಿಡ ಭಾಷೆಯಲ್ಲಿ ಇದ್ದ ದ್ವಿತ್ವ ವ್ಯಂಜನ ಧ್ವನಿಗಳು ಪದಮಧ್ಯದಲ್ಲಿ ಬರುತ್ತಿದ್ದವೇ ವಿನಾ ಪದದ ಆರಂಭದಲ್ಲಿ ಅಲ್ಲ, ಬಹುಮಟ್ಟಿಗೆ ಪದದ ಅಂತ್ಯದಲ್ಲೂ ಬರುತ್ತಿರಲಿಲ್ಲ. ಪದಮಧ್ಯದಲ್ಲಿ ಬರುತ್ತಿದ್ದ ದ್ವಿತ್ವ ವ್ಯಂಜನಗಳು ಇಂದಿಗೂ ಕೆಲವು ದ್ರಾವಿಡ ಭಾಷೆಗಳಲ್ಲಿ ಮಾತ್ರ ವಿಶೇಷವಾಗಿ ಮೂಲ ದ್ರಾವಿಡದಲ್ಲಿ ಇದ್ದಿರಬಹುದಾದ ರೀತಿಯಲ್ಲೇ ಪದಮಧ್ಯ ಒತ್ತಕ್ಷರಗಳನ್ನು ಕಾಪಾಡಿಕೊಂಡು ಬಂದಿರುವುದು ಕಾಣುತ್ತದೆ. ಆದರೆ ತುಳು, ಕನ್ನಡ, ತೆಲುಗು ಭಾಷೆಗಳಲ್ಲಿ ಅನೇಕ ಕಡೆಗಳಲ್ಲಿ ಈ ಸಂಯುಕ್ತಾಕ್ಷರಗಳು ಬಿಡಿವರ್ಣಗಳಾಗಿವೆ. ತಮಿಳು ಮತ್ತು ಮಲೆಯಾಳ ಭಾಷೆಗಳಲ್ಲಿನ ಪದಗಳಲ್ಲಿ ಎಲ್ಲೆಲ್ಲಿ ಸಂಯುಕ್ತ ವ್ಯಂಜನಗಳು ಇವೆಯೋ ಅಲ್ಲೆಲ್ಲಾ ಕನ್ನಡ, ತೆಲುಗು, ತುಳು ಭಾಷೆಗಳಲ್ಲಿ ಕೆಲವು ಕಡೆ ಅದೇ ತೆರನಾಗಿ ಇದ್ದರೆ, ಮತ್ತೆ ಕೆಲವೆಡೆಗಳಲ್ಲಿ ಅಘೋಷಗೊಂಡು ಬಿಡಿಯಾಗಿವೆ, ಇನ್ನು ಕೆಲವು ಕಡೆ ಘೋಷಗೊಂಡು ಸರಳವಾಗಿವೆ; ದ್ವಿತ್ವ ವ್ಯಂಜನಗಳನ್ನು ಉಳಿಸಿಕೊಂಡಿರುವ ಪದಗಳಲ್ಲೂ ಆ ಧ್ವನಿಯು ಹಿಂದಿನ ಸ್ವರ ಬಹುಮಟ್ಟಿಗೆ ಹ್ರಸ್ವ ಸ್ವರವಾಗಿರುತ್ತದೆ; ಆದರೆ ದ್ವಿತ್ವ ವ್ಯಂಜನಗಳು ಸರಳವಾದಾಗ ಅದರ ಹಿಂದಿನ ಸ್ವರ ದೀರ್ಘ ಸ್ವರವಾಗಿರುತ್ತದೆ.

ಇದಕ್ಕೆ ಕೆಲವು ಉದಾಹರಣೆಗಳನ್ನು ಗಮನಿಸಬಹುದು :

| | ತ | ಮ | ಕ | ತು | ತೆ |
|---|---|---|---|---|---|
| (ಅ) | ನಕ್ಕನ್ | ನಕ್ಕಯ | ನಕ್ಕೆ (=ನರಿ) | ನಕ್ಕ | ನಕ್ಕ |
| | ಪಕ್ಕವ್ | ಪಕ್ಕೈ | ಪಕ್ಕೆ | ಪಕ್ಕೆ | ಪಕ್ಕ |
| | ತಪ್ಪು | ತಪ್ಪು | ತಪ್ಪು | ತಪ್ಪು | ತಪ್ಪು |
| (ಇ) | ತಾಕ್ಕು | ತಾಕ್ಕಯ | ತಾಕು | ತಾಕು | ತಾಕು |
| | ನಾಟ್ಟು | ನಾಟ್ಟು | ನಾಟು | ನಾಟು | ನಾಟು |
| | ತೋಪ್ಪು | ತೋಪ್ಪು | ತೋಪು | ತೋಪು | ತೋಪು |
| | ತೋಟ್ಟನ್ | ತೋಟ್ಟಾನ್ | ತೋಟ | ತೋಟ | ತೋಟ |

ಮೂಲದ್ರಾವಿಡ ಭಾಷೆಯಲ್ಲಿ ಮಹಾಪ್ರಾಣ ವರ್ಣ(ಧ್ವನಿ)ಗಳು ಇರಲಿಲ್ಲವೆಂದು ಆಧಾರಗಳಿಂದ ಹೇಳಬಹುದು. ಈ. ಎಚ್. ಟಟಲ್ ಎಂಬ ಭಾಷಾವಿಜ್ಞಾನಿ, ಮೂಲ ದ್ರಾವಿಡ ಭಾಷೆಯಲ್ಲಿ ಮಹಾಪ್ರಾಣ ಸ್ಪರ್ಶಗಳು ಇದ್ದುವೆಂದು ತಿಳಿಸಿದ್ದಾರೆ. ಒಬ್ಬ

ಮೂಲ ದ್ರಾವಿಡ ಭಾಷೆಯ ಸ್ವರವ್ಯವಸ್ಥೆ ಸರಳವೂ, ಸುಲಭವೂ ಆಗಿತ್ತು. ಅದರಲ್ಲಿ ಸಂಧ್ಯಕ್ಷರಗಳು ಇದ್ದಂತೆ ತೋರುವುದಿಲ್ಲ. ಹಾಗೆಯೇ ಸ್ವರಾತ್ಮಕ ವ್ಯಂಜನಗಳೂ (Vocalic consonants) ಇದ್ದಂತೆ ಕಾಣುವುದಿಲ್ಲ. ಬಹುಮಟ್ಟಿಗೆ ಈ ಸ್ವರಗಳೆಲ್ಲದರ ಉಚ್ಚಾರಣೆಯೂ ಇಟಾಲಿಯನ್ ಭಾಷೆಯ ಸ್ವರಗಳ ಉಚ್ಚಾರಣೆಯಂತೆ ಇದ್ದಿರಬಹುದು. ಇವುಗಳಲ್ಲಿ (ಐ) ಆ್ಯ ಎಂಬ ದೀರ್ಘಸ್ವರದ ಉಚ್ಚಾರ ಇಂಗ್ಲಿಷಿನ cat, bat, man ಮುಂತಾದ ಪದಗಳಲ್ಲಿ ಮಧ್ಯೆ ಬರುವ ಸ್ವರದ ಉಚ್ಚಾರದಂತೆ. ಮೂಲ ದ್ರಾವಿಡ ಭಾಷೆಯ ಈ ಸ್ವರಗಳು ಹೆಚ್ಚಿನ ವ್ಯತ್ಯಾಸಗಳನ್ನು ಅನಂತರದಲ್ಲಿ ಪಡೆದಿಲ್ಲವಾದರೂ, ಈ ಸ್ವರಗಳು ಬೇರೆ ಬೇರೆ ದ್ರಾವಿಡ ಭಾಷೆಗಳಲ್ಲಿ, ವಿಶೇಷವಾಗಿ ಚಾಕ್ಷುಷ ದ್ರಾವಿಡ ಭಾಷೆಗಳಲ್ಲಿ, ಹೇಗೆ ಮಾರ್ಪಾಟು ಪಡೆದಿದೆ ಎಂಬುದನ್ನು ಸಂಗ್ರಹರೂಪದಲ್ಲಿ ಹೀಗೆ ತೋರಿಸಬಹುದು:

(೧) ಪೂರ್ವದ್ರಾ–ಅ > ಐ (ತ); ಆ್ಯ (ಮ); ಎ (ಕ); ಎ (ತು); ಅ (ತೆ)

ಉದಾ: ತಲೈ. ತ: ತಲ್ಯಾ. ಮ: ತಲೆ. ಕ:
ತಲೆ. ತು: ತಲ. ತೆ. ತಲ

(೨) ಪೂರ್ವದ್ರಾ ಆ್ಯ > ಯಾ, ಆ (ತ); ಆ (ಮ); ಅ, ಏ, ಯಾ (ಕ)
ಏ, ಆ, (ತು); ಏ (ತೆ)

ಉದಾ: ಆಡು. ತ: ಆಡು. (ಮ): ಆಡು. ಕ:
ಏಡು. ತು: ಏಟ. ತೆ.

(೩) ಪೂರ್ವದ್ರಾ ಆ್ಯ̃ > ಯಾ, ನಾ, ಞಾ, (ತ); ಞ್ (ಮ); ಆ, ನಾ, ನೆ (ಕ)
ಯಾ, ನಾ, ನೆ (ತು); ಏ, ನೇ ನಾ, (ತೆ).

ಉದಾ: ಯಾನ್, ನಾನ್. ತ; ಞಾನ್. ಮ; ಅನು. ತು;
ಆನು, ನಾನು. ಕ; ಏನು, ನೇನು. ತೆ.

ಈ ಆ್ಯ ಎಂಬ ಧ್ವನಿಮಾ ಮೂಲದ್ರಾವಿಡದಿಂದ ಬೇರೆ ಬೇರೆ ದ್ರಾವಿಡ ಭಾಷೆಗಳಲ್ಲಿ ಸೇರುವಾಗ ಕೆಲವು ಕಡೆ ಅನುನಾಸಿಕತ್ವವನ್ನು ಕಳೆದುಕೊಂಡಿದೆ—ಎಂದು ಕೆ. ವಿ. ಸುಬ್ಬಯ್ಯ ವಿವರಿಸಿದ್ದರೆ, ಈ ಹೇಳಿಕೆಯನ್ನು ಥಾಮಸ್ ಬರೊ ಮೊದಲಾದ ಇತರ ಪ್ರಾಜ್ಞರು ವಿರೋಧಿಸಿದ್ದಾರೆ. ಅವರ ಅಭಿಪ್ರಾಯದಂತೆ ಮೂಲದ್ರಾವಿಡದಲ್ಲಿ ಆ್ಯ ಎಂಬ ಧ್ವನಿಮಾ ಇತ್ತೆಂಬುದು ನಂಬುವುದು ಸಾಧ್ಯವಿಲ್ಲ:

This theory does not account adequately. . . .Subbayya's attempt to explain it on these lines does not fit in

ಎಂದೂ, ಮತ್ತು

'. . .This ingenious theory is unacceptable. . .'[1]

ಎಂದೂ ಬರೋ ಸಕಾರಣವಾಗಿ ನಿರೂಪಿಸಿದ್ದಾರೆ:

(೪) ಮೂಲದ್ರಾವಿಡ ಅ-, ಇ-, ಎ- > ನಡುಗನ್ನಡ ಹಾಗೂ ಹೊಸಗನ್ನಡದಲ್ಲಿ ಮಹಾಪ್ರಾಣ ಧ್ವನಿಯಾಯಿತು. ಕೆಲವೊಮ್ಮೆ, ಹ-, ಹಿ-, ಹೆ-ಎಂದು ಆದದ್ದು ಮರಾಠಿ ಮತ್ತು ತುಳು ಭಾಷೆಗಳ ಪ್ರಭಾವದಿಂದಲೇ ಎಂದು ಕಾಣುತ್ತದೆ—ಆ ಭಾಷೆಗಳಲ್ಲಿ ಮಹಾಪ್ರಾಣ ಧ್ವನಿಗಳ ಬಳಕೆ ಅಧಿಕ.

ಉದಾ: ಅಡಪ್ಪಮ್. ತ; ಹಡಪ್ಪ. ಕ; ಹಡಪ್ಪ. ತು
ಅಪ್ಪಳ. ತ; ಹಪ್ಪಳ. ಕ; ಹಪ್ಪಳ. ತು

ಇವರಂತೆ ಕನ್ನಡದಲ್ಲಿ ಅ/ಹ ಕಾರದ ರೂಪಗಳು ಇನ್ನೂ ಕೆಲವು ಇವೆ:

ಅಡಪ/ಹಡಪ; ಅಲಸಂದಿ/ಹಲಸಂದಿ
ಅಡದಿ/ಹಡದಿ; ಅಡಬೆ/ಹಡಬೆ

(೫) ಮೂಲದ್ರಾವಿಡ ಇ + ಉ > ಎ (ಕ), ಎ (ತು), ಒ (ತೆ)
ಒ (ಹೊಸ. ತ), ಒ (ಹೊಸ. ಮ)

ಆದರೆ ಈ ವ್ಯತ್ಯಾಸ ಈ ಧ್ವನಿಗಳ ಎದುರಿಗೆ ಮೂರ್ಧನ್ಯ ಹಾಗೂ ಕೋಮಲ ಧ್ವನಿಗಳು (liquids) ಇದ್ದು, ಅವು – ಅ – ಸ್ವರದೊಡನೆ ಬಂದಾಗ ಮಾತ್ರ ಆಗುತ್ತದೆ.

ಉದಾ: ಇಡಮ್. ತ; ಇಡ್ಯಾ. ಮ; ಎಡ. ಕ;
ಎಡ. ತು; ಎಡಮು. ತೆ;

ಇವಲ್ಲದೆ ದ್ರಾವಿಡ ಭಾಷೆಗಳಲ್ಲಿ ಪದದ ಆದಿಯ ವ್ಯಂಜನಧ್ವನಿ ಹೊರಟುಹೋಗಿ ಅದರ ಮೇಲಿನ ಸ್ವರಮಾತ್ರ ನಿಲ್ಲುವುದು ಒಂದು ವಿಶೇಷ ಪರಿವರ್ತನೆಯೆನ್ನಬಹುದು. ಇದು ಸರ್ವತ್ರ ನಡೆಯುವ ಮಾರ್ಪಾಟಲ್ಲದಿದ್ದರೂ, ಕೆಲವು ಕಡೆಗಳಲ್ಲಿ ಗಮನಾರ್ಹ ಕ್ರಿಯೆಯಾಗಿ ಗೋಚರಿಸುತ್ತದೆ. ಈ ವ್ಯತ್ಯಾಸ ಎಲ್ಲ ದ್ರಾವಿಡ ಭಾಷೆಗಳಲ್ಲೂ ಸಾಮಾನ್ಯವಾಗಿ ಕಂಡುಬರುತ್ತದೆ:

---

[1] *Dravidian Studies*, V. BSOAS—XI

ಕ. ನೀರುಳ್ಳಿ > ಈರುಳ್ಳಿ/ಉಳ್ಳಾಗಡ್ಡೆ (–ಡ್ಡಿ).
ಚಿಗುರು > ಇಗುರು ; ಸೀರು > ಈರು (ಈರಣಿಗೆ)
ತೊಗರ್ > ಒಗರ್ : ತೊಡನೆ > ಒಡನೆ

ತ. ನಿನ್ಮೈ > ಇನ್ಮೈ : ನೀರ್ > ಈರ್

ಮ. ಚಿಮ > ಇಮ

ತು. ಸೀಮೆ > ಇಮೆ

ತೆ.[1] ಪುಡುಕು > ಉಡುಕು (ಉಡುಕುನೀಳ್ಳು)

ಮೂಲದ್ರಾವಿಡ ವ್ಯಂಜನಗಳು :

| | | ಓಷ್ಠ್ಯ | ದಂತ್ಯ | ಮೂರ್ಧನ್ಯ | ಪೂರ್ವ | ಪಶ್ಚ |
|---|---|---|---|---|---|---|
| ಸ್ಪರ್ಶಗಳು | ಅಘೋಷ | ಪ್ | ತ್ | ಟ್ | ಕ್[2] | ಕ್ |
| | ಅಘೋಷ | ಬ್ | ದ್ | ಡ್ | ಗ್[2] | ಗ್ |

| | | ಓಷ್ಠ್ಯ | ದಂತ್ಯ | ಮೂರ್ಧನ್ಯ | ಪೂರ್ವ | ಪಶ್ಚ |
|---|---|---|---|---|---|---|
| ಸಂಘರ್ಷಗಳು | ಅಘೋಷ | ವ್[3] | | | | |
| | ಘೋಷ | ವ್ | | ೞ್ | | |

[1] ತೆಲುಗು ಭಾಷೆಯಲ್ಲಿ ಇಂಥ ಇನ್ನೂ ಕೆಲವು ಪದಗಳಿವೆ :

ನೀಲುಗು > ಈಲುಗು : ನೆಗಯು > ಎಗಯು : ಪೂನು > ಊನು
ಪೊಲೆಯು > ಒಲೆಯು : ಪೊಂದು > ಒಂದು : ನೇನಿ > ಏನಿ.

ಇವುಗಳಲ್ಲಿ ನೇನಿ, ಏನಿ ಎಂಬ ಎರಡೂ ರೂಪಗಳು ನನ್ನಯ್ಯನ ಮಹಾಭಾರತದಲ್ಲಿ ದೊರೆಯುತ್ತವೆ.

[2] ಪೂರ್ವಧ್ವನಿಗಳಾದ ಕ್, ಗ್, ಙ–ಗಳನ್ನು ತಾಲವ್ಯ ಧ್ವನಿಗಳೆಂದೂ ಕರೆಯುವರು. ಈ ಮೂರು ಧ್ವನಿಗಳ ಉಚ್ಚಾರ ಮೂಲ ಇಂಡೋ–ಜರ್ಮನಿಕ್ ಭಾಷೆಗಳ (Proto Indo-Germanic) ತಾಲವ್ಯ ಧ್ವನಿಗಳಂತೆ. ಅಂದರೆ ಕಠಿನ ತಾಲುವಿನ ಮೇಗ ನಾಲಗೆಯ ಮಧ್ಯಭಾಗ ಸ್ಪರ್ಶಿಸುವುದರಿಂದ ಇವುಗಳ ಧ್ವನಿ ಮೂಡುತ್ತದೆ. ಕೇಳುವಾಗ ಈ ಧ್ವನಿಗಳು ಮೃದುವಾದ ಕಂಠ್ಯ ಧ್ವನಿಗಳಂತೆ ಇರುತ್ತವೆ; ಇಂಗ್ಲಿಷಿನ kid, get—ಎಂಬ ಪದಗಳಲ್ಲಿ ಬರುವಂತೆ ಈ ಧ್ವನಿಯೂ ಕೇಳಿಬರುತ್ತದೆ.

[3] ಇದು ಅಘೋಷ (voiceless) ಹಾಗೂ ಉಭಯೋಷ್ಠ್ಯ ಧ್ವನಿ. ಇಂಗ್ಲಿಷಿನ which, when ಎಂಬ ಪದಗಳ ಪ್ರಾರಂಭದಲ್ಲಿ ಬರುವ wh ಎಂಬ ಉಚ್ಚಾರದಂತೆ ಇದರ ಉಚ್ಚಾರ.

| | | | | | |
|---|---|---|---|---|---|
| ಅನುನಾಸಿಕಗಳು | ಮ್ | ನ್ | ಣ್ | ಞ್ | ಙ್ |
| ಕೋಮಲ ಧ್ವನಿಗಳು | | ಲ್ | ಳ್ | | |
| | | ರ್ | ಱ್ | | |
| ಅರ್ಧ ಸ್ವರಗಳು | | | | ಯ್ | |

ಇಲ್ಲಿ ಒಂದು ವಿವರಣೆಯಂತೂ ತೀರ ತಪ್ಪಾಗಿದೆ. ಮೂಲ ದ್ರಾವಿಡ ಭಾಷೆಯಲ್ಲಿ ಘೋಷ ಸ್ಪರ್ಶಗಳು ಇರಲಿಲ್ಲ. ಕೆ. ವಿ. ಸುಬ್ಬಯ್ಯ ಈ ಅಂಶವನ್ನು ಗಮನಿಸಲಿಲ್ಲ.

ಮೂಲದ್ರಾವಿಡ ಭಾಷೆಯಲ್ಲಿ ಇದ್ದ ದ್ವಿತ್ವ ವ್ಯಂಜನ ಧ್ವನಿಗಳು ಪದಮಧ್ಯದಲ್ಲಿ ಬರುತ್ತಿದ್ದವೇ ವಿನಾ ಪದದ ಆರಂಭದಲ್ಲಿ ಅಲ್ಲ, ಬಹುಮಟ್ಟಿಗೆ ಪದದ ಅಂತ್ಯದಲ್ಲೂ ಬರುತ್ತಿರಲಿಲ್ಲ. ಪದಮಧ್ಯದಲ್ಲಿ ಬರುತ್ತಿದ್ದ ದ್ವಿತ್ವ ವ್ಯಂಜನಗಳು ಇಂದಿಗೂ ಕೆಲವು ದ್ರಾವಿಡ ಭಾಷೆಗಳಲ್ಲಿ ಮಾತ್ರ ವಿಶೇಷವಾಗಿ ಮೂಲ ದ್ರಾವಿಡದಲ್ಲಿ ಇದ್ದಿರಬಹುದಾದ ರೀತಿಯಲ್ಲೇ ಪದಮಧ್ಯ ಒತ್ತಕ್ಷರಗಳನ್ನು ಕಾಪಾಡಿಕೊಂಡು ಬಂದಿರುವುದು ಕಾಣುತ್ತದೆ. ಆದರೆ ತುಳು, ಕನ್ನಡ, ತೆಲುಗು ಭಾಷೆಗಳಲ್ಲಿ ಅನೇಕ ಕಡೆಗಳಲ್ಲಿ ಈ ಸಂಯುಕ್ತಾಕ್ಷರಗಳು ಬಿಡಿವರ್ಣಗಳಾಗಿವೆ. ತಮಿಳು ಮತ್ತು ಮಲೆಯಾಳ ಭಾಷೆಗಳಲ್ಲಿನ ಪದಗಳಲ್ಲಿ ಎಲ್ಲೆಲ್ಲಿ ಸಂಯುಕ್ತ ವ್ಯಂಜನಗಳು ಇವೆಯೋ ಅಲ್ಲೆಲ್ಲಾ ಕನ್ನಡ, ತೆಲುಗು, ತುಳು ಭಾಷೆಗಳಲ್ಲಿ ಕೆಲವು ಕಡೆ ಅದೇ ತೆರನಾಗಿ ಇದ್ದರೆ, ಮತ್ತೆ ಕೆಲವೆಡೆಗಳಲ್ಲಿ ಅಘೋಷಗೊಂಡು ಬಿಡಿಯಾಗಿವೆ, ಇನ್ನು ಕೆಲವು ಕಡೆ ಘೋಷಗೊಂಡು ಸರಳವಾಗಿವೆ; ದ್ವಿತ್ವ ವ್ಯಂಜನಗಳನ್ನು ಉಳಿಸಿಕೊಂಡಿರುವ ಪದಗಳಲ್ಲೂ ಆ ಧ್ವನಿಯ ಹಿಂದಿನ ಸ್ವರ ಬಹುಮಟ್ಟಿಗೆ ಹ್ರಸ್ವ ಸ್ವರವಾಗಿರುತ್ತದೆ; ಆದರೆ ದ್ವಿತ್ವ ವ್ಯಂಜನಗಳು ಸರಳವಾದಾಗ ಅದರ ಹಿಂದಿನ ಸ್ವರ ದೀರ್ಘ ಸ್ವರವಾಗಿರುತ್ತದೆ.

ಇದಕ್ಕೆ ಕೆಲವು ಉದಾಹರಣೆಗಳನ್ನು ಗಮನಿಸಬಹುದು :

| | ತ | ಮ | ಕ | ತು | ತೆ |
|---|---|---|---|---|---|
| (ಅ) | ನಕ್ಕನ್ | ನಕ್ಕಯ | ನಕ್ಕೆ (=ನರಿ) | ನಕ್ಕ | ನಕ್ಕ |
| | ಪಕ್ಕಮ್ | ಪಕ್ಕೈ | ಪಕ್ಕೆ | ಪಕ್ಕೆ | ಪಕ್ಕ |
| | ತಪ್ಪು | ತಪ್ಪು | ತಪ್ಪು | ತಪ್ಪು | ತಪ್ಪು |
| (ಇ) | ತಾಕ್ಕು | ತಾಕ್ಕಯು | ತಾಕು | ತಾಕು | ತಾಕು |
| | ನಾಟ್ಟು | ನಾಟ್ಟು | ನಾಟು | ನಾಟು | ನಾಟು |
| | ತೋಪ್ಪು | ತೋಪ್ಪು | ತೋಪು | ತೋಪು | ತೋಪು |
| | ತೋಟ್ಟನ್ | ತೋಟ್ಟಾನ್ | ತೋಟ | ತೋಟ | ತೋಟ |

ಮೂಲದ್ರಾವಿಡ ಭಾಷೆಯಲ್ಲಿ ಮಹಾಪ್ರಾಣ ವರ್ಣ(ಧ್ವನಿ)ಗಳು ಇರಲಿಲ್ಲವೆಂದು ಆಧಾರಗಳಿಂದ ಹೇಳಬಹುದು. ಈ. ಎಚ್. ಟಟಲ್ ಎಂಬ ಭಾಷಾವಿಜ್ಞಾನಿ, ಮೂಲ ದ್ರಾವಿಡ ಭಾಷೆಯಲ್ಲಿ ಮಹಾಪ್ರಾಣ ಸ್ಪರ್ಶಗಳು ಇದ್ದುವೆಂದು ತಿಳಿಸಿದ್ದಾರೆ. ಒಬ್ಬ

ವಿದ್ವಾಂಸ ಮಾಡಿದ ತಪ್ಪು ಮುಂದಿನ ಹಲವು ವಿದ್ವಾಂಸರು ಎಡವಲು ಕಾರಣವಾಗಬಹುದು ಎಂಬುದಕ್ಕೆ ಸಾಕ್ಷಿ ಹೇಳುವಂತೆ, ಈ. ಎಚ್. ಟಟಿಲ್ಲರ ದೋಷವನ್ನು ಈ. ಪ್ರೊಕೊಸ್ ಎಂಬ ಭಾಷಾವಿಜ್ಞಾನಿ ಮುಂದುವರಿಸಿದರು. ಮಹಾಪ್ರಾಣ ವರ್ಣಗಳು ಮೂಲದ್ರಾವಿಡದಲ್ಲಿ ಇರಲಿಲ್ಲ, ತರುವಾಯ ಸಂಸ್ಕೃತದ ಸಂಪರ್ಕದಿಂದ ಬಂದಿವೆ. ಉತ್ತರ ಮುಂಡಾ ಭಾಷೆಗಳಿಂದ ಸಂಸ್ಕೃತಕ್ಕೆ ಈ ಮಹಾಪ್ರಾಣ ವರ್ಣಗಳು ಬಂದಿವೆಯೆಂದು ಜೂಲ್ಸ್‌ಬ್ಲಾಕ್ ವಿವರಿಸಿದ್ದಾರೆ. ಆದರೆ ಮೂಲ ಮುಂಡಾ ಭಾಷೆಯು ಸ್ವರೂಪ ಇನ್ನೂ ಖಚಿತವಾಗಿ ತಿಳಿದುಬಂದಿಲ್ಲವಾಗಿ ಇದರ ಬಗ್ಗೆ ಏನೂ ಹೇಳಲಾಗುವುದಿಲ್ಲ.[1]

ದ್ರಾವಿಡ ಭಾಷೆಗಳ ಧ್ವನಿವ್ಯವಸ್ಥೆಯನ್ನು ವಿವರವಾಗಿ ಪರಿಶೀಲಿಸುವ ಮೊದಲು ಮತ್ತೊಮ್ಮೆ ದ್ರಾವಿಡಭಾಷೆಗಳ ಭೌಗೋಳಿಕ ವಿಭಾಗವನ್ನು ಗಮನಿಸುವುದು ಆಗತ್ಯ.

| ದದ್ರಾ | ಮದ್ರಾ | ಉದ್ರಾ |
|---|---|---|
| ತಮಿಳು | (ತೆಲುಗು) | |
| ಮಲೆಯಾಳಮ್ | ಕುಈ | ಕುರುಖ್ |
| | ಕುವಿ | ಮಲ್ತೋ |
| ತೊದ | ಕೋಲಾಮಿ | |
| ಕೋತ | ನಾಯ್ಕಿ | |
| | ಪರ್ಜಿ | |
| ಕನ್ನಡ | | |
| ಬಡಗ | (ತುಳು) | ಬ್ರಾಹೂಈ |
| ಕೊಡಗು | | |
| | ಒಲ್ಲಾರಿ | |
| ತುಳು | ಗದಬ | (ಕೊರಗ) |
| ತೆಲುಗು | ಗೋಂಡೀ | |

[1] ಎಂ. ಬಿ. ಎಮಿನೊ ಆವರು ಜೂಲ್ಸ್‌ಬ್ಲಾಕನ ಈ ಹೇಳಿಕೆಯನ್ನು ವಿರೋಧಿಸುತ್ತಾ "His argument is both confused and hypothetical; moreover, we know too little of Munda to be sure of the nature and the history of these sounds" ಎಂದು ಹೇಳಿದ್ದಾರೆ—India as a Linguistic area; Paper published in Language, Vol 32, No. 1. Jan-March 1956.

ಮೂಲದ್ರಾವಿಡದಲ್ಲಿ ಖ್, ಘ್, ಛ್, ಝ, ಠ್, ಢ್, ಥ್, ಧ್, ಫ್, ಭ್—ಎಂಬ ಮಹಾಪ್ರಾಣ ಧ್ವನಿಗಳಾಗಲಿ; ಗ್, ಜ್, ಡ್, ದ್, ಬ್ ಎಂಬ ಘೋಷ ಹಾಗೂ ಮೂರ್ಧನ್ಯ ಧ್ವನಿಗಳಾಗಲಿ; ಷ್, ಶ್, ಸ್‌ಗಳೆಂಬ ಊಷ್ಮ ವರ್ಣಗಳಾಗಲಿ, ಹ್ ಎಂಬ ಧ್ವನಿಯಾಗಲಿ ಇರಲಿಲ್ಲ. ಮೂಲದ್ರಾವಿಡದಲ್ಲಿ ಪದದ ಮತ್ತು ಧಾತುವಿನ ಪ್ರಾರಂಭದಲ್ಲಿ ಯಾವ ಸ್ವರ ಬೇಕಾದರೂ ಬರಬಹುದು. ಆದರೆ ವ್ಯಂಜನಗಳಲ್ಲಿ ಪ್ರತಿವೇಷ್ಟಿತ ಹಾಗೂ ವರ್ತ್ಸ್ಯ ಧ್ವನಿಮಾಗಳಾದ/ತ್ ಲ್ ರ್ ಟ್ ಱ್ ಣ್ ಳ್/ಧ್ವನಿಗಳನ್ನು ಬಿಟ್ಟು ಉಳಿದ ಯಾವುದೇ—ಅಂದರೆ ಮೂಲದ್ರಾವಿಡದಲ್ಲಿ ಇದ್ದ ವ್ಯಂಜನ ಧ್ವನಿಗಳಲ್ಲಿ—ವ್ಯಂಜನದಿಂದ ಪದಗಳು ಆರಂಭವಾಗಬಹುದು. ಪದಾಂತ್ಯದಲ್ಲಿ *- ಇೞ್ ಎಂಬ ಧ್ವನಿ ಬಿಟ್ಟು ಉಳಿದ ಯಾವುದೇ ವ್ಯಂಜನ ಅಥವಾ ಸ್ವರ ಇರಬಹುದು.

ಧ್ವನಿವಿಜ್ಞಾನ ನಿಯಮಾನುಸಾರ ಮೂಲದ್ರಾವಿಡದ ಧ್ವನಿವ್ಯವಸ್ಥೆಯನ್ನು ಪರಿಶೀಲಿಸಬಹುದು.

## ಮೂಲದ್ರಾವಿಡ ಧ್ವನಿಮಾಗಳು

ಸ್ವರಗಳು :

| | | | | | |
|---|---|---|---|---|---|
| ಇ | ಈ | | | ಉ | ಊ |
| ಎ | ಏ | | | ಒ | ಓ |
| | | ಅ | ಆ | | |

ವ್ಯಂಜನಗಳು :

| | | | | | |
|---|---|---|---|---|---|
| ಪ್ | ತ್ | ತ್ | ಟ್ | ಚ್ | ಕ್ |
| | | | ಱ್ | | |
| ಮ್ | ನ್ | | ಣ್ | ಞ್ | |
| | | ಲ್ | ಳ್ | | |
| | | ರ್ | | | |
| ವ್ | | | | ಯ್ | |

ಸ್ವರಗಳಲ್ಲಿ ಇ, ಉ—ಗಳನ್ನು ಸಂವೃತ ಸ್ವರಗಳೆಂದೂ; ಎ, ಒ—ಗಳನ್ನು ಅರ್ಧಸಂವೃತ ಸ್ವರಗಳೆಂದೂ; ಆ—ವನ್ನು ವಿವೃತಸ್ವರವೆಂದೂ; ಇ, ಎ—ಗಳನ್ನು ಪೂರ್ವಸ್ವರಗಳೆಂದೂ; ಉ, ಒ, ಅ—ಗಳನ್ನು ಪೂರ್ವೇತರ ಸ್ವರಗಳೆಂದೂ; ಉ, ಒ—ಗಳನ್ನು ಪಶ್ಚಸ್ವರಗಳೆಂದು; ಅ—ವನ್ನು ಮಧ್ಯಸ್ವರವೆಂದೂ ಕರೆಯುವರು.

ನಿಮ್ನ ಸ್ವರಗಳು : ಅ, ಆ

ಪೂರ್ವೋಚ್ಚ : ಇ, ಈ

19

ಪೂರ್ವ ಮಧ್ಯ: ಎ, ಏ
ಪಶ್ಚೋಚ್ಚ ಸ್ವರಗಳು: ಉ ಊ
ಪಶ್ಚಮಧ್ಯ: ಒ, ಓ

ಇನ್ನು ವ್ಯಂಜನಗಳು:

| | |
|---|---|
| ಸ್ಪರ್ಶವ್ಯಂಜನಗಳು: | ಪ್, ತ್, ಟ್, ಕ್ |
| ಸ್ಪೃಷ್ಟೋಷ್ಮ: | ಚ್ |
| ಊಷ್ಮ: | ೞ್ |
| ಅನುನಾಸಿಕ: | ಮ್, ನ್, ಣ್, ಙ್ |
| ಪಾರ್ಶ್ವಿಕ: | ಲ್, ಳ್ |
| ಈಷತ್‌ಸ್ಪರ್ಶ | ರ್ |
| ಕಂಪಿತ: | ಱ್ |
| ಅರ್ಧಸ್ವರ: | ವ್, ಯ್ |
| ಓಷ್ಠ್ಯ: | ಪ್, ಮ್, ವ್ |
| ದಂತ್ಯ: | ತ್ |
| ವರ್ತ್ಸ್ಯ: | ನ್, ಲ್, ರ್, ಱ್ |
| ಪ್ರತಿವೇಷ್ಟಿತ: | ಟ್, ೞ್, ಣ್, ಳ್ |
| ತಾಲವ್ಯ: | ಚ್, ಯ್ |
| ಕಂಠ್ಯ: | ಕ್, ಙ್ |

ಈ ಪುನರ್‌ರಚಿತ ಮೂಲದ್ರಾವಿಡ ಧ್ವನಿಮಾಗಳು ಇಂದಿನ ದ್ರಾವಿಡ ಭಾಷೆಗಳಲ್ಲಿ ಇರುವ ಕ್ರಮವನ್ನು ಮುಂದೆ ಪಟ್ಟಿಮಾಡಿ ನಕ್ಷೆಯಂತೆ ಸಿದ್ಧಗೊಳಿಸಿಕೊಟ್ಟಿದೆ. ದ್ರಾವಿಡ ಭಾಷೆಗಳಲ್ಲಿ ಕಾಣುವ ಧ್ವನ್ಯನುರೂಪತೆ (Phonetic correspondence)ಯ ನಕ್ಷೆಯಲ್ಲಿ ಆದಷ್ಟೂ ಕನ್ನಡ ಲಿಪಿಯನ್ನೇ ಬಳಸಿದೆ. ಇದರಿಂದ ಅನುಕೂಲದಂತೆ ಅನನುಕೂಲವೂ ಇದೆ. ಒಂದೆರಡು ಕಡೆ ರೋಮನ್ ವರ್ಣಮಾಲೆಯ ಹಾಗೂ ಧ್ವನಿ ವಿಜ್ಞಾನದ ಸಂಕೇತಗಳನ್ನು ಬಳಸಿದೆ. ಅವುಗಳ ಸಂಕ್ಷಿಪ್ತ ಪರಿಚಯ ಇಲ್ಲಿ ಕೊಟ್ಟಿದೆ. ಹೆಚ್ಚಿನ ವಿವರಗಳಿಗೆ 'ದ್ರಾವಿಡ ಭಾಷಾ ಜ್ಞಾತಿಕೋಶ'ವನ್ನಾಗಲಿ ಅಥವಾ ಧ್ವನಿ ವಿಜ್ಞಾನಕ್ಕೆ ಸಂಬಂಧಿಸಿದ ಕೃತಿಗಳನ್ನಾಗಲಿ ನೋಡಬಹುದು:

ṟ = ಈ ಧ್ವನಿಗೆ ವಿವಿಧ ಉಚ್ಚಾರವಿರುವಂತೆ ತೋರುತ್ತದೆ. ಕೋತ ಭಾಷೆಯಲ್ಲಿ ಇದು ಏಕತಾಡಿತ ಪ್ರತಿವೇಷ್ಟಿತ ಕಂಪಿತ ಧ್ವನಿಯಾಗಿ ಉಚ್ಚಾರವಾದರೆ, ತೊದ ಭಾಷೆಯಲ್ಲಿ ಪ್ರತಿವೇಷ್ಟಿತ ಕಂಪಿತ ಧ್ವನಿಯಾಗಿದೆ. ಇಂಡೊ-ಆರ್ಯನ್ ಭಾಷೆಯಲ್ಲಿ ಇದು ಸಾಮಾನ್ಯವಾಗಿ ಪ್ರತಿವೇಷ್ಟಿತ ಅಥವಾ ಪರವರ್ತ್ಸ್ಯ ಏಕತಾಡಿತ ಧ್ವನಿ;

ಕೋಲಾಮಿ, ನಾಯ್ಕಿ ಮತ್ತು ಗೋಂಡಿ ಭಾಷೆಗಳಲ್ಲೂ ಹೆಚ್ಚು ಕಡಮೆ ಹೀಗೆ ಇದೆ. ಪರ್ಜಿ ಭಾಷೆಯಲ್ಲಿ ಈ ಧ್ವನಿಯ ಉಚ್ಚಾರ ಅಸ್ಪಷ್ಟವಾದರೂ, ಮೂಲ ದ್ರಾವಿಡ ಧ್ವನಿಯ ಹಾಗೂ ದಕ್ಷಿಣ ದ್ರಾವಿಡ ಭಾಷೆಗಳ 'ೞ' ಧ್ವನಿಗೆ ಸದೃಶ ವಾಗಿದೆ. ಹೀಗೆ ತ್ರಿವಿಧೋಚ್ಚಾರ ಪಡೆದ ಈ ಧ್ವನಿಯನ್ನು ರೋಮನ್ ಲಿಪಿಯಲ್ಲೇ ತೋರಿಸಿದೆ.

/ṅ/ , [ η ] = ಙ್

ṅ = ಞ್

ṇ = ಣ್

ತ್ = ಇದು ಅಘೋಷ ವರ್ತ್ಸ್ಯ ಸ್ಪರ್ಶ [ತೊದ, ಕೋತ]

ದ್ = ಇದು ಘೋಷ ವರ್ತ್ಸ್ಯ ಸ್ಪರ್ಶ [ತೊದ, ಕೋತ]

ಉ̈ [ ü ] = ಉನ್ನತ ಓಷ್ಠ್ಯೀಕೃತ ತಾಲವ್ಯಸ್ವರ [ತೊದ]

ಇ̈ = ಉನ್ನತ ನಿರೋಷ್ಠ್ಯೀಕೃತ ಕಂಠ್ಯಸ್ವರ [ತೊದ]

ಓ̈ = ಓಷ್ಠ್ಯೀಕೃತ ಅವನತ ಮಧ್ಯಸ್ವರ [ತೊದ]

ಏ̈ = ಉನ್ನತಮಧ್ಯ ನಿರೋಷ್ಠ್ಯೀಕೃತ ಕಂಠ್ಯಸ್ವರ [ತೊದ]

C = ts
Z₀ = dz
Č = ťs
J̌ = ďz
| ಅಘೋಷ ಪಾರ್ಶ್ವಿಕ ದಂತಮೂಲೀಯಗಳು

θ = ಅಘೋಷ ದಂತ್ಯ ಘರ್ಷಧ್ವನಿ

X = ಅಘೋಷ ಕಂಠ್ಯ ಘರ್ಷಧ್ವನಿ

l̲ = | ವರ್ತ್ಸ್ಯ ಹಾಗೂ ಪ್ರತಿವೇಷ್ಟಿತ—

ḷ̲ = | ಅಘೋಷ ಪಾರ್ಶ್ವಿಕಗಳು

Kh (ಖ಼್) = | ಅಘೋಷ ಅಲಿಜಿಹ್ವೀಯ (ಕಂಠ್ಯ)

q = | ಘರ್ಷಧ್ವನಿ [ಕುರು. ಬ್ರಾ. ಮಲ್ತೊ]

ಕ಼ (ಗ಼್) = ಘೋಷ ಅಲಿಜಿಹ್ವೀಯ (ಕಂಠ್ಯ) ಘರ್ಷ [ಕುರು. ಬ್ರಾ. ಮಲ್ತೊ]

ನ್, ನ್ = ತಮಿಳಿನಲ್ಲಿ ಮತ್ತು ಮಲೆಯಾಳದಲ್ಲಿ ಎರಡು ತೆರನಾದ ನಕಾರಗಳಿವೆ; ತಮಿಳಿನಲ್ಲಿ ತನ್ನಕರ, ರನ್ನಕರ ಎಂದು ಇವನ್ನು ನಿರ್ದೇಶಿಸುವರು. ಆದರೆ ಮೂಲದ್ರಾವಿಡದಲ್ಲೂ ಇವೆರಡು ಪ್ರತ್ಯೇಕಧ್ವನಿಗಳೂ ಇದ್ದುವೆ ಎಂಬುದನ್ನು ನಿರ್ಧರಿಸುವುದು ಕಷ್ಟ.

ಙ್ = ಘೋಷ ಪ್ರತಿವೇಷ್ಟಿತ ಘರ್ಷ

ಜ಼್ - ಘೋಷ ದಂತಮೂಲೀಯ ಕಂಪಿತ

## ದ್ರಾವಿಡ ಭಾಷೆಗಳಲ್ಲಿ ಕಾಣುವ ಧ್ವನ್ಯನುರೂಪತೆ : ಸ್ವರಗಳು

| ಮೂದ್ರಾ | ತ | ಮ | ಕೋತ | ತೊದ | ಕ | ಕೊಡ | ತು | ತೆ | ಕೋಲಾ | ನಾ |
|---|---|---|---|---|---|---|---|---|---|---|
| * ಅ | ಅ | ಅ | ಅ | ಒ, ಅ | ಅ | ಅ | ಅ | ಅ | ಅ | ಅ |
| * ಆ | ಆ | ಆ | ಆ | ಓ, ಆ | ಆ | ಆ | ಆ | ಆ | ಆ | ಆ |
| * ಇ | ಇ | ಇ | ಇ | ಇ̈, ಇ | ಇ | ಇ | ಇ | ಇ | ಇ | ಇ |
| * ಈ | ಈ | ಈ | ಈ | ಈ | ಈ | ಈ | ಈ | ಈ | ಈ | ಈ |
| * ಉ | ಉ | ಉ | ಉ | ಉ, wï | ಉ | ಉ | ಉ | ಉ | ಉ | ಉ |
| * ಊ | ಊ | ಊ | ಊ | ಊ | ಊ | ಊ | ಊ | ಊ | ಊ | ಊ |
| * ಎ | ಎ | ಎ | ಎ | ಒ̈, ಎ | ಎ | ಎ | ಎ | ಎ | ಎ | ಎ |
| * ಏ | ಏ | ಏ | ಏ | ಓ̈, ಏ | ಏ | ಏ | ಏ | ಏ | ಏ | ಏ |
| * ಒ | ಒ | ಒ | ಒ | ವ, ವೀ, ಒ<br>wa, wï | ಒ | ಒ | ಒ | ಒ | ಒ | ಒ |
| * ಓ | ಓ | ಓ | ಓ | ವಾ, ವೀ<br>wā, wī | ಓ | ಓ | ಓ | ಓ | ಓ | ಓ |

| ಮೂದ್ರಾ | ಪ | ಗ(ಒ) | ಗ (ಸ) | ಗೋಂ | ಕೊಂಡ | ಕುಈ | ಕುವಿ | ಕುರು | ಮಲ್ತೊ | ಬ್ರಾ |
|---|---|---|---|---|---|---|---|---|---|---|
| * ಅ | ಎ, ಅ | ಅ | ಅ | ಅ | ಅ | ಅ | ಅ | ಅ | ಅ | ಅ |
| * ಆ | ಏ, ಆ | ಆ | ಆ | ಆ | ಆ | ಆ | ಆ | ಆ | ಆ | ಆ |
| * ಇ | ಇ | ಇ | ಇ | ಇ | ಇ | ಇ | ಇ | ಇ | ಇ | ಇ |
| ○ ಈ | ಈ | ಈ | ಈ | ಈ | ಈ | ಈ | — | ಈ | ಈ | ಈ |
| * ಉ | ಉ | ಉ | ಉ | ಉ | ಉ | ಉ | ಉ | ಉ | ಉ | ಉ |
| * ಊ | ಊ | ಊ | ಊ | ಉ | ಊ | ಊ | ಊ | ಊ | ಊ | ಊ |
| * ಎ | ಎ, ಅ | ಎ | ಎ | ಅ, ಎ | ಎ | ಎ | ಎ | ಎ | ಎ | ಅ, ಇ |
| * ಏ | ಏ, ಆ | ಏ | ಏ | ಏ | ಏ | ಏ | ಏ | ಏ | ಏ | ಏ |
| * ಒ | ಒ | ಒ | ಒ | ಒ | ಒ | ಒ | ಒ | ಒ | ಒ | ಒ |
| * ಓ | ಓ | ಓ | ಓ | ಓ | ಓ | ಓ | ಓ | ಓ | ಓ | ಓ |

## ದ್ರಾವಿಡಭಾಷೆಗಳಲ್ಲಿ ಧ್ವನ್ಯನುರೂಪತೆ ವ್ಯಂಜನಗಳು

| ಮೂದ್ರಾ | ತ | ಮ | ಕೋತ | ತೊದ | ಕ | ಕೊಡ | ತು | ತೆ | ಕೋಲಾ | ನಾ |
|---|---|---|---|---|---|---|---|---|---|---|
| * ಕ್ _ | ಕ್, ಚ್ | ಕ್, ಚ್ | ಕ್ | ಕ್ | ಕ್ | ಕ್ | ಕ್ | ಕ್, ಚ್ | ಕ್ | ನಾ |
| * _ ಕ್ _ | ಕ್ | ಕ್ | ಗ್ | ಕ್ [x] | ಗ್ | ಗ್ | ಗ್ | ಗ್ | ಗ್ | ಗ್ |
| * ಕ್ಕ | ಕ್ಕ | ಕ್ಕ | ಕ್ | ಕ್ | ಕ್ಕ, ಕ್ | ಕ್ಕ, ಕ್ | ಕ್ಕ, ಕ್ | ಕ್ಕ, ಕ್ | ಕ್ | ಕ್ |
| * ṅk ಙ್ಕ್ | ಙ್ಕ್ | ಙ್ಙ್ | ಗ್, ಙ್ಗ್ | ಕ್, x | ಗ್, ಙ್ಗ್ | ಙ್ಗ್ | ಙ್ಗ್ | ಙ್ಗ್ | ಙ್ಗ್ | ಙ್ಗ್ |
| * ಚ್ _ | ಚ್ | ಚ್ | ಚ್ | ಪ್ಸ | ಸ್, ಚ್ | ಚ್ | ಸ್ | ಚ್ | ಸ್ | ಸ್ |
| * _ ಚ್ _ | ಚ್ | ಚ್ | ಚ್ | ವ್, | ಸ್ | ಜ್ | ಜ್ | ಚ್, ಸ್ | ಸ್ | ಸ್ |
| * ಚ್ಚ | ಚ್ಚ | ಚ್ಚ | ಚ್ | ತ್ ಙ್ ;(=ತ್ಸ) | ಚ್ಚ, ಸ್ | ಚ್ಚ | ಚ್ಚ | ಚ್ಚ, ಚ್ | ಚ್ಚ, ಚ್ | ಚ್ಚ |
| * ñc ಞ್ಚ್ | ಞ್ಚ್ | ಞ್ಞ್ | ನ್ಚ | $Ƶ_0$ (=dz) | ಜ್, ಸ್, ಞ್ಚ್ | ಞ್ಜ್ | ಞ್ಜ್ | ನ್ಜ್ | ನ್ಜ್ | ನ್ಜ್ |
| * _ ಟ್ _ | ಟ್ | ಟ್ | ಙ್ ṛ | ಙ್ ṛ | ಡ್ | ಡ್ | ಡ್ | ಡ್ | ಡ್ | ಙ್ ṛ |
| * ಟ್ಟ | ಟ್ಟ | ಟ್ಟ | ಟ್ | ಟ್ | ಟ್ಟ, ಟ್ | ಟ್ಟ, ಟ್ | ಟ್, ಟ್ | ಟ್ಟ, ಟ್ | ಟ್ಟ, ಟ್ | ಟ್ |
| * ಣ್ಟ | ಣ್ಟ | ಣ್ಟ | ಡ್, ಣ್ಡ | ಡ್ | ಡ್, ಣ್ಡ | ಣ್ಡ | ಣ್ಡ | ಣ್ಡ | ಣ್ಡ | ಣ್ಡ |
| * ತ್ _ | ತ್ | ತ್ | ತ್ | ತ್ | ತ್ | ತ್ | ತ್ | ತ್ | ತ್ | ತ್ |

| ಮೂಲದ್ರಾ | ಪ. | ಗ (ಒ) | ಗ (ಸ) | ಗೊಂ. | ಕೊಂಡ | ಕುಈ | ಕುವಿ | ಕುರು | ಮಲ್ತೊ | ಬ್ರಾ |
|---|---|---|---|---|---|---|---|---|---|---|
| * ಕ್ – | ಗ್, ಕ್ | ಕ್ | ಕ್ | ಕ್ | ಕ್ | ಕ್ | ಕ್ | ಖ್, ಕ್ | q, ಕ್ | ಖ್, ಕ್ |
| * – ಕ್ – | ಗ್, ವ್, ಯ್ | ಗ್ | ಗ್ | ಯ್ | — | ಗ್ | ಯ್ | ಖ್ | ಗ್ | ಖ್ |
| * ಕ್ಕ್ | ಕ್ | ಕ್ | ಕ್ | ಕ್ | ಕ್ | ಕ್ | ಕ್ | ಕ್ಖ್, ಕ್ | q, ಕ್ | ಕ್ |
| * ṅk | ηg | ηg | ηg, η | ng | η | ng | ng | η<u>kh</u>, ηg | nq ng | ṉg |
| * ಚ್ – | ಚ್ | ಸ್ | ಸ್, ಚ್ | ಸಾ > ಹ್ > ∅ | ಸ್ | ಸ್ | ಹ್ | ಚ್ | ಚ್ | ಚ್ |
| * – ಚ್ – | ಯ್ | ಯ್ | — | ಸ್ | — | ಸ್, ಹ್ | ಹ್ | ಸ್ | ಸ್ | ಸ್ |
| * ಚ್ಚ್ | ಚ್ಚ್ | ಸ್ | ಚ್ಚ್ | ಚ್ಚ್, ಸ್ | ಸ್ | ಸ್ | ಚ್ಚ್, ಚ್ | ಚ್ಚ್, ಚ್ | ಚ್ | ಸ್ |
| * ñc | ñ, ñj | ñ, ñj | nj | nj | nj | nj | nj | ṅj | nj | — |
| * – ಟ್ – | ಡ್ | ರ್ | ರ್, ಱ್ | ರ್, ಱ್ | ರ್ | ಡ್, ṛ | ದ್, ತ್ | ṛ | ṛ | ṛ, ರ್, ಱ್ |
| * ಟ್ಟ್ | ಟ್ಟ್, ಟ್ | ಟ್. | ಟ್ಟ್, ಟ್ | ಟ್ಟ್, ಟ್ | ಟ್ | ಟ್ | ತ್ತ್ | ಟ್ಟ್, ಟ್ | ಟ್ | ಟ್ |
| * ṇṭ, ಣ್ಟ್ | ನ್ಡ್ | — | ನ್ಡ್ | ನ್ಡ್ | ನ್ಡ್ | ನ್ಡ್ | ನ್ಡ್, ನ್ಡ್ | ಣ್ಡ್ | ನ್ಡ್ | ನ್ಡ್ |
| * ತ್ – | ತ್ | ತ್ | ತ್ | ತ್ | ತ್ | ತ್ | ತ್ | ತ್ | ತ್ | ತ್ |

| ಮೂದ್ರಾ | ತ | ಮ | ಕೋತ | ತೊದ | ಕ | ಕೊಡ | ತು | ತೆ | ಕೋಲಾ | ನಾ |
|---|---|---|---|---|---|---|---|---|---|---|
| * -ತ್- | ತ್ | ತ್ | ದ್ | ∅ | ದ್ | ದ್ | ದ್ | ದ್ | ದ್ | ದ್ |
| * ತ್ತ್ | ತ್ತ್ | ತ್ತ್ | ತ್ | ತ್ | ತ್ತ್, ತ್ | ತ್ತ್, ತ್ | ತ್ತ್, ತ್ | ತ್ತ್, ತ್ | ತ್ | ತ್ತ್, ತ್ |
| * nt | nt | ನ್ನ್ | ದ್, nd | ದ್, ∅ | ದ್, nd | nd | nd | nd | nd | nd |
| * ಪ್- | ಪ್ | ಪ್ | ಪ್ | ಪ್ | ಪ್ > ಹ್ > θ | ಪ್ | ಪ್ | ಪ್ | ಪ್ | ಪ್ |
| * ಪ್ಪ್ | ಪ್ಪ್ | ಪ್ಪ್ | ಪ್ | ಪ್ | ಪ್ಪ್, ಪ್ | ಪ್ಪ್, ಪ್ | ಪ್ಪ್, ಪ್ | ಪ್ಪ್, ಪ್ | ಪ್ | ಪ್ಪ್, ಪ್ |
| * mp | ಮ್ಪ್ | ಮ್ಪ್ | ಬ್, ಮ್ಬ್ | ಬ್ | ವ್, ಮ್ಬ್ | ಮ್ಬ್ | ಮ್ಬ್ | ವ್, ಮ್ಬ್, ಮ್ಬ್ | ಮ್ | ವ್ |
| * -ಱ್- | ಱ್ | ಱ್ | ರ್ | ಱ್ | ಱ್ > ರ್ | ರ್ | ವ್, ರ್ | ಱ್ | ವ್, ರ್ | ದ್, ರ್ |
| * ಱ್ಱ್ | ಱ್ಱ್ | ಱ್ಱ್ | <u>ತ್</u> | <u>ತ್</u> | ತ್ತ್, ತ್ | ತ್ತ್, ತ್ | ಟ್ | ಟ್ಟ್, ಟ್ | ತ್ತ್, ತ್ | ತ್ತ್, ತ್ |
| * <u>ನ್</u>ಱ್ (ṉṟ) | <u>ನ್</u>ಱ್ | <u>ನ್</u>ನ್ | <u>ದ್</u> ; | ನ್<u>ದ್</u> | ಱ್, ನ್ದ್ | ಣ್ಡ್ | ಣ್ಡ್ | ಣ್ಡ್ | ನ್ಡ್ | ನ್ಡ್ |
| * ಮ್ | ಮ್ | ಮ್ | ಮ್ | ಮ್ | ವ್ | ಮ್ | ಮ್ | ಮ್ | ಮ್ | ಮ್ |
| * ನ್, <u>ನ್</u> | ನ್, <u>ನ್</u> | ನ್, <u>ನ್</u> | ನ್ | ನ್ | ನ್ | ನ್ | ನ್ | ನ್ ನ್ | ನ್ | ನ್ |

| ಮೂಲದ್ರಾ | ಪ | ಗ (ಒ) | ಗ (ಸ) | ಗೋಂ | ಕೊಂಡ | ಕುಈ | ಕುವಿ | ಕುರು | ಮಾಲ್ತೊ | ಬ್ರಾ |
|---|---|---|---|---|---|---|---|---|---|---|
| * -ತ್- | ದ್ | ದ್ | ದ್ | ದ್, ದ್ಡ್ | ದ್ | ದ್ | ದ್ | ದ್, ಥ್ | ಥ್, ದ್ | ದ್ |
| * ತ್ತ್ | ತ್ತ್, ತ್ | ತ್ | ತ್ | ತ್ | ತ್ | ತ್ತ್, ತ್ | ತ್ತ್, ತ್ | ತ್ತ್, ತ್ | ತ್ | ತ್, ತ್ತ್ |
| * ನ್ತ್ | ನ್ದ್, ದ್ | ನ್ದ್, ದ್ | ನ್ದ್, ದ್ | ನ್ದ್ | ನ್ಡ್ | ನ್ದ್ | ನ್ದ್ | ನ್ದ್ | ನ್ದ್ | — |
| * ಪ್- | ಪ್ | ಪ್ | ಪ್ | ಪ್ | ಪ್ | ಪ್ | ಪ್ | ಪ್ | ಪ್ | ಪ್ |
| * ಪ್ಪ್ | ಪ್ಪ್, ಪ್ | ಪ್ | ಪ್ | ಪ್ | ಪ್ | ಪ್ಪ್, ಪ್ | ಪ್ಪ್, ಪ್ | ಪ್ಪ್, ಪ್ | ಪ್ | ಪ್ |
| * ಮ್ಪ್ | ಮ್ಬ್, ಬ್ | ಮ್ಬ್, ಬ್ | ಮ್ಬ್, ಬ್ | ಮ್ | ಮ್ | ಮ್ಬ್ | ಮ್ಬ್, ಮ್ | ಮ್ಬ್ | ಮ್ಬ್ | ಮ್ಬ್ |
| * -ಱ್- | ದ್, ಡ್ | ರ್‍ | ಯ್ | ರ್, ಱ್ | ಱ್, ಱ್ಹ್ | ಜ್, ರ್ | ಜ್ | ಸ್, ರ್ | ಸ್, ದ್ | ರ್, ರ್ |
| * ಱ್ಱ್ | ತ್ತ್, ತ್ | ಟ್ಟ್, ಟ್ | ಟ್ಟ್, ಟ್ | ತ್ತ್, ತ್ | ಱ್ಱ್ | ಸ್ | (F) ಚ್ | ತ್ತ್, ತ್ | ತ್ | — |
| * ನ್ಱ್ | ನ್ದ್, ನ್ದ್ | ನ್ಡ್ | ನ್ದ್ | ನ್ದ್ | ನ್ (ನ್ಡ್ಱ್) ನ್ಜ್ | ನ್ಜ್ | ನ್ದ್ | ನ್ದ್ | ನ್ | |
| * ಮ್ | ಮ್ | ಮ್ | ಮ್ | ಮ್ | ಮ್ | ಮ್ | ಮ್ | ಮ್ | ಮ್ | ಮ್ |
| * ನ್, ನ್ | ನ್, | ನ್, | ನ್ | ನ್ | ನ್ | ನ್ | ನ್ | ನ್ | ನ್ | ನ್, ದ್- |

| ಮೂದ್ರಾ | ತ | ಮ | ಕೋತ | ತೋದ | ಕ | ಕೊಡ | ತು | ತೆ | ಕೋಲಾ | ನಾ |
|---|---|---|---|---|---|---|---|---|---|---|
| * ಞ್ | ಞ್ | ಞ್ | ಞ್ | ಞ್ | ಞ್ | ಞ್ | ಞ್, ನ್ | ನ್ | ನ್ | ನ್ |
| * ಯ್ | ಯ್ | ಯ್ | ಯ್ | ಯ್ | ಯ್ | ಯ್ | ಯ್ | ಯ್ | ಯ್ | ಯ್ |
| * ರ್ | ರ್ | ರ್ | ರ್ | ರ್, ಷ್, ಶ್ | ರ್ | ರ್ | ರ್ | ರ್ | ರ್ | ರ್ |
| * ಲ್ | ಲ್ | ಲ್ | ಲ್ | ಸ್, $\frac{1}{1}$ | ಲ್ | ಲ್ | ಲ್ | ಲ್ | ಲ್ | ಲ್ |
| * ಲ್ಲ | ಲ್ಲ | ಲ್ಲ | ಲ್ಲ | ಸ್, ಲ್ | ಲ್ಲ | ಲ್ಲ | ಲ್ಲ | ಲ್ಲ | ಲ್ಲ, ಲ್ | ಲ್ಲ |
| * ವ್- | ವ್ | ವ್ | ವ್ | ಪ್ | ಬ್ | ಬ್ | ಬ್ | ವ್ | ವ್ | ವ್ |
| * -ವ್- | ವ್ | ವ್ | ವ್ | ಫ್ | ವ್ | ವ್ | ಬ್, ವ್ | ವ್ | ವ್ | ವ್ |
| * ಱ್ | ಱ್ | ಱ್ | ಳ್, ಱ್; ಗ್, ಯ್ | ಡ್, ṛ, ವ್; ಷ್, ಶ | ಱ್ > ಳ್; ರ್ | ಳ್ | ರ್, ಳ್ | ಱ್ > ಡ್; ರ್ | ರ್ | ರ್ |
| * ಳ್ | ಳ್ | ಳ್ | ಳ್ | ಳ್, I | ಳ್ | ಳ್ | ಲ್, ಳ್ | ಲ್ | ಲ್ | ಳ್ |
| * ೞ್ | ೞ್ | ೞ್ | ಳ್ | ಳ್, I | ೞ್ | ೞ್ | ೞ್ | ಲ್ಲ | ಲ್ಲ | ಲ್ಲ |

| ಮೂದ್ರಾ | ಪ | ಗ (ಒ) | ಗ (ಸ) | ಗೋಂಡಿ | ಕೊಂಡ | ಕುಈ | ಕುವಿ | ಕುರು | ಮಲ್ತೊ | ಬ್ರಾ |
|---|---|---|---|---|---|---|---|---|---|---|
| * ಣ್ | ನ್ | ಣ್, ನ್ | ನ್ | ನ್ | ಣ್ | ನ್, ಣ್ | ನ್ | ನ್ | ನ್ | ನ್ |
| * ಯ್ | ಯ್ | ಯ್ | ಯ್ | ಯ್ (ಈ) | ಯ್ | ಜ್ | ಯ್ | ಯ್ | ಯ್ | — |
| * ರ್ | ರ್ | ರ್ | ರ್ | ṛ, ರ್ | ರ್ | ರ್ | ರ್ | ರ್ | ರ್ | ರ್, ರ್ರ |
| * ಲ್ | ಲ್ | ಲ್ | ಲ್ | ಲ್ | ಲ್ | ಲ್, ಡ್ | ಲ್ | ಲ್ | ಲ್ | ಲ್, ಲ್ಲ |
| * ಳ್ | ಳ್, ಲ್ | — | ಲ್ | ಳ್, ಲ್ | ಲ್ | ಲ್, ಡ್ | ಳ್ | — | ಲ್ | ಳ್ |
| * ವ್ – | ವ್ | ವ್ | ವ್ | ವ್ (W) | ವ್ | ವ್ | ವ್ | ಬ್ | ಬ್ | ಬ್ |
| * -ವ್- | ವ್ | ವ್ | ವ್ | ವ್ (W) | ವ್ | ವ್ | ವ್ | ಬ್, ವ್ | ವ್ (W) | ಫ್, ವ್ |
| * ಟ್ | ṛ | ṛ | ಡ್ | ṛ, ರ್ | ṛ | ṛ | (F) ರ್ (S) ಲ್ | ಸ್ | ಸ್ | ರ್ |
| * ೞ್ | ಲ್ | ಲ್ | ಲ್ | ṛ | ṛ | ಲ್, ಡ್ | ಲ್ | ಲ್ | ಲ್ | ಲ್, ಲ್ |
| * ೞ್ಳ | ಲ್ | ಲ್ಲ | ಲ್ಲ | ಲ್ಲ, ಲ್ | — | — | — | ಲ್ಲ | ಲ್ | ಲ್ಲ |

ಪ್ರತಿಯೊಂದು ಧ್ವನಿಗೂ ತನ್ನದೇ ಆದ ಒಂದು ವಿಶಿಷ್ಟ ಇತಿಹಾಸವಿದ್ದು, ಧ್ವನಿವಿಜ್ಞಾನದ ದೃಷ್ಟಿಯಿಂದ ಅದರ ಚರಿತ್ರೆ ಅತ್ಯಂತ ಸ್ವಾರಸ್ಯ ಹಾಗೂ ಉಪಯುಕ್ತವಾಗಿರುತ್ತದೆ. ಮಿತವ್ಯಯಾಸಕ್ತಿ ಹಾಗೂ ಸ್ಪಷ್ಟತೆಯ ದೃಷ್ಟಿಯಿಂದ ಉಚ್ಚಾರಣೆಯಲ್ಲಿ ಒಮ್ಮೆ ಒತ್ತಿ ಹೇಳುತ್ತೇವೆ, ಇನ್ನೊಮ್ಮೆ ಏರಿಸಿ ಹೇಳುತ್ತೇವೆ, ಮತ್ತೊಮ್ಮೆ ಮಧ್ಯಸ್ಥವಾಗಿ ಉಚ್ಚರಿಸುತ್ತೇವೆ. ಧ್ವನಿವಿಜ್ಞಾನದಲ್ಲಿ ಈ ಆರೋಹಣ ಅವರೋಹಣ ಕ್ರಮವನ್ನು ಸ್ವರ ಅಥವಾ ಸ್ವರಾಘಾತ (Pitch accent) ಎಂದು ಹೇಳುವರು; ಒತ್ತಿ ಹೇಳುವುದನ್ನು ದ್ವಿತ್ವೋಚ್ಚಾರ (Stress accent)ವೆಂದು ಕರೆಯುವರು. ಉಚ್ಚಾರದಲ್ಲಿ ಹೆಚ್ಚು ಕಡಮೆ ಮಾಡುವುದರಿಂದ ಬರುವ ಧ್ವನಿಗಳ ವ್ಯತ್ಯಾಸ ಪದಗಳಲ್ಲಿ ಕೆಲವೊಮ್ಮೆ ಚೆನ್ನಾಗಿಯೇ ಎದ್ದು ಕಾಣುತ್ತದೆ. ಇಂಥ ಧ್ವನಿ ಮಾರ್ಪಾಟುಗಳನ್ನು ಒಂದೇ ಭಾಷೆಯಲ್ಲೂ ಕಾಣಬಹುದು, ಒಂದು ಪರಿವಾರಕ್ಕೆ ಸೇರಿದ ಭಾಷೆಗಳ ಸಮಾನ ಪದಗಳನ್ನು ಹೋಲಿಸಿದಾಗಲೂ ನೋಡಬಹುದು. ಈ ಹೊತ್ತಗೆಯಲ್ಲಿ ತಮಿಳು, ತೆಲುಗು, ತುಳು—ಮುಂತಾದ ಭಾಷೆಗಳ ಪರಿಚಯಮಾಡಿಕೊಡುವಾಗ ಧ್ವನಿಪರಿವರ್ತನೆಯನ್ನೂ ಸೂಕ್ಷ್ಮವಾಗಿ ವಿವರಿಸಿದೆ. ಅದನ್ನು ಮತ್ತೆ ಇಲ್ಲಿ ಉಲ್ಲೇಖಿಸದೆ ನೇರವಾಗಿ ಕೆಲವು ವ್ಯಂಜನ ಧ್ವನಿಮಾಗಳ ಪರಿಚಯ ಮಾಡಿಕೊಟ್ಟಿದೆ.

ಧ್ವನಿವ್ಯತ್ಯಾಸ ಎಲ್ಲ ಜೀವಂತ ಭಾಷೆಗಳಲ್ಲೂ ಆಗುವ ಒಂದು ಸಹಜಕ್ರಿಯೆ. ಆದರೆ ಈ ಪರಿವರ್ತನೆ ಸುಲಭವಾಗಿ ಕಣ್ಣಿಗೆ ಕಾಣಿಸುವುದಿಲ್ಲ, ಗಡಿಯಾರದಲ್ಲಿ ಗಂಟೆಯ ಮುಳ್ಳಿನ ಚಲನೆಯಂತೆ. ಈ ಧ್ವನಿಪರಿವರ್ತನೆ ನಿಧಾನವಾದರೂ ನಿಯತ. ಧ್ವನಿ ಮಾರ್ಪಾಟಿನ ನಿಯತತೆ ತೌಲನಿಕ ಭಾಷಾವಿಜ್ಞಾನದ ಅಭ್ಯಾಸಕ್ಕೆ ಭದ್ರಬುನಾದಿ. ಧ್ವನಿವ್ಯತ್ಯಾಸ ಒಂದು ನಿಯಮವಾಗಿ ಏರ್ಪಟ್ಟಾಗ ಆ ನಿಯಮ ಸಾರ್ವತ್ರಿಕ ಹಾಗೂ ಅಪವಾದರಹಿತವೆಂಬಂತೆ ವ್ಯಾಪಕವಾಗಿರುತ್ತದೆ. ಒಂದು ವೇಳೆ ಅಪವಾದಗಳು (exceptions) ಇದ್ದರೂ ಅದಕ್ಕೆ ಸಾದೃಶ್ಯಸೃಷ್ಟಿ, ಪರ ಅಥವಾ ಪಕ್ಕದ ಭಾಷೆಯ ಪ್ರಭಾವ—ಮುಂತಾದ ಹಲವು ಕಾರಣಗಳಿರುತ್ತವೆ. ಈ ಹಿನ್ನೆಲೆಯಲ್ಲಿ ಮೂಲದ್ರಾವಿಡದ ಸ್ವರಗಳು ಮತ್ತು ವ್ಯಂಜನಧ್ವನಿಗಳು ಬೇರೆ ಬೇರೆ ದ್ರಾವಿಡ ಭಾಷೆಗಳಲ್ಲಿ, ಯಾವ ಯಾವ ಪರಿಸರದಲ್ಲಿ ಹೇಗೆ ವ್ಯತ್ಯಾಸಗೊಂಡಿದೆಯೆಂಬುದನ್ನು ನಿದರ್ಶನಗಳೊಡನೆ ನೋಡಬಹುದು.

# ಮೂಲದ್ರಾವಿಡದಲ್ಲಿ ಸ್ವರವ್ಯವಸ್ಥೆ

ಮೂಲದ್ರಾವಿಡದಲ್ಲಿ ಇದ್ದ ಸ್ವರಗಳು ಅಯ್ದು ಮತ್ತು ಅವುಗಳಿಗೆ ದೀರ್ಘವಾಗಿ ಇನ್ನೈದು. ಈ ಹತ್ತು ಸ್ವರಗಳನ್ನು ಮೂಲದ್ರಾವಿಡಕ್ಕೆ, ಅಯ್ದು ಹ್ರಸ್ವಸ್ವರ ಮತ್ತು ದೀರ್ಘತ್ವ (Length) ಎಂಬ ಒಂದು ಯೋಗವಾಹ ಇಟ್ಟುಕೊಂಡು, ಆರು ಸ್ವರ ಗಳೆಂದು ಹೇಳಿದರೂ ಆದೀತು. ಇವುಗಳನ್ನು ಪೂರ್ವಸ್ವರಗಳೆಂದೂ (ಇ, ಎ) ಪಶ್ಚ ಸ್ವರಗಳೆಂದೂ (ಉ, ಒ) ಮಧ್ಯಸ್ವರವೆಂದೂ (ಅ) ವಿಂಗಡಿಸಲಾಗಿದೆ. ಈ ವಿಭಾಗ ಕ್ರಮಕ್ಕೆ ಪ್ರಧಾನವಾಗಿ ಉಚ್ಚಾರಣೆಯ ಕಾಲದಲ್ಲಿ ನಿಲ್ಲುವ ನಾಲಗೆಯ ಏರಿಳಿತವೇ ಆಧಾರ. ಮೂಲದ್ರಾವಿಡದ ಸ್ವರವ್ಯವಸ್ಥೆ ಸರಳವೂ ಸುಲಭವೂ ಆಗಿತ್ತೆಂದು ತೋರು ತ್ತದೆ. ಅದರಲ್ಲಿ ಸಂಧ್ಯಕ್ಷರಗಳು ಇರಲಿಲ್ಲ. ಸಂಧ್ಯಕ್ಷರಗಳಾದ ಐ ಮತ್ತು ಔ ಏನಿದ್ದರೂ ಸಂಸ್ಕೃತದ ಸಂಪರ್ಕ ಪ್ರಭಾವದಿಂದ ತಡವಾಗಿ ತಲೆದೋರಿದವು. ಐ ಮತ್ತು ಔ ಎಂಬೆರಡು ಸ್ವರಸಂಜ್ಞೆಗಳಿಗೆ ದ್ರಾವಿಡ ವರ್ಣಮಾಲೆಯಲ್ಲಿ ಸ್ಥಾನ ಕೊಡಬೇಕಾದ ಅಗತ್ಯವಿಲ್ಲ. ಏಕೆಂದರೆ ಉಚ್ಚಾರಣೆಯಲ್ಲಿ ಇವನ್ನು ಕ್ರಮವಾಗಿ ಅಯ್, ಅವ್ ಎಂಬ ವರ್ಣಗುಚ್ಛಗಳಿಂದ ಹೇಳುತ್ತೇವೆ. ಆದರೆ ಮೂಲದ್ರಾವಿಡ ಸ್ವರ ವ್ಯವಸ್ಥೆಗೆ ಸಂಬಂಧಿಸಿ ದಂತೆ *ಎಯ್-(ಕ. ಅಯ್-) ಎಂಬ ಆದ್ಯಕ್ಷರ ಸಂಬಂಧಿ ವರ್ಣಗುಚ್ಛ ಸ್ವರ ವನ್ನು ಪುನರ್‌ರಚಿಸಿಕೊಳ್ಳುವ ಸಾಧ್ಯತೆಯಿದೆ. ಈ ಹತ್ತು ಸ್ವರಗಳೂ ಮೂಲದ್ರಾವಿಡ ಶಬ್ದಗಳ ಮೊದಲನೆಯ ಅಕ್ಷರದಲ್ಲಿ ಬರಬಲ್ಲುವು.

ಮೂಲದ್ರಾವಿಡದ ಸ್ವರಗಳನ್ನು ಒಂದೊಂದಾಗಿ ಮುಂದೆ ಎಮೆನೋರವರ ವಿವರಣೆ ಯಂತೆ ಪರಿಶೀಲಿಸಲೆತ್ನಿಸಿದೆ.

ಮೂಲದ್ರಾ. *ಅ : ಬಹುವಾಗಿ ಎಲ್ಲ ದ್ರಾವಿಡ ಭಾಷೆಗಳಲ್ಲೂ ಅ ಇದ್ದು ಹೊಂದಾಣಿಕೆ ಯನ್ನು ತೋರಿಸುತ್ತದೆ. ತೊದ ಭಾಷೆಯಲ್ಲಿ ಕೆಲವು ಸಲ ಒ ಇದೆ. ತೊದ ಭಾಷೆ ಯಲ್ಲಿ ಯಾವಾಗ ಅ ಇರುತ್ತದೆ ಯಾವಾಗ ಒ ಇರುತ್ತದೆಂಬುದು ಖಚಿತವಾಗಿಲ್ಲ. ಪರ್ಜಿಭಾಷೆಯಲ್ಲಿ, ಕೆಲವು ಸಲ, ಎ ಇದೆ. ಈ ಭಾಷೆಯಲ್ಲಿ ಕೂಡ ಯಾವಾಗ ಅ ಅಥವಾ ಎ ಇರುತ್ತೆಂಬುದು ಸರಿಯಾಗಿ ತಿಳಿಯದು. ಬ್ರಾಹೂಈ ಭಾಷೆಯಲ್ಲಿ ಹ್ರಸ್ವ ಅ ರೂಪಗಳಿರುವ ಶಬ್ದಗಳು ಕಡಮೆ. ಉಳಿದ ದ್ರಾವಿಡ ಭಾಷೆಗಳಲ್ಲಿ

ಮೂಲದ್ರಾ* ಅ ಕಂಡುಬರುವುದಕ್ಕೆ ಎರಡು ಉದಾಹರಣೆಗಳು :

೧. ಕ., ಮ., ತ., ಕಣ್, ಕೋತ. ಕಣ್, ತೊದ. ಕೊಣ್, ಕೊಡಗು. ಕಣ್ಣೀ, ತು. ಕಣ್ಣು. ತೆ. ಕನು/ಕನ್ನು (ಬ. ವ. ಕಂಡು) ಕೋಲಾಮಿ. ಕನ್, ನಾಯ್ಕಿ. ಕನ್, ಪರ್ಜಿ. ಕನ್, ಗದಬ. ಒಲ್ಲಾರಿ. ಕಣ್, ಸೋಲೂರು ಗದಬ. ಕನು, ಗೋಂಡಿ. ಕನ್., ಅದಿಲಾಬಾದ್ ಗೋಂಡಿ. ಕರ್ (ಬ. ವ. ಕರ್ಕ್), ಕೊಂಡ. ಕಣ್., ಕುಈ. ಕನು, ಕುವಿ. ಕನ್ನೊ, ಬ್ರಾ. ಖಣ್.

೨. ಕ. ಬರ್ (ಬಾರ್, ಬನ್ದ್–), ತ. ವರು (ವಾರ್–, ವನ್ದ್–) ಮ. ವರುಕ, (ವಾರ್ –, ವನ್ನ್ – ), ತೊದ. ಪೋರ್ – (ಪ–, ಪಸ್ –, ಪೊದ್–), ಕೋತ. ವಾರ್ (ವ–, ವದ್ –), ಕೊಡಗು. ಬರ್ – (ಬಪ್ಪ್–, ಬನ್ದ್ –), ತುಳು. ಬರ್ಸಿನಿ, ತೆ. ವಚ್ಚು (ರಾ–) ಕೋಲಾಮಿ. ವರ್ (ವ–, ವತ್–), ನಾಯ್ಕಿ. ವರ್–, ಪರ್ಜಿ. ವೆರ್–, ಗದಬ (ಒ) ವರ್ – (ವದ್ –, ವನ್–), ಸೋಲೂರ್ ಗದಬ. ವಾರ್ – (ವದ್ದ್ –), ಗೋಂಡಿ. ವಾನ್ದ್ –, ಕೊಂಡ. ರಾ (ರೇತ್ –), ವಾ–, ಕುಈ. ವಾವ (ವಾತ್), ಕುರುಖ್. ಬರ್ನ, ಮಲ್ತೊ. ಬರೆ, ಬ್ರಾ. ಬನ್ನಿಂಗ್ (ಬರ್ –, ಬ–, ಬಸ್ –)

ಅ) ತೊದಭಾಷೆಯಲ್ಲಿರುವ ಅ ಧ್ವನಿಮಾ ಉಳ್ಳ ಶಬ್ದಕ್ಕೆ ಉದಾ : ಅರ್ = ಅರ್ಧ ; ಕ. ಅರೆ, ತು. ಅರೆ, ಮ. ತೆ. ಅರ. ತ. ಅರೈ, ಕೋತ. ಅರ್

ಆ) ಪರ್ಜಿಭಾಷೆಯಲ್ಲಿರುವ ಎ (= * ಅ) ಧ್ವನಿಮಾ ಉಳ್ಳ ಶಬ್ದಕ್ಕೆ ಒಂದು ಉದಾ :

ಪೆಲ್ = ಹಲ್ಲು : ಕ. ತ. ಮ. ಕೋತ. ಕೋಲಾಮಿ. ಗೋಂಡಿ, ನಾಯ್ಕಿ. ಗದಬ (ಒ), ಕೊಂಡ – ಪಲ್, ತೊದ. ಪಸ್, ಕೊಡಗು. ಪಲ್ಲೀ, ತೆ. ಪಲ್ಲು, ಕುವಿ. ಪಲ್ಲೂ. ಕುರುಖ್. ಪಲ್. ಮಲ್ತೊ. ಪಲು., ಕುಈ. ಪಡು/ಪಲು

ಮೂಲದ್ರಾ. *ಆ : ಬಹುವಾಗಿ ಎಲ್ಲ ದ್ರಾವಿಡ ಭಾಷೆಗಳಲ್ಲೂ 'ಆ' ಇದ್ದು ಹೊಂದಾಣಿಕೆಯನ್ನು ತೋರಿಸುತ್ತದೆ. ತೊದ ಭಾಷೆಯಲ್ಲಿ ಕೆಲವು ಸಲ 'ಆ' ಸ್ಥಾನದಲ್ಲಿ ಓ ಇದೆ. ಪರ್ಜಿಭಾಷೆಯಲ್ಲಿ ಕೆಲವು ಸಲ ಏ ಇದೆ.[1] ಒಂದು ಉದಾ :

೧. ಆಱು (ಆಱ್–) = ತಣ್ಣಗಾಗು, ಮಾಗು ; ತ. ಆಱು, ಆಱಿ –, ಮ. ಆಱುಕ (= + ಒಣಗು) ; ತೊದ. ಓಱ್–, ಕೋತ. ಆರ್ ; ಕ. ಆಱ್, ಕೊಡಗು. ಆರ್, ತುಳು. ಆರುನಿ ; ತೆಲುಗು– ಆಱು ಕೋಲಾ. ಆರ್–, ನಾಯ್ಕಿ. ಆರ್ –, ಪರ್ಜಿ. ಏದ್– ; ಗದಬ – ಆಲ್ ; ಗೋಂಡಿ. ಆರಾಣಾ ; ಕುಈ. ಆಜ/ಆಜಿ.

---

1 ಪರ್ಜಿ ಭಾಷೆಯ ಸ್ವರ ವ್ಯವಸ್ಥೆಯನ್ನು ಈ ಅಧ್ಯಾಯದ ಕಡೆಯಲ್ಲಿ ಕೊಟ್ಟಿದೆ.

ಮೂಲದ್ರಾ. *ಇ : ಎಲ್ಲ ದ್ರಾವಿಡ ಭಾಷೆಗಳಲ್ಲೂ 'ಇ' ಇದ್ದು ಹೊಂದಾಣಿಕೆಯನ್ನು ತೋರಿಸುತ್ತದೆ. ಇದಕ್ಕೆ ಒಳ್ಳೆಯ ಉದಾಹರಣೆ ಎಂದರೆ ನಿರ್ದೇಶಕ ಸರ್ವನಾಮ *ಇ—. ಬ್ರಾ. ಭಾಷೆಯಲ್ಲಿ 'ಇ' ಇರುವ ರೂಪಗಳಿಲ್ಲ. ಆದರೆ ಅಲ್ಲಿರುವ ಈ— ಪ್ರಕೃತಿಗಳನ್ನು ಇದಕ್ಕೆ ಸದೃಶಧ್ವನಿ ಆಗಿ ಗಮನಿಸಬಹುದು. ತೊದ ಭಾಷೆಯಲ್ಲಿ 'ಇ' ಇರುವ ರೂಪಗಳಲ್ಲಿ ಕೆಲವಕ್ಕೆ 'ಈ'ಯೂ ಸಮಾನಾರ್ಥಕವಾಗಿ ನಿಲ್ಲುವುದುಂಟು. ಉದಾ :

೧. ಬಿಲ್ (= ಬಿಲ್ಲು); ತ. ಮ. ವಿಲ್; ತೊದ. ಪೀಸ್ ; ಕೋತ; ವಿಳ್ಯ : ಕ. ಬಿಲ್ ; ಕೊಡಗು. ಬಿಲ್ಲೀ ; ತು. ಬಿಲ್ಲು/ಬಿರು ; ತೆ. ವಿಲು/ವಿಲ್ಲು ; ಕೋಲಾ. ಪರ್ಜಿ. ವಿಲ್ ; ಗದಬ. (ಒ)ವಿಸ್ಡ್ ; ಗೋಂಡಿ. ವೀಲ್ ; ಕೊಂಡ. ವಿಲ್ ; ಕುಈ. ವಿಡು/ವಿಲು ; ಕುವಿ. ವೆಲ್ಲೂ (= ಬಾಣ) ; ಬ್ರಾ. ಬಿಲ್.

೨. ಇರ್ - (= ಎರಡು) ಕ. ಇರ್ –/ಎರಡು ; ತ. ಇರು–/ಇರ– ; ಮ. ಇರ–/ಇರು ; ತೊದ. ಇ/ಈ ; ಕೋತ. ಇರ್/ಇ. ಕೊಡಗು .ಇರು- ; ತು. ಇರ್– ; ತೆ. ಇರು- ; ಪರ್ಜಿ– ; ಇಡ್ಱು/ಇರ್– ; ಗೋಂಡಿ. ಇರು– ; ಕುರುಖ್. ಇರ್ಬ್: ಮಲ್ತೊ. ಇವ್ರ್ ; ಬ್ರಾ. ಇರಟ್.

ಮೂಲದ್ರಾ. *ಈ : ಎಲ್ಲ ದ್ರಾವಿಡ ಭಾಷೆಗಳಲ್ಲೂ 'ಈ' ಇದ್ದು ಹೊಂದಾಣಿಕೆಯನ್ನು ತೋರಿಸುತ್ತದೆ.

೧. ನೀರ್ (= ನೀರು) ಕ. ನೀರ್, ನೀರು – (ನೀರುಳ್ಳಿ/ಈರುಳ್ಳಿ) ; ಈರ್/ಇರ್ ; (ಇರ್ಪೋಡಿದ) ; ತ. ನೀರ್/ಈರ್ (ತೇವ) ; ಮ. ನೀರ್/ಈರ್: ತೊದ. ನೀರ್ ; ಕೋತ. ನೀರ್ ; ಕೊಡಗು. ನೀರೀ ; ತು. ನೀರು ; ತೆ. ನೀರು/ನೀಳ್ಳು ; ಕೋಲಾ. ನಾಯ್ಕಿ. ಈರ್ ; ಪರ್ಜಿ. ನೀರ್ ; ಗದಬ. ನೀರ್ ; ಕುಈ. ನೀರು. ಬ್ರಾ. ದೀರ್.

೨. ಕ. ನೀವ್/ನೀನ್/ನೀ (= ನೀನು) ; ತ. ಮ. ತೊ. ಕೋತ. ನೀ ; ಕೊಡ. ನೀನೀ/ನೀ ; ತು. ಈ– ; ತೆ. ನೀವು/ಈವು; ಕೋಲಾ. ನಾಯ್ಕಿ. ನೀವ್ : ಪರ್ಜಿ, ಗದಬ. ಈನ್ ; ಗೋಂಡಿ. ಈಮ್ಮಾ ; ಕೊಂಡ. ನೀನ್ ; ಕುಈ. ಈನು ; ಕುವಿ. ನೀನು ; ಕುರುಖ್. ನೀನ್ ; ಮಲ್ತೊ. ನೀನ್ ; ಬ್ರಾ. ನೀ.

ಮೂಲದ್ರಾ. *ಉ : ಬಹುಮಟ್ಟಿಗೆ ಎಲ್ಲ ದ್ರಾವಿಡ ಭಾಷೆಗಳಲ್ಲೂ 'ಉ' ಇದ್ದು ಹೊಂದಾಣಿಕೆಯನ್ನು ತೋರಿಸುತ್ತದೆ. ತೊದ ಭಾಷೆಯಲ್ಲಿ ಕೆಲವೊಮ್ಮೆ 'ಐ' ಇದೆ.

೧. ಕ. ನುಂಗು ; ತ. ನುಂಗು ; ತೊದ. ನುಗ್– (ನುಗ್ಗಿ – ) ; ಕೋತ. ನುಂಗ್ ; ತು. ನಿಂಗುನಿ ; ಕುರುಖ್. ನುನುಖ್ನಾ ; ಮಲ್ತೊ. ನುಂಗೆ. ಬ್ರಾ. ನುಘುಶಿಂಗ್ ;

೨. ಕ. ಉದಿರು/ಉದರು/ಉದುರ್ ; ತ. ಉದಿರ್ ; ಮ. ಉದಿರ್ ; ತೊದ. ವಿತ್ ; ತು. ಉದುರ್–/ಉದರ್.

(ಅ) ಕ. ಉಳ್/ಉಳ್ಳ ; ಒಳ್/ಒಳಗೆ ; ತೊದ. ಉಳ್ ; ಪರ್ಜಿ. ಮಲ್ತೊ. ಉಲೆ, ಬ್ರಾ. ಉಸ್ತ್ ಕೊಡಗು. ಒಳಿ ಕೋಲಾ. ಲೋಪಲ್ ಒಳ್ –/ ಒಳ್ – /ಒಡ್ – ತೆ. ಕೋತ. ಉಳ್/ತು. ಉಳ ನಾಯ್ಕಿ. ಲೋಪ, ಉಲ್ಲಮು/ಲೋ. ತ. ಉಳ್ ಮ. ಉಳ್ಳ.

ಮೂಲದ್ರಾ *ಊ : ಎಲ್ಲ ದ್ರಾವಿಡ ಭಾಷೆಗಳಲ್ಲೂ 'ಊ' ಇದ್ದು ಹೊಂದಾಣಿಕೆ ತೋರಿಬರುತ್ತದೆ.

೧. ನೂಲ್ (= ನೂಲು) ; ತ. ಮ. ಕೋತ. ಕೋಲಾ. ಪರ್ಜಿ. ಗದಬ– ನೂಲ್ ; ತೊದ. ನೂಸ್, ನೂಸ್‌ಫ್ ; ಕೊಡಗು. ನೂಲಿ ; ತು. ನುಲು/ ನೂಪುನಿ ; ತೆ. ನೂಲು ; ಗೋಂಡಿ. ನೂಲ್ ; ಕುಈ. ನೂಡು/ನೇಲ್ಬ ; ಕುವಿ. ಲೂಲು.

ಮೂಲದ್ರಾ. *ಎ : ಹೆಚ್ಚಿನ ದ್ರಾ. ಭಾಷೆಗಳಲ್ಲಿ 'ಎ' ಇದ್ದು ಹೊಂದಾಣಿಕೆ ತೋರಿ ಬರುತ್ತದೆ. ಆದರೆ ತೊದ, ಪರ್ಜಿ. ಗೋಂಡಿ ಬ್ರಾಹುಈ ಭಾಷೆಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ. ತೊದ ಭಾಷೆಯಲ್ಲಿ ಕೆಲವು ಕಡೆ 'ಓ' ಇದೆ. ಪರ್ಜಿಯಲ್ಲಿ ಕೆಲವು ಸಲ 'ಅ' ಬರುತ್ತದೆ. ಗೋಂಡಿಯಲ್ಲೂ 'ಅ' ಬರುತ್ತದೆ ; ಬ್ರಾಹೂಈ ಯಲ್ಲೂ 'ಅ' ಬರುತ್ತದೆ ;

೧. ಕ. ಕಿವಿ ; ತ. ಚೆವಿ ; ಮ. ಚೆವಿ ; ತೊದ. ಕೀಫಿ ; ಕೋತ. ಕೆವಿ ; ಕೊಡಗು. ಕೆವಿ ; ತು. ಕೆಬಿ ; ತೆ. ಚೆವಿ ; ಕೋಲಾ. ನಾಯ್ಕಿ. ಕೆವ್ ; ಪರ್ಜಿ. ಗದಬ, ಕೆಕೂಲ್ ; ಗೋಂಡಿ. ಕವೀ (ಮ), ಕೆಲು (ಲ), ಕೆನ್ ; ಕುರುಖ್. ಖೆಬ್ದಾ ; ಮಲ್ತೊ. ಖೆಥ್ವ ; ಬ್ರಾ. ಖಫ್.

೨. ಕ. ಇಲಿ/ಎಲಿ ; ತ. ಮ. ಎಲಿ ; ತೊದ. ಇಸಿ ; ಕೋತ. ಎಯ್ಜ್ ; ಕೊಡಗು. ಎಲಿ ; ತು. ಎಲಿ/ಇಲಿ ; ತೆ. ಎಲುಕ ; ಕೋಲಾ. ನಾಯ್ಕಿ. ಎಲ್ಕ ; ಪರ್ಜಿ. ಎಲ್ ; ಗದಬ (ಒ) ಸಿರ್–ಎಲ್ ; ಗೋಂಡಿ. ಅಲ್ಲೀ ; ಎಲ್ಲಿ (ಅ) ; ಕೊಂಡ. ಎಲ್ಕ ; ಬ್ರಾ. ಹಲ್.

ಅ) ಕ. ಬೆರಲ್ (ಬೆರಳು<ವೆರಲ್) ; ತ. ವಿರಲ್ – ಪರ್ಜಿ. ಗದಬ. ವಂಡೆ ; ಗೋಂಡಿ. ವರೇಂಜ್/ವಿರೆಂಜ್ ; ಕುಈ. ವಂಜು.

ಆ) ಎೞು (ಏೞು>ಏಳು = ಎದ್ದೇಳು) ; ತ. ಎೞು. ತೊದ. ಓಡ್ ; ಬ್ರಾ. ಹರ್ಸಿಂಗ್ :

ಮೂಲದ್ರಾ. *ಏ : ಹೆಚ್ಚಿನ ದ್ರಾ. ಭಾಷೆಗಳಲ್ಲಿ. 'ಏ' ಇದ್ದು ಹೊಂದಾಣಿಕೆ ತೋರಿ

ಬರುತ್ತದೆ. ಆದರೆ ತೊದ ಪರ್ಜಿ ಭಾಷೆಗಳಲ್ಲಿ ವ್ಯತ್ಯಾಸ ಕಾಣುತ್ತದೆ. ತೊದಭಾಷೆ ಯಲ್ಲಿ ಕೆಲವು ಸಲ 'ಓ', ಪರ್ಜಿಯಲ್ಲಿ ಕೆಲವು ಸಲ 'ಆ' ಬರುತ್ತದೆ.

೧. ಕ. ತೇೞ್>ಚೇಳು; ತ. ತೇಳ್, ಮ. ತೇಳ್; ಕೊಡಗು. ತೇೞೀ; ತು. ತೇಲು/ತೇಳು; ತೆ. ತೇಲು; ಮಲ್ತೊ. ತೇಲೆ; ಬ್ರಾ. ತೇಲ್ಹ್.

೨. ಕ. ಬೇರು<ವೇರ್; ತ. ಮ. ಕೋತ. ಕೋಲಾ. ನಾಯ್ಕಿ. ಗದಬ (ಓ)-ವೇರ್; ತೊದ. ಪೋರ್; ಕೊಡಗು. ಬೇರೀ; ತು. ಬೇರು; ಪರ್ಜಿ. ವಾರ್; ಕೊಂಡ. ವೇಲ; ಕುವಿ. (ಫಿ) ವೇಲ.

ಆ) ಕ. ತೇರು (ತೇರುಗಡೆ/ತೇರ್ಗಡೆ = ಉತ್ತೀರ್ಣ, ಮುನ್ನಡೆ), ತೊದ. ತೋೞ್ (= ಚೆನ್ನಾಗು).

ಮೂಲದ್ರಾ. *ಒ: ಹೆಚ್ಚಿನ ದ್ರಾ. ಭಾ. ಲ್ಲಿ. 'ಒ' ಇದ್ದು ಹೊಂದಾಣಿಕೆ ತೋರುತ್ತದೆ. ಆದರೆ, ತೊದ ಮತ್ತು ಬ್ರಾ. ಭಾಷೆಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ. ತೊದ ಭಾಷೆಯಲ್ಲಿ ಕೆಲವು ಸಲ 'ವ' ಇದೆ. ಬ್ರಾಹುಈಯಲ್ಲಿ ಯಾವಾಗಲೂ 'ಓ' ಬರುತ್ತದೆ. ಬ್ರಾ. ಲ್ಲಿ ಹೀಗಾಗಲು ಕಾರಣ ಅಲ್ಲಿ ಹ್ರಸ್ವ ಒಕಾರ ಇಲ್ಲ. ಇದಕ್ಕೆ ಬ್ರಾ. ಭಾಷೆಯಿರುವ ಭೌಗೋಳಿಕ ಪರಿಸರ ಕಾರಣವಿರಬಹುದು. ಏಕೆಂದರೆ ಅದರ ಸುತ್ತಮುತ್ತಲಿನ ದ್ರಾವಿಡೇತರ ಭಾಷೆಗಳಲ್ಲಿ ಹ್ರಸ್ವ ಒ ಇಲ್ಲ, ದೀರ್ಘ ಓ ಇದೆ.[1]

೧. ಕ. ಒಲ್/ಒಲಿ; ತ. ಒಲ್ಲು/ಒಲ್; ಮ. ಒಲ್ಲುಕ; ತೊದ. ವಲ್; ತೆ, ವಲಚು; ತು. ಒಲಪುನಿ.

೨. (ಕೋಲಾರ) ಕ. ಬೊಗ್ಗು (= ಇಜ್ಜಿಲು); ಬ್ರಾ. ಪೋಘ್.

ಮೂಲದ್ರಾ. *ಓ: ತೊದ ಭಾಷೆಯನ್ನು ಬಿಟ್ಟು ಉಳಿದ ಎಲ್ಲ ದ್ರಾ. ಭಾ.ಗಳಲ್ಲೂ 'ಓ' ಇದ್ದು ಹೊಂದಾಣಿಕೆ ತೋರಿಬರುತ್ತದೆ. ತೊದ ಭಾಷೆಯಲ್ಲಿ ಮಾತ್ರ ಕೆಲವು ಸಲ 'ವಾ' ಕಂಡುಬರುತ್ತದೆ.

೧. ಕ. ಬೋೞ (= ಬೋಳು), ತೊದ. ಪೋಣ್.

೨. ಕ. ಓಟೆ., ತೊದ. ವಾರ್.

ಅನೇಕ ಶಬ್ದ ನಿಷ್ಪತ್ತಿಯಲ್ಲಿ ಮೂಲ ಶಬ್ದ ತನ್ನ ಹೊಂದಾಣಿಕೆಯನ್ನು ಮೇಲೆ ಹೇಳಿದಂತೆ ತೋರಿಸಲು ಆಗದಿರಬಹುದು. ಅನೇಕ ಸಲ ಈ ಅನುರೂಪತೆಯ ಅಭಾವ ವನ್ನು ಗುರುತಿಸಲೂಬಹುದು. ಹೀಗೆ ಹಲವು ಸಲ ಆಗಲು ಕಾರಣಗಳಿವೆ. ಕೊಟ್ಟ ವಿವರಗಳು ಸಾಲದಿರಬಹುದು. ಧ್ವನಿ ಹಾಗೂ ಆಕೃತಿ ಪರಿಸರ ದೃಷ್ಟಿಯಿಂದ

[1] ಬ್ರಾ. ಭಾಷೆಯ ಸ್ವರವ್ಯವಸ್ಥೆಯನ್ನು ಈ ಅಧ್ಯಾಯದ ಕಡೆಯಲ್ಲೂ, ಅದರ ಪರಿಚಯ ಮಾಡಿಕೊಟ್ಟ ಹಿಂದಿನ ಒಂದು ಅಧ್ಯಾಯದಲ್ಲೂ ಬಂದಿದೆ.

ಪರಿಶೀಲಿಸಬೇಕಾಗಬಹುದು. ಮೇಲೆ ಹೇಳಿದ ಅಯ್ದು ಸ್ವರಗಳು ಮತ್ತು ಅವುಗಳ ದೀರ್ಘರೂಪಗಳು, ಒಟ್ಟಿಗೆ ಹತ್ತು ಸ್ವರಗಳೂ ಮೂಲದ್ರಾ. ಆಕೃತಿಗಳ ಆದ್ಯಕ್ಷರಗಳಲ್ಲಿ ಬರಬಲ್ಲುವು. ಅ, ಇ, ಉ, ಗಳು ಮಾತ್ರ ಎರಡನೆಯ ಮತ್ತು ಅವುಗಳ ಪರವಾಗುವ ಅಕ್ಷರಗಳಲ್ಲಿ ಬರಬಹುದು.

ದ್ರಾವಿಡ ಭಾಷೆಗಳ ತೌಲನಿಕ ಅಭ್ಯಾಸ ಇನ್ನೂ ತುಂಬಾ ನಡೆಯಬೇಕಾಗಿದೆ. ಶಬ್ದದ ಮೊದಲಕ್ಷರವನ್ನು ದೃಷ್ಟಿಯಲ್ಲಿಟ್ಟುಕೊಂಡು ಮೂಲದ್ರಾವಿಡ ಆಕೃತಿಗಳ ಅಭ್ಯಾಸ ನಡೆದಿದೆಯೇ ಹೊರತು, ಉಳಿದ ಅಕ್ಷರಗಳ ಅಭ್ಯಾಸ ನಡೆದಿಲ್ಲ. ಅಲ್ಲದೆ ಕೆಲವು ಸಂಧಿನಿಯಮಗಳನ್ನೂ ಗುರುತಿಸಬೇಕಾಗುತ್ತದೆ. ಸಾಧಿತ ಪ್ರತ್ಯಯ ಪರವಾಗದ, ದೀರ್ಘಸ್ವರವಿರುವ ಕ್ರಿಯಾಪ್ರಕೃತಿ, ಸಾಧಿತ ಪ್ರತ್ಯಯ ಪರವಾದಾಗ ಹ್ರಸ್ವಸ್ವರ ಪಡೆದಿರುತ್ತದೆ. ಅಂದರೆ ಸಂಧಿಯಾದಾಗ ಹ್ರಸ್ವತೆ ಬರುತ್ತದೆ. ಆದರೂ ಅಂಥ ಕಡೆಗಳಲ್ಲಿ ದೀರ್ಘಸ್ವರವೇ ಮೂಲವೆಂದು ತೋರುತ್ತದೆ. ಏಕೆಂದರೆ ಪ್ರತ್ಯಯ ಪರವಾಗಲಿ ಆಗದಿರಲಿ; ಹ್ರಸ್ವ ಸ್ವರಗಳಿರುವ ಪ್ರಕೃತಿಗಳೊಡನೆ ವೈದೃಶ್ಯ ಕಂಡುಬರುತ್ತದೆ. ಇದನ್ನು ಮೂಲದ್ರಾವಿಡದ ಸಂಧಿವಿಧಾನವೆಂದು ಪರಿಗಣಿಸಬಹುದು. ನಾಮಪದಗಳಲ್ಲಿ ಕೂಡ ಇಂಥದೇ ಕ್ರಮ ಕಂಡುಬರುವುದುಂಟು. ಸರ್ವನಾಮಗಳಲ್ಲಿಯೂ (ನಾಮ್/ನಮಗೆ, ಯಾನ್/ಎನಗೆ, ಸಂಖ್ಯಾವಾಚಕದ ವಿಶೇಷಣ ರೂಪಗಳಲ್ಲಿಯೂ (ಒರ್/ಓರ್, ಇರ್/ಈರ್) ಮು/ಮೂ) ವಿಶೇಷಣಗಳಲ್ಲೂ (ಚೀಱ್/ಚಿಱು=ಚಿಕ್ಕ) ಈ ಬಗೆಯಿದೆ. ಸಂಖ್ಯಾವಿಶೇಷಣಗಳಲ್ಲಿ ಸ್ವರದ ದೀರ್ಘತೆ ಹ್ರಸ್ವತೆ, ಅವುಗಳಿಗೆ ಪರವಾಗುವ, ಸ್ವರ ಇಲ್ಲವೇ ವ್ಯಂಜನವನ್ನು ಅವಲಂಬಿಸಿರುತ್ತದೆ.

ಕೆಲವು ಸಲ ದೀರ್ಘಸ್ವರದ ಮೂಲಶಬ್ದ ನಾಮಪದವಾಗಿಯೂ, ಕ್ರಿಯಾರೂಪವಾಗಿಯೂ, ಬರುವುದುಂಟು. ಗೌಣಉಪಾಕೃತಿ ಹ್ರಸ್ವ ಸ್ವರದೊಡನೆ ಕ್ರಿಯಾರೂಪಗಳಲ್ಲೂ, ಅವುಗಳಿಂದಾದ ನಾಮಪದಗಳಲ್ಲೂ ಬರುವುದು ಕಡಮೆ. ಆದರೆ ಮೂಲ ಉಪಾಕೃತಿ ದೀರ್ಘಸ್ವರದೊಡನೆ ನಾಮಪದಗಳಲ್ಲಿ ಮಾತ್ರ ನಿಲ್ಲುತ್ತದೆ. ಉದಾ: ಕ. ಮೀನ್, ತ. ಮ. ಕೋತ. ತೊದ. ಮೀನ್ (=ನಕ್ಷತ್ರ); ಇದರ ಕ್ರಿಯಾಪದ, ಮಿಂಚು, ತ. ಮಿನ್ನು. ಆದ್ದರಿಂದ ಇಲ್ಲಿ ಈ/ಇಗಳ ಸ್ಪಷ್ಟ ನಿರ್ದೇಶನವಿದೆ. ವಿಶೇಷವಾಗಿ ನಾಲ್ಕು ಸಾಹಿತ್ಯಿಕ ದ್ರಾವಿಡ ಭಾಷೆಗಳಲ್ಲಿ, ಪ್ರಾಚೀನ ಅವಸ್ಥೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಉನ್ನತ ಮಧ್ಯಸ್ವರಗಳು ಮೂಲಾಕ್ಷರಗಳಲ್ಲಿ (Root Syllables) ನಿಲ್ಲುವ ಪ್ರಸಾರವನ್ನು ನೋಡೋಣ.

ಮೂಲಾಕ್ಷರಗಳಲ್ಲಿ ಒಂದಕ್ಕೆ (ಇ ಅಥವಾ ಉ ಸ್ವರಗಳಿಂದಾರಂಭವಾಗುವ) ಸಾಧಿತಾಕ್ಷರ ಪರವಾದಾಗ ಆ ಮೂಲಾಕ್ಷರಗಳು ಎಲ್ಲ ನಾಲ್ಕು ಸಾಹಿತ್ಯಿಕ ಭಾಷೆಗಳಲ್ಲೂ ಅಯ್ದು ಹ್ರಸ್ವಸ್ವರಗಳಲ್ಲಿ ಯಾವುದನ್ನಾದರೂ ಪಡೆದಿರಬಹುದು. ಮೂಲಾಕ್ಷರಗಳಿಗೆ 'ಅ' ಸ್ವರಾರಂಭ ಸಾಧಿತಾಕ್ಷರ ಪರವಾದಾಗ, ಮೂಲಾಕ್ಷರಗಳು ತ. ಮ. ಗಳಲ್ಲಿ ಇ, ಉ ಅಥವಾ ಅ ಸ್ವರಗಳನ್ನು ಮಾತ್ರ ಹೊಂದಿರಬಹುದು. ಕ. ದಲ್ಲಿ ಮತ್ತು ತೆ. ನಲ್ಲಿ

ಎ, ಒ ಅಥವಾ ಅ ಮಾತ್ರ ಇರಬಹುದು, ಮೂಲಾಕ್ಷರಕ್ಕೆ. ಈ ಸಂದರ್ಭದಲ್ಲಿ ತ. ಮ. ದಲ್ಲಿ ಮೂಲದ್ರಾವಿಡ *ಎ ಮತ್ತು *ಒಗಳಿಂದ ಕ್ರಮವಾಗಿ ನಿಷ್ಪನ್ನವಾದ 'ಇ' ಮತ್ತು 'ಉ' ಇರುವ ಕೆಲವು ಉದಾಹರಣೆಗಳುಂಟು; ಕ. ಮತ್ತು ತೆ. ಗಳಲ್ಲಿ ಮೂಲದ್ರಾವಿಡ *ಇ ಮತ್ತು *ಉ ಗಳಿಂದ ಕ್ರಮವಾಗಿ ನಿಷ್ಪನ್ನವಾದ 'ಎ' ಮತ್ತು 'ಒ' ಇರುವ ಕೆಲವು ಉದಾಹರಣೆ ಉಂಟು. ಇದಕ್ಕೆ ಸೇರಿದಂತೆ ಮೂಲದ್ರಾವಿಡ ಸ್ವರಗಳನ್ನು ಪತ್ತೆ ಹಚ್ಚುವ ವಿಧಾನಗಳಿವೆ: (ಅ) 'ಅ' ದಿಂದ ತೊಡಗದ ಒಂದು ಸಾಧಿತ ಶಬ್ದ ಇಲ್ಲವೇ ಶೂನ್ಯ ಆಕೃತಿ ಪರವಾಗುವ ಹ್ರಸ್ವ 'ಪ್ರಕೃತಿಯ' ಸ್ವರ ತೋರುವ ಒಂದು ಮೂಲಶಬ್ದವನ್ನು ಸ್ಥಾಪಿಸುವುದು. (ಆ) ಸ್ವರವೊಂದರಿಂದ ತೊಡಗಿ ಸಾಧಿತ ಪ್ರಕೃತಿ ಪರವಾಗುವಿಕೆಯಿಂದ ಕುಗ್ಗದ, ದೀರ್ಘಸ್ವರವಿರುವ ಮೂಲಶಬ್ದವನ್ನು ಸ್ಥಾಪಿಸುವುದು: ಅಂಥ ಸಹಾಯಕ ಮೂಲ ಶಬ್ದಗಳನ್ನು ನಾಲ್ಕು ಸಾಹಿತ್ಯಕ ದ್ರಾವಿಡ ಭಾಷೆಗಳಲ್ಲೂ, ಉಳಿದ ದ್ರಾವಿಡ ಭಾಷೆಗಳಲ್ಲೂ ಕಾಣಬಹುದು.

ಈ ನಿಯಮಕ್ಕೆ ಹೊರತಾಗಿ ನಿಲ್ಲುವ ಉದಾಹರಣೆಗಳೂ ಉಂಟು. ಮೂಲದ ದ್ರಾವಿಡಭಾಷೆಯಲ್ಲಿ ಮೂಲದ್ರಾವಿಡ *ಇ ಮತ್ತು *ಎಗಳು *ಎ ಆಗಿ ಸಮರೂಪಧಾರಣೆ ಮಾಡಿದರೆ, *ಉ ಮತ್ತು *ಒ ಗಳು *ಒ ಆಗಿಯೂ ಸಮರೂಪಧಾರಣೆ ಮಾಡಿದ ಉದಾಹರಣೆಗಳಿವೆ. ತ. ಮ. ದಲ್ಲಿ *ಎ ಮತ್ತು *ಒ ಗಳು 'ಅ' ಪರವಾದಾಗ ಇ ಮತ್ತು ಉ ಆಗಿ ಮೂಲ ತ. ಹಂತದಲ್ಲಿ ಎಲ್ಲೆಡೆಯಲ್ಲೂ ಮಾರ್ಪಾಟಾಗಿವೆ. ಕ ದಲ್ಲಿ 'ಎ' ಮತ್ತು 'ಒ'ಗಳು 'ಇ' ಮತ್ತು 'ಉ'ಗಳಲ್ಲಿ ಕ್ರಮವಾಗಿ ಸಮರೂಪಧಾರಣೆ ಗೊಂಡವು. ಅವುಗಳಿಗೆ ಪರವಾದ ಅಕ್ಷರದಲ್ಲಿ ಇ ಅಥವಾ ಉ ಇದ್ದಾಗ ಇದು ವ್ಯಸ$_1$ ವ್ಯಸ$_2$—ಮಾದರಿಯಲ್ಲಿ ಬರುತ್ತದೆ. ಇದರಂತೆ 'ಇ' ಮತ್ತು 'ಉ'ಗಳು 'ಎ' ಮತ್ತು 'ಒ' ಗಳಾದವು, ಪರವಾದ ಅಕ್ಷರ 'ಅ' ದಿಂದ ಇದ್ದಾಗ. ಅಯ್ > ಎ ಕೂಡ ಕನ್ನಡದಲ್ಲಿ ಕಂಡುಬರುತ್ತದೆ.

ಕ. ಕೆರೆ–ತ. ಚಿರೈ. ಮ. ಚಿರೆಕ್ಕ
ಕ. ಕೆರಳ್–ತ. ಚಿರಜು
ಙ
ಕ. ಕೊಡವು–ತ. ಕುಡೈ.
ಕ. ಗೆಳೆ/ಕೆಳೆ–ತ. ಕಿಳೈ.

ತ. + ಮ. ದಲ್ಲಿ ಇರುವ 'ಇ' ಕಾರ ಮತ್ತು 'ಉ' ಕಾರಗಳು, ಕ. + ತೆ. ಭಾಷೆಗಳಲ್ಲಿ ಕ್ರಮವಾಗಿ ಎಕಾರ ಮತ್ತು ಒಕಾರಗಳಾಗಿ ಪರಿಣಮಿಸಿವೆಯೆಂಬ ಹೇಳಿಕೆಯುಂಟು: ಆದರೆ ಇದನ್ನು ಕೆಲವು ವಿದ್ವಾಂಸರು ಇತ್ತೀಚಿಗೆ ಒಪ್ಪುವುದಿಲ್ಲ.

ತೆಲುಗು ಭಾಷೆಯ ಸ್ವರಗಳ ಸಮೀಕ್ಷೆಯಲ್ಲಿ ಗಮನಿಸಬೇಕಾದ ವಿಚಾರ ವರ್ಣ ಪಲ್ಲಟ. (ವ್ಯ) ಸ$_1$. ವ್ಯಸ$_2$ . . . ಪಾಳಿಯಲ್ಲಿ ವ್ಯ$_2$ ಮತ್ತು ಸ$_1$ ಸ್ಥಳಾಂತರಗೊಳ್ಳು

ತ್ತವೆ; ಮತ್ತು ಸ$_1$ ಹಾಗೂ ಸ$_2$ ಸಂಕೋಚಗೊಂಡು ಒಂದೇ ವ್ಯಂಜನ ಪರವಾದಾಗ ದೀರ್ಘವೂ, ಸಂಯುಕ್ತ ವ್ಯಂಜನ ಪರವಾದಾಗ ಹ್ರಸ್ವವೂ ಆಗಿ ನಿಲ್ಲುತ್ತದೆ. ಅಲ್ಲದೆ ದ್ರಾವಿಡ ಭಾಷೆಗಳಲ್ಲಿ ಶಬ್ದಗಳ ನಡುವಿನ ಸ್ವರ ಸಾಮಾನ್ಯವಾಗಿ ತುಂಬ ದುರ್ಬಲವಾಗಿ ರುತ್ತದೆಂದೂ ಹೇಳುವುದುಂಟು.

ಅ + ಆ > ಆ
ಇ/ಎ + > ಏ
ಉ/ಒ + ಅ > ಓ

ಈ ವಿವರಣೆ ಸ್ವರದ ದೀರ್ಘತ್ವದ ಕಾರಣವನ್ನು ಒಪ್ಪವಾಗಿ ತಿಳಿಸುತ್ತದೆ. ಒಂದು ವೇಳೆ ವ$_1$ ಈ ಪಾಳಿಯಲ್ಲಿದ್ದರೆ, ಆಗ ವ$_2$ ರ್, (ಱ್/ರ್) ಆಗಿರುತ್ತದೆ.

ಒಂದು ವೇಳೆ ವ$_1$ ಇಲ್ಲದಿದ್ದರೆ, ವ$_2$ ಟ್, ಲ್ ಅಥವಾ ಳ್ ಕೂಡ ಆಗಬಹುದು. ಇದರ ಪರಿಣಾಮವಾದ ಪ್ರಾರಂಭದ ವ$_1$ ವ$_2$ ವ್ಯಂಜನಗುಚ್ಛದಲ್ಲಿ ಪ್ರಾಚೀನ ತೆಲುಗು ಶಾಸನಗಳು ರ್ ವನ್ನು, ರ್/ಱ್‌ಗಳಿಂದ ಬೇರೆಯಾಗಿರುವುದನ್ನು ಕೆಲವು ಶಬ್ದಗಳಲ್ಲಿ ಕಾಣಿಸಿವೆ. ಆದರೆ ೧೧ನೇ ಶತಮಾನದ ಅನಂತರ ಇವೆಲ್ಲಾ ಒಂದೇ ಆಗಿ ಸಮರೂಪ ಧಾರಣೆ ಮಾಡಿವೆ-/ರ್/. ಕುಈ ಭಾಷೆಯಲ್ಲೂ ಇಂಥದೇ ಬೆಳವಣಿಗೆಯನ್ನು ಕಾಣು ತ್ತೇವೆ. ಅಲ್ಲಿನ ಒಂದು ಹೆಚ್ಚಳವೆಂದರೆ ವ$_1$ ಸ$_1$ ವ$_2$ ಸ$_2$ . . . ಪಾಳಿಯಲ್ಲಿ ವ$_2$ ಲ್ ಅಥವಾ ಳ್ ಕೂಡ ಆಗಿರಬಹುದು, ಮತ್ತು ಅದು ಪಲ್ಲಟವಾದಾಗ ಲ್ ದಲ್ಲಿ ಸಮ ರೂಪಧಾರಣೆಗೊಳ್ಳುತ್ತವೆ. ಕುವಿ ಭಾಷೆಯಲ್ಲೂ ಇದೇ ಪಾಳಿಯಿದೆ.

ಸ್ವರವರ್ಣ ಪಲ್ಲಟ ವಿಚಾರದಲ್ಲಿ ತೆಲುಗುವಿನೊಡನೆ ಕೊಂಡ ಭಾಷೆ ಹೊಂದಿಕೊಳ್ಳು ತ್ತದೆ. ಇವನ್ನು ನಿಯಮರೂಪದಲ್ಲಿ ಹೀಗೆ ತೋರಿಸಬಹುದು : ಅ.

*ಅವನ್ ಱು > ತೆ. ವಾಡು, ಕೊಂಡ. ವಾನ್ಱು
*ಅವರ್ < ಕ. ಅವರು > ತೆ. ವಾರು, ಕೊಂಡ. ವಾರ್
*ಇವನ್ ಱು < ತೆ. ವೀಡು < ಕೊಂಡ ವೇನು
*ಇವರ್ > ಕ. ಇವರು < ತೆ. ವೀರು, ಕೊಂಡ. ವೇರ್
*ಇಲ್–/ಇಲ– > ತೆ ಲೇ/ಲೇದು
*ಇರವು/ಇರಾ– > ತೆ. ರೇಯಿ (=ರಾತ್ರಿ)

ಇಂತಹ ಇನ್ನೂ ಅನೇಕ ಶಬ್ದಗಳನ್ನು ಉದಾಹರಣೆಯಾಗಿ ತೆಲುಗು ಭಾಷೆಯಿಂದ ಕೊಡಬಹುದು. ಇದಕ್ಕೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳಿಗೆ ಮತ್ತು ಉದಾಹರಣೆ ಗಳಿಗೆ ತೆಲುಗು ಭಾಷೆ ಎಂಬ ಅಧ್ಯಾಯದಲ್ಲಿ ನೋಡಿ.

ಇದನ್ನು ನಿಯಮರೂಪದಲ್ಲಿ ಹೀಗೆ ತೋರಿಸಬಹುದು :

ಅ)




ಆ)




ಇ)




ಕ+ತ ಹಲವು ನಿಟ್ಟಿನಿಂದ ಹೊಂದಾಣಿಕೆ ತೋರುತ್ತವೆ. ಆದರೆ ಇ/ಎ ಹಾಗೂ ಉ/ಒ ಧ್ವನಿ ವ್ಯತ್ಯಾಸ ಅಥವಾ (ವರ್ಗಾಪಲ್ಲಟ) ದಲ್ಲಿ ಕ+ತೆ ನಿಕಟವಾಗಿ ನಿಲ್ಲುತ್ತವೆ. ಸ್ವರಗಳ ವಿವರಣೆಯಲ್ಲಿ ಹೆಚ್ಚಿನ ತೊಡಕಾಗಿ ನಿಲ್ಲುವುದು ತೊದಭಾಷೆ.

ಅನೇಕ ಸಿಕ್ಕುಗಳನ್ನು ತೊದ ಒಡ್ಡಿದಾಗ ಎಲ್ಲ ದ್ರಾವಿಡ ಭಾಷೆಗಳ ತುಲನೆಯಿಂದ ಅದನ್ನು ನೋಡಬೇಕಾಗುತ್ತದೆ. ತೊದ ಭಾಷೆಯಲ್ಲಿ ಹೀಗಾಗಲು ಕಾರಣ ಅದರ ಬಹುವಾದ ಸ್ವೀಕರಣಕಾರ್ಯ. ಬಡಗ, ಕನ್ನಡ ಮತ್ತು ತಮಿಳು ಭಾಷೆಗಳಿಂದ ತೊದ ಪ್ರಭಾವಿತವಾಗಿರುವ ವಿಚಾರ ಹಿಂದೆ ಹೇಳಿದ್ದಾಗಿದೆ. ಹೀಗಾಗಿ ಮೂಲದ್ರಾವಿಡ ಧ್ವನಿಮಾಗಳು ತೊದದಲ್ಲಿ ಪ್ರತ್ಯೇಕ ಸ್ವರೂಪ ಪಡೆದಿದೆ. *ಅ ಮತ್ತು *ಆ ಸ್ವರಗಳ ಬೆಳವಣಿಗೆ ವಿಚಾರದಲ್ಲಿ ಹೆಚ್ಚಿಗೆ ಏನೂ ಹೇಳಬರುವುದಿಲ್ಲ. ಇದ್ದುದರಲ್ಲಿ ವಿವರಣೆಗೆ

ನಿಲುಕುವ ಸ್ವರಗಳು *ಈ ಮತ್ತು *ಊ. ಮೂಲದ್ರಾವಿಡ *ಈ ತೊದದಲ್ಲಿ 'ಈ' ಆಗಿದೆ. ಮೂಲದ್ರಾ *ಊ ತೊದದಲ್ಲಿ ಊ ಆಗಿದೆ-ಹೆಚ್ಚಿನ ಶಬ್ದಗಳಲ್ಲಿ. ಕ. ಊಜ್, ತೊದ. ಊಜ್. (=ಒರತೆ).

ತೊದದಲ್ಲಿ ಮೂಲದ್ರಾವಿಡ *ಓ ಮೂರು ತೆರನಾಗಿ ಮಾರ್ಪುಗೊಂಡಿವೆ, ಪರಿಸರ ಬದ್ಧವಾಗಿ. ಪ್-ತರುವಾಯ ಬಂದಾಗ *ಓ>ಈ :

ತೊದ. ಪೀರ್, ಕ. ಪೋರ್ (ಹೋರಾಡು)
ತೊದ. ಪೀಗ-, ಕ. ಪೋಗು/ಹೋಗು.

ಉಳಿದ ಕಡೆ *ಓ>ವಾ. (ಶಬ್ದಾಂತ್ಯದಲ್ಲಿ-ಅಯ್ ಇದ್ದಾಗ) ಕ್ವಾರ್, ಕ. ಕೋಡೆ (=ಪಡುವಣ ಗಾಳಿ)

*ಓ>ವೀ (ಶಬ್ದಾಂತ್ಯದಲ್ಲಿ-ಅಯ್ ಇಲ್ಲದಿದ್ದಾಗ) ಕ್ವೀರ್, ಕ. ಕೋಡು.

ಮೂಲದ್ರಾವಿಡ *ಒ ವಿಚಾರದಲ್ಲಿಯೂ ಸ್ಪಷ್ಟ ವಿವರಣೆ ಕಷ್ಟ. *ಒ>ಈ (ಪೀನ್, ಕ. ಪೊನ್-(-ಹೊನ್ನು) ; *ಒ>ಒ (ಒಮುನ್=ಒಂದು ಕಡೆ) ; *ಒ> ವೀ ; ಒ>ವ. ಪುನರ್ ರಚಿತ ಉನ್ನತ ಸ್ವರ (ಇ, ಉ) ಪರವಾದಾಗ 'ವಿ' ಬರುತ್ತದೆ. ಇದಲ್ಲದೆ *ಒ>ಉ ಮತ್ತು *ಒ>ಊ ಆಗಿರುವುದೂ ಉಂಟು. ಇಂಥ ಸಂದರ್ಭ ದಲ್ಲಿನ ಧ್ವನಿವಿವೇಚನೆಗೆ ಅದು ಬರುವ ಶಬ್ದ ಸ್ವೀಕೃತ ಶಬ್ದವೇ, ಆ ಧ್ವನಿ ನಿಯಮ ಬದ್ಧವೇ ಎಂಬುವನ್ನು ನೋಡಬೇಕಾಗುತ್ತದೆ.

ಮೂಲದ್ರಾವಿಡ *ಉ ತೊದದಲ್ಲಿ ಉ ಆಗಿಯೇ ನಿಂತಿದ್ದರೂ>ವ/ವೀ ಆದ ನಿದರ್ಶನಗಳೂ ಇವೆ, (*ಅ ಅಥವಾ *ಅಯ್ ಪರವಾದಾಗ). ಓಷ್ಠ್ಯಧ್ವನಿಗಳಾದ ಪ್, ಮ್‌ಗಳಾದ ಮೇಲೆ ಬಂದಾಗ *ಉ>ವ ಆಗುವುದುಂಟು. ಕೆಲವು ಕಡೆ *ಉ> ಊ ಆಗಿದೆ ; *ಉ>ಈ. ಮೂಲದ್ರಾವಿಡ *ಏ ತೊದದಲ್ಲಿ ಏ ಮತ್ತು ಓ ಆಗಿ ಇರ್ತೆರನಾಗಿ ಬೆಳವಣಿಗೆ ಪಡೆದಿದೆ. ಇದರಂತೆ ಮೂಲದ್ರಾ *ಇ ತೊದದಲ್ಲಿ ಈ ಮತ್ತು ಇ – ಎರಡೂ ಬಗೆಯಲ್ಲಿ ಮಾರ್ಪಾಡಾಗಿದೆ.

ಪೀಕ್— : ಕ. ಬಿಕ್ಕು, ಬಿಕ್ಕಳಿಕೆ ; ತ. ವಿಕ್ಕು.
ತೀಟ್—: ತಿಟ್ಟು= ಹಳ್ಳ ತಿಟ್ಟು.
ಇಲ್— : ಕ. ಇಲ್ಲ
ತಿಕ್— : ಕ. ಸಿಕ್ಕು ; ತ. ಚಿಕ್ಕು.

ಮೂಲದ್ರಾವಿಡ *ಎ ತೊದದಲ್ಲಿ ಎ ಮತ್ತು ಓ ಎರಡೂ ರೀತಿಯಲ್ಲಿ ಮಾರ್ಪಾ ಡಾಗಿದೆಯಲ್ಲದೆ ಇ ಕೂಡ ಆಗಿರುವುದುಂಟು.

ಕೊಡಗು ಭಾಷೆಯಲ್ಲಿ ಮೂಲದ್ರಾವಿಡ *ಇ ಮತ್ತು *ಎ, *ಉ ಮತ್ತು *ಒ ಗಳು *ಅ ಪರವಾದಾಗ ಸನುರೂಪಧಾರಣೆಗೊಂಡು ಮೂಲ ದಕ್ಷಿಣ ದ್ರಾವಿಡದಲ್ಲಿರುವಂತೆ,

ಕ್ರಮವಾಗಿ *ಎ ಮತ್ತು *ಒ ಆದುವು. ಕನ್ನಡದಲ್ಲೂ ಅಷ್ಟೆ. ಕೊಡಗಿನಲ್ಲೂ ಕನ್ನಡದಂತೆ ಎ ಮತ್ತು ಒ ಗಳೇ ನಿಂತಿವೆಯಾದರೂ *ಎ ಮತ್ತು *ಒ ಗಳು, ಮುಂದಿನ ಅಕ್ಷರದಲ್ಲಿ ಉನ್ನತ ಸ್ವರವಿದ್ದಾಗ ಇ ಮತ್ತು ಉ ಆಗವು, ಕನ್ನಡದಲ್ಲಿ ಆಗುತ್ತವೆ. ಕೊಡಗಿನಲ್ಲಿ ಪ್ರತಿವೇಷ್ಟಿತಗಳು ಪರವಾದಾಗ *ಎ > ಎ ಆಗುತ್ತದೆ. *ಏ > ಕೊಡಗಿನಲ್ಲಿ ಏ, ಪ್ರತಿವೇಷ್ಟಿತಗಳು ಹಾಗೂ ರ್ (< ರ್/ಱ್) ಪರವಾದಾಗ.

ಅಪವಾದಗಳೂ ಇವೆ. ಕೊಡಗಿನಲ್ಲಿ ಮೂಲದ್ರಾವಿಡ *ಇ > ಇ–ಪರದಲ್ಲಿ ಪ್ರತಿವೇಷ್ಟಿತಗಳಿದ್ದಾಗ. ಮೂಲದ್ರಾವಿಡ *ಈ ಇದೇ ರೀತಿ. ಮೂಲದ್ರಾವಿಡ *ಏ > ಏ ಆಗಿದೆ. *ಉ ಹಲವು ಕಡೆಗಳಲ್ಲಿ ಇ ಆಗಿದ್ದರೂ, ಉ ಆಗೇ ಉಳಿದಿರುವ ಉದಾ: ಉಂಟು. ಕೆಲವು ಪರಿಸರದಲ್ಲಿ ಮೂಲದ್ರಾವಿಡ ಪೂರ್ವ ಸ್ವರಗಳು ಕೊಡಗಿನಲ್ಲಿ ಪಶ್ಚ ಸ್ವರಗಳಿಂದ ಸ್ಥಳಾಂತರಗೊಂಡಿರುವುದುಂಟು.

*ಇ > ಉ :—ಪ್ರತಿವೇಷ್ಟಿತಗಳು ಮತ್ತು ರ್ (*ಱ್) ಪರವಾದಾಗ

ಬುಡ್—
ಬುಟ್—  | ಕ. ಬಿಡು, ಬಿಟ್ಟ್–

ಪುಂಡ್— : ಕ. ಪಿಂಡ್, ಹಿಂಡು.

*ಈ > ಊ : —ಪ್ರತಿವೇಷ್ಟಿತಗಳು (ಬ್— < *ವ್—) ಪರವಾದಾಗ
ಬೂಡಿ—; ಕ. ಬೀಡು.

*ಎ > ಒ : —ಪ್ರತಿವೇಷ್ಟಿತಗಳು ಮತ್ತು ರ್ (ಱ್) ಪರವಾದಾಗ.
ಮೊಟ್ಟ—: ಕ. ಮೆಟ್ಟು.
ಪೊಣ್ಣ—: ಕ. ಪೆಣ್, ಪೆಣ್ಡತಿ.

*ಏ > ಓ :—ಪ್ರತಿವೇಷ್ಟಿತಗಳು ಮತ್ತು ರ್ (< ಱ್) ಪರವಾದಾಗ.
ಬೋಟಿ: ಕ. ಬೇಟೆ

ದ್ರಾವಿಡ ಭಾಷೆಗಳಲ್ಲಿ ಕಾಣುವ ಸ್ವರಾನುರೂಪತೆಯನ್ನು ಸ್ಥೂಲವಾಗಿ ಹೀಗೆ ತೋರಿಸಬಹುದು :

| | | | | |
|---|---|---|---|---|
| *ಅ | ತೊದ. ಕೆಲವು ಸಲ | ಒ. | ಕ. ಕಣ್ : ತೊದ. ಕೊಣ್. |
| | ಪರ್ಜಿ ” | ಎ. | ಕ. ವರ್ (ಬರು) : ಪರ್ಜಿ ವೆರ್ |
| *ಆ | ತೊದ ” | ಓ. | ಕ. ಕಾಲ್ : ತೊದ. ಕೋಲ್ |
| | ಪರ್ಜಿ ” | ಏ. | ಪರ್ಜಿ. ಕೇಲ್ |

*ಉ ತೊದ ಕೆಲವು ಸಲ ವಿ

| | | | |
|---|---|---|---|
| *ಎ | ತೊದ | ಕೆಲವು ಸಲ | ಓ |
| | ಪರ್ಜಿ | ” | ಐ |
| | ಗೋಂಡಿ | ” | ಐ |
| | ಬ್ರಾ | ” | ಐ |
| *ಏ | ತೊದ | ” | ಓ |
| | ಪರ್ಜಿ | ” | ಆ |
| *ಒ | ತೊದ. | ಕೆಲವು ಸಲ | ವ |
| | ಬ್ರಾ. | ಬಹುವಾಗಿ | ಓ |

ಇ, ಈ, ಊ–ಈ ಮೂರು ಸ್ವರಗಳು ಎಲ್ಲ ದ್ರಾವಿಡ ಭಾಷೆಗಳಲ್ಲೂ ಬಹುವಾಗಿ ವ್ಯತ್ಯಾಸವಾಗದೆ ಇರುತ್ತವೆ. (ಬಿಲ್, ನೀನ್, ನೂಲ್ ಎಂಬ ಉದಾಹರಣೆಗಳನ್ನು ಹಿಂದೆ ನೋಡಿದ್ದೇವೆ). ಅಲ್ಲಲ್ಲಿ (೧) ಇ/ಎ : ಉ/ಒ (ಕ. ತೆ) (೨) ಹ್ರಸ್ವ>ದೀರ್ಘ. (೩) ವರ್ಣಪಲ್ಲಟ. (೪) ಇ/ಉ ; ಎ>ಒ—(ತುಳುವಿನಲ್ಲಿ ಹಿಂದಿನ ವರ್ಣ ಓಷ್ಠ್ಯವಿದ್ದು ಮುಂದಿನ ವರ್ಣಪ್ರವೇಶಿವೆಷ್ಟಿತವಿದ್ದಾಗ). (೫) ಎ/ಇ : ಒ/ಉ- (ತ.ಮ)

| | | | |
|---|---|---|---|
| ೬) | ತ.ಮ. | *ಎ, *ಒ > ಇ, ಉ. | ಅ ಪರವಾದಾಗ. |
| ೭) | ಕ. ತೆ. / ತೊದ. ಕೋತ | *ಇ, *ಉ > ಎ. ಒ | |

ಆದರೆ ತುಳು ಇವುಗಳಿಂದ ಬೇರೆಯಾಗಿ ನಿಲ್ಲುತ್ತದೆ. ತುಳು ಮೂಲದ್ರಾವಿಡ ಸ್ವರಗಳನ್ನು ಉಳಿಸಿಕೊಂಡಿರುವುದೂ ಉಂಟು :

ಕ. ಎಳೆ (ದಾರ) ತು. ಇಳೆ ; ತ. ಇಳೈ.
ಕ. ಕೊಳೆ ; ತು. ಕುರಿ ;
ಕ. ತೊಱೆ (=ಹಳ್ಳ), ತು. ತುಡೆ ; ತ. ತೊಱೈ

ಶಬ್ದದಲ್ಲಿ ಹಿಂದಿನ ವ್ಯಂಜನ ಓಷ್ಠ್ಯವಿದ್ದಾಗ ಅಥವಾ ಮುಂದಿನ ವ್ಯಂಜನ ಪ್ರತಿವೇಷ್ಟಿತವಿದ್ದಾಗ ತುಳುವಿನಲ್ಲಿ ಇ, ಎ ಗಳು > ಎ, ಒ ಆದವು.

ಉದಾ :—ಕ. ಪುಡಿ ; ತು. ಪಿಡಿ > ಬೊಳೆ, ಬೀಳು—ಬಳು. ದ್ರಾವಿಡಭಾಷೆಗಳಲ್ಲಿ *(ವ) ಸವಸ-ಮಾದರಿಯ ಶಬ್ದಗಳನ್ನಷ್ಟೇ ಅಭ್ಯಸಿಸಲಾಗಿದೆ. (ವ) ಸವವಸ-ಮಾದರಿಯ ಶಬ್ದಗಳ ಅಭ್ಯಾಸ ಹೆಚ್ಚು ನಡೆದಿಲ್ಲ. (ವ) ಸ ವ ಸ (ದೀರ್ಘ) ವ ಸ-ಮಾದರಿಯ ರಚನೆ ದ್ರಾವಿಡದಲ್ಲಿಲ್ಲವೆಂದೇ ತೋರುತ್ತದೆ. ಅಂಥ ಶಬ್ದಗಳು ಎರವಲಿರಬೇಕು.

ಉದಾ :—ಸಹಾಯ (ಸಂ), ಗುಲಾಮ (ಅರಬ್ಬಿ) ಜವಾನ (ಪಾರಸಿ) ಇತ್ಯಾದಿ.

ದಕ್ಷಿಣ ದ್ರಾವಿಡ ಭಾಷೆಗಳಲ್ಲಿ,

ಇ. ಎ. ಉ. ಒ.




x=ಎ y=ಒ




| | | | |
|---|---|---|---|
| ಇ. | ಎ. | ಉ. | ಒ |
| ಕ. | ಕ. | ತ. | ತೆ. |
| ಮ. | ತೆ. | ಮ. | ಕ. |

ಸಂಧಿಕಾರ್ಯ ನಡೆದಾಗ ಕಂಡುಬರುವ ವ್ಯತ್ಯಾಸಗಳು :

ಇ + ಇ<br>+ ಉ | = ಈ. (ತೆ. ನೀವುಜು > ನೀಜು ; ಕ. ನೀಜು = ಪುಡಿ, ಬೂದಿ)

ಇ + ಅ = ಏ ಉ + ಅ = ಓ

ಉ + ಉ<br>+ ಇ | ಊ. ಕೆ. ಎ + ಇ = (ಕೆಳಗಿಡು, ಮೇಲಿಡು, ಹೊದಿಕೆ)

ಮೂಲದ್ರಾ-(ವ) ಸ್$_1$ ವ್$_2$ ಸ್$_2$

| | | |
|---|---|---|
| ಇ | ಕ್ | ಇ |
| ಉ | ಚ್ | ಉ |
| ಎ | ವ್ | ಅ |
| ಒ | | |
| ಅ | | |

ಮೂಲದ ದ್ರಾ—(ವ) ಸ್$_1$ ವ್$_2$ ಸ್$_2$

ಇ

| | |
|---|---|
| ಉ | ಇ |
| ಎ | ಉ |
| ಒ | |
| ಅ | |
| ಎ | 'ಅ' ಸ್ವರ ಪರವಾದಾಗ ಎ. ಒ, ಅ- ಎಂಬ |
| ಒ | ಈ ಮೂರು ಸ್ವರಗಳು ಮಾತ್ರ ಬರಬಲ್ಲುವು. |
| ಅ | |

ದಕ್ಷಿಣದ ನಾಲ್ಕು ಸಾಹಿತ್ಯಿಕ ಭಾಷೆಗಳನ್ನಷ್ಟೇ ದೃಷ್ಟಿಯಲ್ಲಿಟ್ಟುಕೊಂಡರೆ ಸ್ವರ ವ್ಯತ್ಯಾಸವನ್ನು ಸ್ಥೂಲವಾಗಿ ಈ ರೀತಿಯಲ್ಲಿ ನಿರೂಪಿಸಬಹುದು :

*ಇ *ಎ *ಉ *ಒ > ತ. ಮ—ಇ. ಉ.
ಕ. ತೆ—ಎ. ಒ.

ಕ್ರಿಯಾಪದ ಅಥವಾ ನಾಮ ಪ್ರಕೃತಿ ದೀರ್ಘ ಸ್ವರವನ್ನು, ಸಾಧಿತ ಪ್ರತ್ಯಯ ಪರವಾಗದಿದ್ದಾಗ ಪಡೆದಿದ್ದರೂ, ಸ್ವರಾದಿಯಾದ ಸಾಧಿತಪ್ರತ್ಯಯಪರವಾದಾಗ ದೀರ್ಘ ಸ್ವರ ಹ್ರಸ್ವವಾಗುತ್ತದೆ. ನಾ > ನಕ್ಕು :

ಕನ್ನಡದಲ್ಲಿ ಕೂಡ ಮೂಲದ್ರಾವಿಡ ಸ್ವರಗಳನ್ನು ಹಾಗೆಯೇ ಉಳಿಸಿಕೊಂಡಿರುವ ಉದಾಹರಣೆಗಳುಂಟು. ಎಡ, ನೆನೆ, ನೊಗ, ಬೆವರು, ಹೊಗಳು ಮುಂತಾದ ಶಬ್ದಗಳಲ್ಲಿ ಆದ್ಯಕ್ಷರ ಸ್ವರ ಮೂಲದ್ರಾವಿಡ ಸ್ವರೂಪದಲ್ಲಿದೆ. ಕನ್ನಡದಲ್ಲಿ ಕಾಣುವ ಸ್ವರ ವ್ಯತ್ಯಾಸಗಳಲ್ಲಿ ಕೆಲವನ್ನು ಸೋದಾಹರಣಪೂರ್ವಕ ನೋಡಬಹುದು.

೧. ಇ > ಉ :—ಇ >—ಉ—

ಮುಱುಕು < ಮುಱಿ + ಕು = ಒಂದು ಚೂರು.
ಬಿರುಕು < ಬಿರಿ + ಕು = ಬಾಯಿಬಿಟ್ಟಿರುವುದು ; ಸೀಳಿರುವುದು.
ತಿರುಗು < ತಿರಿ + ಗು = ಹೊರಳುವುದು.
ಹುದುಗು < ಪುದಿ + ಗು = ಬಚ್ಚಿಟ್ಟುಕೊ (ಪ್– > ಹ್–)
ತಿಳುಪು < ತಿಳಿ + ಪು = ಗೊತ್ತುಪಡಿಸು
ಉರುಹು < ಉರಿ + ಪು = ಬೆಂಕಿ ಹತ್ತಿಸು (ಉರಿಸು)
ಮುದುರು < ಮುದಿರ್ + ಉ = ಸಂಕೋಚವಾಗು.
ಉಸುರು < ಉಸಿರ್ + ಉ = ಉಸಿರಾಡು.

೨. ಉ > ಇ

ಹಸಿಗೆ < ಪಸು + ಗೆ = ಹಂಚಿಕೆ.
ಅಡಿಗೆ < ಅಡು + ಗೆ = ಅಡಿಗೆ ಮಾಡುವುದು.

ಉಡಿಗೆ< ಉಡು + ಗೆ= ಬಟ್ಟೆ ಹಾಕುವುದು (ಉಡುಪು).
ತೊಡಿಗೆ< ತೊಡು + ಗೆ= ತೊಟ್ಟುಕೊಳ್ಳುವುದು.
ಗರಿಕೆ< ಕಱುಂಕೆ= ಎಳೆಯ ಹುಲ್ಲು.

ಮುಂದೆ ಉದಾಹರಿಸಿರುವ ಶಬ್ದಗಳಲ್ಲಿನ ವ್ಯತ್ಯಾಸವನ್ನು ಗುರುತಿಸಿ :

| ಕ | ತ | ತುಳು |
|---|---|---|
| ಬೆಲೆ=ಮೌಲ್ಯ | ವಿಲೈ | ಬಿಲೆ/ಬೆಲೆ |
| ಬೆರಳ್=ಬೆರಳು | ವಿರಲ್ | ಬಿರೆಳು/ಬೆರಳು |
| ಎಲೆ=ಗಿಡದ ಎಲೆ | ಇಲೈ | ಇರೆ/ಎಲೆ |
| ಎಡೆ=ಸ್ಥಳ | ಇಡಮ್ | ಇಡೆ/ಎಡೆ |
| ಪೊಗೆ=ಹೊಗೆ | ಪುಗೈ | ಪುಗೆ/ಪೊಗೆ |
| ಮೊಳೆ=(ಕಬ್ಬಿಣದ) ಕಡ್ಡಿ | ಮುಳೈ | ಮುಳೆ/ಮೊಳೆ |
| ಕೆದಱು=ಚೆಲ್ಲಾಪಿಲ್ಲಿ/ಚೆದಱು | ಚಿದಱು (ಮ) | ತೆ. ಚೆದಱು<br>ತು. ಚದರುನಿ |
| ನೆಗೞ್=ಮಾಡು | ನಿಗೞ್ | ತೆ. ನೆಗಡು |
| ಪೊಗೞ್ = ಹೊಗಳು | ಪುಗೞ್<br>ಮ. ಪುಗೞ್ | ತೆ. ಪೊಗಡು, ತು.<br>ಪುಗುರು (ಳು) ಣಿ<br>ಪೊಗರು (ಳು) ನಿ |
| ಮೊದಲ್=ಮೊದಲು | ಮುದಲ್ | ತೆ. ಮೊದಲು |
| ಮೊನೆ=ತುದಿ | ಮುನೈ | ತೆ. ಮೊನ |

೩. ಇ > ಎ : ಉಚ್ಚಸ್ವರ>ಮಧ್ಯಸ್ವರ.

| ತ | ಕ |
|---|---|
| ಇಡ | ಎಡ—ಎಡಗಡೆ |
| ಇದೞ್ | ಎಸಳ್—ದಳ/ಪಕಳೆ |
| ಇಣೈ | ಎಣೆ—ಸಮಾನ |
| ಇಱಿತ್ತೈ | ಎಱಿ—ಚಿಮುಕಿಸು |
| ಇಲವಮ್ | ಎಲವ—ಬೂರುಗ |
| ಇಲೈ | ಎಲೆ |
| ಇಳಮ್ಮೈ | ಎಳವೆ—ಬಾಲ್ಯ |
| ಕಿಡ | ಕೆಡೆ=ಮಲಗು |
| ಕಿೞಿಮ್ಮೈ | ಕೆೞವೆ—ಮುಪ್ಪು |

| | |
|---|---|
| ಚಿಱಪ್ಪು | ಸೆಱಪು/ಚೆ——ವೈಭವ |
| ಚಿಲ | ಕೆಲ—ಕೆಲವು |
| ಚಿಱೈ | ಸೆಱೆ—ಬಂಧನ |
| ತಿರೈ | ತೆರೆ—ಅಲೆ |
| ನಿೞಲ್ | ನೆೞಲ್—ನೆರಳು |
| ನಿನೈ | ನೆನೆ—ನೆನಪಿಡು |
| ಪಿಗಲ್ | ಪೆಗಲ್—ಹಗಲು |
| ಪಿಣಮ್ | ಪೆಣ—ಹೆಣ |
| ಪಿಱ | ಪೆಱ—ಬೇರೆ |
| ವಿಱ | ಬೆಱೆ—ಹೆದರು |
| ವಿಳೈ | ಬೆಳೆ—ಬೆಳೆ, ಫಸಲು |

ಇ—, —ಇ—: ಎ

೪. ಉ > ಒ : ಉಚ್ಚಸ್ವರ > ಮಧ್ಯಮಸ್ವರ

| ತ | ಕ | |
|---|---|---|
| ಉಡಲ್—ಶರೀರ | ಒಡಲು | ಕ. ದಲ್ಲೇ ಉದಾ : |
| ಉಣರ್ = ನೋಡು, ಕಾಣು | ಒಣರ್ | ಕುಡು : ಕೊಡು |
| ಉರಂಗು—ಒರಗಿಕೊಳ್ಳು | ಒರಗು | |
| ಕುಡೈ—ಛತ್ರಿ | ಕೊಡೆ | |
| ಕುಲೈ—ಗೊಂಚಲು | ಗೊಲೆ | |
| ಕೞಲ್—ಕೊಳಲು | ಕೊೞಲ್ | |
| ಚುಱೈ—ಒಂದು ಬಳ್ಳಿ ಜಾತಿ | ಸೊರೆ/ಸೋರೆ | |
| ತುಗಲ್—ಚರ್ಮ | ತೊಗಲ್ | |
| ತುಡೈ—ಒರೆಸು | ತೊಡೆ | |
| ನುದಲ್—ಹಣೆ | ನೊಸಲ್ | |
| ಪುನಲ್—(ಪ್ರವಾಹ) ನದಿ | ಪೊನಲ್ | |
| ಪುರಳ್—ಹೊರಳು | ಪೊರಳ್ | |
| ಪುಲಮ್—ಹೊಲ | ಪೊಲಮ್ | |
| ಮುಳಗೈ—ಅಂಕುರ | ಮೊಳಕೆ | |
| ಮುದಲೈ—ಮೊಸಳೆ | ಮೊಸಳೆ | |
| ಮುಱಮ್—ಕೇರುವ ಸಾಧನ | ಮೊರ/ಮರ | |
| ಮುಱೈ—ನಂಟು | ಮೊಱೆ | |

| | |
|---|---|
| ಮುಗ—ನೀರು ತುಂಬು | ಮೊಗೆ |
| ಉ—, —ಉ—: ಒ | |

೫. ಆದರೆ ಇ, ಅಥವಾ ಉ ಸ್ವರ ಪರವಾದಾಗ ಇ ಮತ್ತು ಉ ಗಳು ಎ ಮತ್ತು ಒ ಆಗುವುದಿಲ್ಲ.

| ತ | ಕ |
|---|---|
| ಇಡು—ಮಡಗು | ಇಡು |
| ಇಟಿ—ಕೆಳಕ್ಕಿಳಿ | ಇೞಿ |
| ಕಿಳಿ—ಗಿಳಿ | ಗಿಳಿ |
| ಚಿಱುದು—ಚಿಕ್ಕದು | ಕಿಱುದು |
| ತಿಳಿ—ತಿರುಗು | ತಿರಿ ; ತಿರುಕ (ರು) |
| ನಿಮಿರ್—ನೆಟ್ಟಗಾಗು | ನಿಮಿರ್ |
| ಪಿಡಿ—ಹಿಡಿ | ಪಿಡಿ |
| ಮಿಗು—ಹೆಚ್ಚಾಗು | ಮಿಗು |
| ವಿಡು—ಬಿಟ್ಟುಬಿಡು | ಬಿಡು |
| ಇ—, —ಇ—: ಇ | |
| ಉಡು—ಉಡುಗೆ | ಉಡು |
| ಕುಳಿರ್—ಚಳಿ | ಕುಳಿರ್ |
| ಕುಡಿ—ಕುಡಿ | ಕುಡಿ |
| ಚುರಳ್—ಸುರಳಿ | ಸುರುಳ್ |
| ತುಡಿ—ಕಂಪನ | ತುಡಿ |
| ಪುರಿ—ಹುರಿ | ಪುರಿ ; ಪುರಿಗಣೆ |
| ಪುಲಿ—ಹುಲಿ | ಪುಲಿ |
| ಮುೞುಂಗು—ಮುಳುಗು | ಮುೞುಂಗು |
| ಉ—, —ಉ—: ಉ | |

೬. ಎ > ಇ

| ತ | ಕ | |
|---|---|---|
| ಎದಿರ್—ಎದುರಾಗಿ | ಇದಿರ್ > ಇದಿರು | ಕ. ದಲ್ಲಿನ ಉದಾ : |
| ಎಲುಮಿಚ್ಚೈ—ನಿಂಬೆ | ಇಲಿಮಿಂಚೆ | ಕೆಡಿ : ಕಿಡಿ |
| ಎಳಿದು—ಸರಳ | ಇಳಿದು | ಬೆಳಿ : ಬಿಳಿ |
| ಎಱುಂಬು—ಇರುವೆ | ಇಱುಂಪೆ | |

| | | |
|---|---|---|
| ಪೆರಿದು—ದೊಡ್ಡದು | ಪಿರಿದು | |
| ವೆದಿರ್—ಬಿದಿರು | ಬಿದಿರ್ | |

೭. ಒ > ಉ

| | | |
|---|---|---|
| ಒಳಿ—ಬಚ್ಚಿಡು | ಉಳಿ | ಕ. ದಲ್ಲಿನ ಉದಾ : |
| ಚೊರಿ—ಕೆಳಕ್ಕೆ ಸುರಿ | ಸುರಿ | ಕೊದಿ : ಕುದಿ |
| ಪೊಳಿಲ್—ಸೇವೆ | ತುಳಿಲ್ | ಸೊರಿ : ಸುರಿ |
| ಪೊದು—ಸಾಮಾನ್ಯ | ಪುದು | |
| ಪೊರಿ—ಹುರಿ (fry) | ಪುರಿ > ಹುರಿ | |
| ಪೊರುಳ್—ಅರ್ಥ | ಪುರುಳ್ > ಹುರುಳು | |

೮. ಆದರೆ ಏಕಾಕ್ಷರ ಶಬ್ದಗಳಲ್ಲಿ ಸ್ವರ ವ್ಯತ್ಯಾಸವಿಲ್ಲ.

| | |
|---|---|
| ಎಯ್ | ಎಯ್—ಹಂದಿ |
| ಎಳ್ | ಎಳ್—ಎಳ್ಳು |
| ಚೆಯ್ | ಕೆಯ್—ಮಾಡು |
| ನೆಲ್ | ನೆಲ್—ನೆಲ್ಲು |
| ಕೊಲ್ | ಕೊಲ್—ಕೊಲ್ಲು |
| ಚೊಲ್ | ಸೊಲ್—ಮಾತು |
| ಪೊನ್ | ಪೊನ್—ಹೊನ್ನು |

೯. ವ್ಯಂಜನಗುಚ್ಛ (ಸಂಯುಕ್ತಾಕ್ಷರ) ಬಂದಾಗಲೂ ವ್ಯತ್ಯಾಸವಿಲ್ಲ.

| | |
|---|---|
| ಎಯ್ದು | ಎಯ್ದು—ತಲಪು |
| ಎರುದು | ಎಟ್ದು—ಎತ್ತು |
| ಎರುಮೈ | ಎರ್ಮೆ—ಎಮ್ಮೆ |
| ಚೆರುಪ್ಪು | ಕೆರ್ಪು—ಚಪ್ಪಲಿ |
| ನೆಜ್ಜು | ನೆತ್ತಿ—ಹಣೆ |

| ತ | ಕ |
|---|---|
| ಒಪ್ಪು | ಒಪ್ಪು—ಒಪ್ಪಿಗೆ |
| ಒಟುಕ್ಕು | ಒಟ್ಕು—ತುಳುಕು |
| ತೊಟ್ಟು | ತೊಟ್ಟು—ಹುಂಜದ ನೆತ್ತಿ |
| ಕೊಳ್ಳಿ | ಕೊಳ್ಳಿ—ಉರಿವ ಸೌಧೆ |
| ತೊಟ್ಟಿಲ್ | ತೊಟ್ಟಿಲ್—ತೊಟ್ಟಿಲು |

೧೦. ಮೂಲದ್ರಾವಿಡ ಧ್ವನಿವ್ಯವಸ್ಥೆಗೆ ಕಲ್ಪಿಸಿಕೊಂಡಿರುವ *ಅಯ್ ಎಂಬ ವರ್ಣಗುಚ್ಛ ಕನ್ನಡದಲ್ಲಿ ಎರಡು ಇಲ್ಲವೇ ಹೆಚ್ಚಿನ ಅಕ್ಷರಗಳುಳ್ಳ ಶಬ್ದಾಂತ್ಯದಲ್ಲಿ ಬಂದಾಗ ಎಕಾರವಾಗಿದೆ.

ಕರೈ, ಕಲೈ, ಪಚ್ಚೈ, ವದನೈ > ಕ. ಕರೆ, ಕಲೆ, ಪಚ್ಚೆ, ಬದನೆ.

ಮೂಲದ್ರಾವಿಡ ಸ್ವರ ವ್ಯವಸ್ಥೆಯಲ್ಲಿ ಎರಡು ಸ್ವರಗಳ ನಡುವೆ ವಿಸಂಧಿಗೆ ಬಹುವಾಗಿ ಅವಕಾಶವಿಲ್ಲ. ಉಚ್ಚಾರಣಾ ಸೌಲಭ್ಯಕ್ಕಾಗಿ ಸಾಮಾನ್ಯವಾಗಿ ಎರಡು ಸ್ವರಗಳು ಸೇರಿದಾಗ ಯ್, ವ್ ಮತ್ತು ಅಪರೂಪವಾಗಿ ನ್, ಗ್ ವ್ಯಂಜನ ಧ್ವನಿಗಳು ಬರುತ್ತವೆ. ಅಥವಾ ಕೆಲವು ಸಲ ಈ ಸ್ವರಗಳು ಸಂಧಿಯಾದಾಗ ಒಂದು ಸ್ವರ ಲೋಪ ಆಗಬಹುದು. ಈ ವಿಧಾನವನ್ನೂ ಸಾಹಿತ್ಯಕ ದ್ರಾವಿಡ ಭಾಷೆಗಳಲ್ಲಿ ಕಾಣುತ್ತೇವೆ. ಶ್ರಾವಣ ದ್ರಾವಿಡ ಭಾಷೆಗಳಲ್ಲಿಯೂ, ಶಿಷ್ಟೇತರ ಭಾಷೆಯಲ್ಲೂ ಈ ನಿಯಮ ಹೆಚ್ಚಾಗಿ ಪಾಲಿತವಾಗದಿರಬಹುದು. ಅಲ್ಲಿ ವಿಸಂಧಿಗೆ ಅವಕಾಶವಿರಬಹುದು.

ಹ್ರಸ್ವ ಅ ಸಾಮಾನ್ಯವಾಗಿ ಪೂರ್ವೇತರ ಸ್ವರವಾಗಿ ಉಚ್ಚಾರವಾಗುತ್ತದೆ. ಕನ್ನಡದಲ್ಲಿ ಇದಕ್ಕೆ ಪೂರ್ವಸ್ವರ ಉಚ್ಚಾರವೂ ಉಂಟು. ಓಷ್ಠ್ಯ ವ್ಯಂಜನ ಧ್ವನಿಯೊಂದಿಗೆ ಬಂದಾಗ ಅದಕ್ಕೆ ಸಂಬಂಧಿಸಿದಂತೆ ಮೊದಲ ಅಕ್ಷರದಲ್ಲಿ ಬರುವ ಅ > ಎ ಆಗಿ ತೆಲುಗು ಭಾಷೆಯಲ್ಲಿ ವ್ಯತ್ಯಾಸ ಪಡೆಯುವುದನ್ನೂ ಇಲ್ಲಿ ಗಮನಿಸಬಹುದು. ಸಂ. ಬಲ > ಪಲಮ್ > ಪೆಲಮ್=ಶಕ್ತಿ ; ಯಾನ್ (ನಾನು) > ತ. ಎನ್=ನನ್ನ. ಆ— > ಏ— ಆಗುವ ಕೆಲವೇ ಉದಾಹರಣೆಗಳಲ್ಲಿ ಹಿಂದಿನ ಯ್—ಧ್ವನಿಯ ಪ್ರಭಾವ ಕಾರಣವಿರಬಹುದು. ಉದಾ : ಪ್ರಾಚೀನತ. ಯಾಱು (=ನದಿ) > ತ. ಆಱು > ತೆ. ಏಱು.

ಶಬ್ದದ ಆದಿಯ ಎ—ಮತ್ತು ಏ—ಬಹುವಾಗಿ ಎಲ್ಲ ದ್ರಾವಿಡ ಭಾಷೆಗಳಲ್ಲೂ ಕ್ರಮವಾಗಿ ಯೆ—ಮತ್ತು ಯೇ—ಆಗಿ ಉಚ್ಚಾರವಾಗುತ್ತವೆ. ಇದರಂತೆ ಒ—ಓ—ಗಳು ಶಬ್ದಾದಿಯಲ್ಲೇ ತುಸು ಉಭಯೋಷ್ಠ್ಯತ್ವದ ವ್—ಉಚ್ಚಾರ ಪಡೆಯುವುದುಂಟು. ಮೂಲದ ದ್ರಾವಿಡ ಭಾಷೆಗಳಲ್ಲಿ ಮೂಲ ಇ/ಎ ಮತ್ತು ಉ/ಒ ಗಳು—ಅ—ಮತ್ತು—ಅಯ್—ಪರವಾದಾಗ ತಟಸ್ಥವಾಗುವ ಸ್ವಭಾವ ತೋರಿಸುತ್ತವೆ. ನಡುಗನ್ನಡ ಮತ್ತು ತೆಲುಗು ಹಾಗೂ ಗ್ರಾಮ್ಯ ತಮಿಳಿನಲ್ಲಿ ಈ ವೈಶಿಷ್ಟ್ಯ ಪಡೆದಿರುವ ವ್ಯತ್ಯಾಸಗಳು ಇಂತಿವೆ :

ಇ > ಎ, ಉ > ಒ—; —ಅ—, —ಅಯ್—ಪರವಾದಾಗ :

ಇಲೈ > ಎಲೆ
ಮುದಲ್ > ಮೊದಲು

ಎ > ಇ, ಒ > ಉ— ; ಇ, ಉಗಳು ಪರವಾದಾಗ :

ಎಲಿ > ಇಲಿ
ಕೊಡು > ಕುಡು

Accent ಮತ್ತು Pitch ದ್ರಾವಿಡಭಾಷೆಗಳಲ್ಲಿ ಸ್ಪಷ್ಟವಾದ ಪ್ರತ್ಯೇಕ ಮೌಲ್ಯವನ್ನು ಅಷ್ಟಾಗಿ ಪಡೆದಿಲ್ಲವೆಂದು ತೋರುತ್ತದೆ. ಈ ದೃಷ್ಟಿಯಿಂದ ಅಭ್ಯಾಸ ಇನ್ನೂ ನಡೆದಿಲ್ಲ. ಇದರಂತೆ ಅನುನಾಸಿಕ ಸ್ವರಗಳು ದ್ರಾವಿಡಭಾಷೆಗಳಲ್ಲಿಲ್ಲವಾದರೂ ಶಿಷ್ಟೇತರ ಭಾಷೆಯಲ್ಲಿ ರುವಂತೆ ಕಾಣುತ್ತದೆ.

ಉದಾ :

ಗ್ರಾಮ್ಯ ತ. ಅವ—ಅವನು ; ಅವ=ಅವಳು ;
ಇರುಕ್ಕೆ= ನಾನಿದ್ದೇನೆ ; ಇರುಕ್ಕೆ—ನೀವಿದ್ದೀರಿ.

ಮೂಲದ್ರಾವಿಡ ಮೂಲಶಬ್ದಗಳನ್ನು ಪರಿಶೀಲಿಸಿದಾಗ ವಸ, ವಸವಸ, ವಸವ, ವಸ (ಹ್ರಸ್ವ) ವಸ—ಮಾದರಿಯನ್ನು ಕಾಣುತ್ತೇವೆ. ಇವುಗಳಲ್ಲಿ ಮೂಲದ್ರಾವಿಡಕ್ಕೆ (ವ) ಸ ಮಾದರಿ ಹೊರತಾಗಿರುವಂತೆ ತೋರುತ್ತದೆ. ಇದರಂತೆ (ವ) ಸ (ದೀರ್ಘ) ಮಾದರಿ ಶಬ್ದಗಳೂ ಕಡಮೆ. ಆದರೆ (ವ) ಸ ವ ಮತ್ತು (ವ) ಸ (ದೀರ್ಘ) ವ ಮಾದರಿ ಗಳೇ ಹೆಚ್ಚು.

ಕುರುಖ್, ಮಲ್ತೊ ಭಾಷೆಗಳಲ್ಲಿ ಅಘೋಷ ಕಂಠ್ಯಘರ್ಷ ಧ್ವನಿ ಇದೆ. ಅದನ್ನು ಕ್ರಮವಾಗಿ X ಮತ್ತು Q ಲಿಪಿ ಸಂಕೇತದಿಂದ ಭಾಷಾವಿಜ್ಞಾನಿಗಳು ನಿರ್ದೇಶಿಸಿ ದ್ದಾರೆ. ಕುರುಖ್, ಮಲ್ತೊ ಭಾಷೆಗಳಲ್ಲಿ ಈ ಕಂಠ್ಯಘರ್ಷಧ್ವನಿಯಾದ ಮೇಲೆ ಬರುವ *ಉ ಇಲ್ಲವೇ *ಊ ಸ್ವರಗಳು ಒ ಮತ್ತು ಓ ಸ್ವರಗಳಾಗುತ್ತವೆ.

ಉದಾ :

| | | | |
|---|---|---|---|
| ೧. | ಕುರುಖ್ | ಖೋಪ್ = ರಾಶಿ | ತ. ಕುಪ್ಪವ್ |
| | ಮಲ್ತೊ | ಖೊಪೆ | ಕ. ಕುಪ್ಪೆ |
| ೨. | ಕುರುಖ್ | ಖೊಸ್ = ಸವೆ | ಕ. ಕುಱಿಯ್ ; ತು. ಕುರಿ<br>ಬ್ರಾ. ಕುಳಿ |
| ೩. | ಕುರುಖ್ | ಖೊಸ್ಗ = ತೊಡೆ | ತ. ಕಱುಂಗು |
| | ಮಲ್ತೊ | ಖೋಸ್ಗೆ | |
| ೪. | ಕುರುಖ್ | ಖೋಡೆ= ಸೇರು | ಕ. ಕೂಡು |

ಬ್ರಾಹುಈ ಭಾಷೆಯ ಸ್ವರ ವ್ಯವಸ್ಥೆಯಲ್ಲಿ ಮೂಲದ್ರಾವಿಡ ಸ್ವರಗಳು ನಿಂತಿರುವ ರೀತಿ ಇಂತಿದೆ :

ಮೂಲದ್ರಾ* ಅ : ಅ ; ಉದಾ : ಖಣ್ ; ಕ. ಕಣ್
* ಆ : ಆ ; ಪಾಲ್ಹ್ ; ಕ. ಪಾಲ್
* ಇ : ಇ ; ಬಿಲ್ ; ಕ. ಬಿಲ್ಲು < ಬಿಲ್ < *ವಿಲ್
* ಈ : ಈ ; ದೀರ್ ; ಕ. ನೀರ್

* ಉ : ಊ ; ಖುಟ್ಟ್ ; ಕ. ಕುಟ್ಟು

* ಊ : ಊ ; ಚೂಪ್ ; ತ. ಚೂಪ್ಪು—ಚೀಪು

* ಎ : (೧) ಅ. ಹನೇನ್, *ಎನ್—ಇನಿದು ;
ತೆ. ಎನ್ಮ್ಮೆ—ಚೆಲುವು

(೨) ಇ ; ದಿತರ್ ; ಕ. ನೆತ್ತರ್

* ಏ : ಏ ; ತೇಲ್ವ್ ; ಕ. ತೇಳ್ > ಚೇಳು

* ಒ : (೧) ಓ : ಪೋಗ್ ; ತೆ. ಬೊಗ್ಗು—ಇಜ್ಜಿಲು
(೨) ಉ ; ಚುಟ್ ; ತ. ಚೊಟ್ಟು
(೩) ಅ ; ಅಸಿಟ್ ; ಕ. ಒರ್=ಒಂದು

* ಓ : ಓ ; ತೋಲ ; ಕ. ತೋಳ.

ಪರ್ಜಿ ಭಾಷೆಯ ಸ್ವರವ್ಯವಸ್ಥೆಯಲ್ಲಿ ಮೂಲದ್ರಾವಿಡ ಸ್ವರಗಳು ನಿಂತಿರುವ ಪರಿ ಇಂತಿದೆ :

*ಅ : ೧. ಎ ; ತೆಲ್, ಕ. ತಲೆ; ಪೆಲ್, ಕ. ಪಲ್—ಕೆಲ್ (ಕಲ್) ವೆರ್ (ವರ್) ನೆರುಬ್ (ನರ)—ಮೆರುದ್ (ಮರ್ದು > ಮದ್ದು) ಮೆರಿ (ಮರ) ವೆರ್ಜಿ (ಅಕ್ಕಿ) ನೆದ್ (ನಟು =ನರುಗಂಪು)
೨. ಅ ; ಅಮ್ಬ್, ಕ. ಅಂಬು ; ಪಯ್, ಕ. ಪಚ್ (ಪಚ್ಚನೆ = ಹಸಿರು) ; ಕನ್, ಕ. ಕಣ್ ಮನ್, ಕ. ಮಣ್ಣು

*ಆ : ೧. ಏ ; ಕೇಲ್, ಕ. ಕಾಲ್ ; ಪೇಲ್, ಕ. ಪಾಲ್ ಏದ್, ಕ. ಆಟು (=ತಣ್ಣಗಾಗು)
೨. ಆ ; ವಾನಿ, ತೆ. ವಾನ (= ಮಳೆ) ಬಾಮ್, ಕ. ಪಾಮ್ಬು ; ತಾಕ್, ಕುಈ, ತಾಕ (=ನಡೆ)

*ಎ : ಅ ; ಮರ್ಪ್—, ಕೋಲಾ. ಮೆರ್ಪ್ (= ಬೆಳಕಿಸು) ವಂದ, ಕೋಲಾ. ವೆಂದೆ (=ಬೆರಳು), ಕ. ವೆರಲ್

*ಏ : ಆ ; ವಾರ್, ಕ. ವೇರ್ (> ಬೇರು)

ಈ ಅಧ್ಯಾಯ ಬರೆಯುವಲ್ಲಿ ಬಹುವಾಗಿ ನೆರವಾದ ಅಮೂಲ್ಯ ಲೇಖನಗಳು :

1. M. B. Emeneau, *Dravidian Comparative Phonology A Sketch*, *Annamalai University Publication*, 1970 (ಇದರ ಬಹುಭಾಗವನ್ನು ಭಾಷಾಂತರಿಸಿ ಕೊಂಡಿದೆ.)

2. Bh. Krishnamurthy, *Alternations i/e and u/o in South Dravidian*, Lg. Lg. 34-4, 1958

3. ತೀನಂಶ್ರೀ ಅವರ ಲೇಖನ.

# ಘೋಷ ಹಾಗೂ ಅಘೋಷ ಧ್ವನಿ

ಮೂಲದ್ರಾವಿಡ ಭಾಷೆಯಲ್ಲಿನ ಶಬ್ದಗಳ ಆದಿಯಲ್ಲಿ—ಘೋಷವರ್ಣಗಳಿದ್ದುವೇ ಅಥವಾ ಅಘೋಷ ವರ್ಣಗಳಿದ್ದುವೇ ಎಂಬುದು ಬಹು ದೊಡ್ಡ ಸಮಸ್ಯೆ. ಮೊದಲು ಇದನ್ನೇ ಪರುಷವರ್ಣ ಹಾಗೂ ಸರಳವರ್ಣ ಎಂದು ಕರೆದು, ಮೂಲದ್ರಾವಿಡ ಭಾಷೆಯ ಪದಗಳ ಪ್ರಾರಂಭದಲ್ಲಿ ಪರುಷ(ಅಘೋಷ) ವರ್ಣವಿದ್ದುವೆ ? ಅಥವಾ ಸರಳ(ಘೋಷ) ವರ್ಣಗಳಿದ್ದುವೇ ?—ಎಂದು ಚರ್ಚೆ ನಡೆಸಿದ್ದುದು. ಈ ಎರಡು ಪ್ರಶ್ನೆಗಳಿಗೆ ಮತ್ತೊಂದು ಪ್ರಶ್ನೆಯನ್ನು ಸೇರಿಸಿ ತ್ರಿವಿಧ ಪ್ರಶ್ನೆಯನ್ನು ಕೇಳಬಹುದು. ಆ ಮೂರ ನೆಯ ಪ್ರಶ್ನೆಯೇ, ಮೂಲದ್ರಾವಿಡದಲ್ಲಿ—ಪದದ ಆದಿಯಲ್ಲಿ ಪರುಷ-ಸರಳಗಳೆರಡೂ ಇದ್ದುವೆ ?—ಎಂಬುದು.

ಕಾಲ್ಡ್‌ವೆಲ್ ಗ್ರಂಥಸ್ಥವಾದ ತಮಿಳು ಭಾಷೆಯನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಮತ್ತು ಮಲೆಯಾಳ ಭಾಷೆಯ ಸ್ಥಿತಿಯನ್ನು ಅವಲಂಬಿಸಿ ಒಂದು ನಿಯಮವನ್ನು ರೂಪಿಸಿ ಅದನ್ನು ಮೂಲದ್ರಾವಿಡಕ್ಕೂ ಅನ್ವಯಿಸಿದನು. ನೂರು ವರುಷದ ಹಿಂದೆ ಕಾಲ್ಡ್‌ವೆಲ್ ಹೀಗೆ—ವಿಶೇಷವಾಗಿ ತಮಿಳು ಭಾಷೆಯೊಂದನ್ನೇ ದೃಷ್ಟಿಯಲ್ಲಿ ಇಟ್ಟು ಕೊಂಡು—ವಿವೇಚಿಸಿದ್ದ ಈ ಚರ್ಚೆಗೆ ಕಳೆದ ಮೂರು ದಶಕಗಳಲ್ಲಿ ಜೂಲ್ಸ್ ಬ್ಲಾಕ್, ಟಿ. ಬರೊ, ಎಸ್. ಕೆ. ಚಟರ್ಜಿ—ಮುಂತಾದ ಬಲ್ಲಿದರು ಸಮಗ್ರ ದ್ರಾವಿಡ ಭಾಷೆ ಗಳ ಪರಿಶೀಲನೆಯಿಂದ ಬಹು ಬೆಲೆಯುಳ್ಳ ಅಂಶಗಳನ್ನು ಸೇರಿಸಿದ್ದಾರೆ.

ಐದು ವರ್ಗೀಯ ವ್ಯಂಜನಗಳಲ್ಲಿ ಪ್ರತಿವರ್ಗದ ಒಂದು ಮತ್ತು ಮೂರನೆಯ ವರ್ಣ ಗಳು ಅಲ್ಪಪ್ರಾಣ ವರ್ಣಗಳು, ಎರಡು ಮತ್ತು ನಾಲ್ಕನೆಯ ವರ್ಣಗಳು ಮಹಾಪ್ರಾಣ ವರ್ಣಗಳು, ಐದನೆಯ ವರ್ಣಗಳು ಅನುನಾಸಿಕ ವರ್ಣಗಳು.

ಇವುಗಳಲ್ಲಿ ಪ್ರತಿವರ್ಗದ ಮೊದಲನೆಯ ವರ್ಣ ಪರುಷ(ಅಘೋಷ) ವರ್ಣ, ಮತ್ತು ಪ್ರತಿ ವರ್ಗದ ಮೂರನೆಯ ವರ್ಣ ಸರಳ(ಘೋಷ) ವರ್ಣ. ಅಂದರೆ ಕನ್ನಡ ದಲ್ಲಿ ಘೋಷ ಧ್ವನಿಗಳಿಗೂ ಅಘೋಷ ಧ್ವನಿಗಳಿಗೂ ಪ್ರತ್ಯೇಕ ಲಿಪಿಚಿಹ್ನೆ ಕೂಡ ಉಂಟು. ಕರಿ–ಗರಿ, ಪರಿ–ಬರಿ, ತರಿ–ದರಿ ಎಂಬುವು ಅಲ್ಪಾಂತರ ಯುಗ್ಮಗಳಾಗಿ ಈ ವಿಷಯವನ್ನು ಸ್ಪಷ್ಟಪಡಿಸುತ್ತವೆ. ಆದರೆ ತಮಿಳು ಭಾಷೆಯ ವರ್ಣಮಾಲೆಯಲ್ಲಿ

ನವ್ಯವಸ್ಥೆ ಹೀಗಿಲ್ಲ. ತಮಿಳು ಭಾಷೆಯ ವರ್ಣಮಾಲೆಯಲ್ಲಿ ಇರುವುದು ಪ್ರತಿ ವರ್ಗದಲ್ಲೂ ಮೊದಲನೆಯ ಮತ್ತು ಕೊನೆಯ ವರ್ಣಗಳು ಮಾತ್ರ; ಅಂದರೆ ಪರುಷ ಮತ್ತು ಅನುನಾಸಿಕಗಳು ಮಾತ್ರ. ಆದುದರಿಂದ ಒಂದೇ ಲಿಪಿ ತಮಿಳಿನಲ್ಲಿ ಪರುಷ ಹಾಗೂ ಸರಳ ಧ್ವನಿಯಾಗಿ ಉಚ್ಚಾರ ಆಗಬೇಕಾಗುತ್ತದೆ. ಪರುಷಗಳಾದ ಕ, ಚ (ಶ), ಟ, ತ, ಪ, ಱ—ವರ್ಣಗಳನ್ನು ತಮಿಳಿನಲ್ಲಿ ವಲ್ಲಿನಮ್ ಎಂದೂ, ಙ, ಞ, ಣ, ನ, ಮ—ಎಂಬ ಅನುನಾಸಿಕಗಳನ್ನು ಮೆಲ್ಲಿನಮ್ ಎಂದೂ, ಅರ್ಧಸ್ವರಗಳಾದ ಯ, ರ, ಲ, ವ, ಳ—ಎಂಬ ವರ್ಣಗಳನ್ನು ಇಡೈಯಿನಮ್ ಎಂದೂ ನಿರ್ದೇಶಿಸಿದ್ದಾರೆ.

ಪರುಷ ವರ್ಣಗಳಲ್ಲಿ (ವಲ್ಲಿನಮ್ ಗುಂಪಿನಲ್ಲಿ) ಒಂದೇ ಧ್ವನಿಮಾ (ಱ-ಬಿಟ್ಟು) ಎರಡು ಧ್ವನಿಗಳ ಕಾರ್ಯವನ್ನು ನಿರ್ವಹಿಸಬೇಕು.

> In the northern dialects the difference between surds and sonants is generally expressed by the use of different characters for each sound, in limitation of the system of the Devanāgari; but in Tamil and in Malāyalām, in accordance with the peculiar Dravidian Law of the convertibility of surds and sonants, one set of consonants serves for both purposes, and the difference between them is expressed in the pronunciation alone.[1]

ಇನ್ನು ದ್ರಾವಿಡ ಭಾಷೆಗಳಲ್ಲಿ ಮೂಲದ್ರಾವಿಡದ ಲಕ್ಷಣಗಳನ್ನು ಹೆಚ್ಚಾಗಿ ಉಳಿಸಿಕೊಂಡಿರುವ ತಮಿಳು ಭಾಷೆಯ ಧ್ವನಿವ್ಯವಸ್ಥೆಯನ್ನು ನೋಡೋಣ.

ತಮಿಳಿನಲ್ಲಿ ಬರವಣಿಗೆಯ ದೃಷ್ಟಿಯಿಂದ ವರ್ಣ ಒಂದೇ ಆದರೂ, ಅದರ ಉಚ್ಚಾರ ಪರಿಸರಕ್ಕೆ ತಕ್ಕಂತೆ ಬೇರೆ ಬೇರೆ. ಅಂದರೆ ಬರಹದಲ್ಲಿ ವ್ಯತ್ಯಾಸವಿಲ್ಲ, ಉಚ್ಚಾರದಲ್ಲಿದೆ. ಇವುಗಳನ್ನು ಉಪಧ್ವನಿಗಳೆಂದೋ, ಒಂದೇ ಧ್ವನಿಮಾದ ವಿಭೇದಗಳೆಂದೋ ಕರೆಯಬಹುದು. ಪದದ ಆದಿಯಲ್ಲಿ ಪರುಷ ಮತ್ತು ಪದದ ಮಧ್ಯದಲ್ಲಿ ಹಾಗೂ ಅಂತ್ಯದಲ್ಲಿ ಸರಳ; ಪದದ ಮಧ್ಯದಲ್ಲಿ ಪರುಷವಾಗಬೇಕಾದರೆ ಆಗ ಅದು ದ್ವಿತ್ವವಾಗಿರಬೇಕು—ಇದು ಸಾಮಾನ್ಯ ನಿಯಮ. ಉದಾಹರಣೆಗೆ ತಕಾರ ಪದದ ಆದಿಯಲ್ಲಿ ತಕಾರವಾಗಿಯೇ ಉಚ್ಚಾರ ಪಡೆಯುವುದಾದರೂ, ಪದಮಧ್ಯದಲ್ಲಿ ದಕಾರವಾಗಿ ಉಚ್ಚಾರವಾಗುತ್ತದೆ, ಅನುನಾಸಿಕ ಧ್ವನಿಯಾದ ಮೇಲೆ ಬಂದುದರಿಂದ-ತನ್‌ತೈ—ಎಂದು ಬರೆದರೂ ಅದರ ಉಚ್ಚಾರ ತಂದೈ ಎಂದು. ಮಕನ್—ಎಂದು ಬರೆದರೂ ಅದರ ಉಚ್ಚಾರ ಮಗನ್—ಎಂದು. ಹೀಗೆಯೇ ಟ/ಡ, ಪ/ಬ. . . .ಇತ್ಯಾದಿ.

ಪದದ ಆದಿ ಮತ್ತು ಪದಮಧ್ಯಗಳಲ್ಲಿ ಕತಪ—ವರ್ಣಗಳ ಉಚ್ಚಾರ ಮೂಲ

---

[1] *A Comparative Grammar of Dravidian Languages*, p. 137–138.

ದ್ರಾವಿಡದಲ್ಲಿ ಹೇಗಿತ್ತು ಎಂದು ವಿಮರ್ಶಿಸತೊಡಗುವಾಗ ಈ ತಮಿಳಿನ ವರ್ಣಮಾಲೆಯ ರೀತಿಯನ್ನೂ ಪರುಷ ಸರಳವಾಗುವ ಕ್ರಮವನ್ನೂ ದೃಷ್ಟಿಯಲ್ಲಿ ಇಟ್ಟಿರಬೇಕು. ಏಕೆಂದರೆ ಈ ನಿಯಮ ತಮಿಳಿನಲ್ಲಿ ಕಟ್ಟುನಿಟ್ಟಾಗಿ ಪಾಲಿತವಾಗಿ, ಉಳಿದ ಭಾಷೆಗಳಲ್ಲಿ ಬೇರೆ ವ್ಯವಸ್ಥೆ ಇಂದು ಇದ್ದರೂ ಹಿಂದೆ ಇದು ಒಟ್ಟು ದ್ರಾವಿಡ ಪರಿವಾರಕ್ಕೇ ಅನ್ವಯಿಸುವ ಸೂತ್ರ ಇಲ್ಲವೆ, ಲಕ್ಷಣವೆಂಬ ಅಭಿಪ್ರಾಯವಿದೆ.

ಪರುಷವರ್ಣ ಸರಳವರ್ಣವಾಗುವ ಈ ವ್ಯವಸ್ಥೆಯನ್ನು ಕುರಿತು ಕಾಲ್ಡ್‌ವೆಲ್ ಬಹು ಚೆನ್ನಾಗಿ ಕಳೆದ ಶತಮಾನದಲ್ಲಿಯೇ ರೂಪಿಸಿದ ನಿಯಮ ಇಂದಿಗೂ ಗಮನಾರ್ಹ :

> There are distinct traces of the existence of this law in all the Dravidian dialects: but it is found most systematically and most fully developed in Tamil and Malayalam. The law, as apparent in the Tamil Malayālam system of sounds, is as follows: k, t, t, p, the first unaspirated consonants of the first, third, fourth and fifth vargas, are always pronounced as tenues and surds (ie. as k, ṭ, t, p) at the begining of words, and whenever they are doubled. The same consonants are always pronounced as medials and sonants (ie. as g, ḍ, d, b) when single in the middle of words. A sonant cannot commence a word, neither is a surd admissible in the middle, except when doubled; and so imperative in this law, and so strictly is it adhered to, that when words are borrowed from languages in which a different principle prevails, as Sanskrit or English, the consonants of those words change from sonants to surds, vice versa, according to their position.[1]

ತಮಿಳಿನಲ್ಲಿ ಬಹುಮಟ್ಟಿಗೆ ಸರಳವರ್ಣದಿಂದ ಪದಗಳು ಆರಂಭವಾಗುವುದಿಲ್ಲ. ಸಂಸ್ಕೃತದ ದಂತ ಎಂಬ ಪದ ಈ ನಿಯಮಾನುಸಾರವಾಗಿ, ತಮಿಳಿನಲ್ಲಿ ತಂದಮ್ ಎಂದು ಆಗುತ್ತದೆ. ಭಾಗ್ಯ(ಸಂ) > ಪಾಕ್ಕಿಯಮ್. . . .ಇತ್ಯಾದಿ.

ತಮಿಳು ಭಾಷೆಯಲ್ಲಿ ಕಾಣುವ ಈ ವ್ಯವಸ್ಥೆ ತೀರ ಇತ್ತೀಚಿನದಾಗಲಿ, ವ್ಯಾಕರಣಕಾರರು ರೂಪಿಸಿದ ಕೃತಕ ಅಥವಾ ಹೊಸ ನಿಯಮವಾಗಲಿ, ಪ್ರಾದೇಶಿಕ ಅಥವಾ ಉಪಭಾಷೆಗಳ ವೈವಿಧ್ಯವಾಗಲಿ ಆಗಿರದೆ, ಇದು ಬಹಳ ಹಿಂದಿನಿಂದಲೂ ನಿರಂತರವಾಗಿ

---

[1] ಅದೇ. ಪುಟ ೧೦೮, ಪದಮಧ್ಯೆ ಪುರುಷೋಚ್ಚಾರ ಬರುವುದು ಅವರ್ಣದ್ವಿತ್ವನಾಗಿದ್ದಾಗ ಮಾತ್ರ—ಎಂದು ಇಲ್ಲಿ ಕಾಲ್ಡ್‌ವೆಲ್ ಹೇಳಿದ್ದರೂ ಅವನ ಸೂತ್ರಕ್ಕೆ ಒಂದೆರಡು ಅಪವಾದಗಳಿವೆ. ಉದಾ: ಅತರ್, ಪಾಪ್—ಇತ್ಯಾದಿ. ಇಂದಿನ ತಮಿಳಿನಲ್ಲಿ —ಅದರ್ ಎಂದೇ ಉಚ್ಚಾರವಾದರೂ ಪೂರ್ವ ದ್ರಾವಿಡದ ಉಚ್ಚಾರ ಮುಖ್ಯ.

ಹರಿದುಬಂದಿರುವ ಸಹಜ ಕ್ರಿಯೆ. ಪರುಷವರ್ಣ ಸರಳವರ್ಣವಾಗುವ ಈ ಕ್ರಿಯೆ ಅಥವಾ ನಿಯಮ ಇಂಡೊ-ಯೂರೋಪಿಯನ್ ಭಾಷೆಗಳಲ್ಲಿ ಇಲ್ಲ; ಆದರೆ ಹೀಬ್ರು ಹಾಗು ಸಿಥಿಯನ್ ವರ್ಗದ ಭಾಷೆಗಳಲ್ಲಿ ಇದೆ.

ಉಚ್ಚಾರಣೆಯ ದೃಷ್ಟಿಯಿಂದಲೂ ಈ ಸರಳ ಮತ್ತು ಪರುಷವರ್ಣಗಳನ್ನು ವಿವೇಚಿಸಬೇಕಾಗುತ್ತದೆ. ಸಾಮಾನ್ಯವಾಗಿ ಅನುನಾಸಿಕ ವರ್ಣಗಳ ಮುಂದಿನ ಪರುಷ ವರ್ಣಗಳು ಸರಳವರ್ಣಗಳಾಗಿ ಉಚ್ಚಾರ ಹೊಂದುವುದು ಕಾಣುತ್ತದೆ[1]—ತಂದ್ಯೆ, ಪಾಂಬು. . . .ಇತ್ಯಾದಿ. ಪಾಪಂ ಎಂಬ ಪದದ ಕೊನೆಯಲ್ಲಿ ಇರುವ 'ಪಂ' ಎಂಬ ಉಚ್ಚಾರಾಂಶ 'ಪಂ' ಎಂದಾಗಲಿ, 'ಬಂ' ಎಂದಾಗಲಿ ಸರಿಯಾಗಿ ಉಚ್ಚಾರವಾಗದೆ ಇವೆರಡರ ನಡುವಿನ ಧ್ವನಿಯನ್ನು ಪಡೆದು ಉಚ್ಚರಿತವಾಗುತ್ತದೆ. ಅಂದರೆ ಘೋಷ ಉಪಾಧ್ಮಾನೀಯವಾಗಿ ಉಚ್ಚಾರವಾಗುತ್ತದೆ; ತಂದ್ಯೆ ಪದದ ಅಂತ್ಯದಲ್ಲಿರುವ 'ದ್ಯೆ' ಎಂಬುದು ತ್ಯೆ ಅಥವಾ ದ್ಯೆ ಆಗಿ ಉಚ್ಚಾರವಾಗದೆ ಅವುಗಳ ಮಧ್ಯದ ಉಚ್ಚಾರಣೆ ಪಡೆಯುತ್ತದೆ. 'ಮಗನ್' ಪದದ ನಡುವಣ 'ಗ' ಧ್ವನಿ 'ಕ-ಗ'ಗಳ ನಡುವಣ ಧ್ವನಿ ಯಾಗಿ, ಕಕಾರವನ್ನು ಸ್ವಲ್ಪ ತೇಲಿಸಿ, ಆದರೆ ಗಕಾರವಾಗಿ ಸ್ಪಷ್ಟವಾಗಿ ಉಚ್ಚರಿಸದೆ ಹೇಳುತ್ತಾರೆ. ಧ್ವನಿಲೇಖದ ಮೂಲಕ ಈ ಉಚ್ಚಾರಗಳನ್ನು ಹೀಗೆ ತೋರಿಸಬಹುದು:

/g/ ಗ>[ɣ]
/d/ ದ>[Ɣ]
/p/ ಪ>[β]

ತಮಿಳು ಭಾಷೆಯ ಈ ವ್ಯವಸ್ಥೆ ತಕ್ಕಮಟ್ಟಿಗೆ ಇತರ ದ್ರಾವಿಡ ಭಾಷೆಗಳಲ್ಲೂ ಇರುವುದು ಕಾಣುತ್ತದೆ. ಈ ನಿಯಮದ ಅವಶೇಷವನ್ನು ಕನ್ನಡದಲ್ಲಿ ಗುರುತಿಸ ಬಹುದು. ಕನ್ನಡದಲ್ಲಿ ಅದರಲ್ಲಿಯೂ ಆದೇಶ ಸಂಧಿಯ ಕಾಲದಲ್ಲಿ ಆಗುವ ಕ್ರಿಯೆ ಯನ್ನು ಗಮನಿಸಬಹುದು; ಅರ+ತಲೆ+ನೋವು>ಅರದಲೆ ನೋವು [ತ- >ದ—], ಆಕಾಶ+ಪುಟ್ಟ>ಆಕಾಶಬುಟ್ಟ [ಪ- > ಬ-], ಮಳೆ+ಕಾಲ>ಮಳೆ ಗಾಲ [ಕ- > ಗ-], ಹಳೆಯ+ಕನ್ನಡ>ಹಳಗನ್ನಡ—ಇದರಂತೆಯೇ ನಡು ಗನ್ನಡ, ಹೊಸಗನ್ನಡ ಎಂಬ ಪದಗಳು. ಅಂತೂ ಕನ್ನಡ ಭಾಷೆಯಲ್ಲಿ ಸಮಾಸವಾಗು ವಾಗ—ಆದೇಶ ಸಂಧಿಯಲ್ಲಿ ಕ, ತ, ಪ-ಗಳು ಗ ದ ಬ ಗಳಾಗುತ್ತವೆ—ಅರ್ಥಾತ್ ಪರುಷಗಳು ಸರಳಗಳಾಗುತ್ತವೆ. ಘೋಷ ಅಘೋಷಗಳ ವಿನಿಮಯವನ್ನು ಕುರಿತು ಕೇಶಿರಾಜ ಹೀಗೆ ಹೇಳಿದ್ದಾನೆ:

---

[1] ಮೂಲದ್ರಾವಿಡದಲ್ಲಿ ಯಾವುದರ ಉಚ್ಚಾರ ಹೇಗಿತ್ತೋ, ಇಂದು ಯಾರಿಗೂ ನಿರ್ದಿಷ್ಟವಾಗಿ ತಿಳಿಯದು. ಆದರೂ ಕೆಲವು ನಂಬಲರ್ಹವಾದ ಆಧಾರಗಳಿಂದ ಹೀಗಿದ್ದಿರಬಹುದೆಂದು ಊಹಿಸ ಬಹುದು. ಉಚ್ಚಾರಣಾ ದೃಷ್ಟಿ (phonetic) ಬೇರೆ, ಧ್ವನಿಮಾದೃಷ್ಟಿ (phonemic) ಬೇರೆ ಎಂಬುದನ್ನೂ ಗಮನಿಸಬೇಕು.

ಇರಿವರ್ಗ ಪ್ರಥಮಂಗಳ್
ಪರದೊಳ್ ಚಟವರ್ಗಮುಱಿಯೆ ತಮ್ಮ ತೃತೀಯಾ
ಕ್ಷರಮುಕ್ಕುಂ ಪದವಿಧಿಯೊಳ್
ಪರಿಹರಿಸಲ್ಬಾರದಲ್ಲಿ ಬಹುಳ ಸ್ಥಿತಿಯಿಂ ॥[1]

ಕಾವ್ಯಾವಲೋಕನ (-೧೧) ಮತ್ತು ಕರ್ನಾಟಕ ಭಾಷಾಭೂಷಣ (೨೮-೩೦) ಗಳಲ್ಲೂ ಈ ವಿವರ ಬಂದಿದೆ. ಇದರಂತೆ ಮೂಲದ-ಸಂಸ್ಕೃತ ಅಥವಾ ಇತರ ಭಾಷೆಗಳ ಪದದ ಕ- > ಗ- ಆಗುವುದೂ ಉಂಟು. ಉದಾ: ಕಾಚ(ಸಂ)>ಗಾಜು (ಉ. ಕ. ದಲ್ಲಿ ಕಾಜು) ಮತ್ತು ಪದಮಧ್ಯದಲ್ಲಿ ಅನುನಾಸಿಕದ ಮುಂದೆ ಕಕಾರ ಬಂದರೆ ಅದು ಗಕಾರವಾಗುತ್ತದೆ; ಇತ್ಯಾದಿ. ತೆಲುಗು ಭಾಷೆಯಲ್ಲೂ ಇದೇ ಕ್ರಮ ವಿದೆ—ಅನ್ನದಮ್ಮುಲು < ಅನ್ನ + ತಮ್ಮುಲು ; ಕೊಟ್ಟಬಡು < ಕೊಟ್ಟ + ಪಡು ; ತೆಲುಗು ಭಾಷೆಯಲ್ಲಿ ಒಮ್ಮೊಮ್ಮೆ ವಾಕ್ಯಸಂಧಿಯಲ್ಲೂ ಹೀಗಾಗುವುದುಂಟು ; ಏಮಿ ಚಪ್ಪಿತಿನಿಗು ( < ಕು) ರುನಾಥಾ—ನನ್ನಯ್ಯ ಭಾರತ.

ಆದರೆ ಪದಮಧ್ಯದಲ್ಲಿ ಪರುಷವರ್ಣ ಇತ್ತೆ ಇಲ್ಲವೆ ಎಂಬುದನ್ನು ಪರಿಶೀಲಿಸ ಬೇಕಾದರೆ ಪ್ರಾಚೀನ ಶಾಸನಗಳನ್ನೂ ಪರೀಕ್ಷಿಸಬೇಕು. ಉದಾಹರಣೆಗೆ ಕೆಲವು ಕನ್ನಡ ಅಥವಾ ತೆಲುಗಿನ ಶಾಸನಗಳನ್ನು ತೆಗೆದುಕೊಂಡರೆ ಪದಮಧ್ಯದಲ್ಲಿಯೂ ಸರಳ ವರ್ಣವಿರುವುದು ಕಾಣುತ್ತದೆಯಲ್ಲದೆ ಪರುಷವರ್ಣವಿರುವುದೂ ಅಷ್ಟೇ ಸ್ಪಷ್ಟವಾಗಿ ತೋರುತ್ತದೆ. ಆದರೆ ಇವುಗಳ ಮೂಲರೂಪ ಯಾವುದಿತ್ತು. ಎಂಬುದನ್ನೂ ನೋಡ ಬೇಕಾಗುತ್ತದೆ. ಆ ಸಂದರ್ಭದಲ್ಲಿ ದ್ರಾವಿಡ ಭಾಷೆಯ ಪ್ರಾಚೀನ ಶಬ್ದಗಳು ಬೇರೆ ಭಾಷೆಯಲ್ಲಿ ಕಾಣಿಸಿಕೊಂಡಿರುವ ಕೆಲವು ಉಲ್ಲೇಖಗಳನ್ನೂ ಅನುಲಕ್ಷಿಸಬಹುದು. ಏಕೆಂದರೆ ಹಲವು ನಂಬಲರ್ಹವಾದ ಆಧಾರಗಳ ಹೊರತು ಯಾವುದೇ ಒಂದು ನಿರ್ಣಯ ಅಥವಾ ನಿಯಮಗಳನ್ನೂ ಕೈಗೊಳ್ಳಲು ಸಾಧ್ಯವಿಲ್ಲ.

ಸಂಸ್ಕೃತದಲ್ಲಿ ಕುಮಾರಿಲಭಟ್ಟ ಬರೆದ ತಂತ್ರವಾರ್ತಿಕ ಈ ದೃಷ್ಟಿಯಿಂದ ತೀರ ಉಪಯುಕ್ತ ಉಲ್ಲೇಖವಾಗಿದೆ. ಅದರಲ್ಲಿನ ಅತರ್, ಪಾಪ್, ವೈರ್ ಪದಗಳು ಸಂಸ್ಕೃತೇತರ ಭಾಷೆಯ ಪದಗಳಾಗಿದ್ದು ಗಮನಾರ್ಹವಾಗಿವೆ. ಕುಮಾರಿಲಭಟ್ಟನ ಕಾಲ ಕ್ರಿ.ಶ. ೬ ಅಥವಾ ೭ನೆಯ ಶತಮಾನವಾದುದರಿಂದ, ಕಾಲದ ದೃಷ್ಟಿಯಿಂದಲೂ ಅದರಲ್ಲಿ ಬರುವ ಪ್ರಸ್ತಾಪ ಬೆಲೆಯುಳ್ಳದ್ದಾಗಿದೆ. ಅನ್ಯಭಾಷೆಯ ಶಬ್ದಗಳು ಸಂಸ್ಕೃತ ದಲ್ಲಿ ಕಾಣಿಸಿಕೊಂಡಾಗ ಅವುಗಳ ನಿಷ್ಪತ್ತಿಯನ್ನು ಹೇಗೆ ಹೇಳಬೇಕು ? ಸಂಸ್ಕೃತದ ಪ್ರಕಾರವೇ ? ಅಥವಾ ಆ ಅನ್ಯಭಾಷೆಯ ಪ್ರಕಾರವೇ ?—ಬಹುಶಃ ಅನ್ಯಭಾಷೆಗೆ ಅನುಸಾರವಾಗಿ ಆ ಪದಗಳಿಗೆ ಅರ್ಥೈಸುವುದು ಸರಿಯಾದ ನಿಷ್ಪತ್ತಿಯನ್ನು ನೀಡಿದಂತೆ. ಕುಮಾರಿಲಭಟ್ಟ ತನ್ನ ಗ್ರಂಥದ (ಸ್ವಚ್ಛಂದ ಕಲ್ಪನಾ) ಭಾಗದಲ್ಲಿ ಒಂದೆಡೆ, 'ತದ್ಯಥಾ ದ್ರಾವಿಡಾದಿ ಭಾಷಾಯಾಂ ವ್ಯಂಜನಾಂತ ಭಾಷಾಪ್ರದೇಶು ತದ್ಯಥಾ ಓದನಂ ಚೋರ

1 ಶಮದ, ಸೂತ್ರ ೨೫, ಪು. ೭೨.

ಪದ ವಾಕ್ಯಂ ಕಲ್ಪಯಂತಿ'—ಹೀಗೆ ವ್ಯಂಜನಾಂತ ಪದಗಳನ್ನು ಹೇಳುತ್ತಾ 'ಅತರ್ (=ದಾರಿ), ಪಾಪ್(=ಹಾವು), ಮಾಲ್(=ಸ್ತ್ರೀವಾಚಕ), ವೈರ್ (=ಹೊಟ್ಟೆ <ಬಸಿಱ್)'—ಎಂಬ ಶಬ್ದಗಳನ್ನು ಹೆಸರಿಸಿದ್ದಾನೆ. ಈ ಐದು ಶಬ್ದಗಳಲ್ಲಿ ಮೊದಲನೆಯ ಎರಡು ಶಬ್ದಗಳನ್ನು ಈಗ ಒಂದೊಂದಾಗಿ ವಿಮರ್ಶಿಸಬಹುದು.

ಅತರ್ : ಈ ಪದಕ್ಕೆ ದಾರಿ ಎಂದು ಅರ್ಥ. ತಮಿಳು ಭಾಷೆಯ ಹಳೆಯ ಕಾವ್ಯವಾದ ತಿರುಕ್ಕುಱಳ್ ಕಾವ್ಯದಲ್ಲಿಯೇ ಈ ಪದ ಬರುತ್ತದೆ :

ಆಕ್ಕಂ ಅತರ್ ವಿನಾಯ್‌ಚ್ಚೆಲ್ಲುಂ ಅಸೈವಿಲಾ
ಊಕ್ಕಂ ಉಡಯಾನ್ ಉೞೈ—(ಪದ್ಯಸಂಖ್ಯೆ ೫೯೪)

ಈ ಪದ ಮುಂದೆ ಅದರ್ ಎಂದು ಆಯಿತು : ಅದರ್ಕೊಳ್ಳೈಟಿಱ್ ಎಂದರೆ ರಾಜಬೀದಿಯ ದರೋಡೆ. ಪ್ರಯತ್ನ ಶೀಲನ ಮನೆಗೆ ಲಕ್ಷ್ಮೀ ತಾನಾಗಿಯೇ 'ದಾರಿ' ಕೇಳಿಕೊಂಡು ಬರುತ್ತಾಳೆ—ಎಂಬುದು ಈ ಪದ್ಯದ ಅರ್ಥ. ತಂತ್ರವಾರ್ತಿಕದಲ್ಲಿ 'ಸಂಘಾನಂ ಅತಿರಿತ್ಯುಕ್ತೇ ಅತರ ಇತಿ ಕಲ್ಪಯಂತಿ ಇತ್ಯಾಹುಃ ಸತ್ವಂ ದುಸ್ತರತ್ವೇನ'—ಎಂದು ಹೇಳಿದೆ. ತರ್ (=ದಾಟು) ವಿನಿಂದ ಅತರ್ (=ದಾರಿ) ಬಂದಿದೆಯಂತೆ. ಕನ್ನಡದ ದಾರಿ ಈ ಅತರಿ ಎಂಬ ಪದದಿಂದ ತೆಲುಗು ಭಾಷೆಯ ಮೂಲಕ ಬಂದಿದೆ. ಅಂತೂ ಈ ಪದ ಸಾಕಷ್ಟು ಹಳೆಯ ಪದವಾಗಿದ್ದು, ಪದಮಧ್ಯದಲ್ಲಿಯೇ ಪರುಷ (ಅಘೋಷ) ವರ್ಣವನ್ನೂ—ತಕಾರ—ಹೊಂದಿದೆ. [ಹೋ. ತರಿ, ತಾರಿ=ದೋಣಿಯಿಂದ ದಾಟುವ ಸ್ಥಳ]

ಪಾಪ್ : ಕುಮಾರಿಲಭಟ್ಟ 'ಪಕಾರಾಂತಂ' ಎನ್ನುತ್ತಾನೆ—ಪಾಂಪ್ ಎಂದು ಸರಿಯಾಗಿ ಬರೆದಿಲ್ಲ. ಪಾಪ(=sin)ಶಬ್ದದಿಂದ ಪಾಪ್(=ಹಾವು)ಬಂದಿದೆಯಂತೆ. ಬಹುಶಃ ಈ ತಂತ್ರವಾರ್ತಿಕಕಾರನು ಈ ಪದದ ಉಚ್ಚಾರಣೆಯನ್ನಷ್ಟೇ ಕೇಳಿ ಬರೆದಿರಬೇಕು. ಆದರಲ್ಲಿಯೂ ಪಾಂಪ್ ಎಂಬ ಪದ ಅವನ ಕಿವಿಗೆ ಕೇವಲ ಪಾಪ್ ಆಗಿ ಕೇಳಿಸಿರಲೂ ಬಹುದು. ತಮಿಳು ಪಾಂಬು, ತೆಲುಗು ಪಾಮು, ಕನ್ನಡ ಪಾವು (<ಹಾವು)—ಎಂಬ ಪದಗಳನ್ನಿಟ್ಟುಕೊಂಡು ಈ ಪದದ ಪ್ರಾಚೀನ ರೂಪವನ್ನು ರಚಿಸುವುದಾದರೆ, ಬಹುಶಃ ಪಾಂಪ್ ಎಂಬುದೇ ಸರಿಯಾದ ರೂಪವಿರಬೇಕು. ಆದರೆ ಕೊನೆಯ ವರ್ಣ ಮಾತ್ರ ಪಕಾರಾಂತವಾಗಿಯೇ ಉಚ್ಚಾರವಾಗಬೇಕು, ಬಕಾರಾಂತವಾಗಿ ಅಲ್ಲ. ಏಕೆಂದರೆ ಒಂದು ವೇಳೆ ಆ ಪದ ಪಕಾರಾಂತವಾಗಿರದೆ ಬಕಾರಾಂತವಾಗಿ (ಪಾಂಬ್) ಉಚ್ಚಾರವಾಗಿದ್ದರೆ, ಆಗ ಕುಮಾರಿಲಭಟ್ಟ ಪಾಂಬ್ ಎಂದೇ ಹೇಳುತ್ತಿದ್ದ ; ಕಾರಣ, ಅವನಿಗೆ ತನ್ನ ಭಾಷೆಯಾದ ಸಂಸ್ಕೃತದಲ್ಲಿ ಬ ಧ್ವನಿಯ ಪರಿಚಯವಿತ್ತು ; ಸಂಸ್ಕೃತದಲ್ಲಿ ಪ-ಬ ಧ್ವನಿಗಳೆರಡೂ ಇವೆ—ಅವುಗಳ ವ್ಯತ್ಯಾಸವೂ ಅವನಿಗೆ ತಿಳಿದಿತ್ತು.

ಹೀಗಾಗಿ ಪರಿಚಿತ ಧ್ವನಿಯನ್ನು ತೀರಾ ತಪ್ಪಾಗಿ ತಿಳಿಯುವಷ್ಟು ಈ ಸಂದರ್ಭ ತೋರುವುದಿಲ್ಲ. ಪ ಮತ್ತು ಬ ಗಳ ವ್ಯತ್ಯಾಸ ತಿಳಿದಿದ್ದೂ ಈ ಶಬ್ದವನ್ನು ಕುಮಾರಿಲನು ಪಕಾರಾಂತವಾಗಿಯೇ ಹೇಳಿರಬೇಕಾದರೆ ಅವನು ಉಚ್ಚಾರಣೆಯಲ್ಲಿ ಆದರಂತೆಯೇ

ಕೇಳಿರಬೇಕು. ಹಾಗಾದರೆ ದ್ರಾವಿಡ ಪದಗಳಲ್ಲಿ ಎಲ್ಲೆಲ್ಲೂ ಪರುಷವರ್ಣವಿತ್ತೆಂದು ಸ್ಥಾಪಿತವಾಗಿದ್ದಂತೆಯೇ ಸರಿ. ಅಲ್ಲದೆ ವ್ಯಂಜನಾಂತ ಪದಕ್ಕೆ, ಅದನ್ನು ಉಚ್ಚರಿಸುವ ಕಾಲದಲ್ಲಿ ಸ್ವರವೊಂದನ್ನು ಅದಕ್ಕೆ ಕೊನೆಯಲ್ಲಿ ಸೇರಿಸುವುದು ತಮಿಳಿನ ಪದ್ಧತಿ ಯಾದರೆ ದಕ್ಷಿಣದವರು ಸಂಸ್ಕೃತ—ಪದಗಳ ಉಚ್ಚಾರಣಾ ಕಾಲದಲ್ಲಿಯೂ ಈ ರೀತಿ ಮಾಡುವುದುಂಟು; ಆದರೆ ಉತ್ತರದವರ ಉಚ್ಚಾರಣೆ ಹೀಗಿರುವುದಿಲ್ಲ.

ಉದಾಹರಣೆ :

| ದಕ್ಷಿಣದ ಉಚ್ಚಾರಣೆ | ಉತ್ತರೋತ್ತರ ಉಚ್ಚಾರಣೆ |
|---|---|
| (ಸಂ) ತತ್ >ತತು | ತತ್ |
| (ಸಂ) ಆಗಚ್ಛತ್ >ಆಗಚ್ಛತು | ಆಗಚ್ಛತ್ |

ಹೀಗಾಗಿ ಕುಮಾರಿಲಭಟ್ಟ, ಪಾಂಪು, ಪಾಂಪ್, ಪಾಪ್—ಇವುಗಳಲ್ಲಿ ಯಾವುದ ರಂತೆ ಕೇಳಿದನೆಂಬುದರಲ್ಲಿ ಸಂದೇಹವಿದೆ. ಹೇಗೇ ಆದರೂ ಪದ ಮಧ್ಯದಲ್ಲಿ 'ಪ'ಕಾರ ಇತ್ತೆಂದೂ ಖಚಿತವಾಗಿ ತಿಳಿದುಬರುತ್ತದೆ. ಆದುದರಿಂದ ತಮಿಳಿನ ಭಾಷೆಯಲ್ಲಿ, ತಂತ್ರವಾರ್ತಿಕದ ಉದಾಹರಣೆಗಳ ಪರಿಶೀಲನೆಯಿಂದ ಹೇಳುವುದಾದರೆ, ಪದಮಧ್ಯದಲ್ಲೂ ಪರುಷವರ್ಣಗಳು ಪರುಷವರ್ಣಗಳಾಗಿಯೇ ಇದ್ದುವೆಂದು ಸ್ಪಷ್ಟವಾಗುತ್ತದೆ. ತಮಿಳಿನ ವ್ಯಾಕರಣ ಗ್ರಂಥಗಳಾದ ತೊಲ್‌ಗಾಪ್ಪಿಯಮ್, ವೀರಶೋಳಿಯ, ನನ್ನೂಲ್‌ಗಳಲ್ಲಿ ಸರಳವರ್ಣಗಳ ವಿಚಾರ ಪ್ರಸ್ತಾಪವಿಲ್ಲ.[1] ವೀರಶೋಳಿಯದಲ್ಲಂತೂ ಸಂಸ್ಕೃತ ಶಬ್ದಗಳಲ್ಲಿ ಬರುವ ಕಖಗಘ—ಗಳಿಗೆ 'ಕ' (ಪರುಷ) ಒಂದನ್ನೇ ಉಪಯೋಗಿಸಲಾಗಿದೆ.

ಇನ್ನು ಮಲೆಯಾಳ ಭಾಷೆಯ ವಿಚಾರ. ಮಲೆಯಾಳದಲ್ಲಿ ಒಂಬತ್ತನೆಯ ಶತ ಮಾನದ ಕೊನೆಯ ಭಾಗದಿಂದ ಶಾಸನಗಳು ಸಿಗುತ್ತವೆ. ಈ ಶಿಲಾ ಶಾಸನಗಳ ಲಿಪಿ ಯಲ್ಲಿ ಪರುಷ—ಸರಳಗಳೆರಡೂ ಸಿಗುತ್ತವೆಯಲ್ಲದೆ 'ಇರಣ್ಟು' (—ಎರಡು ವರುಷ) ಎಂಬ ಪದದ ಪ್ರಯೋಗವಿದೆ. ಇದು ಸ್ವಾರಸ್ಯವಾದ ಪದ. ಇರನ್ದು (>ಇರಂಡು) ಎಂಬ ಉಚ್ಚಾರ ಆ ಕಾಲದಲ್ಲಿ ಇದ್ದದ್ದೇ ಆದರೆ ಇರಣ್ಟು ಎಂಬ ರೂಪವನ್ನು ಏಕೆ ಬಳಸುತ್ತಿದ್ದರು ? ಅಲ್ಲದೆ ಆಣ್ಟು (=ವರುಷ) ತಿರುವಟಿ (=ತಿರುವಡಿ), ಆತಿಚ್ಚನ್ (ಆದಿತ್ಯನ್)—ಎಂಬ ಪದಗಳ ಪ್ರಯೋಗವಿರುವುದಲ್ಲದೆ ಸಂಸ್ಕೃತ ಸಮಾಸಗಳ ಮಧ್ಯದಲ್ಲಿ ಚಂದ್ರಾದಿತ್ಯ ಎಂಬ ಪದವೂ ಪ್ರಯೋಗವಾಗಿದೆ. ಮಲೆಯಾಳ ಭಾಷೆ ತಮಿಳು ಭಾಷೆಯ ಒಂದು ಶಾಖೆಯೆಂದು ಈ ಹಿಂದೆಯೇ ಹೇಳಿದೆ. ಬಹುಶಃ ಏಳ ನೆಯ ಶತಮಾನದ ಹೊತ್ತಿಗಾಗಲೆ ಮಲೆಯಾಳ ಭಾಷೆ ತಮಿಳಿನಿಂದ ಬೇರೆಯಾಗಿ ಸ್ವತಂತ್ರವಾದ ಅಸ್ತಿತ್ವವನ್ನು ಪಡೆದಿದೆಯಾದರೂ ಅದರ ಶಾಸನ ಸಾಹಿತ್ಯ ದೊರೆಯು

[1] ತೊಲ್ಕಾಪ್ಪಿಯಮ್ ಇಂದ ನನ್ನೂಲ್ ವರೆಗೆ ತಮಿಳಿನಲ್ಲಿ ಸರಳವಿರಲಿಲ್ಲವೆಂದು ಪಿ. ಎಸ್. ಸುಬ್ರಹ್ಮಣ್ಯ ಶಾಸ್ತ್ರಿಗಳು ಅಭಿಪ್ರಾಯಪಟ್ಟಿದ್ದಾರೆ. ವಾಸ್ತವವಾಗಿ ತೊಲ್ಕಾಪ್ಪಿಯದಲ್ಲಿ ಪರುಷ—ಸರಳ ಎಂಬ ಪ್ರಸ್ತಾಪವೇ ಬರುವುದಿಲ್ಲ. ಕೇವಲ ಎಟುತ್ತು (—ಅಕ್ಷರ, ವರ್ಣ) ಎಂಬ ಪದವಿದೆ, ಅಷ್ಟೆ.

ವುದು ಒಂಬತ್ತನೆಯ ಶತಮಾನದಿಂದ ಮತ್ತು ಈ ಹಳೆಯ ಶಾಸನಗಳಲ್ಲಿಯೇ ಪದ ಮಧ್ಯದಲ್ಲಿಯೂ ಪರುಷ ವರ್ಣವೇ ಸಿಗುತ್ತದೆ.

ಡಾ|| ಸುನೀತ ಕುಮಾರ ಚಟರ್ಜಿಯವರು ಇದಕ್ಕೆ ಪೂರಕವಾಗಿರುವ ಒಂದು ಹೊಸ ವಿಚಾರ, ಹೊಸ ಆಧಾರವನ್ನು ಹೇಳಿದ್ದಾರೆ. ೧೨೯೩ರಲ್ಲಿ ಭಾರತದ ಪ್ರವಾಸ ಮಾಡಿದ ಮಾರ್ಕೊಪೋಲೊ ಹೇಳಿದ ಒಂದು ಪ್ರಸಂಗ ಈ ವಾದಕ್ಕೆ ಉಸಿರು ತುಂಬು ವಂತಿದೆ. ಮಾರ್ಕೊಪೋಲೋ 'ಮಲಬಾರಿನ ಜನ ತಮ್ಮ ಪ್ರಾರ್ಥನಾ ಸಮಯದಲ್ಲಿ ಪಕೌತ, ಪಕೌತ ಎಂದು ನೂರು ಸಲ ಹೇಳುವರು'—ಎಂಬುದಾಗಿ ತಿಳಿಸಿದ್ದಾನೆ. ಅವನು ಗಮನಿಸಿದ ಈ ಪಕಾತ<ಪಕವತ (ತ) ಪದ. ಸಂಸ್ಕೃತ ಭಾಷೆಯ ಭಗವಂತ ಎಂಬ ಪದದ ತದ್ಭವರೂಪ. ಆದ್ದರಿಂದ ೧೩ನೆಯ ಶತಮಾನದ ಕೊನೆಯವರೆಗೂ ದ್ರಾವಿಡ ಭಾಷೆಗಳ ನಡುವೆ—ಪದಮಧ್ಯದಲ್ಲಿ ಪರುಷವರ್ಣವಿರುವುದು ಕಾಣುತ್ತದೆ.

ಈ ವಿಷಯಕ್ಕೆ ಪೋಷಕವಾಗಿರುವ ಇನ್ನೊಂದು ಆಧಾರವನ್ನೂ ಇಲ್ಲಿಯೆ ಸಮೀಕ್ಷಿಸ ಬಹುದು. ಕ್ರಿ. ಶ.ದ ಆರಂಭಕಾಲಕ್ಕೆ ಸೇರಿದ ಬ್ರಾಹ್ಮೀ ಲಿಪಿಯ ಶಾಸನಗಳಲ್ಲಿ ಕೆಲವು ಪದಗಳು ಈ ವಿಚಾರಕ್ಕೆ ಸಂಬಂಧಪಟ್ಟಂತೆ ಒಂದೆರಡು ಅಮೂಲ್ಯ ಅಂಶ ಗಳನ್ನೂ ಸೂಚಿಸುತ್ತವೆ. ಬ್ರಾಹ್ಮೀ ಲಿಪಿಯಲ್ಲಿ ಪರುಷ ಮತ್ತು ಸರಳ ವರ್ಣಗಳೆರಡೂ ಇವೆಯೆಂಬುದನ್ನೂ ನೆನಪಿನಲ್ಲಿಟ್ಟುಕೊಂಡು ಈ ದ್ರಾವಿಡ, ಅದರಲ್ಲಿಯೂ ಕನ್ನಡದ ಶಬ್ದಗಳನ್ನು ಅವಲೋಕಿಸಬಹುದು. ಆ ಶಾಸನಗಳಲ್ಲಿ 'ಮಕರ್', ಅಕಲ್, ಮುತಿ ಕುಲರನ್, ಆದಿ ತೈಪಮ್'—ಎಂಬ ಕೆಲವು ಪದಗಳು ಪ್ರಯೋಗವಾಗಿವೆ. ಆದುದ ರಿಂದ ಕನ್ನಡದಲ್ಲಿಯೂ ಇತರ ದ್ರಾವಿಡ ಭಾಷೆಗಳಲ್ಲಿ ಇರುವಂತೆ ಪದಮಧ್ಯದಲ್ಲಿ ಪರುಷ ವರ್ಣ ಇದ್ದಿರಬೇಕು.

ಆದರೆ ಈ ಸಿದ್ಧಾಂತವನ್ನು ವಿರೋಧಿಸುವ ವಿದ್ವಾಂಸರೂ ಇದ್ದಾರೆ. ಉದಾ ಹರಣೆಗೆ ಆಲ್‌ಫ್ರೆಡ್‌ಮಾಸ್ಟರ್ ಪ್ರೊ|| ಜೂಲ್ಸ್‌ಬ್ಲಾಕ್, ಮುಂತಾದ ಮಹನೀಯರು ಕೆಲವು ವಿಚಾರಗಳ ಜೊತೆಗೆ ಒಂದೆರಡು ಪ್ರಬಲವಾದ ಆಧಾರಗಳನ್ನೂ ತಮ್ಮ ಅಭಿ ಪ್ರಾಯಕ್ಕೆ ಬುನಾದಿಯಾಗಿ ಇಟ್ಟುಕೊಂಡು ಹಲವು ಸಮಸ್ಯೆಗಳನ್ನು ಸಂಶೋಧಕರ ಗಮನಕ್ಕೆ ತಂದಿದ್ದಾರೆ.[1] ಅವರ ವಾದದ ಸಾರಾಂಶವನ್ನಷ್ಟೆ ಇಲ್ಲಿ ಕೊಟ್ಟಿದೆ. ಆಲ್‌ಫ್ರೆಡ್ ಮಾಸ್ಟರನ ಪ್ರಶ್ನೆಗಳನ್ನು ಪರಿಶೀಲಿಸೋಣ. ಸಂಸ್ಕೃತ ಭಾಷೆಯ 'ರೂಪ' ಎಂಬ

---

[1] ಮೂಲ ದ್ರಾವಿಡದಲ್ಲಿ ಶಬ್ದದ ಪ್ರಾರಂಭದಲ್ಲಿ ಘೋಷಸ್ಪರ್ಶ ಧ್ವನಿಗಳು ಇದ್ದುವೆಂದು ಸಾಧಿಸಿದವರ ಮತ್ತು ಲೇಖನಗಳ ವಿವರ.

Jules Bloch, *IA*. 48, p. 194-195.
Goda Varma, *BSOS*, viii, p. 562.
F. B. J. Kuiper, *BSOAS*, ix, p. 987.
Alfred Master, *BSOAS*, ix, p. 1008.
S. K. Chatterji, *IL*, vol. 14, p. 9-15.

ಪದ ತಮಿಳಿನಲ್ಲಿ ರೂಪ (ಸಂ) > ಉರುಪು (ತ) > ಇರುವು ಇಂಪು ಆಗಿದೆ. ಅನ್ಯ ಭಾಷೆಯ ಅಥವಾ ಸಂಸ್ಕೃತದ ಪದವೊಂದನ್ನೂ ತೆಗೆದುಕೊಳ್ಳುವಾಗ ಆ ಪದದ ಮೂಲ ಆಕಾರದಲ್ಲಿ ಇದ್ದ ಪರುಷವನ್ನು ತೆಗೆದುಹಾಕಿ ಅದರ ಜಾಗದಲ್ಲಿ ಸರಳವನ್ನು ಸೇರಿಸಿದೆ. ಇದು ಏಕೆ ಹೀಗೇ ಆಗಬೇಕು ? ಇದರಂತೆ ಪಕಾರ ವಕಾರ ಏಕಾಯಿತು ? ಅಂದರೆ ರೂಪಂ > ಉರುಪು > ಉರುವು ಮತ್ತು ಪಾಪಂ > ಪಾಬಂ > ಪಾವಂ ಏಕಾಯಿತು ? ಬಹುಶಃ ಈ ಸಂಸ್ಕೃತದ ಶಬ್ದಗಳು ಪ್ರಾಕೃತಕ್ಕೆ ಬಂದು ಅಲ್ಲಿ ತದ್ಭವವಾಗಿ ಅನಂತರ ಪ್ರಾಕೃತದಿಂದ ತಮಿಳಿಗೆ ಅಥವಾ ಇತರ ದ್ರಾವಿಡ ಭಾಷೆಗಳಿಗೆ ಹೋದುವೆಂದು ಕಾಣುತ್ತದೆ. ಅಲ್ಲದೆ ಟಾಲೆಮಿ ಮಧುರಾವನ್ನೂ ಮೆದುರಾ ಎಂದು ಕರೆದಿದ್ದಾನೆ. ಪಾಂಡ್ಯ ಎಂಬ ಪದದಲ್ಲಿ ಮೊದಲಿನಿಂದಲೂ 'ಡ' ಇದ್ದೇ ಇದೆ. ದಮರಿಕೆ— ಎಂಬ ಪದದ ಆದಿಯಲ್ಲಿ 'ದ'ಕಾರವಿದೆ. ಇದಕ್ಕೆಲ್ಲಾ ಏನು ಅರ್ಥ ? ಎಂದು ಪ್ರಶ್ನಿಸಿದ್ದಾರೆ.

ಶಬ್ದಾದಿಯಲ್ಲಿ ಮೂಲದ್ರಾವಿಡದ ಧ್ವನಿ ವ್ಯವಸ್ಥೆಯಲ್ಲಿ ಘೋಷ ಸ್ಪರ್ಶ ಧ್ವನಿಗಳು ಇರಲಿಲ್ಲವೆಂಬುದು ಒಂದು ಬಹುಜನ ಸಮ್ಮತ ಅಭಿಪ್ರಾಯ. ಆದರೆ ಜೂಲ್ಸ್‌ಬ್ಲಾಕ್ ಮತ್ತು ಎಸ್. ಕೆ. ಚಟರ್ಜಿಯವರು ಶಬ್ದಾದಿಯಲ್ಲಿ ಘೋಷ ಧ್ವನಿ ಇತ್ತೆಂದು ಅಭಿಪ್ರಾಯಿಸಿದ್ದಾರೆ. ಇವರು ತಮ್ಮ ಅಭಿಪ್ರಾಯಕ್ಕೆ ಪೋಷಕವಾಗಿ ಆರಿಸಿಕೊಂಡ ಆಧಾರಗಳಲ್ಲಿ ಸಂಸ್ಕೃತ ಪ್ರಾಚೀನ ಕೃತಿಗಳಲ್ಲಿ ದೊರೆಯುವ ದ್ರಾವಿಡದಿಂದ ಹೋದ ಸ್ವೀಕರಣ ಶಬ್ದಗಳು ಮುಖ್ಯ. ಅಂಥ ಉದಾ : ಗರುಡ ತ. ಕಟು ಗಾರ್ದಭ ತೆ. ಗಾಡಿದೆ. ಕ. ಕಟ್ತೆ ತ. ಕಟುತ್ತೈ. ಈ ಪ್ರಶ್ನೆಗಳಿಗೆ ಉತ್ತರ ಹೇಳಬಹುದೆಂದು ತೋರುತ್ತದೆ. ಏಕೆಂದರೆ ಟಾಲೆಮಿ ಹೇಳಿದ ಪದ ಉತ್ತರದ ಮಾತಿನ ಪ್ರತಿನಿಧಿ. ಅಲ್ಲಿ ಮಧುರೆ ( > ಮಥುರಾ) ಎಂದು ಇದೆ. ಅವನು ಇಲ್ಲಿಯ ಅಂದರೆ ದಕ್ಷಿಣದ ಮಧುರೆಯನ್ನೂ ಉತ್ತರದಲ್ಲಿನ, ಈ ಮೊದಲೇ ಅವನು ಕೇಳಿದ್ದ, ಮಧುರೆ ಎಂದೇ ಭಾವಿಸಿಕೊಂಡಿರಬೇಕು. ದಮರಿಕೆ ಎಂಬ ಪದ ತಮಿಳು (ದ್ರಾವಿಡ ?) ಎಂಬ ಅರ್ಥದಲ್ಲಿ ಕ್ರಿ. ಪೂ. ದಲ್ಲಿಯೇ ಎರಡು ಸಾವಿರ ವರುಷದ ಕೆಳಗೇ ಗ್ರೀಕ್ ಭಾಷೆಯಲ್ಲಿ ಸಿಗುವ ಶಬ್ದ. ಆದುದರಿಂದ ಆ ಪದಕ್ಕೆ ಮೂಲವಾದ ಪದದ ಆದಿಯಲ್ಲಿ ಪರುಷವರ್ಣವೇ ಇದೆ. ಇನ್ನು ದ್ರಾಮಿಡ, ದ್ರವಿಡ, ಚೋಳ, ಪಾಂಡ್ಯ, ಕೇರಳ, ಆಂಧ್ರ ಇತ್ಯಾದಿ ಪದಗಳು— ಕನ್ನಡ ಮತ್ತು ಕರ್ಣಾಟಕ ಎಂಬ ಪದಗಳನ್ನು ಬಿಟ್ಟು—ಸಂಸ್ಕೃತವೋ ಅಥವಾ ಉತ್ತರ ಭಾರತದಲ್ಲಿ ಪ್ರಚಲಿತವಾಗಿದ್ದ ಸಂಸ್ಕೃತ ಪೂರ್ವ ಇಲ್ಲವೇ ಸಮಕಾಲೀನಭಾಷೆಗಳಿಗೆ ಸೇರಿರುವ ಪದಗಳೆಂದು ತೋರುತ್ತದೆ. ಏಕೆಂದರೆ ಈ ಪದಗಳಿಗೆ ದ್ರಾವಿಡದಲ್ಲೇ ಆಗಲೀ ಅಥವಾ ಸಂಸ್ಕೃತದಲ್ಲೇ ಆಗಲಿ ನಂಬಲರ್ಹವಾದ ವ್ಯುತ್ಪತ್ತಿ ಸಾಧ್ಯವಾಗಿಲ್ಲ.

ಆದರೆ ಹೀಗೆ ಹೇಳುವಾಗ ಇನ್ನೊಂದು ಪ್ರಬಲವಾದ ಅನುಮಾನ ತಲೆದೋರುತ್ತದೆ. ಅದೆಂದರೆ ಯಾವುದೇ ಒಂದು ದೇಶದವರು—ಚೋಳ, ಚೇರ, ಪಾಂಡ್ಯ ಇತ್ಯಾದಿ—ತಮ್ಮನ್ನು ಹೊರಗಿನವರು ಕೊಟ್ಟ ಹೆಸರಿನಿಂದ ಕರೆದುಕೊಳ್ಳುವುದು

ಸಾಧ್ಯವೆ? ಅಥವಾ ಅದು ಸಹಜವಾಗಿ ಕಾಣುತ್ತದೆಯೆ?—ಆದರೆ ಈ ಪ್ರಶ್ನೆಗಳಿಗೆ ಸಾಧ್ಯವೆಂದೇ ಉತ್ತರಿಸಬೇಕಾಗುತ್ತದೆ, ಈಗ ಉಪಲಬ್ಧವಿರುವ ಕೆಲವು ನಿದರ್ಶನಗಳಿಂದ. ಈಗ ನಮ್ಮ ನಿತ್ಯ ಬಳಕೆಯಲ್ಲಿರುವ ಇಂಡಿಯಾ, ಹಿಂದೂ—ಮುಂತಾದ ನಮ್ಮ ದೇಶದ ಹೆಸರು ನಮ್ಮ ಮೂಲದ ಹೆಸರಲ್ಲ; ಹೊರಗಿನವರು ಕೊಟ್ಟ—ಇಟ್ಟ ಹೆಸರು. ಆದರೂ ಎಲ್ಲರೂ ಇವನ್ನೇ ಹೇಳುತ್ತಾರೆ. ಸುಮಾರು ಎರಡೂವರೆ ಸಾವಿರ ವರ್ಷಗಳ ಹಿಂದೆ 'ಇಂದ್' ಎಂಬ ಶಬ್ದ ಪ್ರಯೋಗವಾಗಿದೆ—'ಇಂದ್ ದೇಶದ ಹೊನ್ನ ನೆಲ್ಲಾ ತಂದುಕೊಟ್ಟರೂ ಸುಳ್ಳು ಹೇಳುವುದಿಲ್ಲ.' ಹೀಗಾಗಿ ಹಿಂದ್ ಕೂಡ ಸರಿಯಾದ ರೂಪವಲ್ಲವೆನ್ನಬೇಕಾಗುತ್ತದೆ.

ಆದುದರಿಂದ, ಒಟ್ಟನಲ್ಲಿ ಹೇಳಬೇಕಾದರೆ ತಮಿಳಿನ ಲಿಪಿ, ತಮಿಳು ಭಾಷೆ ಬಹು ಪ್ರಾಚೀನವಾದುದರಿಂದ, ಅದು ಮೂಲ ದ್ರಾವಿಡದ ಸ್ವರೂಪವನ್ನು ಹೆಚ್ಚು ಪ್ರತಿನಿಧಿಸುತ್ತದೆ. ಇದರಿಂದಾಗಿ ಪರುಷಧ್ವನಿ ಪದದ ಆದಿ ಮತ್ತು ಪದ ಮಧ್ಯದಲ್ಲಿ ಇದ್ದುದು ಸರಿಯೆಂದು ತೋರುತ್ತದೆ. ಕೆಲವು ಕಾಲ ಪದಮಧ್ಯದಲ್ಲಿ ಪರುಷವಿದ್ದು, ಅನಂತರ ಕಾಲಾಂತರದಲ್ಲಿ ಅದು ಸರಳವಾಗಿರಬೇಕು. ಆದರೆ ಮೂಲತಃ ತಮಿಳಿನಲ್ಲಿ ಬಹುವಾಗಿ ಪರುಷ ಸ್ಪರ್ಶಗಳೇ ಇದ್ದುವೆಂದು ಹೇಳಬಹುದು. ತಮಿಳು ಭಾಷೆಗಿಂತಲೂ ಮುಂಚೆಯೇ ಕನ್ನಡ ಮತ್ತು ತೆಲುಗು ಭಾಷೆಗಳು ಪರುಷ ಸ್ಪರ್ಶಗಳನ್ನು ಬಹುಬೇಗನೆ ಕಳೆದುಕೊಂಡು ಸರಳ ಸ್ಪರ್ಶಗಳನ್ನು ಪಡೆದುವಾದರೂ, ತಮಿಳು ಭಾಷೆ ಮಾತ್ರ ಬಹುಶಃ ೧೨-೧೩ ಶತಮಾನದವರೆಗಾದರೂ ಪರುಷಾಕ್ಷರವನ್ನೇ ಪಡೆದಿದ್ದಿತೆನ್ನಬಹುದು. ಕನ್ನಡ ಮತ್ತು ತೆಲುಗು ಬೇಗನೆ ಸರಳಕ್ಕೆ ತಿರುಗಿದುದಕ್ಕೆ ಶಾಸನಾಧಾರಗಳಿವೆ. ಕನ್ನಡ ಭಾಷೆಯ ಅತ್ಯಂತ ಪ್ರಾಚೀನ ಶಾಸನವಾದ ಪಲ್ಮಿಡಿ [ ಕಾಲ ಸು. ಕ್ರಿ. ಶ. ೪೫೦ ] ಶಾಸನದಲ್ಲಿಯೇ ಪದಮಧ್ಯದಲ್ಲಿ ಸರಳ—ಪರುಷಗಳೆರಡೂ ಸಿಗುತ್ತವೆ.

ಉದಾಹರಣೆಗಳು :

ನಾಡುಳ್ ; ಪಲ್ಮಿಡಿಗೆ ; ಬಟ್ಟರ್ಗ್ಗೇಗಟ್ಟಿದ್ದ
ಬಟಾರಿ ಕುಲದೊಂ ; ಸಮುಕ್ಷದೆ

ಈ ಪದಗಳಲ್ಲಿ ಪರುಷ—ಸರಳಗಳೆರಡನ್ನೂ ಗುರುತಿಸಬಹುದು. ಹೀಗೆಯೇ ತೆಲುಗು ಭಾಷೆಯ ೮-೯ನೆಯ ಶತಮಾನದ ಶಾಸನಗಳಲ್ಲಿನ ಈ ಪದಗಳನ್ನು ಗಮನಿಸಿ :

ಅಗಿಜ್ಜ ; ಅಟತೊಟಿಶ ; ಕುನುಕೂರು
ಗುಡ್ಡವಾದಿ ; ಮಂಚಣ್ಣ ; ವೆಂಗಿಪುರ
ವೇಪೂರು, ವೇಣಿಜ್ಜ . . . ಇ. ಇ.

ಈ ಪದಗಳಲ್ಲಿ ಕ. ಚ. ತ. ಪ—ಗಳಿರುವಂತೆ—ಗ ಡ ದ—ಗಳೂ ಪದಮಧ್ಯದಲ್ಲಿವೆ. ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿನ ಪದಗಳ ಆದಿಯಲ್ಲಿ ಕಾಣುವ ಸರಳವರ್ಣವನ್ನು ಮೂಲ ದ್ರಾವಿಡದ ಪ್ರತಿನಿಧಿಯೆಂದು ಪರಿಗಣಿಸುವುದು ಸರಿಯಲ್ಲವೆಂದು ತೋರು

ತ್ತದೆ. ಅಥವಾ ಇದನ್ನು ಕೇವಲ ಆನುಷಂಗಿಕವೆಂದು ಬೇಕಾದರೆ ಅಂಗೀಕರಿಸಬಹುದು. ಈ ಎರಡು ಭಾಷೆಗಳ ಎಷ್ಟೋ ಪದಗಳಲ್ಲಿ ಸರಳ ಅಥವಾ ಘೋಷ ತೀರಾ ಗೌಣವೆಂದು ತೋರಿಸಬಹುದು. ಏಕೆಂದರೆ ಕನ್ನಡ ಮತ್ತು ತೆಲುಗು ಭಾಷೆಯ ಗ ಡ ದ ಬ ಎಂಬ ವರ್ಣಗಳಿಂದ ಮೊದಲಾಗುವ ಪದಗಳು ತಮಿಳು ಅಥವಾ ಮಲೆಯಾಳ ಭಾಷೆಗಳಲ್ಲಿ ಸಮಾನ ಪದಗಳನ್ನು ಪಡೆದಿಲ್ಲ.

ಒಂದುವೇಳೆ ಒಂದೋ, ಎರಡೋ ಪ್ರಾಚೀನ ಪದಗಳಿಗೆ ಅಲ್ಪ ಸ್ವಲ್ಪ ಸಾಮ್ಯ ಅಥವಾ ಸಾದೃಶ್ಯವಿರುವಂತೆ ತೋರಿದರೂ ಅವುಗಳಲ್ಲಿ ಸುಸಂಬದ್ಧವಾದ ಕ್ರಮವಿರುವುದಿಲ್ಲ, ವ್ಯವಸ್ಥೆಯಿರುವುದಿಲ್ಲ. ಉದಾಹರಣೆಗೆ ತಮಿಳು—ತೆಲುಗು ಭಾಷೆಗಳ ಕೆಲವು ಪದಗಳ ರೂಪಗಳಲ್ಲಿ ಹೊಂದಾಣಿಕೆಯಿದ್ದರೆ, ಅದೇ ಪದಕ್ಕೆ ಕನ್ನಡದಲ್ಲಿ ಸಮಾನರೂಪ ಸಿಗುವುದಿಲ್ಲ; ತೆಲುಗು ಕನ್ನಡ ಭಾಷೆಗಳಲ್ಲಿ ಒಂದು ರೀತಿಯ ಸಾಮರಸ್ಯವಿದ್ದರೆ ಆಗ ತಮಿಳು ಅಥವಾ ಮಲೆಯಾಳ ಭಾಷೆಯಲ್ಲಿ ಅದಕ್ಕೆ ಸಂಬಂಧಿಸಿದ ರೂಪ ಸಿಗುವುದಿಲ್ಲ. ಕೆಲವು ಉದಾಹರಣೆಗಳನ್ನು ತೆಗೆದುಕೊಂಡು ಇದನ್ನು ಪರಿಶೀಲಿಸಿದರೆ, ಆಗ ಈ ಹೇಳಿಕೆಯ ಅರ್ಥ ಇನ್ನೂ ಸ್ಪಷ್ಟವಾಗುತ್ತದೆ.

| ಕನ್ನಡ | ತಮಿಳು | ತೆಲುಗು |
|---|---|---|
| ಕೀರು/ಗೀರು | ಕೀಱು | ಗೀರುನಿ/ಕೀರುನಿ (ತು) |
| ಗಿಳಿ | ಕಿಳಿ | ಚಿಲಿ/ಚಿಲುಕ |
| ಗುಡಿ (=ಬಾವುಟ) | ಕುಡಿ | ಕೊಡಿ |
| ಗೆದ್ದಲು | ಶಿದಲೈ | ಚೆದಲ್ |
| ಜಿರಳೆ | ತೊಡಂಗಿ | ಜೊಂಡಿಂಗ |
| ಕಱ್ತೆ > ಕತ್ತೆ | ಕೞುದೈ | ಗಾಡಿದೆ |
| ಕುರುಡು | ಕುರುಟ್ಟು | ಗ್ರುಡ್ಡು > ಗುಡ್ಡು |
| ಕುೞಿ > ಕುರಿ | ಕೊೞು | ಗೊಱ್ಱೆ > ಗೊರ್ರ |
| ಕುೞು | ಕುೞಿ | (ಗುಳಿ) ಗೊಯ್ಯಿ |

ಮಲೆಯಾಳ, ತಮಿಳು, ಕೋತ, ಕೊಲಾಮಿ, ಪರ್ಜಿಗಳಲ್ಲಿ ಪದದ ಆದಿಯಲ್ಲಿ 'ಕ'-ಕಾರವಿದ್ದಾಗ ಕನ್ನಡ, ತೆಲುಗು, ತುಳು, ಕುಈ ಭಾಷೆಗಳಲ್ಲಿ ಕ-/-ಎರಡೂ ಇರುತ್ತವೆ. ಈ ಗೊಂದಲದ ಜೊತೆಗೆ ಒಂದೇ ಭಾಷೆಯಲ್ಲಿ, ಒಂದೇ ಪದಕ್ಕೆ ಎರಡೆರಡು ರೂಪಗಳು ಇರುವುದೂ ಉಂಟು. ಅದರಲ್ಲಿಯೂ ಕನ್ನಡದಲ್ಲಿ ಇದು ಹೆಚ್ಚು. ಇವಲ್ಲದೆ ತಮಿಳಿನಲ್ಲಿ ಸರಳವರ್ಣಾದಿ ಇದೆಯೆಂದು ಹೇಳುವ ಪದಗಳಲ್ಲೂ ಬಹುಮಟ್ಟಿನವು ಎರವಲು ಪದಗಳಾಗಿವೆ. ಆದುದರಿಂದ ಅವುಗಳನ್ನೇ ಆಧಾರವಾಗಿಟ್ಟುಕೊಂಡು ವಾದಿಸುವುದು ಸಮಂಜಸವಾಗಿ ತೋರುವುದಿಲ್ಲ.

ಪ್ರೊ|| ಜೂಲ್ಸ್‌ಬ್ಲಾಕ್ ಎತ್ತಿದ ಸಮಸ್ಯೆ ಪದದ ಆದಿಯಲ್ಲಿ ಕೇವಲ ಪರುಷವೇ ಇತ್ತೆ? ಅಥವ ಪರುಷದ ಜೊತೆ ಜೊತೆಯಲ್ಲೇ ಸರಳವೂ ಇತ್ತೆ? ಕ ತ ಪ—ಗಳು

ಇದ್ದುವೆ ? ಅಥವಾ ಗ ದ ಬ—ಗಳೂ ಇದ್ದುವೆ ?—ಎಂಬುದು. ತಮಿಳು ಭಾಷೆಯ ಪದಗಳ ಆದಿಯಲ್ಲಿ ಕ ತ ಪ—ಗಳೇ ಇದ್ದುವೆಂಬ ವಾದವನ್ನು ಆತ ಸ್ವಲ್ಪ ಮಟ್ಟಿಗೆ ಅಂಗೀಕರಿಸುವನಾದರೂ, ಉಳಿದ ದ್ರಾವಿಡ ಭಾಷೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಮರ್ಶಿಸುತ್ತಾ, ಪೂರ್ವ ದ್ರಾವಿಡ ಪದಗಳ ಆದಿಯಲ್ಲಿ ಇದ್ದುದು ಸರಳವೊಂದೇ ಎಂದು ಅಭಿಪ್ರಾಯಪಟ್ಟಿದ್ದಾನೆ. ಅವನು ತನ್ನ ವಾದದ ಸಮರ್ಥನೆಗಾಗಿ ಕೆಲವು ಪದಗಳನ್ನು ನಿದರ್ಶನವಾಗಿದ್ದಾನೆ. ಆತ ದೃಷ್ಟಾಂತವಾಗಿ ತೆಗೆದುಕೊಂಡ ಪದಗಳಲ್ಲೆಲ್ಲಾ ಘೋಟಕ ಎಂಬುದನ್ನು ಬಿಟ್ಟು ಮುಖ್ಯವಾದ ಮತ್ತೊಂದು ಪದವೆಂದರೆ "ದ್ರಮಿಡ" (–ದ್ರಾವಿಡ) ಎಂಬ ಪದ. ಈ ಪದ ದ್ರಮಿಡ>ತಮಿೞ್ ಆಗಿದೆ ಎಂದಾಗ ಇದು ಹೇಗಾಯಿತು ? ಇಂತಹ ಇತರ ಇನ್ನೂ ಕೆಲವು ಉದಾಹರಣೆಗಳೇನಾದರೂ ಉಂಟೆ ? ನೋಡಬೇಕು.

ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳನ್ನು ಪರಿಶೀಲನೆಗೆ ತೆಗೆದುಕೊಂಡರೆ ಇಂತಹ ಒಂದೆರಡು ಪದಗಳಿರುವುದು ಸಿಗುತ್ತದೆ. ದ್ರೋಣಿ ಎಂಬ ಸಂಸ್ಕೃತ ಪದ ಪ್ರಾಕೃತದಲ್ಲಿ 'ದೋಣಿ'—ಎಂದಾಗಿದೆ. ಆದರಂತೆ ಭವತಿ ಎಂಬ ಸಂಸ್ಕೃತ ಪದ 'ಹೋದಿ'—ಎಂದು ಪ್ರಾಕೃತದಲ್ಲಿ ರೂಪಾಂತರಗೊಂಡಿದೆ. ಹೀಗೆಯೇ ದ್ರಮಿಡ ಎಂಬ ಪದ ದಮಿೞ್ ಎಂದು ಮೊದಲು ವ್ಯತ್ಯಾಸಗೊಂಡು ತರುವಾಯ ಅದು ತಮಿೞ್ ಎಂದು ಆಗಿರಬಹುದು. ಇದೇ ಸಂದರ್ಭದಲ್ಲಿ ಇನ್ನೊಬ್ಬ ವಿದ್ವಾಂಸರು ಹೇಳಿದ ದಮರಿಕೆ ಎಂಬ ಪದವನ್ನು ಇಲ್ಲಿ ನೆನೆಸಿಕೊಳ್ಳಬಹುದು. ಅಂದರೆ ಸಂಸ್ಕೃತ ಪದಗಳು ಪ್ರಾಕೃತಕ್ಕೆ ಬರುವಾಗ ಆಗುನಂತಹ ವ್ಯತ್ಯಾಸಗಳೇ, ಸಂಸ್ಕೃತದಿಂದ—ಕೆಲವೊಮ್ಮೆ ಪ್ರಾಕೃತದ ಮೂಲಕ—ತಮಿಳು ಭಾಷೆಗೆ ಬರುವಾಗಲೂ ಆಗಬಹುದು.

ಈ ವಾದಕ್ಕೆ ಪೋಷಕವಾಗಿ ಪ್ರಾಧ್ಯಾಪಕ ಜೂಲ್ಸ್‌ಬ್ಲಾಕ್ ಹೇಳುವ ಇನ್ನೊಂದು ಪದವೆಂದರೆ 'ಘುತ್ರ' ಎಂಬ ಸಂಸ್ಕೃತ ( ? ) ಶಬ್ದ. ಈ ಪದಕ್ಕೆ ಸಮಾನವಾಗಿ ಇಂಡೋ-ಆರ್ಯನ್ ಭಾಷೆಗಳಲ್ಲಿ ಘೋಟ ( ಡ ) ಎಂದು ಇವೆ. ಇದರಿಂದ ಮುಂದೆ ಘೋಟಕ ಎಂಬುದು ರೂಪಗೊಂಡಿರಬೇಕು ; ಮತ್ತು ದ್ರಾವಿಡ ಭಾಷೆಗಳಿಗೆ ಈ ಘುತ್ರ ಎಂಬ ಪದವೇ ಕುದುರೆ (ಕ), ಕುದಿರೈ (ತ) ಗುರ್ರಮು (ತೆ) – ಆಗಿ ಮಾರ್ಪಾಟು ಪಡೆದಿರಬೇಕು ; ಇದನ್ನು ಒಪ್ಪುವುದು ಕಷ್ಟ. ಅಲ್ಲದೆ ಮೂಲ ದ್ರಾವಿಡದಲ್ಲಿ ಘುತ್ರ ಎಂಬ ಶಬ್ದವೇ ಇದ್ದಿರಬಹುದು. ಇಂಡೊ-ಯೂರೋಪಿಯಾ ಭಾಷೆಗಳಲ್ಲಿ ಅಶ್ವ, ಅಸ್ವ, Aspos ಎಂಬ ಪದಗಳು ಮಾತ್ರ ಇವೆ. ವಾಸ್ತವವಾಗಿ ಈ ಕುದುರೆಯೆಂಬ ಪ್ರಾಣಿ ದಕ್ಷಿಣಕ್ಕೇ ಏಕೆ, ಉತ್ತರ ಭಾರತಕ್ಕೂ ಹೊರದೇಶದಿಂದ ಬಂದಿದೆ. ವಸ್ತುಸ್ಥಿತಿ ಹೀಗಿರುವಾಗ, ಈ ಹೊಸ ಪ್ರಾಣಿಗೆ ಸಂಬಂಧಪಟ್ಟ ಹೆಸರು ದ್ರಾವಿಡವೇ ಎಂದು ಏಕೆ ಹೇಳಬೇಕು ? ತೆಲುಗು ಗುರ್ರಮು ಎಂಬ ಶಬ್ದ ಗಮನಿಸಿದರೆ ಸಂಸ್ಕೃತ ಘೋಟಾ/ಘುತ್ರ ಶಬ್ದ ದ್ರಾವಿಡದಿಂದ ಬಂದಿರಬೇಕೆಂಬ ಅಂಶಕ್ಕೆ ಪುಷ್ಟಿ ದೊರೆಯುತ್ತದೆ. ಆದರೆ ಘುತ್ರ್‌ದಿಂದ (>ಹೋತ್ರ್–ಶಾಲಿಹೋತ್ರ<ಸಂ + ದ್ರಾ) ಗುರ್ರಮು, ಕುದಿರೈ, ಕುದಿರೆ ಬಂದಿರಬಹುದೆಂದು ಆತನ ವಿವರಣೆಯಿದೆ. ಕಾಲ್ಡ್‌ವೆಲ್ಲನ ಹೇಳಿಕೆ

ಯನ್ನು ವಿರೋಧಿಸಿ ಬ್ಲಾಕ್ ಬರೆದಿದ್ದಾನೆ.

ಒಂಟೆಗೆ ಸಂಸ್ಕೃತದಲ್ಲಿ ಇರುವ ಹೆಸರು ಕ್ರಮೇಲಕ—ಎಂದು. ಆ ಪದ ಮುಂದೆ ಗಮೇಲ್, ಕ್ಯಾಮೆಲ್ (Camel) ಎಂದಾಗಿದೆ. ಪದದ ಆದಿಯಲ್ಲಿನ 'ಕ್ರ' ಎಂಬುದು ಹೇಗೆ ಗ, ಕ್ಯಾ ಆಯಿತೆಂದು ಪರಿಶೀಲಿಸಿ ನೋಡಿದರೆ, 'ದ್ರ' ಎಂಬುದು ಹೇಗೆ ದ, ತ ಆಯಿತೆಂಬುದಕ್ಕೆ ಉತ್ತರ ತಿಳಿದು ಬರುತ್ತದೆ.

ಆದುದರಿಂದ

ದ್ರೋಣಿ (ಸಂ) > ದೋಣಿ (ಪ್ರಾ)
ದ್ರೋಹ (ಸಂ) > ದೋಹ (ಪ್ರಾ)
ಭವತಿ (ಸಂ) > ಹೋದಿ (ಪ್ರಾ)
ಘುತ್ರ > [ಕುದುರೆ/ಗುರ್ರಮು] > ಘೋಟಕ
ಕ್ರಮೇಲಕ > ಗಮೇಲ್ > ಕ್ಯಾಮೆಲ್

ಎಂಬ ಈ ಎಲ್ಲ ಪರಿವರ್ತನೆಗಳು ನಡೆದಿರುವಂತೆಯೇ ಇಲ್ಲಿಯೂ:

ದ್ರಮಿಡ > ದಮಿೞ್ > ತಮಿೞ್ [ > ತಮಿಳು]

ಎಂದು ಆಗಿರಬಹುದು.

ಆದರೆ ಈ ವಾದವನ್ನು ವಿರೋಧಿಸುತ್ತಾ:

The arguments that Dràvida, gârdhaba—, and Ghōtaka are from Pdr. roots is not well attested by evidence, at least in showing that this roots had initial Voicing Originally in the parent speech. Sometimes the same Language show doublets with voice less stops side by side froms with voiced stops . . .[1]

ಎಂಬುದಾಗಿ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಡಾ|| ಎಸ್. ಕೆ. ಚಟರ್ಜಿಯವರು ಮೂಲದ್ರಾವಿಡದಲ್ಲಿ ಇವೆರಡೂ ಭಿನ್ನಧ್ವನಿಗಳೆನ್ನಲು ಆಧಾರವಿಲ್ಲ; ತಮಿಳಿನಲ್ಲಿ ಮೊದಲು ಸರಳ-ಪರುಷಗಳೆರಡೂ ಇದ್ದು ಅವು ಆಮೇಲೆ ಕ್ರಮೇಣ ಪರುಷಗಳಾದುವು; ಮತ್ತು ೧೩೦೦ರಿಂದ ಈಚೆಗೆ, ಅಂದರೆ ೧೪ನೆಯ ಶತಮಾನದಿಂದ ಈಚೆಗೆ ಅವು ಘರ್ಷಗಳಾದುವು—ಎಂದು ಹೇಳಿದ್ದಾರೆ.

ಆದರೆ ಈ ಹೇಳಿಕೆಗಳನ್ನು, ಅದರಲ್ಲಿಯೂ ಜೂಲ್ಸ್‌ಬ್ಲಾಕ್ ಮತ್ತು ಚಟರ್ಜಿಯವರ ಅಭಿಪ್ರಾಯಗಳನ್ನು ಪುನರ್ ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಮೂಲದ್ರಾವಿಡದಲ್ಲಿ ಸರಳೋಚ್ಚಾರಣೆ ಪದದ ಆದಿಯಲ್ಲಿ ಇದ್ದುದು ಅಸಂಭವವಾಗಿಯೇ ತೋರುತ್ತದೆ. ಈ ಬಗ್ಗೆ ಕೆ. ವಿ. ಸುಬ್ಬಯ್ಯ ಬರೆದ ಲೇಖನವನ್ನು[2] ಮತ್ತು ಎಲ್. ವಿ.

[1] Bh. Krishnamurti, sheet, 3, Paper issued at *SSOL*, Mysore.
[2] *A Primer of Dravidian Phonology*, IA, 38, 195, 1909.

ರಾಮಸ್ವಾಮಿ ಅಯ್ಯರ್ ಬರೆದ ಲೇಖನವನ್ನೂ[1] ಅವಶ್ಯ ಓದಬೇಕು. ಈ ಇಬ್ಬರು ವಿದ್ವಾಂಸರೂ ಮೂಲದ್ರಾವಿಡದಲ್ಲಿ, ಪದದ ಆದಿಯಲ್ಲಿ ಅಘೋಷ ಅಥವಾ ಪ್ರತ್ಯೇಕವಾದ ಧ್ವನಿಮಾಗಳಿದ್ದುವೆಂದು ಸ್ಥಾಪಿಸಲು ಆಧಾರಗಳು ಸಾಲವೆನ್ನುತ್ತಾರೆ.

ಒಟ್ಟು ದ್ರಾವಿಡ ಭಾಷೆಗಳಲ್ಲಿ ಹಳೆಯ ತಮಿಳು ಮತ್ತು ಹಳೆಯ ಮಲೆಯಾಳ ಭಾಷೆಗಳೆರಡನ್ನೂ ಬಿಟ್ಟರೆ ಇನ್ನು ಎಲ್ಲ ದ್ರಾವಿಡ ಭಾಷೆಗಳೂ ಪದದ ಆದಿಯಲ್ಲಿ ಘೋಷಸ್ಪರ್ಶವಿರುವುದನ್ನು ತೋರಿಸುತ್ತವೆ. ಆದರೂ ಈ ಎಲ್ಲ ದ್ರಾವಿಡ ಭಾಷೆಗಳಲ್ಲೂ ಏಕರೂಪತೆ ಇರುವ ಒಂದಾದರೂ ಪದ ಸರಿಯಾದ ವ್ಯುತ್ಪತ್ತಿ ಹೇಳಬಲ್ಲ ಪದ—ಅಂದರೆ ಪದದ ಆದಿಯಲ್ಲಿ ಘೋಷಸ್ಪರ್ಶವನ್ನು ಪಡೆದಿತ್ತು ಎಂದು ಖಚಿತವಾಗಿ ಹೇಳಲು ಸಹಕಾರಿಯಾಗಬಲ್ಲ ಪದ ಕಂಡುಬಂದಿಲ್ಲ.

> Non-contrastive voicing developed independently in each of the Languages separetely, through certain morphonemic alternations out of which Secondary stems were formed with initial Voicing.[2]

ಉದಾಹರಣೆಗೆ ಹಳಗನ್ನಡದಲ್ಲಿ ಕೆಯ್—ಎಂಬ ಧಾತು ಸಹಾಯಕ ಕ್ರಿಯಾಪದವಾಗಿ ಪದಮಧ್ಯದಲ್ಲಿ ಬರುವಾಗಲೂ—ಗೆಯ್ ಎಂಬ ರೂಪವನ್ನು ಹೊಂದುತ್ತದೆ. ಆದರೆ ಹೊಸಗನ್ನಡ ಕಾಲಕ್ಕೆ ಬರುವ ಹೊತ್ತಿಗೆ, ನಡುಗನ್ನಡ ಕಾಲದಲ್ಲೇ ಅಷ್ಟೇಕೆ ಗೆಯ್ ಎಂಬುದೇ ಎಲ್ಲೆಡೆಯಲ್ಲಿಯೂ ಪ್ರಚುರವಾಯಿತು.

ಹೀಗಾಗಿ ದ್ರಾವಿಡ ಭಾಷೆಗಳಲ್ಲಿ ಕಂಡುಬರುವ ಈ ಘೋಷಧ್ವನಿ (—ಪದದ ಆದಿಯಲ್ಲಿ)ಯ ವಿಚಾರದಲ್ಲಿ ಅಕ್ರಮ ಕಂಡುಬರುವುದಕ್ಕೆ ಮುಂಡಾ ಭಾಷೆಗಳ ಪ್ರಭಾವ ಒಂದು ಕಾಲಕ್ಕೆ ಆಗಿದ್ದಿರಬೇಕೆಂದು ಬೇರೊಂದು ಕಾರಣವನ್ನಿತ್ತು ವಿದ್ವಾಂಸರು ವಿವರಿಸಿದ್ದಾರೆ.

> Sometimes, even the theory of substrat influence from Mundarian and Indo-Aryan has been evoked by scholars to explain irregular voicing in the majority of the Dravidian Languages. If initial voiced stops were Phonemic in Pdr. We should expect to find at least a few common Dravidian sets of etyma with initial voicing in the mejority of the Languages.[3]

ಹಿಂದೆ ತತ್ವರೂಪದಲ್ಲಿ ನಿರೂಪಿಸಿದ ನಿಯಮಗಳಿಗೆ ಉದಾಹರಣೆಗಳನ್ನು ಇತ್ತು ಇಲ್ಲಿ ಸ್ಪಷ್ಟಪಡಿಸಬಹುದು. ಕನ್ನಡ ಭಾಷೆಯ ಈ ಕೆಲವು ಹಳೆಯ ಪದಗಳನ್ನು—

---

[1] Kui words and Dravidian Origins, *JORS*, 4, 171-172.

[2] Bh. Krishnamurti, Paper issued at *SSOL* Mysore, p-3.

[3] ಅದೇ.

ಸರಳವರ್ಣಾರಂಭವಿರುವ ಪದಗಳನ್ನು ನೋಡಿ :

ಗೋಸುಂಬೆ, ಗೋದಾಮು, ಗುಡುಗು,
ಗದ್ದಿ (ದು) ಗೆ, ಗಿಡ್ಡು, ಗೆಲ್ (?)
ಜಗಳ, ಜಿಂಕೆ, ಜಪ್ಪ,
ದುಡಿ (< ಕುಡಿ) ದೊರೆ (?) ದೊಂಬಿ.

ಈ ಬಗೆಯ ಇನ್ನೂ ಅನೇಕ ಶಬ್ದಗಳಿವೆ. ಆದರೆ ಇವುಗಳಿಗೆ ಸಮಾನವಾದ ಪದಗಳು ತಮಿಳಿನಲ್ಲಿ ಇಲ್ಲ. ಆದುದರಿಂದ, ಬಹುಶಃ, ಈ ಪದಗಳು ಈಚೆಗೆ ಕನ್ನಡ ನುಡಿಯಲ್ಲಿ ಬೆಳೆದಿರಬೇಕೆಂದು ಹೇಳಲಡ್ಡಿಯಿಲ್ಲ ; ಅಥವಾ ಬೇರೆ ಕಡೆಯಿಂದ, ಬೇರೆ ಭಾಷೆಯಿಂದ ಈ ಪದಗಳು ಬಂದಿರುವುದು ಸಾಧ್ಯವಿದೆ. ಮೇಲೆ ಉದಾಹರಿಸಿದ ಪದಗಳಲ್ಲಿ ಗೆಲ್, ದೊರೆ (=ಪಡೆ, ಹೊಂದು) ಎಂಬ ಎರಡು ಪದಗಳನ್ನು ಬಿಟ್ಟು ಉಳಿದ ಶಬ್ದಗಳು ಹೊಸದಾಗಿ ಬಂದಿವೆಯೆಂದೂ, ಮೂಲ ದ್ರಾವಿಡ ಅಲ್ಲವೆಂದು ಧಾರಾಳವಾಗಿ ಹೇಳಬಹುದು. ದೂಸಜ, ಗಾಡಿ—ಮೊದಲಾದ ಪದಗಳು ಕನ್ನಡಕ್ಕೆ ಅಪೂರ್ವವಾಗಿದ್ದು ಅವುಗಳ ಮೂಲ ವಿವರಿಸುವುದು ಸ್ವಲ್ಪ ತೊಡಕಿನದಾಗಿದೆ.

ಇವಲ್ಲದೆ ಪದದ ಆದಿಯಲ್ಲಿ ಬಕಾರ ಬಂದುದು—ಕನ್ನಡ ಭಾಷೆಯಲ್ಲಿ ಹೊಸದು ; ಅದಕ್ಕೆ ಮೊದಲು ಬಕಾರದ ಸ್ಥಾನದಲ್ಲಿ ವಕಾರವೇ ಇತ್ತು. ವಕಾರಕ್ಕೆ ಬದಲಾಗಿ ಬಕಾರ ಅನಂತರ ಬಂದದ್ದು ಒಂದು ವಿಧವಾದರೆ, ಬಕಾರದ ರೂಪಗಳೇ ಬೇರೆ ಭಾಷೆಯಿಂದ ಬಂದಿರುವುದು ಇನ್ನೊಂದು ವಿಧ. ಅಂದರೆ ಕನ್ನಡ ಪದಗಳ ಆದಿಯ ಬಕಾರಕ್ಕೆ ಎರಡು ಮೂಲವಿರುವುದು ಕಾಣುತ್ತಿದೆ. (೧) ವಕಾರ ಬಕಾರವಾದುದು. (೨) ಅನಂತರ ಬಕಾರದ ಪದಗಳು ಬಂದು ಸೇರಿದುದು. ಇದನ್ನು ಪತ್ತೆ ಹಚ್ಚಲು ಸುಲಭೋಪಾಯವೊಂದು ಇದೆ. ಕನ್ನಡದಲ್ಲಿ, ಪದದ ಆದಿಯಲ್ಲಿ ಬಕಾರವಿದ್ದಾಗ ತಮಿಳು, ತೆಲುಗು, ಮಲೆಯಾಳ ಭಾಷೆಗಳಲ್ಲಿ ಅದಕ್ಕೆ ಸಮಾನರೂಪ ಹೇಗಿದೆಯೆಂದು ಪರಿಶೀಲಿಸಿದರೆ ಇದು ಸ್ಪಷ್ಟವಾಗುತ್ತದೆ. ಸಂಸ್ಕೃತದ ಪದಗಳು ತದ್ಭವವಾಗಿ ಕನ್ನಡಕ್ಕೆ ಬಂದಾಗಲೂ, ಸಂಸ್ಕೃತ ಪದಗಳ ಪ್ರಾರಂಭದಲ್ಲಿ ವಕಾರವಾಗಿದೆ :

| | |
|---|---|
| ವ– > ಬ– ಬ | ಹೊಸದಾಗಿ ಬಂದದ್ದು |
| ಸಂ) | ವಾಪಿ > ಬಾವಿ |
| (") | ವೀಥಿ > ಬೀದಿ |
| (ಪಾಡಿ > ಪಾಟಕ) > ವಾಡ | > ಬಾಡ (=ಗ್ರಾಮ) |
| (ಮ) | ವೆಲ್ಲ > ಬೆಲ್ಲ |
| (ಹ. ಗ.) | ವೆಟ್ಟ > ಬೆಟ್ಟ |
| (") | ವಂದಿಸು > ಬಂದಿಸು |
| (") | ವೆಣ್ಣೆ > ಬೆಣ್ಣೆ |

(”) ವಿತ್ತು > ಬಿತ್ತು
(”) ವೆಳಿ > ಬೆಳೆ
(ತಮಿಳು) ವಾಯಿಲ್ > ಬಾಗಿಲು

ಈ ಉದಾಹರಣೆಗಳು ಮತ್ತು ವಿವರಣೆಗಳಿಂದ ತಮಿಳು ಭಾಷೆಯಲ್ಲಿ ಆದಷ್ಟೂ ಮೂಲ ದ್ರಾವಿಡ ಸ್ವರೂಪದ ಪದಗಳು ಉಳಿದಿವೆಯೆಂಬುದು ಮನದಟ್ಟಾಗುತ್ತದೆ. ಆದುದರಿಂದ ಕನ್ನಡ, ತೆಲುಗು ಭಾಷೆಗಳಲ್ಲಿ ಒಂದು ಹೊಸ ಪದ ಕಂಡುಬಂದರೆ ಮತ್ತು ತಮಿಳು (ಮಲೆಯಾಳ) ಭಾಷೆಯಲ್ಲಿ ಅದಕ್ಕೆ ಸಮಾನ ರೂಪ ಇಲ್ಲದೆ ಹೋದರೆ ಆಗ ಆ ಪದವನ್ನು ತಮಿಳು ನುಡಿ ಕಳೆದುಕೊಂಡು ಕನ್ನಡ–ತೆಲುಗು ಭಾಷೆಗಳು ಉಳಿಸಿ ಕೊಂಡಿರಬಹುದಲ್ಲವೆ ?—ಎಂದು ಹೇಳಿ ವಾದಿಸುವುದಕ್ಕಿಂತ ಆ ಶಬ್ದಗಳನ್ನು ಬೇರೆ ಕಡೆಯಿಂದ ಎರವಲಾಗಿ ತಂದಿವೆಂದು ಹೇಳುವುದು ಉಚಿತವಾಗಿ ಕಾಣುತ್ತದೆ. ಇನ್ನು ಕೆಲವು ಪದಗಳಿಗೆ ತಮಿಳಿನಲ್ಲಿ ಸಮಾನ ಪದವಿದ್ದರೂ ಅದೆಲ್ಲಾ ಒಟ್ಟಿಗೆ ಅನಂತರ ಬಂದ ಪದಗಳಾಗಿರುತ್ತವೆ. ಉದಾಹರಣೆಗೆ ಕನ್ನಡದ ಗರುಡಿ—ಗರಡಿ (ಗರಿಡಿ) ಪದಕ್ಕೆ ತೆಲುಗಿನಲ್ಲಿ ಗರಿಡಿ ಎಂದೂ ತಮಿಳಿನಲ್ಲಿ ಕರಟಿ ಎಂದೂ ಇದೆ. ಆದರೂ ಪೂರ್ವ ತಮಿಳಿನ ಕೃತಿಗಳಲ್ಲಿ ಈ ಪದ ಇಲ್ಲ.

ಟಿ. ಬರೋರವರು ಇದಕ್ಕೆ ಸಂಬಂಧಿಸಿದಂತೆ ಬಹು ಬೆಲೆಯುಳ್ಳ ಮತ್ತು ಮನನೀಯ ವಾದ ಸೂಚನೆಗಳನ್ನು ಮುಂದಿಟ್ಟಿದ್ದಾರೆ[1] ಅವರ ಅಭಿಪ್ರಾಯದ ಸಾರ ಇಂತಿದೆ: ಈ ವಿಚಾರದಲ್ಲಿ ದ್ರಾವಿಡ ಭಾಷೆಗಳಲ್ಲೆಲ್ಲಾ ಪೂರ್ವ ದ್ರಾವಿಡ ಭಾಷೆಯಲ್ಲಿ ಇದ್ದಿರಬಹು ದಾದ ಪದಸ್ವರೂಪವನ್ನು ಅಥವಾ ಸ್ವನಸ್ಥಿತಿಯನ್ನು ಬಹುಮಟ್ಟಿಗೆ ಬಿಂಬಿಸಬಲ್ಲ ಭಾಷೆಯೆಂದರೆ ತಮಿಳು ಭಾಷೆಯೊಂದೇ. ಏಕೆಂದರೆ ಕನ್ನಡ ಹಾಗೂ ತೆಲುಗು ಭಾಷೆ ಗಳು, ಪ್ರಾಚೀನವಾದರೂ, ಕೆಲವು ಅಜ್ಞಾತ ಕಾರಣಗಳಿಂದಾಗಿ ಈ ವಿಚಾರದಲ್ಲಿ ಖಚಿತ ನಿಲುವನ್ನು ಈ ಭಾಷೆಗಳು ತೋರಲಾರವು; ಅವುಗಳಲ್ಲಿ ಇರುವ ಆಧಾರಗಳು ಅಸ್ಪಷ್ಟವಾಗಿದ್ದು ಗೃಹೀತವಾಗಲಾರವು. ಕೆಲವೊಮ್ಮೆ ಈ ಭಾಷೆಗಳಲ್ಲಿ ಘೋಷ ತೀರ ಆನುಷಂಗಿಕವೂ ಹೌದು. ಅಲ್ಲದೆ ಈ ಭಾಷೆಗಳಲ್ಲಿ ಬರುವ ಬಹುಸಂಖ್ಯೆಯ ಪರುಷ ವರ್ಣ ಆರಂಭವಿರುವ ಪದಗಳು ದ್ರಾವಿಡಭಾಷಾ ಬುಡಕಟ್ಟಿಗೆ ಸೇರಿದುವೆಂದು ತೋರು ವುದಿಲ್ಲ. ಬದಲಾಗಿ ಅವು ದ್ರಾವಿಡೇತರ ಭಾಷೆಗಳಿಂದ ಬಂದಿರುವಂತೆ ಭಾಸವಾಗು ತ್ತದೆ.

ಪದಾರಂಭದ ಸರಳವರ್ಣ, ಪದಮಧ್ಯ ಪರುಷವರ್ಣ–ಇವುಗಳಿಗೆ ಸಂಬಂಧಪಟ್ಟಂತೆ ಒಂದು ಸಮಂಜಸವಾದ ವಿವರಣೆ ನೀಡಬೇಕಾದರೆ ದ್ರಾವಿಡ ಭಾಷೆಯ ಬೆಳವಣಿಗೆಯ ವಿವಿಧ ಘಟ್ಟಗಳಿಗೆ ಸೇರಿದಂತೆ ಒಂದು ಮಧ್ಯವರ್ತಿಯಾದ, ಅನ್ಯಭಾಷಾ ಪ್ರಭಾವಕ್ಕೆ ಒಳಗಾದ ಒಂದು ಸ್ತರ ಅಥವಾ ಘಟ್ಟವನ್ನು ಅಂಗೀಕರಿಸಬೇಕಾಗಿ ತೋರುತ್ತದೆ.

---

[1] T. Burrow, *Dravidian Studies, v. vi. BSOAS*, 1946-47.

ಕನ್ನಡದಲ್ಲಿ ಬಹಳ ಹಿಂದಿನಿಂದಲೂ ಹೊರಗಿನ ಪ್ರಭಾವವಿದೆ; ತೆಲುಗು ಭಾಷೆ ಕನ್ನಡಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಪದಪ್ರಭಾವಕ್ಕೆ ಒಳಗಾಗಿದೆ. ಇನ್ನು ಉತ್ತರಕ್ಕಿರುವ ದ್ರಾವಿಡ ಭಾಷೆಗಳಲ್ಲಂತೂ ದ್ರಾವಿಡಕ್ಕಿಂತಲೂ ದ್ರಾವಿಡೇತರ ಅಂಶಗಳೇ ಅಧಿಕ. ದ್ರಾವಿಡ ಪದಗಳು, ಆ ಭಾಷೆಗಳಲ್ಲಿ, ನೂರಕ್ಕೆ ಹತ್ತರಷ್ಟು ಇದ್ದರೆ, ಉಳಿದ ತೊಂಬತ್ತು ಭಾಗ ದ್ರಾವಿಡೇತರದ್ದು.

ಉತ್ತರ ದ್ರಾವಿಡ ಭಾಷೆಗಳಲ್ಲಿನ ಸ್ಥಿತಿಗತಿಗಳು ಈ ಪರಿಸ್ಥಿತಿಯಲ್ಲಿ ಇರುವಾಗ ಪ್ರಬಲವಾದ ಆಧಾರಗಳು ಅತ್ಯಲ್ಪ. ಮೂಲದ್ರಾವಿಡದಲ್ಲಿ ಘೋಷ (ಸರಳ) ವರ್ಣಗಳು ಪ್ರತ್ಯೇಕ ಧ್ವನಿಮಾಗಳಾಗಿ ನಿಲ್ಲುತ್ತವೆ ?—ಎಂಬುದನ್ನು ಪರಿಶೀಲಿಸಲು ಇರುವ ಸಾಮಗ್ರಿ ಸಾಲದು. ಆದಾಗ್ಯು ತಮಿಳು ಮತ್ತು ಮಲೆಯಾಳ ಭಾಷೆಗಳನ್ನು ಬಿಟ್ಟರೆ ಉಳಿದ ಎಲ್ಲ ದ್ರಾವಿಡ ಭಾಷೆಗಳೂ ಪದದ ಆದಿಯಲ್ಲಿ ಸರಳ (ಘೋಷ) ವರ್ಣಗಳನ್ನು ಹೊಂದಿರುವುದಕ್ಕೆ ಹತ್ತಾರು ನಿದರ್ಶನಗಳಿವೆ. ಆದರೆ ಸಮಸ್ಯೆ ಇಷ್ಟರಿಂದಲೇ ಸುಲಭವಾಗಿ ಪರಿಹಾರವಾಗುವುದಿಲ್ಲ. ಇದರ ಒಳರಚನೆಯನ್ನು ಗಮನಿಸತೊಡಗಿದರೆ ಅಲ್ಲಿ ಇತರ ಕೆಲವು ಸಿಕ್ಕುಗಳಿವೆ. ಏಕೆಂದರೆ ತಮಿಳು—ಮಲೆಯಾಳೇತರ ದ್ರಾವಿಡ ಭಾಷೆಗಳಲ್ಲಿ ಬರುವ ಘೋಷ ವರ್ಣಾದಿಯ ಪದಗಳಲ್ಲಿ ಯಾವ ಒಂದು ಪದವೂ ಆ ಎಲ್ಲ ಭಾಷೆಗಳಲ್ಲೂ ಸಮಾನವಾಗಿಲ್ಲ. ಆ ಪದಗಳ ವ್ಯುತ್ಪತ್ತಿಯನ್ನು ಸಮೀಕ್ಷಿಸತೊಡಗಿದರೆ ಒಂದೊಂದು ಭಾಷೆಯಲ್ಲಿ ಒಂದೊಂದು ತೆರನಾಗಿ ಇರುವುದರಿಂದ ಈ ಸಮಾನ ಮೂಲದ ಕೊರತೆಯಿಂದಾಗಿ ಯಾವೊಂದು ತೀರ್ಮಾನವೂ ಸಾಧ್ಯವಾಗಿಲ್ಲ.

ಅಷ್ಟೇ ಅಲ್ಲದೆ ಒಂದೇ ಭಾಷೆಯಲ್ಲಿನ ಕೆಲವು ಪದಗಳು ಘೋಷ ವರ್ಣಾರಂಭದ ಜೊತೆಗೆ ಅಘೋಷ ವರ್ಣಾರಂಭವನ್ನೂ ಪಡೆದಿವೆ. ಉದಾಹರಣೆಗೆ ಕನ್ನಡದ ಒಂದೆರಡು ಪದಗಳನ್ನು ತೆಗೆದುಕೊಳ್ಳಬಹುದು. ಕನ್ನಡದಲ್ಲಿ ಕ-ಗ ಗಳ ನಡುವೆ ಒಂದು ವಿಧವಾದ ಹಿಂಜರಿಕೆಯಿರುವುದು ಕಂಡುಬರುತ್ತದೆ. ಕೆಯ್ ಎಂಬ ಪದವನ್ನು ನೋಡಬಹುದು. ಇದು ಕೆಯ್/ಗೆಯ್ ಎಂಬ ಎರಡೂ ರೂಪಗಳನ್ನು ಪಡೆದಿದೆ. ಮೊದಮೊದಲಲ್ಲಿ ಪದಾರಂಭದಲ್ಲಿ ಕಯ್ ಎಂದೂ, ಪದಮಧ್ಯದಲ್ಲಿ ಸಮಾಸದಲ್ಲಿ ಗೆಯ್ ಎಂದೂ ಇದ್ದಿತು; ಕ್ರಮೇಣ ಗೆಯ್ ಎಂಬ ರೂಪವೇ ಎಲ್ಲೆಡೆಯಲ್ಲೂ ಸರ್ವಸಾಮಾನ್ಯವಾಯಿತು. ಇವಲ್ಲದೆ ಪದದ ಆದಿಯ ಚಕಾರ ಜಕಾರದೊಡನೆ ಐಕ್ಯವಾಗುವುದೂ ಉಂಟು. ಚೀಱು > ಕೀಱು > ಜೀಱು; (ಜೀ) ಚೀರುಂಡೆ (ಗೀರುಂಡೆ-ರೂಪವೂ ಉಂಟು.) ದ್ರಾವಿಡದ ಹೆಚ್ಚಿನ ಭಾಷೆಗಳಲ್ಲಿ ಕಾಣುವ ಈ ಬಗೆಯ ಗೊಂದಲ ಪರಿಸ್ಥಿತಿಗೆ-ಅನಿರ್ದಿಷ್ಟ ಘೋಷವರ್ಣ ಸ್ಥಿತಿಗೆ ಮುಂದಾರಿಯನ್ ಅಥವಾ ಇಂಡೊ-ಆರ್ಯನ್ ಭಾಷೆಯ ಪ್ರಭಾವವೇ ಕಾರಣವೆಂದು ಕೆಲವು ಭಾಷಾ ವಿಜ್ಞಾನಿಗಳು ವಿವರಿಸಿದ್ದಾರೆ.

ಮೂಲ ದ್ರಾವಿಡ ಭಾಷೆಯಲ್ಲಿ ಪದದ ಪ್ರಾರಂಭವರ್ಣ ಘೋಷಧ್ವನಿಮಾ ಆಗಿದ್ದರೆ ಆಗ ಎಲ್ಲ ಭಾಷೆಗಳಲ್ಲಿಯೂ ಆ ಪದದ ಪರಿಸರ ಬಹುಮಟ್ಟಿಗೆ ಒಂದೇ ತೆರನಾಗಿ

ಇರುತ್ತದೆಂದು ನಿರೀಕ್ಷಿಸಬೇಕು. ಆದರೆ ಅಂತಹ ಪದಗಳು ಇಲ್ಲನೆ ಇಲ್ಲವೆಂದು ಹೇಳ ಬಹುದಾದರೂ, ಗೆಲ್—ಎಂಬ ಒಂದು ಪದ ಮೂಲ ದ್ರಾವಿಡದಲ್ಲಿ ಗ್*—ಇರಲಿಲ್ಲ ವೆಂದು ಹೇಳುವ ನಿಯಮ ಸ್ವಲ್ಪಮಟ್ಟಿಗೆ ಅಪವಾದದಂತಿದೆ :

ಕನ್ನಡ ಗೆಲ್ ; ತುಳು ಗೆಲ್ಪುನಿ/ಗೆಂದುನಿ ; ಕೊತ ಗೆಲ್ವ್ ; ತೆಲುಗು ಗೆಲುಚು ; ಕುವಿ ಗೆಲ್ಹ ; ಕೊಲಾಮಿ ಗೆಲ್ಲ್ ; ನಾಯ್ಕಿ ಘಲ್ ; ತಮಿಳು : ವೆಲ್-, ವೆತು, ವೆಱು ; ಮಲೆಯಾಳ ವೆಲ್ಲುಕ.

ಱ

ಈ ಉದಾಹರಣೆಗಳನ್ನಿತ್ತು ಭ. ಕೃಷ್ಣಮೂರ್ತಿಯವರು,

> Excepting this one case, I have not come across any other evidence to set up initial Voiced stops as Phonemic in Proto Dravidian (PDr)[1]

ಈ ಉದಾಹರಣೆಯಲ್ಲಿ ಒಂದು ಸ್ವಾರಸ್ಯವಿದೆ. ಬೇರೆ ಎಲ್ಲ ದ್ರಾವಿಡ ಭಾಷೆಗಳಲ್ಲೂ ಪದದ ಆದಿಯಲ್ಲಿ ಘೋಷವರ್ಣವಾದ ಗಕಾರವಿದ್ದರೆ ತಮಿಳು ಮತ್ತು ಮಲೆಯಾಳದಲ್ಲಿ ಮಾತ್ರ ವಕಾರವಿದೆ. ಇದಕ್ಕೆ ಕಾರಣವೇನು ? ಹಾಗಾದರೆ ಅವುಗಳಲ್ಲಿ ಪ್ರಾಚೀನ ರೂಪ ಯಾವುದು ? ಗ-, ಮೊದಲೆ ? ಅಥವ ವ-, ಮೊದಲೆ ? ಈ ಪ್ರಶ್ನೆಗಳಿಗೆ ಉತ್ತರ ಹೇಳುವುದು ಬಹಳ ಕಷ್ಟ. ದ್ರಾವಿಡದಲ್ಲಿ, ಅದರಲ್ಲಿಯೂ ಕನ್ನಡದಲ್ಲಿ ವ/ಗ ಅಥವಾ ಗ/ವ ಗಳಿರುವ ಒಂದೇ ಪದದ ಎರಡೆರಡು ರೂಪಗಳು ಸಿಗುತ್ತವೆ. ಅವುಗಳಲ್ಲಿ ಯಾವುದು ಮೊದಲು ಮತ್ತು ಯಾವುದು ಅನಂತರ ಎಂದು ಹೇಳಲಾಗುವುದಿಲ್ಲ.

ಉದಾಹರಣೆಗಾಗಿ ಕೆಲವು ಜೋಡಿ ರೂಪಗಳನ್ನು ಇಲ್ಲಿ ಕೊಟ್ಟಿದೆ :

ತೊಗಲ್/ತೊವಲ್
ಒವರ್/ಒಗರ್
ತೊಗರಿ/ತೊವರಿ

ಆದುದರಿಂದ ಗ->ವ-ಆಗಿದ್ದಲ್ಲಿ, ಮೂಲ ದ್ರಾವಿಡದಲ್ಲಿ* ಗೆಲ್ ಇದ್ದಿರಬೇಕೆಂದೂ, ಅಥವಾ ವ->ಗ-ಆಗಿದ್ದಲ್ಲಿ ಮೂಲ ದ್ರಾವಿಡದಲ್ಲಿ* ವೆಲ್ ಇದ್ದಿರಬೇಕೆಂದೂ-ಹೇಳ ಬಹುದೇ ಹೊರತು, ಇದಕ್ಕಿಂತಲೂ ಹೆಚ್ಚಾಗಿ ಸಧ್ಯದಲ್ಲಿ ಮತ್ತೇನನ್ನೂ ಹೇಳುವಂತಿಲ್ಲ.

ಹೀಗಾಗಿ ಪೂರ್ವ ದ್ರಾವಿಡ ಪದದ ಆದಿಯಲ್ಲಿ ಕ, ತ, ಟ, ಪ—ಎಂಬ ಪರುಷ ವರ್ಣದ ಉಚ್ಚಾರಣೆ ಏನೇ ಮಾಡಿದರೂ ಅದು ಪದದ ಆದಿಯಲ್ಲಿಯೇ ಗ, ದ, ಡ, ಬ— ಎಂಬ ಸರಳ ವರ್ಣ (ದ ಉಚ್ಚಾರಣೆ) ಆಗುವುದಿಲ್ಲ ; ಆದರೆ ಅವು ಪದಮಧ್ಯದಲ್ಲಿ, ಅದೂ

[1] Page No. 3 of the Series of Papers Prepared by Bh. Krishnamurti at the Summer School of Linguistic held at Mysore in the Year 1958.

ಒಂಟಿಯಾಗಿ ನಿಂತಾಗ ಮಾತ್ರ ಸರಳವಾಗುವುದು ಸಾಧ್ಯ, ಸಹಜ. ಮೂಲ ದ್ರಾವಿಡ ಭಾಷೆಯ ವಿಚಾರವಾಗಿ ಇದಕ್ಕಿಂತಲೂ ಬೇರೆಯಾಗಿ ಹೇಳಲು ಹೆಚ್ಚಿನ ಆಧಾರಗಳು ದೊರೆತಿಲ್ಲ. ಆದುದರಿಂದ ಪ್ರಾಚೀನ ದ್ರಾವಿಡ ಭಾಷೆಯಲ್ಲಿ ಘೋಷವರ್ಣಗಳು (ಮತ್ತು ಸಂಯುಕ್ತ ವ್ಯಂಜನಗಳು) ಪದದ ಆದಿಯಲ್ಲಿ ನಿಲ್ಲುತ್ತಿರಲಿಲ್ಲ. ಅಲ್ಲದೆ ಅವು ಸ್ವತಂತ್ರ ಧ್ವನಿಮಾಗಳಾಗಿರಲಿಲ್ಲವೆಂದು ಹೇಳಬಹುದು.

ಘೋಷವರ್ಣಗಳು ಸ್ವತಂತ್ರ ಧ್ವನಿಮಾಗಳಾಗಿದ್ದುವೆಂದು ತೋರಿಸಲು ಆಧಾರ ಸಾಲದು. ಇರುವ ಒಂದೆರಡು ಆಧಾರಗಳ ಆಧಾರಗಳಲ್ಲಿ, ಅಪವಾದಗಳಂತಿವೆ. ತಮಿಳಿನಲ್ಲೇ ಅಲ್ಲ ಕನ್ನಡದಲ್ಲೂ ಕೂಡ ಮೂಲರೂಪಗಳಲ್ಲಿ ಕ ತ ಪ ಗಳೇ ಇದ್ದುವೆಂದು ಹೇಳಬಹುದು. ಆಗಲೇ ಹೇಳಿರುವಂತೆ ಸ್ಪರ್ಶ ವ್ಯಂಜನಗಳಾದ ಕ ತ ಪ–ಗಳು ಪದದ ಆದಿಯಲ್ಲೂ ಮತ್ತು ದ್ವಿತ್ವ (ಒತ್ತಕ್ಷರ)ವಾಗಿ ಪದಮಧ್ಯದಲ್ಲೂ ಬಂದಾಗ ಪರುಷ ಧ್ವನಿಗಳಾಗಿಯೇ ನಿಲ್ಲುತ್ತವೆ; ಆದರೆ ಸ್ವರಗಳ ನಡುವೆ ಈ ಧ್ವನಿಗಳು ಒಂಟಿಯಾಗಿ ಬಂದಾಗಲೂ, ಅಥವಾ ಅನುನಾಸಿಕ ಧ್ವನಿಯ ಅನಂತರ ಬಂದಾಗಲೂ ಸರಳಧ್ವನಿಗಳಾಗುತ್ತವೆ.[1] ಪದದ ನಡುವಿನ ಪರುಷ ವರ್ಣಗಳು ಘೋಷಧ್ವನಿಗಳಾದುದು ಕುಮಾರಿಲಭಟ್ಟನ (ಕ್ರಿ. ಶ. ೭ನೆಯ ಶತಮಾನದ) ಅನಂತರ ಆದ ವ್ಯತ್ಯಾಸವೆಂದು ಹೇಳಬಹುದು.[2]

[1] *L. S. I*, iv, 1906, p. 288.

[2] *The Intervocalic Consonants in Tamil*, *IA*, 1919, p. 183.

# ೞಕಾರದ ಚರಿತ್ರೆ : / ೞ್ /

ಸಂಸ್ಕೃತ ಭಾಷೆಯಲ್ಲಿ ಇಲ್ಲದ ಧ್ವನಿಮಾಗಳು ಕೆಲವು ದ್ರಾವಿಡ ಭಾಷೆಗಳಲ್ಲಿ (ಉದಾ: ಕನ್ನಡ ಭಾಷೆಯಲ್ಲಿ) ಇವೆಯೆಂದು ಈ ಹಿಂದೆಯೇ ಹಲವೆಡೆಗಳಲ್ಲಿ ಹೇಳಿದೆ. ಅಂಥ ಧ್ವನಿಮಾಗಳಲ್ಲಿ ಈ 'ೞ'ವೂ ಒಂದು. ಕನ್ನಡನುಡಿಯ ವ್ಯಾಕರಣವನ್ನು ಏಳು ಶತಮಾನಗಳ ಹಿಂದೆಯೇ ಬರೆದ ಕೇಶಿರಾಜ 'ಱಕಾರನುಂ ಱೞನುಂ ಕುಳನುಂ ಎ, ಒ, ಎಂಬಿವು ಸಂಸ್ಕೃತದೊಳಿಲ್ಲ ; ದೇಶೀಯಂಗಳಾಗಿ ಕನ್ನಡದೊಳೊಳವು'—ಎಂದು ಹೇಳಿದ್ದಾನೆ.[1] ಹಳಗನ್ನಡದಲ್ಲಿ ಮೂರು ಬಗೆಯ ಳಕಾರಗಳಿದ್ದುವು—ಕುಳ ಳಕಾರ (ಳ), ಕ್ಷಳ ಳಕಾರ (ಳ) ಮತ್ತು ಱೞ (ೞ). ಇವುಗಳಲ್ಲಿ ಕೊನೆಯದಾದ ಱ ೞವನ್ನೂ ಒಂದು ಬಗೆಯ ರೇಫವೆಂದು ಹೇಳಬಹುದು.

ಹಳಗನ್ನಡ ಕಾಲಕ್ಕೆ ಬಳಕೆಯಲ್ಲಿದ್ದ ೞಕಾರ ಘರ್ಷಧ್ವನಿಯಾಗಿದ್ದಿರಬಹುದು, ಈಗ ಆ ಧ್ವನಿಯೇ ಉಳಿದಿಲ್ಲ. ಇಂದು ಱ ಮತ್ತು ೞಗಳು ಕನ್ನಡ ನುಡಿಯಿಂದ ಅಳಿದುಹೋದ ಧ್ವನಿಮಾಗಳು. ಹಳಗನ್ನಡದಲ್ಲಿ ೞಕಾರದ ಪ್ರಯೋಗ ವಿಶೇಷವಾಗಿತ್ತು. ಅಂದು ಕುಳಯುಕ್ತ ಪದಗಳಿಗೂ ಱೞಯುಕ್ತ ಪದಗಳಿಗೂ ಬೇರೆ ಬೇರೆ ಅರ್ಥಗಳಿದ್ದುವು. ಅಂದರೆ ಒಂದೇ ಪದದಲ್ಲಿ ೞ ಧ್ವನಿಯ ಬದಲು ಳ ಧ್ವನಿಯನ್ನು (ವರ್ಣವನ್ನು) ಬಳಸಿದರೆ ಆಗ ಆ ಪದಗ ಅರ್ಥವೇ ಬದಲಾಗುತ್ತಿತ್ತು. ಹೀಗಾಗಿ ಹಳಗನ್ನಡದಲ್ಲಿ ಲ, ಳ, ೞ-ಗಳು ಬೇರೆ ಬೇರೆ ಧ್ವನಿಮಾಗಳಾಗಿದ್ದುವು : ಬಾಲೆ (=ಹುಡುಗಿ), ಬಾಳೆ (=ಮೀನು), ಬಾೞೆ (=ಬಾಳೆಹಣ್ಣು). ಈ ಉದಾಹರಣೆಗಳಲ್ಲಿ ಲ, ಳ, ೞ-ಧ್ವನಿಗಳಲ್ಲಿ ಇರುವ ಉಪಯುಕ್ತ ವ್ಯತ್ಯಾಸ (Distinctive difference) ವನ್ನು ನೋಡಬಹುದು.

ಈ ನಿದರ್ಶನಗಳನ್ನು ನೋಡಿ :

| | |
|---|---|
| ಅಳಿ-ದುಂಬಿ | ಅೞಿ-ಸಾಯಿ, ಕೆಡು, ಕೆಡಿಸು |
| ಆಳ್-ಸೇವಕ, ಮನುಷ್ಯ : | ಆೞ್-ಮುಳುಗು |
| ಉಳಿ-ಕೆತ್ತುವ ಉಳಿ : | ಉೞಿ-ಬಿಡು, ಮಿಗು |

[1] ಶಮದ, ೧೯೬೪, ಪು೭೨

ಎಳೆ (⌐ ಇಳಾ) – ಭೂಮಿ : ಎೞೆ–ಸೆಳೆ
ಕಳಿ–ಹಣ್ಣಾಗು : ಕೞಿ–ಸಾಯಿ
ತಳೆ–ಹೊಂದು : ತೞೆ–ಕೊಡೆ
ಪೊಳೆ–ಹೊಳೆ, ಮಿಂಚು : ಪೊೞೆ–ನದಿ
ಬಾಳ್–ಕತ್ತಿ : ಬಾೞ್–ಬದುಕು
ಬಾಳೆ–ಒಂದು ಜಾತಿ ಮೀನು : ಬಾೞೆ–ಬಾಳೆಯಗಿಡ ಇ.

ಈ ಪದಗಳಲ್ಲಿ ಧ್ವನಿವ್ಯತ್ಯಾಸದಿಂದ ಆಗುವ ಅರ್ಥವ್ಯತ್ಯಾಸವನ್ನು ಗುರುತಿಸಿ. 'ಬಾಳೆ' ಎಂಬುದು ಮಾಂಸಾಹಾರ; 'ಬಾೞೆ' ಶಾಕಾಹಾರ. ಆ ಕಾಲದಲ್ಲಿ ಮನೆಗೆ ಬಂದ ಅತಿಥಿ ಶಾಕಾಹಾರಿಯಾಗಿದ್ದು ಅವನು ಬಾೞೆ ಕೇಳಿದಾಗ ಬಾಳೆಯನ್ನು ತಂದು ಕೊಟ್ಟರೆ ಎಷ್ಟು ಆಭಾಸ. ಆದರೆ ಈ ಭಿನ್ನ ಧ್ವನಿಗಳು ಒಂದೇ ಧ್ವನಿಯಾಗಿ ಬೆರೆತು ಹೋಗಿವೆ, ಹೊಸಗನ್ನಡದಲ್ಲಿ. ತಮಿಳು ಭಾಷೆಯಲ್ಲಿ ಮಾತ್ರ ಇಂದಿಗೂ ಲ, ಳ, ೞ–ಗಳು ಬೇರೆ ಬೇರೆ ಧ್ವನಿಗಳಾಗಿವೆ; ವಾಲೈ=ಯೌವನ, ತಾರುಣ್ಯ; ವಾಳೈ=ಒಂದು ಜಾತಿಯ ಮೀನು (⌐ಕ. ಬಾಳೆ), ವಾೞೈ=ಬಾಳೆ ಹಣ್ಣು (⌐ಕ. ಬಾೞೆ).

ಮೂಲದ್ರಾವಿಡ ಭಾಷೆಯಲ್ಲಿ ಈ ೞ ಧ್ವನಿ ಇತ್ತೆಂಬುದರಲ್ಲಿ ಸಂದೇಹವಿಲ್ಲ, ಮತ್ತು ತಮಿಳು, ಮಲೆಯಾಳ ಭಾಷೆಗಳಲ್ಲಿ ಇಂದಿಗೂ ಇದು ಉಳಿದುಬಂದಿದೆ. ಕನ್ನಡದ ಮೊಟ್ಟ ಮೊದಲನೆಯ ಶಾಸನವಾದ ಹಲ್ಮಿಡಿ ಶಾಸನದಿಂದ ಮೊದಲುಗೊಂಡು ಹನ್ನೊಂದನೆಯ ಶತಮಾನದವರೆಗೂ ಈ ರಳ (<ಱೞ) ಅದು ಹೇಗೋ ಉಸಿರಾಡುತ್ತಿದ್ದು, ಹನ್ನೆರಡನೆಯ ಶತಮಾನದಿಂದ ಈಚೆಗೆ ನಶಿಸತೊಡಗಿತು.

> Ḷ remained unchanged during the 8th, and the 9th cent. A.D. but in the 10th cent.—about 930 A.D—L becomes r before consonants . . . About the year 930 A.D. words with ḷ in place of L appear. This indicates that Ḷ > r and Ḷ > ḷ about the same time.[1]

ಹೀಗೆ ೞಕಾರ ಒಂಬತ್ತನೆಯ ಶತಮಾನಕ್ಕೇ ರೇಫವಾಗಲು ತೊಡಗಿತ್ತು. ಅಲ್ಲಿಂದ ಮುಂದೆ ೞಕಾರ ಳಕಾರವೂ ಆಗಲಾರಂಭಿಸಿತು. ಹರಿಹರನ ಕಾಲಕ್ಕಾಗಲೆ ಈ ಧ್ವನಿಯ ವಿಚಾರದಲ್ಲಿ ಜನಮನದಲ್ಲೂ, ಕವಿಕಾವ್ಯಗಳಲ್ಲೂ ಗೊಂದಲ ಗಾಬರಿಗಳು ಪ್ರಾರಂಭವಾಗಿದ್ದುವು. ಜನಸಾಮಾನ್ಯರು ಈ ಧ್ವನಿಗಳನ್ನು ಸರಿಯಾಗಿ ಉಚ್ಚರಿಸದಿದ್ದುದು ಹಾಗಿರಲಿ, ಕವಿಗಳಿಗೇ ತೊಡಕು ತಲೆದೋರಿತು. ಆದುದರಿಂದ ಹರಿಹರಕವಿ :

ನೋಡುವೊಡೊಂದಕ್ಕರಮುದು
ಮಾಡುವೊಡುಚ್ಚರಣೆಗರಿದು ಮೂಱುಂ ತೆಱನಂ ।

[1] *A Grammar of Old Kanarese Inscriptions*, p. 31-62.

ಕೂಡೆ ಕವಿತತಿ ವಿಚಾರಿಸ :
ಬೇಡದೞುಂ ರಳಕುಳಕ್ಷಳಂಗಳನಿದೞಿಕೊಳ್ ॥[1]

ಎಂದು ಎಚ್ಚರಿಕೆ ಹೇಳಿದನು, ೞಕಾರದ ಭವಿಷ್ಯ ಏನಾಗುವುದೆಂಬುದನ್ನೂ ನುಡಿದನು.

ಮುಂದೆ ಕೇಶಿರಾಜನ ಕಾಲಕ್ಕೆ ಈ ಭ್ರಾಂತಿ ಅಧಿಕತರವಾಗಿ ತೋರಿತು, ಅನೇಕ ಕವಿಗಳಿಗೇ ಹೆಚ್ಚು ಕಡಮೆಯಾಗತೊಡಗಿತು. ಕೇಶಿರಾಜನ ಕಾಲಕ್ಕೆ ೞಕಾರದ ಉಚ್ಚಾರ ನಿಂತುಹೋಗಿ ಒಂದು ಶತಮಾನವಾಗಿತ್ತು. ಆದರೆ ಯಾವುದೇ ಒಂದು ವಿಶಿಷ್ಟ ಧ್ವನಿಯ ಉಚ್ಚಾರ ನಿಂತರೂ ಬರವಣಿಗೆಯಿಂದ ಅದರ ಪ್ರಯೋಗ ಬೇಗನೆ ತಪ್ಪುವುದಿಲ್ಲ; ಉಚ್ಚಾರ ಹೊಸದಾಗಿ ಕಾಣಿಸಿಕೊಂಡ ಧ್ವನಿ ಬರವಣಿಗೆಗೆ ಬೇಗನೆ ಇಳಿಯುವುದೂ ಇಲ್ಲ. ಹೀಗಾಗಿ ೞಕಾರದ ಉಚ್ಚಾರ ಜನತೆಯಿಂದ ತಪ್ಪಿಹೋಗಿದ್ದರೂ ವಿದ್ವಾಂಸರ ಬರವಣಿಗೆಯಿಂದ ದೂರವಾಗಿರಲಿಲ್ಲ. ಬರವಣಿಗೆಯಲ್ಲೂ ಈ ಅಕ್ಷರದ ಪ್ರಯೋಗ ಸರಿಯಾಗಿರದೆ ಅವ್ಯವಸ್ಥೆ ತಲೆದೋರಿತ್ತು. ಕೇಶಿರಾಜ ಈ ಅವ್ಯವಸ್ಥೆಯನ್ನು ಹೋಗಲಾಡಿಸಿ ಒಂದು ವ್ಯವಸ್ಥೆ ತರಲೂ, ೞಕಾರವನ್ನು ಉಳಿಸಲೂ ಪ್ರಯತ್ನಪಟ್ಟನು.

ಆದುದರಿಂದ ಕೇಶಿರಾಜ ಸುಮಾರು ಹತ್ತು ಹದಿನೈದು ಸೂತ್ರಗಳಲ್ಲಿ ಱೞಕುಳಕ್ಷಳಗಳ ವಿಚಾರವನ್ನು ಸುದೀರ್ಘವಾಗಿ ಪ್ರಸ್ತಾಪಿಸಬೇಕಾಯಿತು. ಅವನು ಟಕಾರ, ದಕಾರ, ಡಕಾರ, ತಕಾರ, ರೇಫೆ ಮತ್ತು ಕ್ಷಳ ಳಕಾರ—ಇವುಗಳಿಗೆ ಆದೇಶವಾಗಿ ಬಂದ ೞಕಾರದ ಪದಗಳನ್ನೆಲ್ಲಾ ಪಟ್ಟಿಮಾಡಿಕೊಡಲು ಪ್ರಯತ್ನಪಟ್ಟಿದ್ದಾನೆ.[2] ಈ ಧ್ವನಿಗಳನ್ನು ವರ್ಣಾವೃತ್ತಿಗೆ ಬಳಸಿಕೊಂಡರೂ ಪ್ರಾಸಯಮಕಗಳಿಗೆ ಬಳಸಬಾರದೆಂದು ಹೇಳಿದ್ದಾನೆ. ಜೊತೆಗೆ ೞಕಾರಾಂತ ಪದಗಳನ್ನೂ, ಒಂದು ಅರ್ಥದಿಂದ ಐದು ಅರ್ಥವಿರುವ ೞಕಾರಯುಕ್ತ ಪದಗಳನ್ನೂ ಕೊಟ್ಟಿದ್ದಾನೆ. ಕೇಶಿರಾಜನದು ೞಕಾರವನ್ನು ಉಳಿಸಿಕೊಳ್ಳುವ ಪಂಡಿತಪ್ರಿಯ ಪ್ರಯತ್ನ. ಆದರೆ ಅವನು ಎಷ್ಟೇ ಪರಿಪರಿಯಾಗಿ ಪ್ರಯತ್ನಪಟ್ಟರೂ, ೞ (ಮತ್ತು ಱ) ಕಾರವನ್ನು ಕನ್ನಡ ಭಾಷೆಯಲ್ಲಿ ಉಳಿಸಿಕೊಳ್ಳಲು ಅದೆಷ್ಟೇ ಶ್ರದ್ಧೆಯಿಂದ ಶ್ರಮಿಸಿದರೂ, ಕಾಲನಪ್ರವಾಹದ ಎದುರಾಗಿ ಈಜುವ ಕೇಶಿರಾಜ ಜಯಶೀಲನಾಗಲಿಲ್ಲ.

ಅವನಿಗಿಂತಲೂ ಮೂರು ನೂರು ವರುಷಗಳ ಹಿಂದೆ ಇದ್ದ ಪಂಪನೇ, ಱ-ರ ಮತ್ತು ೞ-ಳ ಗಳು ಪ್ರಾಸಸ್ಥಾನದಲ್ಲಿ ಬರಬಾರದೆಂಬ ನಿಯಮವನ್ನು ಉಲ್ಲಂಘಿಸಿದ್ದಾನೆ. ಪಂಪಭಾರತದಲ್ಲಿಯೇ ಏಳೆಂಟು ಕಡೆ ಈ ಪ್ರಾಸನಿಯಮೋಲ್ಲಂಘನೆಗೆ ನಿದರ್ಶನ ಸಿಗುತ್ತದೆ.[3] ಇದೆಲ್ಲವನ್ನೂ ಕಂಡ ರತ್ನಾಕರವರ್ಣಿ,

---

[1] ಎಸ್. ಜಿ. ನರಸಿಂಹಾಚಾರ್ಯ, ಗಿರಿಜಾಕಲ್ಯಾಣ, ೧-೩೨, ೧೮೦೫, ಪು. ೯

[2] ಶಮದ, ಮುಖ್ಯವಾಗಿ ೧೫, ಮತ್ತು ೨೮ರಿಂದ ೩೭ನೆಯ ಸೂತ್ರಗಳು.

[3] ಪಂಪಭಾರತ, ೫-೩೨, ೬-೪೬, ೯-೫೮, ೧೧-೨, ೧೦-೫, ೧೩-೭೪, ೬-೪೨

ರಳಕುಳ ಶಿಥಿಲ ಸಮಾಸ ಮಂತಾದವ
ರೊಳಗಿಲ್ಲಿ ಕೆಲವುಳ್ಳರುಂಟು।
ಕೆಲವಿಲ್ಲಾದರುವಿಲ್ಲವೇಕೆಂದರವರ ಕೋ
ಟಲೆಯೇಕೆ ಹಾಡುಗಬ್ಬದೊಳು ? ॥[1]

ಎಂದು ಧೈರ್ಯವಾಗಿ ಧಿಕ್ಕರಿಸಿ ರಳಕುಳಗಳ ನಿಯಮವನ್ನು ದೂರೀಕರಿಸಿದನು. ೞ-ಧ್ವನಿಮಾ ನಡುಗನ್ನಡ ಕಾಲಕ್ಕೇ ಕನ್ನಡಭಾಷೆಯಿಂದ ಕಣ್ಮರೆಯಾಗತೊಡಗಿ ತಾದರೂ, ಱ ಧ್ವನಿಮಾ ಮಾತ್ರ ಹಾಗೂ ಹೀಗೂ ಹೊಸಗನ್ನಡದ ಅರುಣೋದಯ ಕಾಲದವರೆಗೂ ವಿಸ್ವಾಂಸರ ಬರಹದಲ್ಲಾದರೂ ಉಳಿದುಬಂದಿತು. ಇಂದು ಹೊಸಗನ್ನಡ ದಲ್ಲಿ ಹೇಳಹೆಸರಿಲ್ಲದಂತೆ ೞ ಮತ್ತು ಱ-ಧ್ವನಿಗಳೆರಡೂ ಕಣ್ಮರೆಯಾಗಿವೆ. ಆದರೆ, ಆಗಲೇ ತಿಳಿಸಿದಂತೆ, ತಮಿಳು, ಮಲೆಯಾಳ ಬಡಗ ಮತ್ತು ತೊದ ಭಾಷೆಗಳಲ್ಲಿ ಇಂದಿಗೂ ಈ ಧ್ವನಿ ಉಳಿದುಕೊಂಡು ಬಂದಿದೆ.[2]

ಟಕಾರದ ಉಚ್ಚಾರವನ್ನು ಕುರಿತು ಕೇಶಿರಾಜ ಕೆಲವು ವಿವರಗಳನ್ನು ಕೊಟ್ಟಿದ್ದಾನೆ : 'ಡಕಾರಂ ಪುಟ್ಟುವತಾಣಮಂ ಬೆಟ್ಟಿತ್ತಾಗುಚ್ಚರಿಸೆ ಱಟವೆಸರ ಟಕಾರಂ ಪುಟ್ಟುಗುಂ . . . ಡಕಾರಂ ಮೂರ್ಧನ್ಯಂ, ಱಟಣದಡಱಳೀಕಸ್ಥಾನಿ . . .'[3] ಎಂದು ಅವನು ಹೇಳಿರು ವುದು ಪರಿಶೀಲನಯೋಗ್ಯವಾಗಿದೆ. ತಮಿಳು ಭಾಷೆಯ ಎರಡು ಕೃತಿಗಳಲ್ಲಿ—ಹಳೆಯ ವ್ಯಾಕರಣವಾದ ತೊಲಗಾಪ್ಪಿಯಮ್[4]ನಲ್ಲೂ ಮತ್ತು ನನ್ನೂಲ್[5] ಎಂಬ ಗ್ರಂಥ ದಲ್ಲೂ ಟಕಾರದ ಉಚ್ಚಾರವನ್ನು ಕುರಿತು ವಿವರಿಸಿದೆ. ಟಕಾರದ ಸ್ಥಾನ, ಬೆಳವಣಿಗೆ, ಬದಲಾವಣೆಗಳನ್ನು ಕುರಿತು ಡಾ|| ಭದ್ರಿರಾಜುಕೃಷ್ಣಮೂರ್ತಿಯವರು ಬಹು ಉಪ ಯುಕ್ತ ಲೇಖನವನ್ನು ಬರೆದಿದ್ದಾರೆ.[6] ಹಳಗನ್ನಡದ ಕಾಲಕ್ಕೆ ಅಥವಾ ಅದಕ್ಕೂ ಹಿಂದೆ ಕನ್ನಡಿಗರು ಟಕಾರವನ್ನು ಹೇಗೆ ಉಚ್ಚರಿಸುತ್ತಿದ್ದರೆಂಬುದಕ್ಕೆ ಆಧಾರಗಳು ಬೇರೆ ಯಾವುವೂ ಇಲ್ಲವಾದರೂ ಕೇಶಿರಾಜನ ಕಾಲಕ್ಕೆ ಡಕಾರವನ್ನು ಒತ್ತಿ ಹೇಳುವುದರ ಮೂಲಕ ಟಕಾರ ಧ್ವನಿಯನ್ನು ಹೊರಡಿಸುತ್ತಿದ್ದರೆಂದು ಹೇಳಿದ್ದಾನೆ. /ಟ್/ ಧ್ವನಿಮಾ ಘೋಷ ಪ್ರತಿವೇಷ್ಟಿತ ಘರ್ಷಧ್ವನಿಯೆಂದು ಆಧಾರಗಳಿಂದ ಹೇಳ ಬಹುದು.

---

1 ಭರತೇಶವೈಭವ ಸಂಗ್ರಹ, ಆಸ್ಥಾನ ಸಂಧಿ, ಪು. ೫

2 L.V.R. Aiyer, *Tamil I, Journal of Oriental Research*, Madras, Vol. 9, 140.

3 ಶಮದ, ಸೂತ್ರ೨೪ರ ವೃತ್ತಿ

4 ತೊಲಗಾಪ್ಪಿಯಮ್, ಸೂತ್ರ ೨೧ ಮತ್ತು ೯೫

5 ನನ್ನೂಲ್, ಪದ್ಯ ೮೩

6 Bh. Krishnamurti, *Proto Dravidian*, Z, IL, TJV, I P. 259-294. ಇಂಗ್ಲಿಷಿನಲ್ಲಿ ಟ್ ಧ್ವನಿಯನ್ನು Ẓ ಎಂದೂ, ṛ ಎಂದೂ, ḷ ಎಂದೂ ಮೂರುನಾಲ್ಕು ವಿಧವಾಗಿ ಬರೆದಿದ್ದಾರೆ.

ೞಕಾರ ಕನ್ನಡ ಭಾಷೆಯಿಂದ ಕಾಲಕ್ರಮೇಣ ದೂರ ಸರಿಯಿತು. ಅದು ಹಲವು ತೆರನಾಗಿ ಉಳಿದ ಧ್ವನಿಗಳಲ್ಲಿ ಕರಗಿಹೋಯಿತು. ಆದರ ವಿಕಾಸದ ವಿವರವನ್ನು ಸಂಗ್ರಹವಾಗಿ ಮುಂದೆ ಅವಲೋಕಿಸಿದೆ. ೞಕಾರ ಪ್ರಾರಂಭದಲ್ಲಿ ಪ್ರಧಾನವಾಗಿ ಇರ್ತೆರನಾಗಿ ಕವಲೊಡೆದಂತೆ ಕಾಣುತ್ತದೆ. ೞಕಾರ ಒಂದುಕಡೆ ಳಕಾರವಾಗಿಯೂ, ಇನ್ನೊಂದು ಕಡೆ ರಕಾರವಾಗಿಯೂ ಮಾರ್ಪಟ್ಟಿರುವುದನ್ನು ಗುರುತಿಸಬಹುದು.

ೞ > | ಳ : ನೆೞಲ್ > ನೆಳಲು > ನೆರಳು
ಮೞಲ್ > ಮಳಲು > ಮರಳು
ಪೊಗೞ್ > ಪೊಗಳ್ > ಹೊಗಳು

| ರ : ಕೞ್ತಿ > ಕರ್ತಿ (> ಕತ್ತಿ)
ಎೞ್ದು > ಎರ್ದು (> ಎದ್ದು)
ಎೞ್ಬು > ಎರ್ಬು (> ಎಬ್ಬು)

ಅಂದರೆ ೞಕಾರ ಬೇರೊಂದು ವ್ಯಂಜನದೊಡನೆ ಕೂಡಿ ಸಂಯುಕ್ತಾಕ್ಷರವಾಗಿದ್ದಾಗ ವ್ಯಂಜನದ ಹಿಂದೆ ಇದ್ದಾಗ—ಉದಾ: ಗೞ್ದ, ಕೞ್ತಿ; ಎೞ್ತು, ಮಿೞ್ತು—ಅದು ರಕಾರವಾಗಿ ಪರಿವರ್ತಿತವಾಯಿತು. ಮತ್ತು ಆ ರೇಫೆಯೂ ಮುಂದೆ ಬೇರೆ ಧ್ವನಿಯಾಯಿತು. ಇಲ್ಲವೇ ಆಯಾ ಪದದ ಕೊನೆಯ ವ್ಯಂಜನಾಕ್ಷರ ದ್ವಿತ್ವವಾಯಿತು. ಸ್ವರಗಳ ನಡುವೆ ಅಥವಾ ಪದಾಂತ್ಯದಲ್ಲಿ ಈ ೞಕಾರ ಬಂದಾಗ ಅದು ಕುಳ ಳಕಾರವಾಯಿತು. ಯಾವ ಯಾವ ಧ್ವನಿಗಳ ಪರಿಸರದಲ್ಲಿ ಬಂದಾಗ ೞಕಾರ ಯಾವ ಯಾವ ವ್ಯತ್ಯಾಸ ಹೊಂದಿದೆಯೆಂಬುದನ್ನು ನೋಡಬೇಕು. ಆಧುನಿಕ ಧ್ವನಿವಿಜ್ಞಾನದ ದೃಷ್ಟಿಯಿಂದ ೞಕಾರ ಧ್ವನಿಯ ಪರಿವರ್ತನೆಗಳನ್ನು ಹೀಗೆ ತೋರಿಸಬಹುದು :

ೞ್ > | ಳ್ : ಸೞ್ಸ > ಸಳಸ : ನೆೞಲ್ > ನೆಳಲು
-ೞ್- > -ಳ್- : ಮೞೆ > ಮಳೆ
| ರ್ : -ೞ್ವ- > ರ್ವ- : ನೆಗೞ್ಪಿನ್ > ನೆಗರ್ಪಿನ್ : ಎೞ್ದನು > ಎರ್ದನು.

"ೞ, ಱಗಳು ಬಿಡಿಯಾಗಿದ್ದಾಗ ಳ–ರ ಗಳಾಗಿ ಪರಿಣಮಿಸಿದುವು; ಒತ್ತಿನಲ್ಲಿದ್ದಾಗ ವಿಶ್ಲೇಷವಾದುವು, ಇಲ್ಲ ಮುಂದಿನ ವ್ಯಂಜನದ ರೂಪಕ್ಕೆ ತಿರುಗಿದುವು."[1] ಆದರೆ ಮೂಲದ್ರಾವಿಡ ಭಾಷೆಯ ೞ ಧ್ವನಿಮಾ ತೆಲುಗು ಭಾಷೆಯಲ್ಲಿ ಡ ಧ್ವನಿಮಾ ಆಗಿರುವುದು ತೋರುತ್ತದೆ.

ಉದಾ : ಕೋೞಿ > ಕೋಳಿ (ಕ) > ಕೋಡಿ (ತೆ). ಇದರಂತೆ ತೆಲುಗು ಭಾಷೆಯ

1 ಬಿ. ಎಂ. ಶ್ರೀ, ಕ ಸಾ ಪ ಪ, ೨೭–೧, ಪು. ೫೦

'ಡಿಗು' ಎಂಬ ಪದವೂ ಇಟಿೀಗು > ಟಿೀಗು > ಡಿಗು > ದಿಗು—ಎಂದು ಆಗಿರಬಹುದು. ಅಂದರೆ ತೆಲುಗು ಭಾಷೆಯಲ್ಲಿ ಎರಡು ಸ್ವರಗಳ ನಡುವೆ ಬಂದ ಟ ಧ್ವನಿ ಡ ಧ್ವನಿಯಾಗಿದೆ ; ಆದರೆ ಈ ಟ ಧ್ವನಿ ವ್ಯಂಜನ ಸಮೇತ ಬಂದಾಗ ಅಲ್ಲಿಯೂ ರೇಫವಾಗುತ್ತದೆ. ತೆಲುಗು ಭಾಷೆಯಲ್ಲಿ ಟದ ಪರಿವರ್ತನೆ ಇಂತಿದೆ :

ಸಟಿಸ > ಸಡಸ

ವಟಿವ > ವರೇಫವ

ಇದಕ್ಕೆ ಇತರ ಕೆಲವು ಉದಾಹರಣೆಗಳು :

ಪಟಿ > ಪ್ರಾತ (ತೆ) : ಪೊಟಿಲ್ > ಪ್ರೋಲು (ತೆ)

ಕುಟಿವಿ > ಕೊಟಿವಿ > ಕ್ರೋವಿ (ತೆ) > ಕೋವಿ (ಪೆಟ್ಲಂಗೋವಿ, ಪಿಳ್ಳಂಗೋವಿ)

ಪೋಟಿದು > | (ತೆ) ಪೊಟ್ಟಿ > ಪ್ರೊದ್ದು > ಪೊದ್ದು > ಪದ್ದು (ಗ್ರಾಮ್ಯ)
| (ಕ) ಪೊಟ್ಟಿ > ಪೊತ್ತು > ಹೊತ್ತು.

ಈ ವಿಧವಾಗಿ ಯಾವುದೇ ಭಾಷೆಯಲ್ಲಿ ಉಂಟಾಗುವ ಒಂದು ಧ್ವನಿಯ ಪರಿವರ್ತನೆ ಆ ಭಾಷೆಯ ಒಟ್ಟು ರಚನೆಯ ಮೇಲೆ ವಿಶೇಷವಾದ ಪರಿಣಾಮವನ್ನು ಉಂಟುಮಾಡುತ್ತದೆ. ಹಿಂದೆ ಒಂದು ಕಾಲಕ್ಕೆ ಕನ್ನಡ ಭಾಷೆಯಲ್ಲಿ ಇದ್ದ ಟಕಾರ ಮತ್ತು ಱಕಾರಗಳು ಪ್ರತ್ಯೇಕ ಧ್ವನಿಗಳಾಗಿ ಇಂದಿನ ಕನ್ನಡದಲ್ಲಿ ಉಳಿಯಲೇ ಇಲ್ಲ. ಅವೆರಡೂ ಧ್ವನಿಗಳು ಅವುಗಳಂತೆಯೇ ಇದ್ದ ಇನ್ನೆರಡು ಧ್ವನಿಗಳಲ್ಲಿ ಸೇರಿಹೋದುವು. ಈ ರೀತಿಯಲ್ಲಿ ಒಂದು ಧ್ವನಿ ಮತ್ತೊಂದು ಧ್ವನಿಯಲ್ಲಿ ಒಂದಾಗಿ ಸೇರಿಹೋಗುವುದಕ್ಕೆ ಧ್ವನ್ಯೈಕ್ಯ (Phonemic merger) ಎಂದು ಹೇಳುವರು. ಟಕಾರ ಳಕಾರದಲ್ಲೂ ಬೆರೆತುಹೋದುದನ್ನು ಧ್ವನ್ಯೈಕ್ಯಕ್ಕೆ ಉತ್ತಮ ಉದಾಹರಣೆಯಾಗಿ ಹೇಳಬಹುದು.

ಪದಮಧ್ಯೆ –ಟ್‌– > –ಳ್ : ನೆಟಿಲ್ > ನೆಳಲು, ಮಟಿಲ್ > ಮಳಲು

ಪದಾಂತ್ಯ–ಟ್ > –ಳ್: ತುಪ್ಪುಟ್ > ತುಪ್ಪುಳು ; ತಿಪ್ಪುಟ್ > ತಿಪ್ಪುಳು

ಹೀಗೆ ಭಿನ್ನ ಧ್ವನಿಮಾಗಳಾಗಿದ್ದ (distinct and different phonemes) ಱ – ರ ಮತ್ತು ಟ – ಳ ಗಳು ಒಂದಾಗಿ ಬೆರೆತುಹೋದುದರಿಂದ—ಅಂದರೆ ಧ್ವನ್ಯೈಕ್ಯಗೊಂಡುದರಿಂದ, ಭಿನ್ನೋಚ್ಚಾರದಲ್ಲಿದ್ದ ಪದಗಳು ಏಕೋಚ್ಚಾರವಾದುವು. ಮೊದಲಲ್ಲಿ ವೈದೃಶ್ಯ (Contrast)ದಿಂದ ಇದ್ದ ಪದಗಳು ಸನಾಮಕ (Homonyam)ಪದಗಳಾದುವು.

ಉದಾಹರಣೆ :

ಬಾಟಿ | > ಬಾಳೆ     ಬಾಟ್ | > ಬಾಳ್ > ಬಾಳು
ಬಾಳೆ |            ಬಾಳ್ |

ಮತ್ತೆ ಕೆಲವು ಕಡೆಗಳಲ್ಲಿ ೞಕಾರ ಣಕಾರವಾಗಿರುವುದೂ ಕಾಣುತ್ತದೆ.

ಗೞೆ > ಗಣೆ
ಪೂೞು > ಹೊೞು > ಹೂಣು
ಮುೞುಂಗು > ಮುಣುಗು

ಆದರೆ ಈ ೞಕಾರ ನೇರವಾಗಿ ಣಕಾರವಾಗಿರಲಿಲ್ಲವೆಂಬುದನ್ನು ಗಮನಿಸಬೇಕು. ೞ > ಳ > ಣ—ಆಗಿದೆ. ಕುಳ ಳಕಾರ ಣಕಾರವಾದುದಕ್ಕಂತೂ ಹತ್ತಾರು ನಿದರ್ಶನಗಳಿವೆ. ಹೀಗಾಗಿ ೞಕಾರ ಹಲವು ಧ್ವನಿಗಳಾಗಿ ಹಂಚಿಹೋಯಿತು.

ದ್ರಾವಿಡ ಭಾಷೆಗಳಲ್ಲಿ ಈ ೞ ಎಂಬ ಧ್ವನಿ ವಿವಿಧ ಧ್ವನಿಗಳಾಗಿ ಹರಡಿದ ಪರಿ ಇಂತಿದೆ :

| | | |
|---|---|---|
| ೞ್ > | > ಣ | ಪೂೞು > ಹೂಣು |
| | > ಜ | ನೂೞಿಲ್ > ನೂಜಿಲ್ (ತ) |
| | > ಡ | ತಾೞಿಪಾಳ್ > ತಾಡಪಾಳ್ |
| | > ಳ | ಉೞಿ > ಉಳಿ |
| | > ರ | ತವೆಟ್ಡಿಲ್ > ತವಿರ್ದಲ್ |
| | > ಯ | ಒೞಿದಲ್ > ಒಯ್ದಲ್ > ಒಯ್ಯಲ್ (ತ) |
| | > ø | ಉೞುೞ್ > ಉಮಿ (ತ) |
| | | ಪೋೞುದು > ಪೋದು |
| | | ಆಗೞುತ್ತ > ಆಗತೆ |

ೞವೂ ಒಂದು ಬಗೆಯ ರೇಫವೆನ್ನಬಹುದೆಂದು ಆಗಲೇ ಹೇಳಿದೆ. ಬಹುಶಃ ಈ ೞ ರೇಫವಾಗಿದ್ದುದರಿಂದಲೇ ಹಳಗನ್ನಡದಿಂದ ನಡುಗನ್ನಡಕ್ಕೆ ತಿರುಗುವ ಕಾಲದಲ್ಲಿ ಅನೇಕ ಕಡೆಗಳಲ್ಲಿ ೞಕಾರ ರೇಫವಾಯಿತು, ಉಚ್ಚಾರದಲ್ಲಿಯೂ ರೇಫದ ಉಚ್ಚಾರ ಪಡೆಯಿತು. ಇದಕ್ಕೆ ಕೇಶಿರಾಜನ ಹೇಳಿಕೆಗಳೇ ಸಾಕ್ಷಿ ಹೇಳುತ್ತವೆ. ಇಂದು ೞಕಾರದ ಉಚ್ಚಾರ ಉಳಿದುಬಂದಿರುವ ತಮಿಳು ಭಾಷೆಯಲ್ಲೂ, ತಮಿಳು ನಾಡಿನ ಎಲ್ಲೆಡೆಯಲ್ಲೂ ಒಂದೇ ವಿಧವಾಗಿ ಉಚ್ಚಾರವಾಗುತ್ತಿಲ್ಲ. ಕೆಲವು ಕಡೆ ಷ ದಂತೆ, ಇನ್ನು ಕೆಲವೆಡೆ ಳ ದಂತೆ, ಇಂಗ್ಲೀಷಿನ Ẓ ದಂತೆ, Ẓh ದಂತೆಯೂ ಉಚ್ಚಾರವಾಗುತ್ತಿದೆ. ಬೇರೆ ಬೇರೆ ದ್ರಾವಿಡ ಭಾಷೆಗಳಲ್ಲಿ, ಚಾಕ್ಷುಷ ಭಾಷೆಗಳಲ್ಲಿ, ೞ ಧ್ವನಿಮಾ ಪಡೆದ ಪರಿವರ್ತನೆಗಳು ಇಂತಿವೆ :

| | | |
|---|---|---|
| ೞ್ > | ಮಲೆಯಾಳ— | : -ಯ-,-ವ- (ಕೆಲವು ಕಡೆ) |
| | ಕನ್ನಡ — | : -ಳ-,-ಳ |
| | ತೆಲುಗು — | : -ಡ-,-ಡ |
| | ತಮಿಳು — | : -ಳ- (ಕೆಲವು ಕಡೆ) |

ಇದರಿಂದ ಎಲ್ಲ ದ್ರಾವಿಡ ಭಾಷೆಗಳಲ್ಲೂ ೞ ಧ್ವನಿಯೂ ಇದ್ದಿತಾದರೂ ಅದರ ಉಚ್ಚಾರ ಒಂದೇ ತೆರನಾಗಿ ಇದ್ದಂತೆ ತೋರುವುದಿಲ್ಲ. ೞಮೂರ್ಧನ್ಯವಾದರೂ ಇದಕ್ಕೆ ಘರ್ಷ ಧ್ವನಿಯ ಗುಣವೂ ಇದೆ. ೞ ಕಾರ ಮೂರ್ಧನ್ಯ ವ್ಯಂಜನ ಧ್ವನಿ. ೞಕಾರದಿಂದ ಪದಗಳು ಪ್ರಾರಂಭವಾಗುವುದಿಲ್ಲ; ಪದಾಂತ್ಯದಲ್ಲಿ ಅಥವಾ ಪದಮಧ್ಯದಲ್ಲಿ ಮಾತ್ರ ಪ್ರಯೋಗವಾಗುತ್ತದೆ. ೞಕಾರ ಮೂಲ ದ್ರಾವಿಡ ಭಾಷೆಯ ಕಾಲದಿಂದಲೂ ಬೆಳೆದು ಬಂದಿರುವ ಮತ್ತು ಇಂದಿಗೂ ಒಂದೆರಡು ಭಾಷೆಗಳಲ್ಲಿ ಉಳಿದಿರುವ, ದ್ರಾವಿಡ ಪರಿವಾರದ ಒಂದು ವಿಶಿಷ್ಟ ಧ್ವನಿ.

> ḷ and ṟ are sounds peculiar to the Dravidian Languages alone. ḻ is formed by curling back the tongue and pronouncing the English letter r; e.g. in the word *farm* in a rather liquid manner.[1]

ಎಂದು ಒಬ್ಬ ವಿದ್ವಾಂಸರು ವಿವರಿಸಿದ್ದಾರೆ.



[1] *A Primer of Dravidian Phonology*, K. V. Subbayya, IA, 1909, p.194

೪೩

# ಪಕಾರದ ಚರಿತ್ರೆ : / ಪ್ - /

ದ್ರಾವಿಡ ಭಾಷೆಗಳಲ್ಲಿ ಪಕಾರ ಮೂಲದ್ರಾವಿಡ ಭಾಷೆಯಲ್ಲಿದ್ದ ಧ್ವನಿ. ಇದು ಕನ್ನಡ ಭಾಷೆಯ ದೃಷ್ಟಿಯಿಂದ ವಿಶೇಷವಾಗಿ ಗಮನಿಸಬೇಕಾದ ಧ್ವನಿ. ಬಹು ಹಳೆಯ ಧ್ವನಿಯಾದ ಈ 'ಪ' ಎಲ್ಲ ದ್ರಾವಿಡ ಭಾಷೆಗಳಲ್ಲೂ ಇಂದಿನವರೆಗೂ ಪಕಾರವಾಗಿಯೇ ಉಳಿದು ಬಂದಿದೆ, ಕನ್ನಡ ಭಾಷೆಯೊಂದನ್ನು ಬಿಟ್ಟು. ಕನ್ನಡ ಭಾಷೆಯಲ್ಲಿ ಮಾತ್ರ ಎರಡು ಶತಮಾನಗಳ ಪರಿಮಿತ ಕಾಲದಲ್ಲಿ ಪಕಾರ ಪೂರ್ಣವಾಗಿ ಹಕಾರವಾಯಿತು. ಕನ್ನಡ ಭಾಷೆಯಲ್ಲಿ,

> Up till the end of 9th century A.D. p. is preserved. In the 10th century forms with h-in place of p-begin to appear in all parts of the Kanarese area.[1]

ಕ್ರಿ. ಪೂ. ದ ಅಥವಾ ಕ್ರಿ. ಶ. ದ ಆದಿಯ ಮೂರು–ನಾಲ್ಕು ಶತಮಾನಗಳವರೆಗೂ ಕನ್ನಡ ಭಾಷೆಯ ಸ್ವರೂಪ ನಮಗೆ ತಿಳಿಯದು. ಆದರೆ ಕ್ರಿ. ಶ. ಮೂರು ಮತ್ತು ನಾಲ್ಕನೆಯ ಶತಮಾನದ ಕೃತಿಗಳಿರಬಹುದೆಂದು ಹೇಳುವ ತಮಿಳು ಗ್ರಂಥಗಳಲ್ಲಿ ಪಕಾರ ಪ್ರಯೋಗವಾಗಿದೆ.

ಕನ್ನಡ ಭಾಷೆಯ ಮೊಟ್ಟ ಮೊದಲನೆಯ ಶಾಸನ[illegible]ದ ಕ್ರಿ.ಶ. ೪೫೦ರ ಸುಮಾರಿನ ಪಲ್ಮಿಡಿ ಶಾಸನದಿಂದ ಮೊದಲುಗೊಂಡು ಹ[illegible]ಾಷೆಯ[illegible]ನದ ಮಧ್ಯಭಾಗದವರೆಗೂ, ಶಾಸನ ಸಾಹಿತ್ಯದಿಂದ ಸಾಹಿತ್ಯ ಕೃತಿಗಳವರೆಗ, ಎಲ್ಲಿಯೂ ಪಕಾರ ಹಕಾರವಾಗಿಲ್ಲ. ಕವಿರಾಜಮಾರ್ಗ, ಪಂಪ–ರನ್ನರ ಕೃತಿಗಳು, ಮತ್ತು ಈ ಹತ್ತನೆಯ ಶತಮಾನದ ಇತರ ಕೃತಿಗಳಲ್ಲೂ ಪಕಾರದ ಪರಿವರ್ತನೆ ಆಗಿಲ್ಲ.

> The phoneme p continues to exist unaffected during the 8th and 9th cent. while the change of p to h (in intial position) is attested for the fist time during the 10th cent. cf. hàḍuvonge> pàḍuvonge.[2]

---

[1] *Granmar of Old Kanarese Inscriptions*, p. 2

[2] *Historical Grammar of Old Kannada*, p. 107

ಪಕಾರ ಹಕಾರವಾದ ಮೊಟ್ಟಮೊದಲ ನಿದರ್ಶನ ಅಥವಾ ದರ್ಶನ ನಮಗೆ ಆಗುವುದು ಹತ್ತನೆಯ ಶತಮಾನದ ಶಾಸನದಲ್ಲಿ. ಕ್ರಿ.ಶ. ೯೫೧ರ ಶಾಸನವೊಂದರಲ್ಲಿ[1] ಪಾಡುವಂಗೆ ಎಂಬ ಪದ ಹಾಡುವಂಗೆ ಎಂದಾಗಿದೆ.

ಇವರಂತೆ ಪನ್ನಿರ್ವರು > ಹನ್ನಿರ್ವರು . . . ಇತ್ಯಾದಿ ರೂಪಗಳು ಇಲ್ಲಿಂದ ಮುಂದೆ ದೊರೆತಿವೆ. ಈ ಶತಮಾನದಿಂದ ಮುಂದೆ ಹನ್ನೊಂದು ಮತ್ತು ಹನ್ನೆರಡನೆಯ ಶತಮಾನ ಪಕಾರ ಸಂಪೂರ್ಣವಾಗಿ ಹಕಾರವಾಯಿತೆಂದು ಹೇಳಬಹುದು. ಇಲ್ಲಿ 'ಬಹುದು'— ಎಂಬ ಅನುಮಾನ ಸೇರಿಸಲು ಕಾರಣವೇನೆಂದರೆ ಎಲ್ಲ ಪದಗಳಲ್ಲೂ ಈ ಕಾಲದಲ್ಲಿ ಪ > ಹ ಆಗಿದ್ದರೂ, ಸುಮಾರು ಆರೇಳು ಪದಗಳು ಅನುಮಾನಾಸ್ಪದವಾಗಿದ್ದು ಈ ನಿಯಮಕ್ಕೆ ಹೊರತಾಗಿ ಅಥವಾ ಅಪವಾದವಾಗಿ ನಿಂತಂತೆ ತೋರುತ್ತವೆ. ಆದರೆ ಈ ಆರೇಳು ಪದಗಳಿಗೂ ಬೇರೆ ಕಾರಣಗಳನ್ನು ಹುಡುಕಿದರೆ ಬಹುಶಃ ಈ ಧ್ವನಿಪರಿವರ್ತನೆ, ನವವೈಯಾಕರಣರು ಹೇಳುವಂತೆ, ಸರ್ವವ್ಯಾಪಿಯಾಗಿ ಸಾಗಿದೆಯೆನ್ನಬಹುದು.

ಪಕಾರ ಕನ್ನಡದಲ್ಲಿ ಹಕಾರವಾಗಲು ಕಾರಣವೇನು ?—ಎಂಬ ಪ್ರಶ್ನೆಯಿಟ್ಟು ಕೊಂಡು ವಿದ್ವಾಂಸರು ಉತ್ತರ ಹುಡುಕಲು ಪ್ರಯತ್ನಪಟ್ಟಿದ್ದಾರೆ. ಕೆಲವರು ಅನ್ಯ ಭಾಷೆಯ ಸಂಪರ್ಕವೇ ಈ ಧ್ವನಿಪರಿವರ್ತನೆಗೆ ಕಾರಣವೆಂದು ಊಹಿಸಿದ್ದಾರೆ. "ದ್ರಾವಿಡ ಭಾಷೆಗಳಲ್ಲಿ ಪಕಾರವು ವಿಶೇಷವಾಗಿ ರೂಢಿಯಲ್ಲಿರುವುದರಿಂದ ಕನ್ನಡ ಜನರಿಗೆ ಸಂಸ್ಕೃತ ಶಬ್ದಗಳ ಪಕಾರವನ್ನು ಹಕಾರವಾಗಿ ಉಚ್ಚರಿಸುವ ಅವಶ್ಯಕತೆ ಇರಲಿಲ್ಲ. ಆದಕಾರಣ ಆ ತದ್ಭವರೂಪಗಳು [ಪಿಶುನ > ಹಿಸುಣ : ಗೋಪುರ > ಗೋಹುರ, ಪುರ > ಹುರ ಇತ್ಯಾದಿ] ಪ್ರಾಕೃತಭಾಷೆಯಿಂದ ಉಂಟಾದುವು ಎಂದು ನಿರ್ಧರಿಸಬಹುದು. ಆ ಪ್ರಾಕೃತ ಭಾಷಾಸಂಸರ್ಗದಿಂದ ಕನ್ನಡ ಭಾಷೆಯಲ್ಲಿಯೂ ಪಕಾರವು ಹಕಾರವಾಗುವ ಪರಿಸ್ಥಿತಿ ಯುಂಟಾಯಿತೆಂದು ಊಹಿಸಬೇಕಾಗಿದೆ."[2]

ನೃಪ > ನೃಹ, ಪುರ > ಹುರ, ತೈಲಪ > ತೈಲಹ ರೂಪಗಳು ಶಾಸನದಲ್ಲಿವೆ. ಇದನ್ನು ಒಪ್ಪಿಕೊಂಡಮೇಲೆ ಇದರ ಮುಂದಿನ ಪ್ರಶ್ನೆ ಪಕಾರ ಹಕಾರವಾಗಿ ಹೇಗೆ ಪರಿವರ್ತನೆ ಪಡೆಯಿತೆಂಬುದು. ಭಾಷಾವಿಜ್ಞಾನಿಗಳು ಈ ಪರಿವರ್ತನೆಯನ್ನು ಕುರಿತು ವಿವೇಚಿಸುತ್ತಾ ಪಕಾರ ಫಕಾರವಾಗಿ—ಅಂದರೆ ಅಲ್ಪಪ್ರಾಣವರ್ಣ ಮಹಾಪ್ರಾಣವರ್ಣವಾಗಿ— ಉಚ್ಚಾರಹೊಂದಿ ತರುವಾಯ ಆ ಫಕಾರ ಹಕಾರವಾಗಿ ಪರಿಣಮಿಸಿರಬಹುದೆಂದು ಹೇಳಿದ್ದಾರೆ. "ಅಲ್ಪಪ್ರಾಣಗಳನ್ನು ಮಹಾಪ್ರಾಣಗಳಾಗಿ ಉಚ್ಚರಿಸುವುದು ಅಸಂಭವ ವಲ್ಲ. ಉದಾ : ಭತ್ತ, ಧೊರೆ, ಭಾವಿ, ಥಳಕು. ಮಹಾ ಪ್ರಾಣಾಕ್ಷರಗಳು ಹಕಾರ ವಾಗಿ ಉಳಿಯುವುದೂ ಉಂಟೆಂದು ಶಬ್ದಶಾಸ್ತ್ರದಿಂದ (Phonetics) ಗೊತ್ತಾಗುತ್ತದೆ. ಉದಾಹರಣೆಗೆ ಸಂಸ್ಕೃತದ ಹಂಸ ಎಂಬ ಶಬ್ದವು ಘಂಸ ಎಂಬುದರ ಈಚಿನ ರೂಪ

1 *South Indian Inscriptions*, IX-i, No. 60, p. 34

2 ಕನ್ನಡ ಕೈಪಿಡಿ, ಸಂಪುಟ–೧, ೪ನೆಯ ಭಾಗ, ತೃತೀಯ ಮುದ್ರಣ ೧೯೫೫, ಪುಟ. ೫೨೦

ವೆಂತಲೂ ಘಂಸದಲ್ಲಿರುವ ಗಕಾರವು ಗೂಸ್ (goose) ಎಂಬ ಮತ್ತೊಂದು ಆರ್ಯ ಭಾಷೆಯಲ್ಲಿರುತ್ತದೆಂದೂ ಶಬ್ದಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ."[1]

ಈ ವಿವರಣೆ ಸಮರ್ಪಕವಾಗಿರುವಂತೆ ತೋರುತ್ತದೆ. ಏಕೆಂದರೆ ಜಗತ್ತಿನ ಇನ್ನೂ ಇತರೆ ಒಂದೆರಡು ಭಾಷೆಗಳಲ್ಲಿ ಈ ಪರಿವರ್ತನೆಯನ್ನು ಪೋಷಿಸುವ ಆಧಾರಗಳು ಇವೆ. ಉದಾಹರಣೆಗೆ ಲ್ಯಾಟಿನ್ ಭಾಷೆಯ 'ಫ್' ಗೆ ಸ್ಪ್ಯಾನಿಷ್ ಭಾಷೆಯಲ್ಲಿ 'ಹ' ವರ್ಣ ಇದೆ; ಲ್ಯಾಟಿನ್ ಭಾಷೆಯ 'ಪ' ಗೆ ಜರ್ಮನ್ ಭಾಷೆಯಲ್ಲಿ 'ಫ' ಧ್ವನಿಯಿದೆ.

A similar change of p into h appears in Armenian—e.g. foot is in Armenian het (for Pet), and father, hayr (for payr).[2]

ಇದೇ ತೆರನಾಗಿ ಚೀನೀ ಭಾಷೆಯಲ್ಲಿನ ಪಕಾರ ಜಪಾನೀ ಭಾಷೆಯಲ್ಲಿ ಮೊದಲು ಫ ಆಗಿ ಅನಂತರ ಹ ಆಗುತ್ತದೆ. ತುಳುಭಾಷೆಯಲ್ಲೂ ಕೆಲವೆಡೆಗಳಲ್ಲಿ ಪ > ಹ ಆಗಿದ್ದರೂ (ಬಹುಶಃ ಕನ್ನಡದ ಪ್ರಭಾವ), ಅಲ್ಲಿ ಪ > ಹ ಆಗುವುದು ಸಾರ್ವತ್ರಿಕವಾಗಿ ನಡೆಯುವ ನಿಯಮವೇನೂ ಅಲ್ಲ. ಇದರಂತೆ ಕನ್ನಡದಲ್ಲಿ ಪ್ > *ಫ್ > ಹ್ ಆಗಿರುವುದು ಸಾಧ್ಯವಿದೆ.[3] ಅಲ್ಲದೆ ತೊದ ಭಾಷೆಯಲ್ಲಿ ಫ [ಪೂಫ್ = ಹುಳ] ಧ್ವನಿ ಇದೆ.

ಆದುದರಿಂದ ಪಕಾರವನ್ನು ಮೊದಲು ಫಕಾರವಾಗಿ ಉಚ್ಚರಿಸುತ್ತಾ ಅನಂತರ ಅದು ಹಕಾರವಾಗಿ ವ್ಯತ್ಯಾಸಗೊಂಡಿರಬಹುದೆಂಬ ಊಹೆ ಸಮಂಜಸವಾಗಿರಬಹುದು. ಇದು ಸಂಸ್ಕೃತ-ಪ್ರಾಕೃತಗಳ ಸಂಪರ್ಕದಿಂದ ಆಗಿರಲಿ ಇಲ್ಲದಿರಲಿ, ಕನ್ನಡದ ಪ್ರಭಾವದಿಂದ ಮರಾಠಿಯಲ್ಲೂ ಕೆಲವು ಕಡೆ, ಅದರಲ್ಲಿಯೂ ಪದದ ಆದಿಯಲ್ಲಿ ಹಕಾರ ಬಂದಿದೆ. ಕನ್ನಡ ಭಾಷೆಯ ನೆರೆಯ ಭಾಷೆಯಾದ ಮರಾಠಿ ಭಾಷೆ ಹಲವು ವಿಧದಲ್ಲಿ ಕನ್ನಡದ ಪ್ರಭಾವಕ್ಕೆ ಒಳಗಾಗಿದೆ. ಅದರಲ್ಲಿ ಈ ಹಕಾರ ಪ್ರಾರಂಭವೂ ಒಂದು. ಉದಾಹರಣೆಗೆ ಸಂಸ್ಕೃತದ ಭೂತ-ಸ್ ಎಂಬುದು ಮರಾಠಿಯಲ್ಲಿ ಹೋತೋ-ನ್ (cf. ಪ್ರಾಕೃತ. ಹೋಮಿ) ಎಂದಾಗಿದೆ.

ಆದರೆ ಕೆ. ವಿ. ಸುಬ್ಬಯ್ಯ ಎಂಬ ವಿದ್ವಾಂಸ ಈ ಧ್ವನಿಪರಿವರ್ತನೆಯನ್ನು ಕುರಿತು ಬರೆಯುತ್ತಾ, ಕನ್ನಡ ಭಾಷೆಯಲ್ಲಿ ಆದ ವ್ಯತ್ಯಾಸದ ಪ್ರಭಾವದಿಂದಾಗಿ ಕೆಲವೆಡೆ ಮರಾಠಿಯಲ್ಲೂ ಹೀಗಾಯಿತೆಂಬ ವಿವರಣೆಗೆ ತದ್ವಿರುದ್ಧವಾದ ಮಾತು ನುಡಿದಿರುವುದು ಸ್ವಾರಸ್ಯವಾಗಿದೆ ;

p>h in Mid. and New Canarese, and also in New Tuḷu—This change seems to be due to the influence of Marâthi, the

[1] ಅದೇ—[ಬಿ. ಎಂ. ಶ್ರೀ ಮತ್ತು ತ. ಸು. ವೆಂಕಣ್ಣಯ್ಯ]

[2] *ACGOOLS*, 1056, p. 157

[3] Edwin H. Tuttle, *Dravidian Developments, Language Monogrphs*, 1930, p. 11

neighbour of Canarese and Tuḷu on the north. In Marāthi, the aspirated stops become h ; e.g bhūtas 'I was' became hōtoō.[1]

ಈತನ ವಿವರಣೆ ಅಸಮರ್ಪಕವೆಂದು ತೋರುತ್ತದೆ. ಏಕೆಂದರೆ ಕನ್ನಡದಲ್ಲಿ ಪ>ಹ ಆದುದಕ್ಕೆ ಒಂದು ಐತಿಹಾಸಿಕ ಹಿನ್ನೆಲೆ, ಬೆಳವಣಿಗೆ ಇದೆ; ಮರಾಠಿಯಲ್ಲಿ ಕನ್ನಡದಲ್ಲಿ ಇರುವಷ್ಟು ವ್ಯಾಪಕವಾದ ಪರಿವರ್ತನೆ ಕಾಣುವುದಿಲ್ಲ. ಆದುದರಿಂದ ಪ್ರಭಾವಿತ ಭಾಷೆ ಮರಾಠಿಯೇ ಹೊರತು ಕನ್ನಡವಲ್ಲ.

ಇನ್ನು ಈ ಪ>ಹ ಆದದ್ದು ಕೆಲವು ಕಡೆ ಹ ಬಿದ್ದುಹೋಗಿ ಅದರಮೇಲಿನ ಸ್ವರಮಾತ್ರ ಉಳಿಯಿತು.

ಪ>*ಫ>ಹ>$\phi$

ಉದಾಹರಣೆ :

ಪಗಲು>ಹಗಲು>ಅಗಲು
ಪತ್ತಿ>ಹತ್ತಿ>ಅತ್ತಿ
ಪಾವು>ಹಾವು>ಆವು
ಪುಣ್ಣು>ಹುಣ್ಣು>ಉಣ್ಣು

ಪೂರ್ವದ್ರಾವಿಡ *ಪ್–, ಅದರ ಮುಂದೆ ಸ್ವರಗಳಲ್ಲಿ ಯಾವುದೇ ಸ್ವರ ಇದ್ದರೂ ಎಲ್ಲ ದ್ರಾವಿಡ ಭಾಷೆಗಳಲ್ಲೂ ಹತ್ತನೆಯ ಶತಮಾನದ ಅನಂತರದ ಕನ್ನಡದ ಹೊರತು, ಪ್– ಆಗೇ ಉಳಿದಿದೆ. ಎಲ್ಲೋ ಒಂದೆರಡು ಕಡೆಗಳಲ್ಲಿ ಮಾತ್ರ ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಪ್–ಇರುವಲ್ಲಿ ಮಧ್ಯದ್ರಾವಿಡ ಭಾಷೆಗಳಾದ ಕುಈ ಮತ್ತು ಗೋಂಡಿ ಭಾಷೆಗಳಲ್ಲಿ ವ್– ಇರುವುದು ಕಾಣುತ್ತದೆ.

ಉದಾಹರಣೆ :

ಕ. ತೆ. ಪಾಡು (>ಕ. ಹಾಡು)—ಗೋಂ. ವಾಜ್ :
ಕ. ತೆ. ಪಿಂಡು (>ಕ. ಹಿಂಡು)—ಕುಈ. ವ್ಜೀಸ.

ಸಂಸ್ಕೃತ ಕನ್ನಡಗಳಲ್ಲಿ ವ್ಯಾಕರಣವನ್ನು ಬರೆದ ನಾಗವರ್ಮ ಮತ್ತು ಕನ್ನಡ ಭಾಷೆಯ ವರ್ಣನಾತ್ಮಕ ವ್ಯಾಕರಣವನ್ನು ಬರೆದ ಕೇಶಿರಾಜನ ಕಾಲಕ್ಕಾಗಲೇ ಪ>ಹ ಆಗಿ ಹೋಗಿತ್ತು. ಅಷ್ಟೇ ಅಲ್ಲದೆ ಈ ವ್ಯತ್ಯಾಸವನ್ನು ಕುರಿತು ಕೇಶಿರಾಜನೇ ಒಂದು ಕಡೆ:

ಸಂದ ಪಕಾರಕ್ಕೆ ಹಕಾ
ರಂ ದೊರೆಕೊಳ್ಗುಂ ವಿಕಲ್ಪದಿಂ ಸಂಯೋಗಂ।

[1] *A Primer Dravidian Phonology*, IA, 1909, p. 197

ಸಂದಿಸಿದೊಡೆ ದುಷ್ಕರಮದು
ಸುಂದರಮಾ ದೇಸಿಯಿಂದಮೆಂಬರ್ ವಿಬುಧರ್ ॥[1]

ಎಂದು ಸ್ಪಷ್ಟವಾಗಿ ನುಡಿದಿರುವುದಲ್ಲದೆ ಮತ್ತೆ ಈ ಸೂತ್ರದ ವೃತ್ತಿಯಲ್ಲಿ 'ಇದು ದೇಶಿಯೊಳ್ ಚೆಲ್ವು' ಎಂದು ಹೆಮ್ಮೆಯಿಂದ ಹೇಳಿದ್ದಾನೆ. ಕನ್ನಡ ಭಾಷೆಯ ಹಿರಿಮೆ ಗರಿಮೆಗಳನ್ನೆಲ್ಲಾ ಸೇರಿಸಿ ಪಟ್ಟಮಾಡಿಕೊಟ್ಟಂತಿರುವ ಶಬ್ದಮಣಿದರ್ಪಣದ ಕಡೆಯ ವೃತ್ತ ಪದ್ಯದಲ್ಲಿ '. . . ವಮುಹಪಭೇದದಿಂ . . . ಅರಿದಲ್ತೆ ಕನ್ನಡಂ'[2] ಎಂದು ಹಾಡಿ ಹೊಗಳಿದ್ದಾನೆ.

ಈ ಪಕಾರ ಹಕಾರವಾಗಿ ಆದ ವ್ಯತ್ಯಾಸ ಹಲವು ಬಗೆಯಲ್ಲಿ, ಹಲವು ಘಟ್ಟಗಳಲ್ಲಿ ನಡೆದಿದೆ. ಇದನ್ನು ಸಂಕ್ಷಿಪ್ತವಾಗಿ ಸಮೀಕ್ಷಿಸುವ ದೃಷ್ಟಿಯಿಂದ ಹೀಗೆ ಸಂಗ್ರಹಿಸಬಹುದು :

(೧) ಪದದ ಆದಿಯ ಪಕಾರ ಹಕಾರವಾಯಿತು : ಪ- > ಹ-

ಉದಾಹರಣೆ ;

ಪಟ್ಟಣ > ಹಟ್ಟಣ > ಹಟ್ಣ : ಪಾದಿ > ಹಾದಿ :
ಪಾಯ್ಕು > ಹಾಕು : ಪೋಳಿಗೆ > ಹೋಳಿಗೆ
ಪಣ > ಹಣ : ಪತ್ತು > ಹತ್ತು : ಪೆಸರ್ > ಹೆಸರು
ಪಾವು > ಹಾವು : ಪಂದಿ > ಹಂದಿ : ಪಣ್ಣು > ಹಣ್ಣು
ಪೊನ್ನು > ಹೊನ್ನು : ಪೊಲ > ಹೊಲ : ಪೋಗಿ > ಹೋಗಿ.
ಪೇರ್ೞೆ > ಪೇರಳೆ > ಹೇರಳೆ > ಹೆರಳೆ

(೨) ಪದದ ಅಂತ್ಯದ ಪಕಾರ ಹಕಾರವಾಯಿತು :—ಪ > -ಹ

ಉದಾಹರಣೆ :

ಅಂತಪ್ಪ > ಅಂತಹ : ಇಂತಪ್ಪ > ಇಂತಹ
ಎಂತಪ್ಪ > ಎಂತಹ.

(೩) ಪದಮಧ್ಯದ ಪಕಾರ ಬಹುವಾಗಿ ವಕಾರವಾಯಿತು (ಸಮಾಸಗಳಲ್ಲಿ)
-ಪ- > -ವ-(ಮಕಾರವೂ ಬಂದಿದೆ—ಸೂತ್ರ ೩೦೮)

ಉದಾಹರಣೆ :

ಕರ್ಣಪೂರಂ > ಕನ್ನವುರಂ : ಹಂಸಪಿಂಡ > ಅಂಚೆವಿಂಡು

---

[1] ಶಬ್ದಮಣಿದರ್ಪಣ, ಎರಡನೆಯ ಮುದ್ರಣ, ೧೯೪೩, ಸೂತ್ರ ೧೭೦, ಪು. ೧೭೬. ಇದಕ್ಕೂ ಒಂದು ಶತಮಾನ ಮುಂಚೆ ನಾಗವರ್ಮ ಕರ್ನಾಟಕ ಭಾಷಾ ಭೂಷಣದಲ್ಲೇ ೧೧೪ನೆಯ ಸೂತ್ರದಲ್ಲಿ ಪೇ ಹೋ ವಾ ಎಂದು ನುಡಿದಿದ್ದಾನೆ.

[2] ಅದೇ., ಪದ್ಯ, ೩೪೨, ಪು. ೩೬೦

ಪದಮಧ್ಯ-ಪ->-ಹ-: ಗೋಪುರ>ಗೋಹುರ
ರತ್ನಪಟ್ಟಿಕೆ>ರನ್ನವಟ್ಟಿಗೆ.[1]

(೪) -ಪ>-ವ : ಇಱುಂಪೆ>ಇಱುಪೆ>ಇರುವೆ

ಹೀಗೆ ಸಾರ್ವತ್ರಿಕವಾಗಿ ಪಕಾರ ಹಕಾರವಾಯಿತೆನ್ನಬಹುದು. ಈ ಧ್ವನಿಪರಿವರ್ತನೆ ಎಲ್ಲಿಯವರೆಗೆ ಹೋಯಿತೆಂದರೆ ಸಂಸ್ಕೃತದಿಂದ ಬಂದ ಪದಗಳಿಗೂ, ತದ್ಭವಗಳಿಗೂ ಈ ನಿಯಮ ಅನ್ವಯವಾಯಿತು. ಬಡಗ ಭಾಷೆಯಲ್ಲೂ ಪಕಾರ ಹಕಾರವಾದ ಕೆಲವು ಶಬ್ದಗಳಿವೆ. ತುಳು ಭಾಷೆಯಲ್ಲೂ ಹಕಾರದ ಶಬ್ದಗಳಿವೆ. ಈ ಎರಡೂ ಭಾಷೆಯಲ್ಲಿ ಹೀಗಾಗಿರುವುದು ಕನ್ನಡದ ಪ್ರಭಾವದಿಂದ ಬಹುಶಃ ದ್ವಿತ್ವ ಪಕಾರ ಮತ್ತು ಬಿಂದುವಿನೊಡನೆ, ದೀರ್ಘಸ್ವರದೊಡನೆ ಬಂದ ಪಕಾರ ಇಂದು ಪಕಾರವಾಗಿಯೇ ಉಳಿದಿವೆ. ಕೇಶಿರಾಜನೇ ದ್ವಿತ್ವದೊಳ್ ಪಿರಿದುಂ ಪಕಾರಕ್ಕೆ ಹಕಾರವಿಲ್ಲ ಎಂದೂ ಸಂಯೋಗಂ ಸಂದಿಸಿದೊಡೆ ದುಷ್ಕರಮದು ಎಂದೂ ಹೇಳಿದ್ದಾನೆ. ಇದಕ್ಕೆ ಕೆಲವಾರು ಉದಾಹರಣೆಗಳನ್ನಿತ್ತು ಅನಂತರ ವಿವರಣೆಗೆ ತೊಡಗೋಣ :

ಅಪ್ಪು, ಉಪ್ಪು, ಉಪ್ಪಿಟ್ಟು, ಒಪ್ಪು, ಕಪ್ಪು, ಕಪ್ಪೆ, ತಪ್ಪು,
ತೊಪ್ಪೆ, ಜೆಪ್ಪು, ಮುಪ್ಪು, ಸೊಪ್ಪು, ಒಪ್ಪೊತ್ತು, ಇಪ್ಪೊತ್ತು, ಮೂರೊಪ್ಪತ್ತು
ಕಂಪು, ಜೋಂಪು, ತಂಪು, ಪೆಂಪು, ಸೊಂಪು, ತೋಪು . . . ಇತ್ಯಾದಿ.

ಆದರೆ ಕೆಲವೊಮ್ಮೆ ಪದಮಧ್ಯದ ದ್ವಿತ್ವ ಪಕಾರವು ಹ್ರಸ್ವ ಪಕಾರವಾಗಿ ಅಲ್ಲಿಂದ ಮುಂದೆ ಅದು ಹಕಾರವಾಗಿದೆ, ಪ>ಫ>*ಹ ಆದಂತೆ.

ಕಾಪ್ಪು>ಕಾಪು>ಕಾಹು
ಅಂತಪ್ಪ>*ಅಂತಪ>ಅಂತಹ . . . ಇತ್ಯಾದಿ.
∴-ಪ್ಪ>-ಪ>-ಹ.

ಇಲ್ಲಿ ಒಂದೆರಡು ಸಂದೇಹಗಳಿವೆ. ಈ ಕೆಳಗಿನ ಮೂರು ವಾಕ್ಯಗಳನ್ನು ಗಮನಿಸಿ :

(೧) ಪಾರ್ವರ ಪಿಳ್ಳೆಯ ಪೋದ ಜೀವಮುಂ[2]
(೨) ಎನ್ನಪಾಡೆನಗಿರಲಿ ಅದರ ಹಾಡನ್ನಷ್ಟೆ ನೀಡುವೆನು ರಸಿಕ ನಿನಗೆ ![3]
(೩) ಈ ಹಾಲಿನಲ್ಲಿ ನನ್ನ ಪಾಲು ಎಷ್ಟು ?
(೪) ಪ್>ಹ್>ವ್ ಕೆಲವು ಕಡೆ ಆಗಿದೆ. ಆವೊತ್ತು, ಈವೊತ್ತು, ಯಾವತ್ತು ಇವು ಕ್ರಮವಾಗಿ ಆಪೊೞ್ತು (ಆ ಹೊತ್ತು) ಈ ಪೊೞ್ತು (ಈ ಹೊತ್ತು) ಏಪೊೞ್ತು (ಯಾಹೊತ್ತು) ಎಂಬ ರೂಪಗಳಿಂದ ಬಂದಿವೆ.

---

1 ಇದಕ್ಕೆ ಸಂಬಂಧಪಟ್ಟಂತೆ ಕೇಶಿರಾಜನ ೨೮೨ ಮತ್ತು ೩೦೭ನೆಯ ಸೂತ್ರ ನೋಡಿ
2 ಪಂಪಭಾರತ, ೬-೨
3 ದ. ರಾ. ಬೇಂದ್ರೆ

ಈ ಮೇಲಿನ ಉದಾಹರಣೆಗಳನ್ನು ಒಂದೊಂದಾಗಿ ಪರಿಶೀಲಿಸೋಣ. ಮೊದಲ ನಿದರ್ಶನವಾದ ಪಂಪನ ಪದ್ಯದಲ್ಲಿ ಬರುವ ಪಾರ್ವ>ಪಾರುವ>ಹಾರುವ, ಪೋದ> ಹೋದ ಆಗಿದ್ದರೂ ಆ ಪಿಳ್ಳೆ ಪದದ ವಿಚಾರವೇನು ? ಇಂದಿಗೂ ಕೋಳಿ ಪಿಳ್ಳೆ, ಚಿಳ್ಳೆ ಪಿಳ್ಳೆ, ಪಿಳ್‌ಜುಟ್ಟು ಇತ್ಯಾದಿ ಪದಗಳಲ್ಲಿ ಪಿಳ್ಳೆ ಎಂದೇ ಇದೆಯಲ್ಲಾ ? ಎಂಬ ಅನುಮಾನ ಗಳು ಮೂಡುತ್ತವೆ. ಆದರೆ ಈ ಪಿಳ್ಳೆಯೂ ಹಿಳ್ಳೆ ಎಂದು, ಪಕಾರ ಹಕಾರ ಆದ ಕಾಲಕ್ಕೆ ಆಗಿತ್ತೆಂದು ಹೇಳಲು ಶಾಸನದ ಆಧಾರಗಳಿವೆ. ಇಂದಿಗೂ ಕನ್ನಡದ ಒಂದು ಉಪ ಭಾಷೆಯಾದ ಹವ್ಯಕರ ಕನ್ನಡದಲ್ಲಿ ಹಿಳ್ಳೆ ಎಂಬ ಪದ ಉಳಿದುಬಂದಿರುವುದೇ ಇದಕ್ಕೆ ಬಲವಾದ ಆಧಾರವಾಗಿದೆ. ಅನಂತರ ಈ ಪಿಳ್ಳೆ ಬೇರೆ ಭಾಷೆಯಿಂದ ಬಂದಿರಬೇಕು. ಇಲ್ಲಿ ಎರಡು ರೂಪಗಳಿವೆ ಪಿಳ್ಳೆ > ಹಿಳ್ಳೆ; ಬಾಳೆ ಹಿಳ್ಳೆ=ಬಾಳೆಕಂದು ಪಕಾರ ಹಕಾರವಾಗಿ ಮತ್ತೆ ಪಕಾರಕ್ಕೆ ಹೋದ ಶಬ್ದಗಳೂ ಇವೆ. ಕಣ್ಣಪಾಪೆ> ಕಣ್ಣಹಾಪೆ> ಕಣ್ಣಪಾಪೆ.

ಎರಡನೆಯ ದೃಷ್ಟಾಂತದಲ್ಲಿ ಪಾಡು, ಹಾಡು ಎಂಬ ಎರಡು ಪದಗಳನ್ನು ಪರಿಶೀಲಿ ಸುವುದಾದರೆ ಹಾಡು ಎಂಬುದು ಹಳಗನ್ನಡದ ಪಾಡು (=ಸಂಗೀತ) ಎಂಬ ಪದದಿಂದ ಬಂದಿದೆ: ಪಾಡು (=ಸ್ಥಿತಿ) ಎಂಬ ಪದ ಬೇರೆ ಇದೆ, ಬಹುಶಃ ಈ ಪದವೂ ಅನ್ಯ ಭಾಷೆಯಿಂದಲೇ ಬಂದಿರಬೇಕು. ಏಕೆಂದರೆ ಗಡಿಯಲ್ಲಿರುವ ತೆಲುಗು, ತಮಿಳು, ಮಲೆಯಾಳ ಭಾಷೆಗಳ ಸಂಪರ್ಕ ಕನ್ನಡಕ್ಕೆ ಹೊಸದೇನೂ ಅಲ್ಲ. ಅಂತೂ ಇದು ವಿಚಾರಕ್ಕೆ ಅರ್ಹವಾದ ಶಬ್ದ. ಇನ್ನು ಮೂರನೆಯ ದೃಷ್ಟಾಂತ ವಾಕ್ಯ. ಅದರಲ್ಲಿ ಪಾಲು, ಹಾಲು ಎಂಬ ಎರಡು ಪದಗಳಲ್ಲಿ ಹಾಲು (=ಹಸುವಿನ ಹಾಲು ಇತ್ಯಾದಿ) ಎಂಬುದು ಹಳಗನ್ನಡದ ಪಾಲ್ ಪದದಿಂದ ಪಕಾರ ಹಕಾರವಾಗಿ ಬಂದ ಪದ. ಇನ್ನೊಂದು ಪದವಾದ ಪಾಲು (=ಹಂಚಿಕೆ) ಎಂಬುದು ಹಳಗನ್ನಡದಿಂದ ಬಂದ ಪದವಿರಲಾರದು. ಹಂಚು, ಹಂಚಿಕೆ, ಭಾಗ ಎಂಬ ಅರ್ಥದಲ್ಲಿ ಹಳಗನ್ನಡ ಕಾಲಕ್ಕೆ ಪಚ್ಚುಕೊಡು, ಪಸುಗೆ ಎಂಬ ಪದಗಳಿದ್ದುವೇ ಹೊರತು ಪಾಲು ಎಂಬ ಪದ ಪ್ರಯೋಗವಾಗುತ್ತಿರಲಿಲ್ಲ. ಆದುದರಿಂದ ಈ ಪಾಲು ಹೊಸದಾಗಿ ಸೇರಿದ ಪದ. ಇದರಂತೆ ಪೋಲಿ, ಪೋಕರಿ, ಪುಕಾರು, ಪೆಟ್ಟಿಗೆ, ಪಟಾರಿ, ಪಟ್ಲಂಗೋವಿ, ಪಿಳ್ಳಂ ಗಾಯುಂಡೆ, ಪಿಟೀಲು, ಪಿಚಕಾರಿ ಮುಂತಾದ ಶಬ್ದಗಳು.

ಇಲ್ಲಿ ಕಾಣಬರುವ ಸಂದೇಹಗಳನ್ನು ಮುಂದಿಟ್ಟು, ಪಕಾರ ಹಕಾರವಾದ ಆ ಧ್ವನಿ ಪರಿವರ್ತನೆ ಸಂಪೂರ್ಣವಾಗಿ ನಡೆಯಿತೆ ? ಅಥವಾ ಇದಕ್ಕೆ ಕೆಲವು ಅಪವಾದಗಳು ಉಂಟೆ ? ಎಂಬ ಪ್ರಶ್ನೆಗಳನ್ನು ಮುಂದಿಟ್ಟರು. ಭಾಷಾವಿಜ್ಞಾನದ ಪ್ರಮುಖ ಶಾಖೆ ಯಾದ ಧ್ವನಿವಿಜ್ಞಾನದಲ್ಲಿ ಈ ಧ್ವನಿಪರಿವರ್ತನೆಯ ನಿರ್ಣಯ ಒಂದು ದೊಡ್ಡ ವಿಷಯ. ಕಾಲ್ಡ್‌ವೆಲ್ಲನ ಕಾಲಕ್ಕೆ ಈ ಧ್ವನಿಪರಿವರ್ತನೆಗೆ [ಪ>ಹ] ಅಪವಾದಗಳು ಉಂಟೆಂಬ ನಂಬಿಕೆ ಇನ್ನೂ ಇತ್ತು. ಆದರೆ ಈಚೆಗೆ ವಿದ್ವಾಂಸರು ನಡಸಿರುವ ಸಂಶೋ ಧನೆಗಳ ಫಲವಾಗಿ ಆ ಅನುಮಾನ ಅಸಾಧುವೆಂಬ ಹೇಳಿಕೆ ಹೊರಟಿದೆ. ಧ್ವನಿ ನಿಯಮಗಳು ಅಬಾಧಿತ ಮತ್ತು ಸರ್ವವ್ಯಾಪಕ. ಅಲ್ಲಲ್ಲಿ ಕಾಣಿಸಬಹುದಾದ ಮತ್ತು

ಧ್ವನಿ ನಿಯಮಕ್ಕೆ ಅಪವಾದದಂತೆ ತೋರುವ ರೂಪಗಳಿಗೆ ಬೇರೆ ಬೇರೆ ಕಾರಣಗಳನ್ನು ಹುಡುಕಬೇಕು. ಅಂದರೆ ಧ್ವನಿ ನಿಯಮಕ್ಕೆ ಹೊರತಾಗಿ ನಿಂತಂತೆ ತೋರುವ ಆ ಪದಗಳು ಪರದೇಶದ, ಪರಭಾಷೆಯ ಪದಗಳೆ ? ಅಥವಾ ಧ್ವನಿಪರಿವರ್ತನೆಯ ಕಾಲ ಮುಗಿದಮೇಲೆ ಬಂದಿರಬಹುದೆ ?—ಎಂಬುದನ್ನು ಪರಿಶೀಲಿಸಬೇಕು. ಏಕೆಂದರೆ ಪ್ರತಿಯೊಂದು ಧ್ವನಿಪರಿವರ್ತನೆಯೂ ಯಾವುದೋ ಒಂದು ನಿಗದಿಯಾದ ಕಾಲದಲ್ಲಿ ಮತ್ತು ಗೊತ್ತಾದ ಪರಿಸರದಲ್ಲಿ ಮಾತ್ರ ನಡೆದಿರುತ್ತದೆಯೆಂಬುದನ್ನೂ ಮುಖ್ಯವಾಗಿ ಗಮನಿಸಬೇಕು.

ಕನ್ನಡ ಭಾಷೆಯಲ್ಲಿ ಪಕಾರ ಹಕಾರವಾದ ಈ ವ್ಯತ್ಯಾಸದ ಮತ್ತೊಂದು ವೈಶಿಷ್ಟ್ಯವೆಂದರೆ ಱ ಮತ್ತು ೞ ಎಂಬ ಎರಡು ಹಳಗನ್ನಡ ಕಾಲಕ್ಕೆ ಇದ್ದ ಧ್ವನಿಮಾಗಳಂತೆ 'ಪ' ಧ್ವನಿ ಕನ್ನಡದಿಂದ ಹೊರಟುಹೋಗದಿರುವುದು. ಪ>ಹ ಆಯಿತು ನಿಜ. ಆದರೆ ಪ-ಹ ಗಳೆರಡೂ ಶಾಶ್ವತವಾಗಿ ನಿಂತುಬಿಟ್ಟವೆ. ಪಕಾರ ಹಕಾರವಾದುದರಿಂದ ಸಾಮಾನ್ಯ ಜನತೆಗೆ ಅನುಕೂಲಕ್ಕಿಂತಲೂ ಅನನುಕೂಲವೇ ಹೆಚ್ಚಾಯಿತು. ಜನಸಾಮಾನ್ಯರ ಬಾಯಲ್ಲಿ ಪಕಾರದಷ್ಟು ಸುಲಭವಾಗಿ ಹಕಾರ ಉಚ್ಚಾರವಾಗುವುದಿಲ್ಲ. ಸಂ. ಹರಿತಾಲ>ಅರಿದಾಳ. ಆದುದರಿಂದಲೇ ಹಕಾರದ ಬದಲು ಅಕಾರ ಅವರ ಬಾಯಲ್ಲಿ ಬರುವುದು.

೧೫೨೧ರ ಶಾಸನವೊಂದರಲ್ಲಿ ಹೋದರ್ (<ಪೋ-) ಎಂಬುದಕ್ಕೆ ಓದರ್ ಎಂಬ ರೂಪ ಪ್ರಯೋಗವಾಗಿದೆ. ಸಂಸ್ಕೃತದಿಂದ ಬಂದ ಹಂಸಶಬ್ದ ಕನ್ನಡದಲ್ಲಿ ಅಂಚೆ ಎಂದಾದುದನ್ನು ನೆನಪಿಗೆ ತಂದುಕೊಳ್ಳಬಹುದು. ಆದುದರಿಂದ ಪ>ಹ ದ ವಿಚಾರವನ್ನು ಮೂರು ಹಂತಗಳಲ್ಲಿ ನೋಡಬಹುದು :

೧. ಶಿಷ್ಟ ವ್ಯಾವಹಾರಿಕ ರೂಪ
೨. ಶಿಷ್ಟೇತರ ವ್ಯಾವಹಾರಿಕ ರೂಪ
೩. ಬರವಣಿಗೆ ರೂಪ.

ಇದಕ್ಕೆ ಚಾರಿತ್ರಿಕ ಕಾರಣಗಳೂ ಇವೆ. ಹಕಾರ ದ್ರಾವಿಡದ ಧ್ವನಿಯಲ್ಲ ; ಹ-ಧ್ವನಿ ತಮಿಳು, ಮಲೆಯಾಳ ಭಾಷೆಗಳಲ್ಲಿ ಇಲ್ಲ.

> I belive, indeed, that this sound was originally foreign to the Dravidian Languages, and that it crept into Telugu and Canarese through the influence of Sanskrit.[1]

ಎಂದು ಕಾಲ್ಡ್‌ವೆಲ್ ಸಾರಿದ್ದಾನೆ. ನಮ್ಮ ನುಡಿಗೆ ಒಂದು ಸಾವಿರ ವರುಷದ ಹಿಂದೆ ಪಕಾರದ ಬದಲು ಬಂದ ಹಕಾರ ಇಂದೂ ಉಳಿದಿದೆಯಾದರೂ ಅದರ ಉಚ್ಚಾರ ಅನೇಕರ ಬಾಯಲ್ಲಿ ಅಸ್ಪಷ್ಟವಾಗಿದೆ.

ಪಕಾರ ಸಮಾಸದಲ್ಲಿ ಕೆಲವು ಕಡೆ ಬಕಾರ ವಕಾರವಾಗಿದೆ :

---

[1] *ACGODLs*, p. 147

ಅಗುರ್ವೆಱು < ಅಗುರ್ವು + ಪೆಱು
ಅಂಚೆವಾಸು < ಅಂಚೆ + ಪಾಸು
ಅಂಚೆವಿಂಡು < ಅಂಚೆ + ಪಿಂಡು
ಅಂಚೆವೆಣ್ < ಅಂಚೆ + ಪೆಣ್
ಬಿಡಿಹಂ < ಪಿಡಿಹಂ
ಬೆಳ್ಪಳಿಸು < ಪೆಳ್ಪಳಿಸು
ಅಂತವುರ < ಅಂತಃಪುರ : ಅಗವಡು < ಅಗಪಡು
ಅಂತವುರಂಬುಗು < ಅಂತವುರ + ಪುಗು
ಅಂಬುವುಗು < ಅಂಬು + ಪುಗು
ಅಂದಂಬಡೆ < ಅಂದ + ಪಡೆ
ಅಂದಂಬೆಱು < ಅಂದ + ಪೆಱು
ಅಗಲಂಬೆಱು < ಅಗಲ + ಪೆಱು
ಅಚ್ಚಿಗಂಬಡು < ಅಚ್ಚಿಗ + ಪಡು
ಅಡೆಬಳ < ಅಡಗು + ಫಲ
ಅಕ್ಕರವೊಲಿಗೆ < ಅಕ್ಷರ + ಪೊಲಿಗೆ (ಪೊಲ್ಗೆ)
ಅಟ್ಟಳವಾಱು < ಅಟ್ಟಳ + ಪಾಱು

# ಟ-ತಕಾರಗಳ ಚರಿತ್ರೆ : / ಟ್- / ತ್- /

In all the Languages and dialects of India, whether they belong to the Aryan or to the Dravidian families, much use is made of a series of consonants—t. ḍ with their aspirates, and ṇ which are called by Hindu grammarians 'cerebrals' because they are pronounced far back in the mouth, with a hard, ringing sound.[1]

ಟಕಾರ ಮೂರ್ಧನ್ಯ ವರ್ಣ ; ಮೂರ್ಧನ್ಯ ವರ್ಣಗಳಲ್ಲಿ ಟಕಾರ ಅಘೋಷ ಅಥವಾ ಪರುಷ ಧ್ವನಿ. ಇದರ ಉಚ್ಚಾರಣೆ ಎಲ್ಲ ವಿಧದಲ್ಲಿಯೂ ಸಂಸ್ಕೃತದ ಟಕಾರದಂತೆ. ಸಂಸ್ಕೃತದ ಟಕಾರ ಮೂರ್ಧನ್ಯವೆಂದು ಪಾಣಿನಿಯೇ ಬಹಳ ಹಿಂದೆ ಹೇಳಿದ್ದಾನೆ— ಸ್ಯುರ್ಮೂರ್ಧನ್ಯಾ ಋಟುರುಷಾಃ.

ಆದರೆ ಈ ಟಕಾರ ಮೂಲ ದ್ರಾವಿಡ ಭಾಷೆಯಲ್ಲಿ ಪದದ ಆದಿಯಲ್ಲಿ ಬಂದಂತೆ ತೋರುವುದಿಲ್ಲ ; ಏಕೆಂದರೆ ಪದದ ಆದಿಯಲ್ಲಿ ಟ—ಬಂದಿರುವುದಕ್ಕೆ ಉದಾಹರಣೆಗಳು ಶಾಸನದಲ್ಲಾಗಲೀ, ಸಾಹಿತ್ಯ ಕೃತಿಗಳಲ್ಲಾಗಲೀ ಎಲ್ಲಿಯೂ ದೊರೆತಿಲ್ಲ. ಇದರ ಹೊರತು ಟಕಾರ ಪದಮಧ್ಯದಲ್ಲಿ ಒಂಟಿಯಾಗಿಯೂ, ಒತ್ತಕ್ಷರವಾಗಿಯೂ ಪ್ರಯೋಗವಾಗಿರುವುದಕ್ಕೆ ಹತ್ತಾರು ದೃಷ್ಟಾಂತಗಳು ದೊರೆತಿವೆ. ಆದುದರಿಂದ ಮೂರ್ಧನ್ಯ ಧ್ವನಿಗಳಾದ ಟ ಡ ಣ ಎಂಬ ವರ್ಣಗಳು ದ್ರಾವಿಡ ಭಾಷೆಗಳ ವೈಶಿಷ್ಟ್ಯವೆಂದು ವಿದ್ವಾಂಸರು ಹೇಳುವರು. ಈ ಹೇಳಿಕೆ ನಿಜವಾದರೂ ಇದರ ಮತ್ತೊಂದು ವೈಚಿತ್ರ್ಯವೆಂದರೆ ಯಾವ ಧ್ವನಿಗಳು ದ್ರಾವಿಡ ಭಾಷೆಗಳ ವೈಶಿಷ್ಟ್ಯವೋ ಅಂಥ ವಿಶಿಷ್ಟ ಧ್ವನಿಮಾಗಳಿಂದ ಪ್ರಾರಂಭವಾಗುವ ಪದಗಳೇ ದ್ರಾವಿಡ ಭಾಷೆಗಳಲ್ಲಿ ಇಲ್ಲ. ಅಲ್ಲದೆ ಈಗ ಸಧ್ಯಕ್ಕೆ ಈ ಧ್ವನಿಗಳಿಂದ ಪ್ರಾರಂಭವಾಗುವ ಕೆಲವು ಪದಗಳು ದ್ರಾವಿಡ ಪದಗಳೇ ಅಥವಾ ಪರಭಾಷೆಯ ಪದಗಳೇ ಎಂಬ ವಿವಾದಕ್ಕೆ ಎಡೆಯಿತ್ತಿವೆ. ಅಲ್ಲದೆ ಬೇರೆ ಧ್ವನಿಗಳು ಟಕಾರವಾಗಿ ಬಂದಿರುವುದೂ ಉಂಟು—ತಗರು > ಟ (ಠ) ಗರು.

[1] *ACGODLs*, 1956, p. 147

ಈ ಮೂರ್ಧನ್ಯ ಧ್ವನಿಗಳು ದ್ರಾವಿಡ ಭಾಷೆಗೆ ಸಹಜವಾಗಿ ಇದ್ದ ಧ್ವನಿಗಳೋ ? ಅಥವಾ ಬೇರೆ ಭಾಷೆಯಿಂದ ಬಂದ ಅತಿಥಿಧ್ವನಿಗಳೋ ?—ಎಂಬ ಚರ್ಚೆಯೂ ನಡೆದಿದೆ. ಸಂಸ್ಕೃತ ಭಾಷೆಯಿಂದ ಈ ಧ್ವನಿಗಳು ದ್ರಾವಿಡ ಭಾಷೆಗಳಿಗೆ ಬಂದಿರಬೇಕೆಂಬ ಅಭಿಪ್ರಾಯವೂ ವ್ಯಕ್ತವಾಯಿತು. ಉತ್ತರ ಭಾರತದ ಭಾಷೆಗಳಾದ ಹಿಂದಿ, ಬಂಗಾಳಿ ಮುಂತಾದ ಭಾಷೆಗಳಲ್ಲಿ ಈ ಮೂರ್ಧನ್ಯ ವ್ಯಂಜನಗಳು ಸಂಸ್ಕೃತ ಭಾಷೆಯ ಪ್ರಭಾವದಿಂದ ಕಾಣಿಸಿಕೊಂಡಂತೆ ದ್ರಾವಿಡ ಭಾಷೆಗಳಲ್ಲೂ ಆ ಆರ್ಯ ಭಾಷೆಯಿಂದಲೇ ಮೂರ್ಧನ್ಯಗಳು ಮೂಡಿರಬೇಕೆಂಬುದು ಅವರ ಊಹೆಯಾಗಿತ್ತು. ಆದರೆ ಇದಕ್ಕೆ ತದ್ವಿರುದ್ಧವಾದ ರೀತಿಯಲ್ಲಿ ಈ ವ್ಯವಹಾರ ನಡೆಯಿತು.

ಮೂರ್ಧನ್ಯ ವರ್ಣಗಳನ್ನು ವಾಸ್ತವವಾಗಿ ಸಂಸ್ಕೃತ ಭಾಷೆಯೇ ದ್ರಾವಿಡ ಭಾಷೆಯಿಂದ ಸ್ವೀಕರಿಸಿತೆಂಬ ಅಭಿಪ್ರಾಯ ವ್ಯಕ್ತವಾಗಿದೆ.

> . . . I have long been persuaded that they (cerebrals) were borrowed from the Dravidian Languages by Sanskrit, after the arrival of the Sanskrit-speaking race in India.[1]

ಈ ಹೇಳಿಕೆಯನ್ನು ಸಮರ್ಥಿಸುವ ಸಲುವಾಗಿ ರಾಬರ್ಟ್ ಕಾಲ್ಡ್‌ವೆಲ್ ನಾಲ್ಕು ಪ್ರಬಲವಾದ ಕಾರಣಗಳನ್ನು ಕೊಟ್ಟಿದ್ದಾನೆ. ಡಾ|| ಬೂಲರನೂ ದ್ರಾವಿಡ ಭಾಷೆಗಳ ಮೂರ್ಧನ್ಯ ಧ್ವನಿಗಳು ಸಂಸ್ಕೃತದಿಂದ ಬಂದಿಲ್ಲವೆಂದು ತಿಳಿಸಿದ್ದಾನೆ. ಮೂರ್ಧನ್ಯ ವ್ಯಂಜನಗಳು (Retroflex consonants) ಸಂಸ್ಕೃತಕ್ಕೆ ಮೂಲ ದ್ರಾವಿಡದಿಂದಲೇ ಬಂದಿರಬೇಕೆಂದು ಇತರ ವಿದ್ವಾಂಸರೂ ಅಭಿಪ್ರಾಯಪಟ್ಟಿದ್ದಾರೆ.[2]

ತಮಿಳು ಭಾಷೆಯಲ್ಲಿ ಈ ಅಘೋಷ ಧ್ವನಿಯಾದ ಟಕಾರದಿಂದ ಪ್ರಾರಂಭವಾಗುವ ಪದಗಳು ಇಲ್ಲದಿರುವುದಕ್ಕೆ ಕೆಲವು ಕಾರಣಗಳೂ ಇವೆ. ಕಾಲ್ಡ್‌ವೆಲ್ ಈ ವಿಚಾರವನ್ನು ವಿಮರ್ಶಿಸುತ್ತಾ ಹೀಗೆ ವಿವರಿಸಿದ್ದಾನೆ:

> Its sound is too hard and rough to admit of its use as an initial; and, therefore, in those Sanskrit derivatives which commence with this letter, ṭ is preceded in Tamil by the vowel i, as a help to enunciation. When ṭ is thus preceded by a vowel, it is no longer an initial and therefore no longer a surd; and hence it becomes ḍ by rule; so that the sound of ṭ is never heard in Tamil, except when ḍ is doubled.[3]

ತಮಿಳು ಭಾಷೆಯಲ್ಲಿ ಶಬ್ದದ ನಡುವೆ ಟಕಾರ ಒಂಟಿಯಾಗಿ ಉಚ್ಚಾರವಾಗುವುದಿಲ್ಲ, ದ್ವಿತ್ವವಾಗಿ ಮಾತ್ರ ಉಚ್ಚಾರವಾಗುತ್ತದೆ—ಕಟ್ಟು, ಕೊಟ್ಟು . . . ಇತ್ಯಾದಿ. ಸಂಸ್ಕೃತ

---

[1] *ACGODLs*, p. 147

[2] M. B. Emeneau, *Linguistic Prehistory of India*, p. 284

[3] ಅದೇ. ಪು. ೧೪೨

ಭಾಷೆಯ ಪ್ರಭಾವಕ್ಕೆ ಒಳಗಾದ ಇತರ ದ್ರಾವಿಡ ಭಾಷೆಗಳಲ್ಲಿ ಟಕಾರ ಒಂಟಿಯಾಗಿಯೂ ನಿಲ್ಲುವುದು ಸಾಧ್ಯ. ಉದಾಹರಣೆಗೆ ಕನ್ನಡದಲ್ಲಿ ಆಟ, ಊಟ, ಓಟ, ಕಾಟ, ನೋಟ, ಪಾಟ ಇತ್ಯಾದಿ. ಅಲ್ಲದೆ ತಮಿಳು ಭಾಷೆಯಲ್ಲಿ ಪರುಷ ವರ್ಣಗಳೊಡನೆ ಅನುನಾಸಿಕ ಧ್ವನಿಗಳು ಸಾಮಾನ್ಯವಾಗಿ ಸೇರುವುದಿಲ್ಲ. ಹೀಗಾಗಿ ಟ ಧ್ವನಿ ಣ ಧ್ವನಿಯೊಡನೆ ಬೆರೆಯುವುದಿಲ್ಲ. ಅಘೋಷವರ್ಣಗಳೊಡನೆ ಅನುನಾಸಿಕಗಳು ಬೆರೆಯದಿದ್ದರೂ ಘೋಷ (ಸರಳ) ವರ್ಣಗಳೊಡನೆ ಬೆರೆಯುತ್ತವೆ. ಇದರಿಂದಾಗಿ ತಮಿಳು ಭಾಷೆಯಲ್ಲಿ ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಇರುವಂತೆ ಣ್ಟ (–ಂಟ), ನ್ತ (–ಂತ), ಮ್ಪ (–ಂಪ)—ಎಂದು ಬರುವುದಿಲ್ಲ. ಈ ಧ್ವನಿಗಳ ಪರಿವರ್ತನೆ ರೂಪವಾದ ಣ್ಡ (–ಂಡ), ನ್ದ (–ಂದ), ಮ್ಬ (–ಂಬ)—ಎಂಬು ಬರುತ್ತವೆ.

ಉದಾಹರಣೆಗಳು :

ಸಂಸ್ಕೃತ :—ಮಂಟಪ > (ತ) ಮಂಡಬಮ್
,,    —ಅಂತಮ್ > (ತ) ಅಂದಮ್

ತಾಲವ್ಯೀಕರಣ ನಿಯಮಕ್ಕೆ ಪಕ್ಕಾಗಿ ತ್ > ಚ್ ಆಗಿರುವುದೂ ಉಂಟು. ಉದಾ : ತೇಟು್ > ಚೇಟು್ > ಚೇಳು. ಇದು ಕನ್ನಡದಲ್ಲಿ ಹೀಗಾಗಿದೆ. ಆದರೆ ಉಳಿದ ಜ್ಞಾತಿ ಭಾಷೆಗಳಲ್ಲಿ ಈ ಶಬ್ದದ ತ್ ಧ್ವನಿಮಾ ಉಳಿದಿದೆ. ಉದಾ : ತ. ಮ. ತೇಳ್, ತೆ. ತೇಲು. ಹೀಗೆಯೇ ತ್ > ಸ್–ಆಗಿರುವುದೂ ಉಂಟು ಕನ್ನಡದಲ್ಲಿ. ತೋಕೆ > ಸೋಗೆ ; ತದಕು : ಸದಕು ; ತೀ : ಸೀ (ಹೋ. ತ. ತೆ.) ತು. ತೀಕೊಡೆ : ಕ. ಸಿಗಡಿ ; ಮ. ತಿಕ್ಕು : ಕ. ಸಿಗು ತೊಲಿ : ಕ. ಸುಲಿ ; ಮ. ತೋಲ್ : ಕ. ಸೋಲ್ ತ.ತೆ.ಮ.

| ಪೂದ್ರಾ | ಪರಿಸರ | ತ | ಮ | ಕ | ತು | ತೆ | ಕುಈ | ಗೋಂ | ಕೋಲಾ | ಪ | ಕುರು | ಮಲ್ತೊ | ಬ್ರಾ |
|---|---|---|---|---|---|---|---|---|---|---|---|---|---|
| * ತ್ – | ಎಲ್ಲಸ | ತ್ – | ತ್ – | ತ್ – | ತ್ – | ತ್ – | ತ್ – | ತ್ – | ತ್ – | ತ್ – | ತ್ – | ತ್ – | ತ್ – |
| | | | | ದ್ – | ದ್ – | ದ್ – | ದ್ – | ದ್ – | ದ್ – | ದ್ – | ದ್ – | ದ್ – | ದ್ – |

ಉದಾ :

ತ. ತಿನ್ – / ತಿನ್ – ಜಿ –

ಮ. ತಿನ್ನುಕ

ಕ. ತಿನ್, ತಿನ್ನು, ತಿನ್ – ದ್ –

ತು. ತಿನ್ಪಿನಿ

ತೆ. ತಿನು, ತಿನ್ – ಟ್ –

ಕುಈ. ತಿನ್ಬ, ತಿಸ್ < * ತಿನ್ – ಟ್ –

ಕುವಿ. ತಿಂಜ್ –

ಗೋಂ. ತಿಂದ್ (ತಿನ್ – ಜಿ –)

ಕೋಲಾ. ತಿನ್, (ತಿನ್ – ದ್ – >

ಪ. ತಿನ್ (ತಿನ್ – ದ್ –)

< ಮೂ ದ್ರಾ. * ತಿನ್.

ಒ. ತಿನ್ –

ಗ. ತಿನ್ –

ಕುರು. ತಿಂದ್ – (ತಿಂದ್ – ಚ್ –)

ಮಲ್ತೊ. ತಿಂದ್

ಮೂ. ದ್ರಾ. *ತ್–

ಮೂಲ ದ್ರಾವಿಡ ಭಾಷೆಯಲ್ಲಿ *ತ್–ಎಂಬ ಸ್ವತಂತ್ರ ಧ್ವನಿವೂ ಇತ್ತೆಂಬುದರಲ್ಲಿ ಸಂದೇಹವಿಲ್ಲ. ಈ *ತ್–ಧ್ವನಿ ಅದರ ಮುಂದೆ ಪೂರ್ವ ಅಥವಾ ಪೂರ್ವೇತರಗಳಲ್ಲಿ ಯಾವುದೇ ಸ್ವರವಿರಲಿ ಅದು, ಎಲ್ಲ ದ್ರಾವಿಡ ಭಾಷೆಗಳಲ್ಲೂ ತ್–ಆಗಿಯೇ ಉಳಿದು ಬಂದಿದೆ.

| | | |
|---|---|---|
| ಕ. ತಿನ್ನು, ತಿನ್ : | ತೆ. ತಿನು : | ತು. ತಿನ್ಪಿನಿ |
| ತ. ತಿನ್, ತಿನ್ನು : | ಮ. ತಿನ್ನುಕ : | ಕುಈ ತಿನ್ಬ |
| ಕುವಿ. ತಿನ್ನ್–,ತಿಂಜ್– : | | ಗೋಂ. ತಿಂದ್– |
| ಕುರು. ತಿಂದ್–: | | ಮಲ್ತೊ. ತಿಂದ್– |

ಆದರೆ ದ್ರಾವಿಡ ಭಾಷೆಗಳಲ್ಲಿ ಪದದ ಆದಿಯಲ್ಲಿ ನಿಂತಿರುವ ತ್–ಧ್ವನಿಯನ್ನು ಎಲ್ಲ ಸಂದರ್ಭಗಳಲ್ಲೂ ಮೂಲ ದ್ರಾ*ತ್–ದಿಂದಲೇ ಬಂದಿದೆಯೆಂದು ಹೇಳುವುದು ಸಾಧ್ಯವಿಲ್ಲ. ಏಕೆಂದರೆ ಕೆಲವು ದ್ರಾವಿಡ ಭಾಷೆಗಳಲ್ಲಿ ಪೂ ದ್ರಾ*ಚ್–ಧ್ವನಿ>ತ್–ಆಗಿರುವುದು ಕಾಣುತ್ತದೆ. ತೆಲುಗು ಭಾಷೆ ಇದಕ್ಕೆ ಉತ್ತಮ ನಿದರ್ಶನ. ಕೆಲವು ಭಾಷೆಗಳಲ್ಲಿ ತ್–>ø–ಶೂನ್ಯವಾಗಿದೆ. ಇದಲ್ಲದೆ ಇಂಡೊ-ಆರ್ಯನ್ ವರ್ಗದ, ಅದರಲ್ಲಿಯೂ ಸಂಸ್ಕೃತ ಭಾಷೆಯಿಂದ ಬಂದ ಕೆಲವು ಪದಗಳಲ್ಲಿ, ಮೂಲದಲ್ಲಿ ಸ್–ಇದ್ದರೂ ಅದನ್ನು ಎರವಲಾಗಿ ಪಡೆದಮೇಲೆ ತ್ ಆಗಿ ಮಾರ್ಪಾಟು ಮಾಡಿಕೊಂಡಿರುವುದೂ ಉಂಟು; ಸಂ. ಸೇನಾ>ತ. ತಾನೈ.

ಆದರೆ ಕೆಲವು ವಿದ್ವಾಂಸರು ಈ ಮಾರ್ಪಾಟನ್ನು ಕುರಿತು ವಿವೇಚಿಸುತ್ತಾ, ಇದು ಸ್–>ತ್– ಎಂದು ನೇರವಾಗಿ ಆದ ಮಾರ್ಪಾಟಾಗಿರದೆ ಅದು ಸ್ >*ಚ್–>ತ್ ಆಗಿರಬೇಕೆಂದು ವಿವರಿಸಿದ್ದಾರೆ; ಸಂ. ಸೇನಾ>*ಚೇನೈ>* ತ. ತಾನೈ. ಏಕೆಂದರೆ ಚ್–>ತ್– ಆಗಿರುವುದಕ್ಕೆ ಹಲವು ಆಧಾರಗಳಿವೆ. ಈ ಬಗೆಯ ಪರಿವರ್ತನೆಗಳಲ್ಲದೆ ತ್–>ಚ್–ಆಗಿರುವುದೂ ಉಂಟು, ಆದರೆ ಈ ಧ್ವನಿವ್ಯತ್ಯಾಸ ತೀರ ಕಡಮೆ, ತ್–ಧ್ವನಿಯೊಡನೆ ಪೂರ್ವ ಸ್ವರಗಳಾಗಲಿ, ಅಥವಾ ಅರ್ಧ ಸ್ವರವಾದ/ಯ್/ದ ಸಂಪರ್ಕವಾಗಲಿ ಇದ್ದಾಗ ಮಾತ್ರ ಈ ತ್–>ಚ್–ಆಗಿರುವುದು ಕಾಣುತ್ತದೆ, ಕೆಲವೊಮ್ಮೆ ತ್–>ಸ್–ಆಗಿರುವುದೂ ಕಾಣುತ್ತದೆ; ಆದರೆ ಇದಕ್ಕೆ ಆಧಾರ ಸಾಲದು.

೧. ಕ. ತಣಿ : ತೆ, ತನಿಯು, ತನು : ತ. ತಣಿ
ತು. ಸಣಿಪುನಿ, ಸನಿಯುನಿ/ತ :

೨. ಕ. ತೀಡು : ತೆ. ತೀಡು : ತ. ಮ. ತೀಟ್ಟು
ತು. ತೀಂಟು/ಸೀಂಟುನಿ

| ಪೂದ್ರಾ | ಪರಿಸರ | ತ | ಮ | ಕ | ತು | ತೆ | ಕುಈ | ಗೋಂ | ಕೋಲಾ | ಪ | ಕುರು | ಮಲ್ತೊ | ಬ್ರಾ |
|---|---|---|---|---|---|---|---|---|---|---|---|---|---|
| * ನ್ – | ಎಲ್ಲಸ | ನ್ – | ನ್ – | ನ್ – | ನ್ – | ನ್ – | ನ್ – | ನ್ – | ನ್ – | ನ್ – | ನ್ – | ನ್ – | ನ್ – |
| | | ϕ | ϕ | ϕ | ϕ | ϕ | ϕ | ϕ | ϕ | ϕ | ϕ | ϕ | ϕ |

ಉದಾ :

(೧) ತ. ನೊಂಬು (=ನುಚ್ಚು ಮಾಡುವುದು)   ತು. ಸುರಿಯುನಿ

ಮ. ,,   ಗೋ. ಸೋರ್ –

ಕ. ,, ನುಚ್ಚು, ಸುರಿ   ಕುವಿ ನೊಯ್ತ್   → ಮೂದ್ರಾ. ನೊತ್

ತೆ. ,,   ಬ್ರಾ. ಸುಸ್–

(೨) ತ. ನಿಲ್   ತೆ. ನಿಲುಚು   ಗ. ನಿಲ್ –

ಮ. ನಿಲ್   ಗೋಂ. ನಿಲ್ಲ್ –   ಕೋಲಾ. ಇಲ್ –

ಕ. ನಿಲ್ > ನಿಲ್ಲು   ಕುಈ ನಿಲ್ಬ   ಕುರು. ಇಲ್ – (ಇಲ್ – ಚ್ –) ಇಲ್ದ್ –   → ಮೂದ್ರಾ. * ನಿಲ್ – /* ಇಲ್ –

ತು. ನಿಲ್   ಪ. ನಿಲ್   ಮಲ್ತೊ. ಇಲ್ – (ಇಚ್ –) ಇಲ್ದ್ –

# ರೇಫ ಮತ್ತು ಶಕಟರೇಫ : / ರ್ / – / ಱ್ /

ṛ is a very hard rough sound, and is formed at the roof by the curled point of the tongue. It comes nearer to the so called Northumberland burr, but the latter is more uvular than cerebeal.[1]

ರೇಫ ಎಂಬುದು ರಕಾರದ ಹೆಸರು. ವ್ಯಾಕರಣದ ಪರಿಭಾಷೆಯಲ್ಲಿ ಈ ಹೆಸರು ಪಾಣಿನಿಗಿಂತ ಹಿಂದಿನಿಂದಲೂ ಪ್ರಚಾರದಲ್ಲಿದೆ. ಶ್ರೌತಸೂತ್ರಗಳಲ್ಲೂ, ಪ್ರಾತಿಶಾಖ್ಯಗಳಲ್ಲೂ ರೇಫದ ಉಲ್ಲೇಖವಿದೆ. √ರಿಫ್ (=ಮೇಲಕ್ಕೆ ಉಬ್ಬು)—ಎಂಬ ಧಾತುವಿನಿಂದ ರೇಫ ಎಂಬ ಪದ ಬಂದಿದೆಯೆಂದು ಕೆಲವರ ಹೇಳಿಕೆ; ರಿಫಿತ—ಎಂಬ ಹೆಸರು ವಾಜಸನೇಯಿ ಸಂಹಿತೆಯಲ್ಲಿದೆ. ಮತ್ತೆ ಕೆಲವರು ರ + ಇಫ > ರೇಫ ಆಗಿದೆಯೆಂದೂ ಹೇಳಿದ್ದಾರೆ. ಪಾಣಿನಿಯ ಪ್ರಕಾರ 'ಋಟುರಷಾಣಾಂ ಮೂರ್ಧಾ'; ಅಂದರೆ ಋ, ೠ, ಟವರ್ಗ (ಟ ಠ ಡ ಢ ಣ). ರೇಫ ಮತ್ತು ಷಕಾರ—ಇವು ಮೂರ್ಧನ್ಯ ವರ್ಣಗಳು. ಆದರೆ ಪಾಣಿನಿಯ ಹೇಳಿಕೆ ಹೆಚ್ಚು ವಿವಾದಾಸ್ಪದವಾಗಿದ್ದು ವಿಚಾರಣೀಯವಾಗಿದೆ. ಅವನ ಅಭಿಪ್ರಾಯದಂತೆ ರೇಫ ಮೂರ್ಧನ್ಯಧ್ವನಿ. ಆದರೆ ಇಂದಿನ ಉಚ್ಚಾರಣೆಯಲ್ಲಿ ರೇಫ ಮೂರ್ಧನ್ಯವಾಗಿರದೆ ದಂತ್ಯವಾಗಿದೆ. ಇದಕ್ಕೆ ಧ್ವನಿವಿಜ್ಞಾನದ ವಿವರಣೆಯನ್ನು ನೋಡೋಣ.

ಧ್ವನಿವಿಜ್ಞಾನದ ದೃಷ್ಟಿಯಿಂದ ನೋಡಿದರೆ ಮೂರ್ಧನ್ಯ ವರ್ಣಗಳ ಉಚ್ಚಾರಣಾ ಕಾಲದಲ್ಲಿ ಜಿಹ್ವಾಗ್ರ ಅಂಗಳಿನ ಬಳಿಗೆ ಮೇಲ್ಮೊಗನಾಗಿ ಬಂದು ಅಲ್ಲಿ ಮತ್ತೆ ಮೇಲಕ್ಕೆ ಸುರುಳಿಯಾಗಿ ಬಾಗುತ್ತದೆ. ಮೂರ್ಧನ್ಯ ಧ್ವನಿಗಳಾದ ಟ, ಣ, ಳ, ಷ—ಮೊದಲಾದವುಗಳನ್ನು ಉಚ್ಚರಿಸುವಾಗ ಈ ಕ್ರಿಯೆ ತಪ್ಪದೆ ನಡೆಯುವುದನ್ನು ಗಮನಿಸಬಹುದು. ರೇಫದ ಉಚ್ಚಾರಣೆಯೂ, ಪಾಣಿನಿಯ ಹೇಳಿಕೆಯಂತೆ, ಮೂರ್ಧನ್ಯವಾಗಿದ್ದರೆ ಮೇಲಿನಂತೆಯೇ ಅದೂ ಉಚ್ಚಾರವಾಗಬೇಕಲ್ಲವೆ? ಆದರೆ ಇಂದು ರೇಫವನ್ನು ಉಚ್ಚರಿಸುವಾಗ ಮೂರ್ಧನ್ಯ ವರ್ಣಗಳನ್ನು ಉಚ್ಚರಿಸುವಾಗ ನಡೆಯುವ ಕ್ರಿಯೆ ನಡೆಯದೆ ನಾಲಗೆಯ ತುದಿ ದಂತಪಂಕ್ತಿಯ ಮೇಲೆ ಒಸಡಿಗೆ ತಾಗಿ ನಿಲ್ಲುತ್ತದೆ. ಹಾಗೆ

---

[1] *A Primer of Dravidian Phonology*, IA, 1909, p. 194

ಆಗುವುದು ಮೂರ್ಧನ್ಯ ವರ್ಣದ ಲಕ್ಷಣವಲ್ಲ; ಅದು ದಂತ್ಯವರ್ಣಗಳ—ತನಲಸ. . . ಇತ್ಯಾದಿ—ಉಚ್ಚಾರಣಾ ಕ್ರಮ.

ರೇಫೆಯ ಉಚ್ಚಾರ ಕಾಲದಲ್ಲಿ ದಂತ್ಯವರ್ಣಗಳ ಉತ್ಪತ್ತಿ ಸ್ಥಾನವನ್ನೇ, ಹಲ್ಲಿನ ಸಾಲನ್ನೇ, ನಾಲಗೆಯ ತುದಿ ಮುಟ್ಟುವುದರಿಂದ ರೇಫ ನಿಶ್ಚಯವಾಗಿಯೂ ದಂತ್ಯ ಇಲ್ಲವೇ ದಂತಮೂಲಿಯವೇ ಹೊರತು ಮೂರ್ಧನ್ಯವಲ್ಲ. ರಕಾರ, ಲಕಾರ, ನಕಾರಗಳು ದಂತ್ಯ ಅಥವಾ ಏಕಸ್ಥಾನೀಯ ಧ್ವನಿಗಳಾದುದರಿಂದಲೇ ಕೆಲವು ಶಬ್ದಗಳಲ್ಲಿ ಒಂದು ಧ್ವನಿಯ ಬದಲು ಮತ್ತೊಂದು ಧ್ವನಿ ಬರುತ್ತದೆಂದು ತೋರುತ್ತದೆ. ಅಂಥ ಇನ್ನೂ ಕೆಲವು ಶಬ್ದಗಳನ್ನು ನೋಡಬಹುದು:

| | | |
|---|---|---|
| ಲ>ರ: (ಸಂ) | ನಾರಿಕೇಲ>ನಾರಿಕೇರ | ರಬ್ಬರು : ಲಬ್ಬರು |
| ರ>ಲ: | ಶ್ರೀರಂಗ>ಶ್ರೀಲಂಕ | ಲಕಿಲಿಗಿಡ : ನಕಲಿಗಿಡ |
| | ರಂಗ>ಲಂಕ | ಲಕ್ಕಿಗಿಡ : ನಕ್ಕಿಗಿಡ |
| | ಕಪಿಲಾ>ಕಪಿನಿ | ಲಕುಳೀಶ : ನಕುಳೀಶ |
| ಲ>ನ | ನಿಂಬೆ>ಲಿಂಬೆ | ಲಕುಳಿನ್ : ನಕುಳಿನ್ |
| | ನೋಂಪಿ>ಲೋಂಪಿ(ಸಾಂಗ್ಲಿ) | ಲುಕ್ಸಾನು : ನುಕ್ಸಾನು |
| | ಲಿಂಗ>ನಿಂಗ | |
| | ಲಖನೌ>ನಖಲೌ | |
| | ಲಗ್ನ>ನಗ್ನ (ಗ್ರಾಮ್ಯ) | |

ಆಡುನುಡಿಯಲ್ಲಿ ಇಂದಿಗೂ ಆಗುವ ಈ ಧ್ವನಿಪರಿವರ್ತನೆ, ಅಕ್ಷರಪಲ್ಲಟ ಗಮನಾರ್ಹ. ಈ ನಿದರ್ಶನಗಳು ರೇಫ ದಂತ್ಯವೆಂಬುದರ ಸ್ಥಾಪನೆಗೆ ಪೋಷಕವಾಗಿವೆ. "ನಮ್ಮಲ್ಲಿ ರೇಫವು ಹೀಗೆ ದಂತ್ಯವಾಗಿರುವುದರಿಂದಲೇ ಎಷ್ಟೋ ಮಂದಿ ಕರ್ಣ, ವರ್ಣ ಮೊದಲಾದ ಸಂಸ್ಕೃತ ಶಬ್ದಗಳನ್ನು ಕರ್ನ, ವರ್ನ ಎಂದು ಬರೆದು ಹಾಗೆಯೇ ಉಚ್ಚರಿಸುತ್ತಾರೆ."[1] (ರ್) ರೇಫ ಮತ್ತು ಲ್—ಗಳನ್ನು ಸಂಸ್ಕೃತ ವ್ಯಾಕರಣಕಾರರು ಅರ್ಧಸ್ವರಗಳ ಸಾಲಿಗೆ ಸೇರಿಸಿದ್ದಾರೆ. ಆದರೆ ಇವೆರಡೂ ಪ್ರಧಾನವಾಗಿ ಪೂರ್ಣ ವ್ಯಂಜನಗಳು: ಕೆಲವೊಮ್ಮೆ ಸ್ವರಗಳಾಗಬಹುದು. ರ್, ಲ್‌ಗಳು ಘೋಷಗಳು; (ಅಘೋಷ ರ್ ವೂ ಉಂಟು).

ಕನ್ನಡದಂತೆ ತಮಿಳು, ತೆಲುಗು, ಮಲೆಯಾಳ ಭಾಷೆಗಳಲ್ಲೂ ರೇಫ ಮೂರ್ಧನ್ಯವಾಗಿರದೆ ದಂತ್ಯವೇ ಆಗಿದೆ. ಮತ್ತು

> The ṛ as usually pronounced in Sanskrit to-day is more the trilled variety, where the tongue touches the teeth ridge and delivers a rapid series of taps there on.[2]

---

[1] ಆಚಾರ್ಯ ತೀನಂಶ್ರೀ, ಕಸಾಪಪ, ೩-೨, 'ಸಮಾಲೋಚನ,' ಪುಟ

[2] *Elements of the Science of Laıguage*, III Ed, 1962, p. 135

—ಎಂಬ ಹೇಳಿಕೆಯನ್ನು ಗಮನಿಸಿದರೆ, ಪಾಣಿನಿಯ ಹೇಳಿಕೆಯಂತೆ ರೇಫ ಇಂದು ಸಂಸ್ಕೃತದಲ್ಲಿ ಮೂರ್ಧನ್ಯವಾಗಿರದೆ ದಂತ್ಯವಾಗಿರುವುದು ತಿಳಿದುಬರುತ್ತದೆ. –ರ– > –ಡ– ; ಊರುಗೋಲು > ಊಡುಗೋಲು.

ಬಹುಶಃ ಪಾಣಿನಿಯ ಕಾಲಕ್ಕೆ ರೇಫವೂ ಮೂರ್ಧನ್ಯ ಧ್ವನಿಯಾಗಿದ್ದು ಕಾಲಾಂತರ ದಲ್ಲಿ ಅದು ದಂತ್ಯವಾಗಿ ಪರಿವರ್ತಿತವಾಗಿರಬಹುದು. ಹಾಗಿದ್ದಲ್ಲಿ ಈ ಧ್ವನಿ ಮಾರ್ಪಾಟು ಕೇವಲ ಉಚ್ಚಾರಣಾ ಸ್ಥಾನದ ಬದಲಾವಣೆಯೆಂದು ಹೇಳಬಹುದು. ಆದರೆ ಇದು ಇನ್ನೂ ಪರಿಶೀಲಿಸಬೇಕಾದ ವಿಚಾರ. ಏಕೆಂದರೆ ರೇಫ ದಂತ್ಯವೆಂದು ಸ್ಪಷ್ಟವಾಗಿ ಘೋಷಿಸುವ ಈ ವಿವರಣೆಯನ್ನು ನೋಡಿ :

As regards ṛ all the Pratisakhyas state that its place of origin is either the teeth, the roots of the teeth or the teeth ridge.... We see, then, that according to all Pratisakhyas, ṛ was either dental or alveolar ; but according to Panini's 'sik' it was carebral.[1]

ಹೀಗಾಗಿ ಪಾಣಿನಿಯ ಅಭಿಪ್ರಾಯದಂತೆ ರೇಫ ಮೂರ್ಧನ್ಯವಾಗಿದ್ದರೂ ಇತರರು ಅದನ್ನು ಕಣ್ಣು ಮುಚ್ಚಿಕೊಂಡು, ಕೇವಲ ಗೃಹೀತವೆಂದು ತೆಗೆದುಕೊಳ್ಳದೆ, ವಾಸ್ತವ ವಾಗಿ ಈ ರೇಫ ದಂತ್ಯ ಅಥವಾ ದಂತಮೂಲೀಯವೆಂಬುದನ್ನು ಪೃಥಕ್ಕರಿಸಿ ನೋಡಿ ನಿರ್ಧರಿಸಿದ್ದಾರೆ. ಕೆಲವು ವಿದ್ವಾಂಸರೂ ಇದೇ ಅಭಿಪ್ರಾಯವನ್ನು ಅನುಮೋದಿಸಿದ್ದಾರೆ. ಆದರೆ ಕನ್ನಡ ವೈಯಾಕರಣ ಕೇಶಿರಾಜ ಪಾಣಿನೀಯವನ್ನು ಪಟ್ಟಾಗಿ ಹಿಡಿದು, ಚರ್ಚೆ ಯಿಲ್ಲದೆ ಸುಮ್ಮನೆ ಅದರ ಹೇಳಿಕೆಯನ್ನು ಅಂಗೀಕರಿಸಿ 'ರೇಫೆ ಮೂರ್ಧನ್ಯಂ' ಎಂದು ಹೇಳಿ ಎಡವಿದ್ದಾನೆ.[2]

ರೇಫಕ್ಕೆ ಸಂಬಂಧಪಟ್ಟ ಇತರ ಕೆಲವು ವಿಚಾರಗಳನ್ನು ಈ ಸಂದರ್ಭದಲ್ಲಿ ತಿಳಿದು ಕೊಳ್ಳುವುದು ಉಚಿತ. ಏಕೆಂದರೆ ರೇಫದಲ್ಲಿ ಒಂದಕ್ಕಿಂತಲೂ ಹೆಚ್ಚು ಪ್ರಭೇದಗಳಿವೆ. ನಿದರ್ಶನಕ್ಕಾಗಿ ಸುಪ್ರಸಿದ್ಧ ಭಾಷಾಶಾಸ್ತ್ರಕಾರನಾದ ಡೇನಿಯಲ್ ಜೋನ್ಸ್ ಎಂಬಾತ ರೇಫೆಗಳಲ್ಲಿ ಕೊನೆಯಪಕ್ಷ ೬ ಬಗೆಯಾದರೂ ಉಂಟೆಂದು ವಿವರಿಸಿದ್ದಾನೆ.[3] ಈ ಆರು ವಿಧ ವಾದ ರೇಫಗಳಲ್ಲಿ ಘೋಷ ರೇಫ, ಅಘೋಷ ರೇಫಗಳ ಜೊತೆಗೆ ಮೂರ್ಧನ್ಯ ರೇಫವೂ ಉಂಟು. "ಅದರ ಉಚ್ಚಾರಣೆ ಹಿಂದೀ ಭಾಷೆಯ ಖಡೀಬೋಲಿ, ಘೋಡಾ—ಮೊದ ಲಾದ ಶಬ್ದಗಳಲ್ಲಿ ಸಿಕ್ಕುತ್ತದೆ. ಕನ್ನಡದಲ್ಲಿ ಎರಡು ಸ್ವರಗಳ ನಡುವೆ ಉಚ್ಚಾರವಾಗುವ ಒಂಟಿ ಡಕಾರಕ್ಕೂ ಈ ಡಕ್ಕೂ, ನಮ್ಮ ರಕಾರಕ್ಕೂ ಯಾವ ಸಂಬಂಧವೂ ಇಲ್ಲವೆನ್ನು

---

[1] *Siddheshwaa Varma, Critical Studies in the Phonetic Observations of Indian Grammarians*, p. 6–7

[2] ಶಮದ, ೨೯ನೆಯ ಸೂತ್ರದ ವೃತ್ತಿ, ಪುಟ ೨೩

[3] Daniel Jones, *An Outline of English Phonetics*, IVth Ed.

ವುದು ಸ್ಪಷ್ಟ; ಟ ಕಾರವು ಇನ್ನೊಂದು ಜಾತಿಯ ಮೂರ್ಧನ್ಯರೇಫ."[1] ಕೆಲವು ಪದ ಗಳನ್ನು ತೆಗೆದುಕೊಂಡು ಇದನ್ನು ಪರಿಶೀಲಿಸಿದರೆ ಹೆಚ್ಚು ಮನದಟ್ಟಾಗುತ್ತದೆ. ಅಡ್ಡಿ, ಡಬ್ಬ, ಹುಡುಗ—ಎಂಬ ಈ ಎರಡು ಶಬ್ದಗಳಲ್ಲಿ ಹುಡುಗ ಎಂಬಲ್ಲಿನ ಡಕಾರ ಹಾಗೂ ಡಬ್ಬ ಎಂಬಲ್ಲಿನ ಡಕಾರಕ್ಕೂ ಉಚ್ಚಾರದಲ್ಲಿ ವ್ಯತ್ಯಾಸವಿದೆ. ಮೊದಲನೆಯದು ಘೋಷ ಮೂರ್ಧನ್ಯ ತಾಡಿತ, ಎರಡನೆಯದು ಘೋಷ ಮೂರ್ಧನ್ಯ ಸ್ಪರ್ಶ.

ದ್ರಾವಿಡ ಭಾಷೆಗಳಲ್ಲಿ, ದ್ರಾವಿಡೇತರ ಭಾಷೆಗಳಲ್ಲಿ ಇರುವ ರಕಾರಕ್ಕೆ ಬಹುಮಟ್ಟಿಗೆ ಎಲ್ಲ ವಿಧದಲ್ಲೂ ಸಮವಾದ ಈ ರಕಾರದ ಜೊತೆಗೆ ಇನ್ನೊಂದು ರಕಾರವೂ ಇದೆ; ಕನ್ನಡ ಮತ್ತು ಇತರ ಒಂದೆರಡು ದ್ರಾವಿಡ ಭಾಷೆಗಳಲ್ಲಿ ಇಂದು ಆ ಧ್ವನಿ ಇಲ್ಲವಾದರೂ ಹಿಂದೆ ಇದ್ದಿತೆಂದು ಹೇಳಲು ಆಧಾರವಿದೆ. ಆ ಧ್ವನಿಯನ್ನು ಕುರಿತು ಪ್ರಸ್ತಾಪಿಸುತ್ತಾ 'ಱಕಾರಮುಂ ಱಟಿನುಂ ಕುಳುನುಂ ಎ ಒ ಎಂಬಿವು ಸಂಸ್ಕೃತದೊಳಿಲ್ಲ; ದೇಶೀಯಂಗಳಾಗಿ ಕನ್ನಡದೊಳೊಳವು'[2] ಎಂದು ಕೇಶಿರಾಜ ತಿಳಿಸಿದ್ದಾನೆ. ಪಾಣಿನಿಯ ವ್ಯಾಕರಣದಲ್ಲಿ 'ಅಲಘು ರೇಫ' ಎಂದು ಹೇಳಿದ್ದರೂ ಆ ರೇಫ ಯಾವುದು ಎಂದಾಗಲಿ, ಅದರ ಪ್ರಯೋಗ ವಿವರವಾಗಲಿ ದೊರೆತಿಲ್ಲ.

ದ್ರಾವಿಡ ಭಾಷೆಗಳಲ್ಲಿ ಎರಡು ರಕಾರಗಳಿದ್ದುದರಿಂದ ಒಂದನ್ನು ಇನ್ನೊಂದರಿಂದ ಪ್ರತ್ಯೇಕಿಸಲು ಆ ಇನ್ನೊಂದು ರಕಾರವನ್ನು, ದ್ರಾವಿಡ ಭಾಷೆಗಳ ವೈಶಿಷ್ಟ್ಯವಾದ ರಕಾರವನ್ನು, ಕೇಶಿರಾಜ ಮತ್ತು ಇತರರು ಶಕಟರೇಫ ಎಂದು ಕರೆದಿದ್ದಾರೆ. ಮತ್ತೆ ಕೆಲವರು ಇದನ್ನು ಬಂಡಿಯ ರ (ಱ) ಎಂದೂ ಉಲ್ಲೇಖಿಸಿದ್ದಾರೆ. ತೆಲುಗು ಭಾಷೆಯಲ್ಲೂ ಇದನ್ನು (ಶಕಟರೇಫವನ್ನು) ಬಂಡಿಯ 'ಱ' ಎಂದೇ ಕರೆಯುವರು. ಶಕಟರೇಫ ಎಂದು ಹೇಳಿದಾಗಲೂ ಅದಕ್ಕೂ ಬಂಡಿಯ ರೇಫವೆಂದೇ ಅರ್ಥವಾಗುತ್ತದೆ. ಸಂಸ್ಕೃತದಲ್ಲಿ ಶಕಟ ಎಂದರೆ ಗಾಡಿ, ಬಂಡಿ ಎಂಬುದೇ ಅರ್ಥ. ತಮಿಳಿನಲ್ಲಿ ಇದನ್ನು ವಲ್ಲಿನ 'ರ' ಎಂದು ಹೇಳುವರು. ಹೊಸಗನ್ನಡದಲ್ಲಿ ಒಬ್ಬಿಬ್ಬರು ಇದನ್ನು 'ಅಱ' ಎಂದೂ ನಿರ್ದೇಶಿಸಿದ್ದಾರೆ.

ಹಳಗನ್ನಡದ ಪದಗಳಲ್ಲಿ ರಕಾರ ಬಂದರೇ ಒಂದು ಅರ್ಥ, ಱಕಾರ ಬಂದರೇ ಮತ್ತೊಂದು ಅರ್ಥವಿರುವುದು ತಿಳಿದ ವಿಷಯ ಅಂದರೆ ಅವು ಪ್ರತ್ಯೇಕ ಧ್ವನಿಮಾಗಳಾಗಿದ್ದುವು. ಹಳೆಯ ಕಾವ್ಯಗಳಿಂದ ಆರಿಸಿದ ಈ ಕೆಲವು ಅಲ್ಪಾಂತರ ಯುಗ್ಮಗಳನ್ನು ಪರಿಭಾವಿಸಿ:

| | | |
|---|---|---|
| ಅಱಿ—ತಿಳಿ | ಅರಿ—ಕತ್ತರಿಸು | ಅರಿ (ಸಂ)—ಶತ್ರು |
| ಅಱತೆ—ಬಂಡೆ | ಅರೆ—ಅರ್ಧ | |
| ಎಱೆ—ನೀರುಹೊಯ್ಯಿ | ಎರೆ—ಬೇಡು | ಎಡಱು—ಬಡತನ |

[1] ಆಚಾರ್ಯ ತೀನಂಶ್ರೀ, ಕ ಸಾ ಪ ಪ, ೩೩-೨, ಪುಟ ೧೬೦

[2] ಶಮದ, ಪುಟ ೨೫

ಒಱಿ—ಸ್ರವಿಸು
ಕಱಿ—ಕಪ್ಪು
ಕೊಱೆ—ಕತ್ತರಿಸು
ನೆಱೆ—ತುಂಬು
ಮೊಱೆ—ಸಂಬಂಧ
ಪಱಿ—ಸೀಳು
ಬೆಱಂಗು—ಆಶ್ಚರ್ಯ
ಮುಱಿ—ಕತ್ತರಿಸು
ಸ್ನಱು—ಪಾನಕ್ರಿಯೆ
ಸೆಱಂಗು—ಅಂಚು

ಒರೆ—ಉಜ್ಜು
ಕರೆ—ದಡ, ತೀರ
ಕೊರೆ—ಗೊರಕೆ ಹಾಕು
ನೆರೆ—ಸೇರು
ಮೊರೆ—ಪ್ರಾರ್ಥನೆ
ಪರಿ—ಹೋಗು
ಬೆರಂಗು—ಅಪಾಯ
ಮುರಿ—ತಿರುಗು[1]
ಸುರಿ—ಸುರಿಯುವುದು
ಸೆರಂಗು—ಸಹಾಯ

ಎಡರು—ಅಡ್ಡಿ, ಆತಂಕ
ಏಱು—ಗಾಯ, ಏರು—ಹತ್ತುವುದು

ಇಂದು ಹೊಸಗನ್ನಡದಲ್ಲಿ ಆ ಱಕಾರ ಅಥವಾ ಶಕಟರೇಫ ಸಂಪೂರ್ಣವಾಗಿ ಲುಪ್ತವಾಗಿ ಹೋಗಿರುವುದರಿಂದ ಅದರ ಉಚ್ಚಾರ ಹೇಗಿತ್ತೊ ಖಚಿತವಾಗಿ ಹೇಳುವುದು ಸಾಧ್ಯವಿಲ್ಲ. ಕೇಶಿರಾಜನೇನೋ—'ರೇಫೆ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ಱಕಾರಂ ಪುಟ್ಟುಗುಂ'[2] ಎಂದು ಹೇಳಿದ್ದಾನೆ. ಆದರೆ ಕೇಶಿರಾಜನ ಕಾಲಕ್ಕಾಗಲೇ ಅದರ ಉಚ್ಚಾರ ಪ್ರಯೋಗಗಳ ವಿಚಾರದಲ್ಲಿ ಸಂದೇಹ ಹುಟ್ಟಿದ್ದುದಕ್ಕೆ ಇಳನೆಯ ಸೂತ್ರ ಪ್ರತ್ಯಕ್ಷ ಸಾಕ್ಷಿ ಹೇಳುತ್ತದೆ. ರಕಾರ—ಱಕಾರಗಳು ಹಳಗನ್ನಡದಲ್ಲಿ ಎರಡು ಪ್ರತ್ಯೇಕ ಅಥವಾ ಸ್ವತಂತ್ರ ಧ್ವನಿಗಳಾಗಿದ್ದುವು.

ಱ—ರ ಅಥವಾ ಶಕಟರೇಫ ಮತ್ತು ಸಾಮಾನ್ಯ ರೇಫ ಹಳಗನ್ನಡದಲ್ಲಿ ಹೀಗೆ ಬೇರೆ ಬೇರೆ ಧ್ವನಿಮಾಗಳಾಗಿದ್ದುದಕ್ಕೆ (Distinct Phonemes), ಪ್ರಾಚೀನ ಕನ್ನಡ ಕಾವ್ಯಗಳ ಮತ್ತು ಶಾಸನಗಳ, ಸೋದರ ಭಾಷೆಗಳ ಸಬಲ ಆಧಾರಗಳಿವೆ. ಹೀಗಿದ್ದೂ ಱ ಮತ್ತು ರಗಳು ಒಂದೇ ಧ್ವನಿಮಾಗಳೆಂದು (Phonemic Variants) ಎಲ್. ವಿ. ರಾಮಸ್ವಾಮಿ ಅಯ್ಯರ್ ಹೇಳಿದುದು ಸರಿಯಲ್ಲ;[3]

–ṛ–is maintained throughout the 8th, 9th, 10th, and 11th cent A. D. in the 12th cent. We find r used for ṛ[4]

ಎಂದು ವಿದ್ವಾಂಸರೊಬ್ಬರು ಹೇಳಿದ್ದರೂ, ೮-೯ ಮತ್ತು ೧೦ನೆಯ ಶತಮಾನದ ಶಾಸನಗಳಲ್ಲಿಯೇ ಈ – ಱ– > – ರ ಆಗುತ್ತಿದ್ದುದಕ್ಕೆ ಒಂದೆರಡು ನಿದರ್ಶನಗಳಿವೆ.[5]

---

1 ಈ ಬಗೆಯ ಇನ್ನೂ ಹೆಚ್ಚಿನ ಶಾಸನಧಾರದ ಪದಪ್ರಯೋಗಗಳಿಗೆ *Grammar of Old Kannarese Inscriptions* ಪುಸ್ತಕದ ೨೩-೨೪ನೆಯ ಪುಟಗಳನ್ನು ನೋಡಬಹುದು.

2 ಶಮದ ಸೂತ್ರ, ೨೯ರ ವೃತ್ತಿ, ಪುಟ ೨೩

3 *Journal of Oriental Research, Madras* 10, 253

4 *GOKI*, p. 25

5 *HGOK*, p. 15

ಹೀಗೆ ಕ್ರಮೇಣ ಱ – ರ ಗಳು ಒಂದೇ ಧ್ವನಿಮಾ ಆಗಿ ಸಂಗಮಗೊಂಡಿವೆ. ಈ ಐಕ್ಯ ಕೇಶಿರಾಜನ ಕಾಲಕ್ಕೆ ಹೆಚ್ಚಾಗಿ ತಲೆದೋರಿರಬೇಕು. ಅಷ್ಟೇ ಅಲ್ಲ, ಬಂಡಿಯ ಱದ ಉಚ್ಚಾರಣೆ ಹಾಗೂ ಪ್ರಯೋಗಗಳ ವಿಚಾರದಲ್ಲಿ ಸಾಕಷ್ಟು ಸಂದೇಹ ಅವನ ಕಾಲಕ್ಕೇ ಕಾಣಿಸಿರಬೇಕೆಂದು ಶಬ್ದಮಣಿದರ್ಪಣದ ಒಂದೆರಡು ಆಧಾರಗಳಿಂದ ಹೇಳಬಹುದು. ಉದಾಹರಣೆಗೆ ಇವು ಪ್ರಾಸಸ್ಥಾನದಲ್ಲಿ ಬರಬಾರದೆಂದು ಕೇಶೀರಾಜನೇ ನಿಷೇಧಿಸಿದ್ದಾನೆ. ಅಲ್ಲದ ಶಾಸನಾಧಾರಗಳಿಂದ ಹೇಳುವುದಾದರೆ, ಬಹುಮಟ್ಟಿಗೆ ಹತ್ತನೆಯ ಶತಮಾನದ ಕಾಲಕ್ಕೆ ಱಕಾರ ರಕಾರದೊಡನೆ ಬೆರೆತುಹೋಗಲಾರಂಭವಾಗಿರಬೇಕು :

> The change of ṛ to r and of ḻ to ḷ has taken place during this period (i.e 9th and 10th centuries).[1]

ಮತ್ತು ೧೨, ೧೩ನೆಯ ಶತಮಾನದಲ್ಲಿ ಇದರ ಅಳಿವು ಆರಂಭವಾಗಿರಬೇಕು.

ಅಂತೂ ೞಕಾರಕ್ಕಿಂತಲೂ ಒಂದು ಶತಮಾನದಷ್ಟು ಹೆಚ್ಚು ಕಾಲ ಱಕಾರ ಬಾಳಿತು. ಆದರೂ ೧೫-೧೬ನೆಯ ಶತಮಾನಕ್ಕೆ ನಿಂತುಹೋಯಿತು. ಈ ವಿಧದಲ್ಲಿ ಱಕಾರ ನಿಂತುಹೋದ ಸುಮಾರು ಮೂರು ನಾಲ್ಕು ಶತಮಾನದ ತರುವಾಯ, ಇಂದು ನಾವು ಆ ಧ್ವನಿಮಾದ ಉಚ್ಚಾರ ಹಿಂದೆ ಹೇಗಿತ್ತು ಎಂದು ಹೇಳುವುದು ಕಷ್ಟವಾದರೂ ಒಂದೆರಡು ಸೋದರ ಭಾಷೆಗಳಲ್ಲಿ—ತಮಿಳು, ಮಲೆಯಾಳ—ಈ ಱ – ೞ ಎಂಬ ಎರಡು ಧ್ವನಿಗಳೂ ಇಂದಿಗೂ ಜೀವಂತವಾಗಿ ಇವೆಯಾದುದರಿಂದ, ಅವುಗಳ ನೆರವಿನಿಂದ, ಱಕಾರದ ಉಚ್ಚಾರವನ್ನು ಪರಿಭಾವಿಸಬಹುದು. ಆದರೆ ಱಕಾರದ ಉಚ್ಚಾರ ಉಳಿದಿರುವ ಭಾಗಗಳಲ್ಲೂ ಅದರ ಉಚ್ಚಾರದಲ್ಲಿ ಏಕರೂಪತೆ ಇಲ್ಲ. ಅಂತೂ

> Its sound resembles that of the English r (not the Irish or Scotch) after a long vowel, as in the word farm ; but it is pronounced farther back in the mouth, and in a still more liquid manner[2]

ಎಂದು ಕಾಲ್ಡ್‌ವೆಲ್ ಅಭಿಪ್ರಾಯಪಟ್ಟಿದ್ದಾನೆ.

ಮೂಲ ದ್ರಾವಿಡ ಭಾಷೆಯಲ್ಲಿ ಱಕಾರ ಇದ್ದಿತೆಂಬುದರಲ್ಲಿ ಸಂದೇಹವಿಲ್ಲ. ಏಕೆಂದರೆ ಇತರ ದ್ರಾವಿಡ ಭಾಷೆಗಳಲ್ಲಿ ಇದಕ್ಕೆ ಪೋಷಕವಾದ ಅಂಶಗಳಿವೆ: ತಮಿಳು, ಮಲೆಯಾಳ, ಪರ್ಜಿ ಮುಂತಾದ ದ್ರಾವಿಡ ಭಾಷೆಗಳಲ್ಲಿ ಱ ಧ್ವನಿ ಬಳಕೆಯಲ್ಲಿದೆ. ಭಾಷಾಶಾಸ್ತ್ರಜ್ಞರ ಅಭಿಪ್ರಾಯದಂತೆ ಮೂಲ ದ್ರಾವಿಡದಲ್ಲಿ ಸ್ಪರ್ಶವರ್ಣಗಳು ಇದ್ದುದು ಐದಲ್ಲ, ಆರು. ಆ ಆರನೆಯ ಸ್ಪರ್ಶವೇ (stop) ವರ್ತ್ಸ್ಯ (Alveolar). ಇದರ ಉಚ್ಚಾರಣೆ ಇಂಗ್ಲಿಷಿನ ṯ – ಧ್ವನಿಯ ಉಚ್ಚಾರವಿದ್ದಂತೆ ; ಅಂದರೆ ಇದು ಇಂಗ್ಲಿಷಿನ ಟ (t) ಮತ್ತು ಕನ್ನಡದ

[1] ಅದೇ. ಪುಟ ೧೦೬

[2] *ACGODLs*, ೧೯೫೬, ಪುಟ ೧೪೪

ತ ಧ್ವನಿಗಳ ನಡುವಿನ ಉಚ್ಚಾರ. ಕೋತ, ತೊದ ಮೊದಲಾದ ಭಾಷೆಗಳಲ್ಲಿ ಟ, ತ, ತ್ತ–ಇವು ಮೂರು ಧ್ವನಿಮಾಗಳು ಇಂದಿಗೂ ಇವೆ. ಇವು ಹಿಂದೆ ದ್ರಾವಿಡ ಭಾಷೆಗಳಲ್ಲಿ ಬಹುಮುಖ್ಯವಾದ ಧ್ವನಿಮಾಗಳಾಗಿದ್ದುವು. ಈ ಸ್ಪರ್ಶವರ್ಣ (stops) ಗಳಲ್ಲಿ ಒಂದು ಸ್ಪರ್ಶದಿಂದ ಮುಂದುವರಿದ 'ಱ' ಆಗಿರಬಹುದೆಂದೂ ತೋರುತ್ತದೆ.

ದ್ರಾವಿಡ ಭಾಷೆಗಳಲ್ಲಿ ಬಹುಮಟ್ಟಿಗೆ ಪದದ ಆದಿಯಲ್ಲಾಗಲಿ, ಪದದ ಅಂತ್ಯದಲ್ಲಿಯೇ ಆಗಲಿ ಱಕಾರ ನಿಲ್ಲದೆ ಪದಮಧ್ಯದಲ್ಲಿ ಮಾತ್ರ ಇದು ನಿಲ್ಲುತ್ತದೆಂದು ವಿದ್ವಾಂಸರು ವಿವರಣೆ ನೀಡಿದ್ದಾರೆ ಹಲವು ಉದಾಹರಣೆಗಳನ್ನಿತ್ತು. ಎಲ್ಲ ದ್ರಾವಿಡ ಭಾಷೆಗಳ ಧ್ವನಿ ವ್ಯವಸ್ಥೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮೂಲದ್ರಾವಿಡ ಭಾಷೆಯ ಸ್ವರೂಪವನ್ನು ಪುನರ್‌ರಚಿಸುವುದಾದರೆ ಮೂಲದ್ರಾವಿಡ ಭಾಷೆಯ ಪದಗಳ ಪ್ರಾರಂಭದಲ್ಲಿ ವರ್ತ್ಸ್ಯ ಧ್ವನಿಗಳಾಗಲಿ, ಪ್ರತಿವೇಷ್ಟಿತ ಅಥವಾ ಮೂರ್ಧನ್ಯ (Retroflex) ಧ್ವನಿಗಳಾಗಲಿ ಇರಲಿಲ್ಲವೆಂದೇ ಹೇಳಬೇಕಾಗುತ್ತದೆ; ಇದ್ದಿತೆಂದು ಸಾಧಿಸಲು ಆಧಾರಗಳು ಸಾಲವು. ಉದಾಹರಣೆಗೆ ಕುಈ, ತೆಲುಗು ಮುಂತಾದ ಮಧ್ಯದ್ರಾವಿಡ ಭಾಷೆಗಳಲ್ಲಿ ಪದಗಳ ಪ್ರಾರಂಭದಲ್ಲಿ ವರ್ತ್ಸ್ಯ ಹಾಗೂ ಪ್ರತಿವೇಷ್ಟಿತ ವ್ಯಂಜನ ಧ್ವನಿಗಳು ಇರುವ ಹಲವಾರು ಪದಗಳಿವೆ. ಆದರೆ ಜ್ಞಾತಿ ದ್ರಾವಿಡ ಭಾಷೆಗಳಲ್ಲಿ ಇದಕ್ಕೆ ಸಮೀಕರಣ ನಿದರ್ಶನಗಳು ಇಲ್ಲ.

ಇದರಿಂದ ಮಧ್ಯದ್ರಾವಿಡ ಭಾಷೆಗಳಲ್ಲಿ ಕಾಣುವ ಈ ಗುಣವೇನಿದ್ದರೂ ಯಾವುದೋ ಒಂದು ಪರಿಸರಕ್ಕೆ ಮಾತ್ರ ಸೀಮಿತವಾದ ವೈಶಿಷ್ಟ್ಯವೆಂದು ಹೇಳಬಹುದೇ ಹೊರತು, ಇದನ್ನು ಮೂಲದ್ರಾವಿಡ ಭಾಷೆಯ ಸ್ಥಿತಿಯ ಪ್ರತಿನಿಧಿಯೆಂದು ಅಂಗೀಕರಿಸಲು ಆಗುವುದಿಲ್ಲ.

> Since this is a localized feature of some member of the C Dr-group, it is possibe to reconstruct them for a common Pre-Telugu–Kui stage, but not for P Dr (i.eProto-Dravidian). All forms that come under this class can be explained through metathesis and vowel-contraction under certain conditions of syllabic distribution.[1]

ಈ ವಿವರಣೆ ಸಮರ್ಪಕವಾಗಿದ್ದು ಅಂಗೀಕಾರ ಯೋಗ್ಯವಾಗಿದೆ.

ಆದರೂ ಕನ್ನಡ ಭಾಷೆ ಮಾತ್ರ ಈ ನಿರೂಪಣೆಗೆ ಕೊಂಚಮಟ್ಟಿಗೆ ಅಪವಾದ (exception)ದಂತೆ ಇದೆ; ತಮಿಳು, ಮಲೆಯಾಳ ಮತ್ತು ಇತರ ದ್ರಾವಿಡ ಭಾಷೆಗಳಿಗಿಂತ ಹೊರತಾಗಿದೆ. ಉಳಿದ ಸೋದರಭಾಷೆಗಳಲ್ಲಿ ಇಲ್ಲದೆ (ಮಧ್ಯ ದ್ರಾವಿಡ ಭಾಷೆಗಳನ್ನು ಬಿಟ್ಟು), ಕನ್ನಡದಲ್ಲಿ ಮಾತ್ರ ಪದದ ಆದಿ ಹಾಗೂ ಪದಾಂತ್ಯದಲ್ಲಿ ಱಕಾರ

[1] Bh. Krishnamurti, Paper issued at Myoore, (SSOL), 1958 p. 4.

ನಿಂತುದಕ್ಕೆ ಕಾರಣವೇನು ?—ಇದು ಪರಿಶೀಲಿಸಬೇಕಾದುದು. ಪರಿಶೀಲನೆಗೆ ತೊಡಗುವ ಮುನ್ನ ಕೆಲವು ಉದಾಹರಣೆಗಳನ್ನು ಗಮನಿಸಬಹುದು :

ಪದದ ಪ್ರಾರಂಭದಲ್ಲಿ ಱಕಾರವಿರುವುದಕ್ಕೆ—

ಱಟ್ಟೆ (ಱಟ್ಟೆಕವಿ, ಱಟ್ಟೆಶಾಸ್ತ್ರ)
ಱಾಟಳ : ಱುಕ್ಕಟಂ (ಪಂಪರಾ)
ಱಿಂಕೆ (< ಎಱಂಕೆ) ?
ಱೊೞೋಡಾಡಿಸು : ಱೊೞುಪ್ಪ (ಸೂಕ್ತಿಸು, ೩–೧೧೮. < *ಉಱುಪ್ಪು)
ಱೆೞ್ಟೆ (ಜಯನೃ., ೧೫–೨೧)
ಱಂಚಿಕೆ (ಱಂಜಿಕೆ) : ಱವಕೆ (< ತ. ಇಱವಿಕ್ಕೈ)
ಱೊೞ್ಬೆ [(ಱಣಜ್ಜೆ)ಯೆಂದು ಹುಳುಕು, ಶಮದ] ಇತ್ಯಾದಿ.

ಇವುಗಳಲ್ಲಿ ಕೆಲವು ಪದಗಳು—ಱವಕೆ, ಱಿಂಕೆ, ಱೊೞುಪ್ಪ—ಅವುಗಳ ಪ್ರಾರಂಭದ ಸ್ವರ(ಅಥವಾ ವ್ಯಂಜನ)ವನ್ನು ಲೋಪಿಸಿಕೊಂಡು ನಿಂತ ರೂಪಗಳೆಂದು ಸಾಧಿಸಬಹುದಾದರೂ, ಉಳಿದ ಒಂದೆರಡು ಪದಗಳು ಸಮಸ್ಯಾತ್ಮಕವಾಗಿವೆ. ಇನ್ನು ಪದದ ಕೊನೆಯಲ್ಲಿ ಱಕಾರವಿರುವುದಕ್ಕೆ ಕನ್ನಡದಲ್ಲಿ ಹೆಚ್ಚಿನ ಪದಗಳು ಸಾಕ್ಷಿ ಹೇಳುತ್ತವೆ. ಏಱ್, ನೇಸಱ್, ಪಾಱ್, ಬಸಿಱ್—ಮುಂತಾದ ಸುಮಾರು ಎಪ್ಪತ್ತೇಳು ಱಾಂತ ಪದಗಳನ್ನು ಕೇಶಿರಾಜ ಧಾತು ಪ್ರಕರಣದಲ್ಲಿ ಕೊಟ್ಟಿದ್ದಾನೆ.[1]

ಆದರೆ ಇಷ್ಟು ಆಧಾರಗಳಿದ್ದೂ ಭಾಷಾವಿಜ್ಞಾನಿಗಳ ಹೇಳಿಕೆ ಬೇರೆ ತೆರನಾಗಿದೆ. ಅವರ ಅಭಿಪ್ರಾಯದಂತೆ ಈ ಱಕಾರ ಮೂಲದ್ರಾವಿಡದಲ್ಲಿ ನಿಸ್ಸಂದೇಹವಾಗಿ ಇದ್ದಿತಾದರೂ ಅದು ಪದಮಧ್ಯದಲ್ಲಿ ಪ್ರಯೋಗವಾಗುತ್ತಿದ್ದಿತೇ ಹೊರತು ಪದದ ಆದಿಯಲ್ಲಾಗಲಿ, ಅಂತ್ಯದಲ್ಲಾಗಲಿ ಅಲ್ಲ. ಇಲ್ಲಿ ಇನ್ನೂ ಒಂದೆರಡು ಸ್ವಾರಸ್ಯಗಳಿವೆ.

Proto-Dravidian *ṟṟ—survives in Tamil and Malayalam, but develops in two different ways tt, ṭṭ in different Languages ![2]

ತಮಿಳಿನಲ್ಲಿ ಎಲ್ಲಿ/–ಱ–/ಇದೆಯೋ ಅದು ಸಾಮಾನ್ಯವಾಗಿ ಕನ್ನಡದಲ್ಲಿ–ತ್ತ–(ಅಥವಾ –ಟ್ಟ–), ಮತ್ತು ತೆಲುಗು ಭಾಷೆಯಲ್ಲಿ –ಟ್ಟ–ಆಗಿರುತ್ತದೆ.

ಕೆಲವು ಉದಾಹರಣೆಗಳು :

ಏಱ್ಱ > ತಪ : ತೆ. ಏರು

[1] ಶಮದ, ೧೯೬೩, ಪುಟಗಳು ೨೯೮–೨೯೯

[2] M. B. Emeneau *Linguistic Pre-history of India,* PAPS, 98, 4, p. 289

ಊಱ್ಱು > ಊಟಿ (? < ಒರತೆ)

ಪೆಱ್ಱು > ಪೆಟ್ಟು

ಸುಱ್ಱುಯಿರ್ > ಕುತ್ತಿಸಟಿರ್

ಚಿಱ್ಱುಲಿ > ಚಿಟ್ಟೆಲಿ : ತೆ. ಚಿಟ್ಟೆಲುಕ

ಕಿಱ್ಱಡಿ > ಕಿತ್ತಡಿ

ಏಱ್ಱು > ಏಟು

[ಕೆಱು + ಇಲ್ — > ಕೆದಿಲಾಯ-ಱ- > -ದ್]

ಇತ್ಯಾದಿಯಾದ ಇನ್ನೂ ಹತ್ತಾರು ನಿದರ್ಶನಗಳನ್ನು ನೋಡಬಹುದು. ಕನ್ನಡದಲ್ಲಿ ಪದಮಧ್ಯದಲ್ಲಿ -ಱ- ಕಾರವಿದ್ದುದಕ್ಕೆ ಸೆಱಪು (ಹೋ. ತ. ಶಿಱಪ್ಪು)[1]—ಮುಂತಾದ ಕೆಲವು ಪದಗಳಿವೆ. ಮೂಲದ್ರಾವಿಡ ಭಾಷೆಯಲ್ಲಿ ಪದಮಧ್ಯದ ದೀರ್ಘ ಸ್ವರಾನಂತರ (-ಸ) ಇದ್ದ -ಱ-ಕಾರ, ಅಂದರೆ ದ್ವಿತ್ವಱ, ತಮಿಳಿನಲ್ಲಿ -ಱ್ಱ- ಆಗಿಯೇ ಉಳಿದರೆ, ಕನ್ನಡದಲ್ಲಿ -ತ್ತ-, ಮತ್ತು ತೆಲುಗಿನಲ್ಲಿ -ಟ್ಟ- ಆಗಿರಬಹುದೆಂಬುದನ್ನು ಸೂತ್ರ ರೂಪದಲ್ಲಿ ಹೀಗೆ ತೋರಿಸಬಹುದು :

*-ಸಱ- > ತ.-ಱ್ಱ- > ಕ.-ತ್ತ > ತೆ.-ಟ್ಟ-

| ಉದಾ : | ತ. | ಕ. | ತೆ. |
|---|---|---|---|
| | ಮಾಱ್ಱು | ಮಾತು | ಮಾಟ |
| | ಪಱ್ಱು | ಪತ್ತು | ಪಟ್ಟು |

ಇದಲ್ಲದೆ ಱಕಾರ ಒತ್ತಕ್ಷರ ಮಾತ್ರ ಆಗಿಬಂದಾಗ, ಸಾಮಾನ್ಯವಾಗಿ ಅದು -ನ್ಱು ಆಗಿ ಬಂದಾಗ, ಕನ್ನಡ, ತಮಿಳು ಮತ್ತು ತೆಲುಗು ಭಾಷೆಗಳಲ್ಲಿನ ರೂಪಗಳು ಇಂತಿವೆ :

1 ಸೆಱಪುಗೈದನನಂತನ್ . . . ಪಂಪಭಾರತ, ೪—೪೪

| ತ | ಕ | ತೆ |
| --- | --- | --- |
| ಕುನ್ಱು | ಕುಂದು | ಕುಂಡು |
| ಪನ್ಱಿ | ಪಂದಿ > ಹಂದಿ | ಪಂದಿ |
| ಒನ್ಱು | ಒಂದು | ಒಕಟಿ |
| ಕನ್ಱು | ಕಂದು | |
| ನನ್ಱಿ | ನನ್ನಿ | |

ಕನ್ನಡದ ಪದಗಳಲ್ಲಿ ಱಕಾರ ಬಿಡಿಯಾಗಿ ನಿಂತಾಗ ರಕಾರವಾಯಿತು. ಒತ್ತಕ್ಷರವಾಗಿ ನಿಂತಾಗ ವಿಶ್ಲೇಷವಾಯಿತು, ಇಲ್ಲವೇ ಅದರ ಮುಂದಿನ ವ್ಯಂಜನ ರೂಪವನ್ನು ತಳೆಯಿತು ; ಮಱೆ > ಮರೆ : ತೋಱ್ > ತೋರುವ : ತೋಱ್ಕೆ > ತೋರಿಕೆ.... ಇತ್ಯಾದಿ. ಡಕಾರ ಳಕಾರಗಳು ಏಕಸ್ಥಾನೀಯಗಳೆಂದು ಕೇಶಿರಾಜ ಹೇಳಿರುವುದು ಗಮನಾರ್ಹವಾಗಿದೆ. ಏಕೆಂದರೆ ಡ > ಳ ಆಗುವುದು ಕೆಲವು ದ್ರಾವಿಡ ಭಾಷೆಗಳಲ್ಲಿ ಕಾಣುತ್ತದೆ. ಒಂದೆರಡು ನಿದರ್ಶನಗಳನ್ನು ನೋಡಿದರೆ ಇದು ಹೆಚ್ಚು ಮನದಟ್ಟಾಗುತ್ತದೆ :

ತೆಲುಗು : ಚೆಡುಚು > ಚೆಳಚು

ಗೋಂಡಿ : ಜೋಡಿ > ಜೋಳಿ

ಬ್ರಾಹೂಈ : ಒಡೆ =(ಅವನು) > ಓಳ್ : ಹೋ. ತೆ. ವಾಡು

ಪಾಶ್ಚಾತ್ಯರ ಕಿವಿಗೆ ನಾವು ಉಚ್ಚರಿಸುವ ಡಕಾರ ಸಾಮಾನ್ಯವಾಗಿ ರಕಾರವಾಗಿ ಕೇಳಿಸುತ್ತದೆ. ಇದರಿಂದ ಡಕಾರವಿರುವ ಎಷ್ಟೋ ನಾಮಪದಗಳನ್ನು ಅವರು ರಕಾರದ ಪದಗಳನ್ನಾಗಿ ಮಾರ್ಪಡಿಸಿದ್ದಾರೆ. ಅವರು ವ್ಯತ್ಯಾಸಗೊಳಿಸಿದ ಪದಗಳನ್ನೇ ನಾವು ಸರಿಯಾದ ರೂಪಗಳೆಂದು ಸ್ವೀಕರಿಸಿ ಬಳಕೆಗೆ ತಂದುಬಿಟ್ಟಿದ್ದೇವೆ.

ಈ ಉದಾಹರಣೆಗಳನ್ನು ನೋಡಿ :

ಕಾರವಾರ < ಕಡವಾಡ

ಧಾರವಾರ್ < ಧಾರವಾಡ

ಅರ್ಕ (ಸಂ) < ಅಕ್ಕ (ಅಕ್ಕಸಾಲಿಗ)

ಬೆರ್ಕು < ಬೆಕ್ಕು

ಕೆನರ < ಕನ್ನಡ

ಕ್ಯಾನರೀಸ್ < ಕನ್ನಡ

ಕುರುಖ್ < ಕುಡುಖ್

ಸಾಮಾನ್ಯ ರೇಫ ಧ್ವನಿ ಸಂಧಿಕಾರ್ಯ ನಡೆದಾಗ ನಾಸಿಕ್ಯ ಗುಣವನ್ನು ಪಡೆಯುತ್ತದೆ. ಉದಾಹರಣೆಗೆ ಒರ್ ಎಂಬುದು ಒಂದು, ಒಂಟಿ, ಒನ್ಮೆ ಎಂಬ ರೂಪಗಳನ್ನು ಧಾರಣೆ ಮಾಡುವಾಗ ಇದನ್ನು ಗಮನಿಸಬಹುದು.* ಱ ಮತ್ತು ೞ ಕಾರಗಳನ್ನು ಪುನರುಜ್ಜೀಸುವ ವಿನಮ್ರ ಪ್ರಯತ್ನಗಳು ಕಳೆದ ಶತಮಾನದ ಉತ್ತರಾರ್ಧದಿಂದ ಮೊದಲಗೊಂಡು ಈ ಶತಮಾನದ ಆದಿಯವರೆಗೂ ಪಾಂಡಿತ್ಯಪ್ರಿಯ ಪಂಡಿತ ಮಂಡಳಿಯಿಂದ ನಡೆದಿವೆ.

ದಿವಂಗತರಾದ ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್ ಬಹದ್ದೂರ್ ರಾ. ನರಸಿಂಹಾಚಾರ್ಯರು ಈ ಱ ಮತ್ತು ೞ ಧ್ವನಿಗಳನ್ನು ಕನ್ನಡ ಜನತೆ ಉಳಿಸಿಕೊಳ್ಳುವಂತೆ, ಅಳಿದುಹೋಗಲು ಅವಕಾಶವೀಯದಂತೆ ಕೇಳಿಕೊಂಡ ಕೆಲವು ಮಾತುಗಳು ಮನನೀಯವಾಗಿವೆ : "ಱ, ೞ–ಎಂಬ ಅಕ್ಷರಗಳು ಪ್ರಾಯಿಕವಾಗಿ ಇತರ ದ್ರಾವಿಡ ಭಾಷೆಗಳಲ್ಲೆಲ್ಲಾ ನಾಡಿಕೆಯಲ್ಲಿವೆ, ಕನ್ನಡದಲ್ಲಿ ಮಾತ್ರ ಅವು ಅದೃಶ್ಯವಾಗಿ ಹೋಗಿದ್ದುವು. ಮೆ|| ಕಿಟ್ಟೆಲ್, ವೇ|| ರೈಸ್, ಕಾವ್ಯಮಂಜರೀ ಸಂಪಾದಕರು—ಇವರುಗಳು ಅದನ್ನು ಪ್ರಚಾರಕ್ಕೆ ತರುತ್ತ ಇರುವುದು ಕರ್ನಾಟಕ ಭಾಷಾಭಿಮಾನಿಗಳಿಗೆ ಸಂತೋಷವನ್ನು ಉಂಟು ಮಾಡದೆ ಇರಲಾರದು. ಈ ಅಕ್ಷರಗಳು ಶಬ್ದವ್ಯುತ್ಪತ್ತಿಶಾಸ್ತ್ರದ (Philology) ಜ್ಞಾನಕ್ಕೆ ಬಹಳಮಟ್ಟಿಗೆ ಸಹಕಾರಿಗಳಾಗಿವೆ. ತತ್ಕಾಲದಲ್ಲಿ ಇವನ್ನು ಕನ್ನಡ ಗದ್ಯಗ್ರಂಥಗಳಲ್ಲಿ ಪ್ರಚಾರಕ್ಕೆ ತರುವುದು ಅನಾವಶ್ಯಕವಾಗಿ ತೋರಿದರೂ, ಪದ್ಯಗ್ರಂಥಗಳಲ್ಲಿಯಾದರೂ ಪ್ರಚಾರಕ್ಕೆ ತರುವುದು ಆದರಣೀಯವಾದ ವಿಷಯವೆಂದು ಭಾವಿಸುತ್ತೇನೆ."[1]

ಕೇಶಿರಾಜನಿಂದ ಮೊದಲುಗೊಂಡು ರಾ. ನರಸಿಂಹಾಚಾರ್ಯರವರೆಗೆ ಹಿರಿಯ ವಿದ್ವಾಂಸರು ಎಷ್ಟೋ ಕಳಕಳಿಯಿಂದ ಈ ಱ ಮತ್ತು ೞ ಸ್ವನಿಮಾಗಳನ್ನು ಅಳಿಯಲೀಯದೆ ಉಳಿಸಿಕೊಳ್ಳಲು ವಿಜ್ಞಾಪಿಸಿಕೊಂಡರೂ ಆ ಎರಡು ಧ್ವನಿಮಾಗಳು ಕನ್ನಡಿಗರು ಕಂಡಂತೆ ಕಣ್ಣೆದುರಿನಲ್ಲೇ ಕಣ್ಮರೆಯಾದವು. ಹೀಗಾಗಿ ಶಬ್ದದ ಅಥವಾ ಧ್ವನಿಯ ಅಳಿವು—ಉಳಿವುಗಳು ಕೇವಲ ನಮ್ಮ ಕೈಯಲ್ಲಿ ಇಲ್ಲ. ನಿತ್ಯಪರಿವರ್ತನಶೀಲ ಆಡುನುಡಿಯಲ್ಲಿ ಈ ಪರಿವರ್ತನೆಗಳು ಅಗತ್ಯವಲ್ಲದಿದ್ದರೂ ಅನಿವಾರ್ಯ.[2]

ಅರಳು > ಅಳು.
ಒರಳು > ಒಳ್ಳು
ಕರುಳು > ಕಳ್ಳು
ಕುರುಳು > ಕುಳ್ಳು : ಕಾಡಕುರುಳು > ಕಾಕುಳ್ಳು
ಊರುಗೋಲು > ಊಡುಗೋಲು

---

* ಇದನ್ನೆ, ಕೇಶಿರಾಜ ಅನುನಾಸಿಕಮುಂ, ನಿರನುನಾಸಿಕಮುಂ ಅಪ್ಪುವು ಎಂದು ತಿಳಿಸಿರುವುದು.

1 ನೀತಿಮಂಜರಿ, ಭಾಗ–೧, ಎರಡನೆಯ ಮುದ್ರಣ, ೧೮೯೮

2 ಹಂಪನಾ, ರೇಫ–ಶಕಟರೇಫ ; ರ–ಱ, ಕನ್ನಡ ನುಡಿ, ೨೮–೧೦ ಎಂಬ ಲೇಖನದಲ್ಲಿ ವಿವರಿಸಿದುದನ್ನು ಇಲ್ಲಿ ಹೆಚ್ಚು ಉದಾಹರಣೆಗಳೊಡನೆ ಕೊಟ್ಟಿದ್ದೇನೆ.

ದುರ್ಯೋಧನ > ದುಜ್ಜೋಧನ :-ರ್ > -ಜ್-
ಅರ್ಕ (ಸಂ) > ಅಕ್ಕ (ಅಕ್ಕಸಾಲಿಗ)
ಬೆರ್ಕು > ಬೆಕ್ಕು

೧. ಮೂ. ದ್ರಾ. /ಕ್-/ ವು ಕನ್ನಡ ಮತ್ತು ತುಳುಗಳಲ್ಲಿ ಯಾವ ಬದಲಾವಣೆಗೂ ಒಳಗಾಗಿಲ್ಲ.

೨. ಮೂ. ದ್ರಾ. /ಕ್-/ ವು ತಮಿಳು, ತೆಲುಗು, ಮಲೆಯಾಳಂ ಭಾಷೆಗಳಲ್ಲಿ ಪೂರ್ವೇತರ (N.F.) ಸ್ವರಗಳು ಪರವಾದರೆ ಯಾವ ವ್ಯತ್ಯಾಸವನ್ನೂ ಪಡೆಯದೆ /ಕ್-/ ಆಗಿಯೇ ಉಳಿಯುತ್ತದೆ.

೩. ಮೂ. ದ್ರಾ. /ಕ್-/ ತೆಲುಗು ಭಾಷೆಯಲ್ಲಿ ಪೂರ್ವ (Front) ಸ್ವರಗಳು ಪರವಾದಾಗ /ಚ್-/ ಆಗಿ ಮಾರ್ಪಡುತ್ತದೆ.

೪. ಮೂ. ದ್ರಾ. /ಕ್-/ ವು ತಮಿಳು ಮತ್ತು ಮಲೆಯಾಳಂಗಳಲ್ಲಿ ಪೂರ್ವಸ್ವರ ಮತ್ತು ಮೂರ್ಧನ್ಯ ವ್ಯಂಜನ ಪರವಾದಾಗ /ಕ್-/ ಆಗಿಯೇ ಉಳಿಯುತ್ತದೆ.

೫. ಮೂ. ದ್ರಾ. /ಕ್-/ ವು ತಮಿಳು ಮತ್ತು ಮಲೆಯಾಳಂಗಳಲ್ಲಿ ಪೂರ್ವಸ್ವರ ಮತ್ತು ಮೂರ್ಧನ್ಯವಲ್ಲದ ವ್ಯಂಜನ ಪರವಾದಾಗ /ಚ್-/ ಆಗಿ ಮಾರ್ಪಡುತ್ತದೆ.

ಮೇಲಿನ ೩ನೇ ನಿಯಮಕ್ಕೆ ಅಪವಾದಗಳಾಗಿ ತೆಲುಗಿನಲ್ಲಿ 'ಕೆನಿಯು' 'ಕೆಡೆಯು' ಎಂಬಂತಹ ಪದಗಳು ಇನೆಯಾದರೂ ಆ ಪದಗಳು ಬಹುಶಃ *ಕ್- > ಚ್- ಪರಿವರ್ತನೆ ಪೂರ್ಣವಾದ ಮೇಲೆ ಕನ್ನಡದಿಂದ ಎರವಲು ತಂದುಕೊಂಡವಾಗಿರಬಹುದು.

| ಮೂದ್ರಾ | ಪರಿಸರ[1] | ತ | ಮ. | ಕ | ತು | ತೆ | ಕುಈ | ಗೋಂ | ಕೋಲಾ | ಪ | ಕುರು | ಮಲ್ತೊ | ಬ್ರಾ | |
|---|---|---|---|---|---|---|---|---|---|---|---|---|---|---|
| * ಕ್ – | ಪೂಸ್ವ + ಮೂವ್ಯಂ | ಕ್ – | ಕ್ – | ಕ್ – | ಕ್ – | ಚ್ – | ಕ್ – | ಕ್ – | ಕ್ – | ಕ್ – | ಕ್ – | ಕ್ – | ಕ್ – | (– ಈ) |
| | | | | | | | | | | | —— | —— | —— | |
| | | | | | | | | | | | ಖ್ – | q – | ಖ | (– ಏ) |
| | ಪೂಸ್ವ – ಮೂವ್ಯಂ | ಚ್ – | ಚ್ – | ಕ್ – | ಕ್ – | ಚ್ – | ಕ್ – | ಕ್ – | ಕ್ – | ಕ್ – | ಖ್ – | q – | ಖ – | (– ಏ) |
| | ಪೂರ್ವೇತರ ಸ್ವರ | ಕ್ – | ಕ್ – | ಕ್ – | ಕ್ – | ಕ್ – | ಕ್ವ್ – | ಕ್ .. | ಕ್ – | ಕ್ – | ಖ್ | q – | ಖ್ | |

ಮೂದ್ರಾ = ಮೂಲದ್ರಾವಿಡ (Proto-Dravidian)

ಪೂಸ್ವ = ಪೂರ್ವ ಸ್ವರಗಳು (ಉದಾ : ಇ, ಎ.)

ಮೂವ್ಯಂ = ಮೂರ್ಧನ್ಯ ವ್ಯಂಜನ (Retroflex consonant)

ಪರಿಸರ = Environment

ಪೂರ್ವೇತರ ಸ್ವರಗಳು = ಉದಾ : ಅ, ಉ, ಒ.

[1] ಇಂಗ್ಲಿಷಿನ Environment ಎಂಬ ಪದಕ್ಕೆ ಸಮನಾಗಿ ಪರಿಸರ ಎಂಬ ಪದವನ್ನು ಇಲ್ಲಿ ಅಂಗೀಕರಿಸಿದೆ. ಕೆಲವರು ಪರಿಸರಣ ಎಂದೂ ಕೊಟ್ಟಿದ್ದಾರೆ. ಆದರೆ ಪರಿಸರ ಎಂಬಷ್ಟೇ ಸಾಕೆಂದು ತೋರುತ್ತದೆ.

## ಕಕಾರ, ಚಕಾರ : / ಕ್- / , / ಚ್- /

ಮೂಲ ದ್ರಾವಿಡ ಭಾಷೆಯಲ್ಲಿ ಕ ಧ್ವನಿಯ ವ್ಯವಸ್ಥೆ ಹೇಗಿತ್ತು ?—ಎಂಬ ವಿಚಾರದಲ್ಲಿ ಕಾಲ್ಡ್‌ವೆಲ್ಲನ ಕಾಲದಿಂದಲೂ ವಿಪುಲವಾದ ಚರ್ಚೆ ನಡೆದಿದೆ. ಮೂಲದ್ರಾವಿಡ ಭಾಷೆಯಲ್ಲಿ 'ಕ' ಧ್ವನಿಮಾ ಇದ್ದಿತೆಂಬುದರಲ್ಲಿ ಅನುಮಾನವಿಲ್ಲ; ಜೊತೆಗೆ ದ್ರಾವಿಡ ಭಾಷೆಗಳಲ್ಲಿ ಮೊದಲು ಪರುಷ ಅಥವಾ ಅಘೋಷ ಧ್ವನಿಗಳೇ ಇದ್ದುವೆಂಬ ವಾದ ಈ ಹೇಳಿಕೆಯನ್ನು ಸದೃಢವಾಗಿ ಸಮರ್ಥಿಸುತ್ತದೆ. ಮೂಲ ದ್ರಾವಿಡ ಭಾಷೆಯಲ್ಲಿ ಇದ್ದ ಅನೇಕ ಧ್ವನಿಮಾಗಳು ಉಳಿದಿವೆ, ಕೆಲವು ಅಳಿದಿವೆ ; ಕೆಲವು ಪರಿವರ್ತನಗೊಂಡು ಆ ವ್ಯತ್ಯಸ್ಥ ರೂಪದಲ್ಲಿ ಬಾಳಿವೆ, ಮತ್ತೆ ಕೆಲವು ಹೊಸದಾಗಿ—ಅನ್ಯಭಾಷೆಯ ಸಂಪರ್ಕದಿಂದ ಬಂದು ಸೇರಿವೆ. ಈ ನಿಟ್ಟಿನಿಂದ ನೋಡುವಾಗ ಕಕಾರದ ಚರಿತ್ರೆ ವಿಶಿಷ್ಟವಾದುದು. ಏಕೆಂದರೆ ಕ—ಎಂಬ ಒಂದು ಧ್ವನಿ ಚ, ಎಂಬ ಬೇರೆ ಧ್ವನಿಗೆ ಮೂಲವಾಗಿದೆ. ಎಲ್ಲ ದ್ರಾವಿಡ ಭಾಷೆಗಳ ಪದಗಳನ್ನು ಉದಾಹರಣೆಯಾಗಿ ಇಟ್ಟುಕೊಂಡು ಪರಿಶೀಲಿಸಿದಾಗ ಕ ಧ್ವನಿ ಯಾವುದೋ ಒಂದು ವ್ಯವಸ್ಥಿತವಾದ ಕೆಲವು ಪರಿಸರಗಳಲ್ಲಿ ಮಾತ್ರ ಬೇರೆ ಬೇರೆ ಧ್ವನಿಯಾಗಿ ಮಾರ್ಪಟ್ಟಿರುವುದು ಕಾಣುತ್ತದೆ.

ಎಲ್ಲ ದ್ರಾವಿಡ ಭಾಷೆಗಳಲ್ಲಿ ಈ ಧ್ವನಿಯ ವಿಕಾಸವನ್ನು ವಿವರವಾಗಿ ಹೋಲಿಸಿ ನೋಡಿದಾಗ ಕಂಠ್ಯಧ್ವನಿಯಾದ ಕಕಾರ, ತಾಲವ್ಯಧ್ವನಿಯಾದ ಚಕಾರಕ್ಕೆ, ಅಥವಾ ಸಕಾರಕ್ಕೆ ತಿರುಗಿದುದು ಕ್ರಿ.ಶ.ದ ಈಚೆಗೆ, ಬಹುಶಃ ಆರು-ಏಳನೆಯ ಶತಮಾನಗಳಲ್ಲಿ ಎಂದು ತೋರುತ್ತದೆ. ಅಲ್ಲದೆ ಈ ಧ್ವನಿಪರಿವರ್ತನೆ ಆಯಾ ದ್ರಾವಿಡ ಭಾಷೆಗಳಲ್ಲಿ ಬಹುಮಟ್ಟಿಗೆ ಸ್ವತಂತ್ರವಾಗಿ ನಡೆದಂತೆ ಕಾಣುತ್ತದೆ. ಅಶೋಕನ ಶಿಲಾಶಾಸನಗಳಲ್ಲಿಯೇ ಕೇರಳ, ಕೇರಳಪುತ್ರ—ಎಂಬ ರೂಪಗಳು ದೊರೆಯುವುದರಿಂದ ಅವನ ಕಾಲಕ್ಕಾಗಲೇ, ಅಂದರೆ ಕ್ರಿ.ಪೂ. ಮೂರನೆಯ ಶತಮಾನದ ಹೊತ್ತಿಗೆ ಕಕಾರ (ಧ್ವನಿ) ಇತ್ತೆಂದು ನಿಚ್ಚಳವಾಗುತ್ತದೆ. ಇದರ ಜೊತೆಗೆ ಕ್ರಿ.ಪೂ.ದ ವೇಳೆಗೆ ಕಕಾರ > ಚಕಾರವಾಗಿರಲಿಲ್ಲವೆಂದೂ ತಿಳಿದುಬರುತ್ತದೆ. ಕನ್ನಡ, ತುಳು, ತೊದ, ಬ್ರಾಹೂಈ, ಕುರುಖ್—ಈ ಭಾಷೆಗಳಲ್ಲಿ ಹೆಚ್ಚು ಕಡೆಗಳಲ್ಲಿ ಕಕಾರ ಕಕಾರವಾಗಿಯೇ ಇಂದಿಗೂ ಉಳಿದಿದೆ—ಪದದ ಮೊದಲಲ್ಲಿ ಈ ಧ್ವನಿ ನಿಂತಾಗ. ತಮಿಳು, ಮಲೆಯಾಳ, ಮತ್ತು ತೆಲುಗು ಭಾಷೆ

ಗಳಲ್ಲಿ ಕ ಧ್ವನಿ ಚ ಧ್ವನಿಯಾಗಿದೆ. ಕಂಠ್ಯ ತಾಲವ್ಯವಾಗಿದೆ, ಕೆಲವು ಪರಿಸರಗಳಲ್ಲಿ.

ಮೂಲ ದ್ರಾವಿಡದ ಕಕಾರ ಬೇರೆ ಬೇರೆ ದ್ರಾವಿಡ ಭಾಷೆಗಳಲ್ಲಿ ಬೇರೆ ಬೇರೆ ಧ್ವನಿಗೆ ತಿರುಗಿದುದನ್ನು ನಿದರ್ಶನಗಳೊಡನೆ ನೋಡಬಹುದು. ಅದಕ್ಕೆ ಮೊದಲು ತೆಲುಗು ಭಾಷೆಯಲ್ಲಿ ಇಂದು ಚಕಾರದ ಬಳಕೆ ಅಧಿಕವಾಗಿದ್ದರೂ, ಹಿಂದೆ ಅನೇಕ ಕಡೆಗಳಲ್ಲಿ ಕಕಾರವೇ ಇದ್ದಿತೆಂಬುದನ್ನು ಸ್ಪಷ್ಟಪಡಿಸಿಕೊಳ್ಳುವುದು ಅಗತ್ಯ. ತಮಿಳು ಭಾಷೆಯಲ್ಲಿ ಆಗಲೇ ಒಮ್ಮೆ ತಿಳಿಸಿರುವಂತೆ, ಕಕಾರ ಚಕಾರವಾದುದು ಕ್ರಿ.ಶ.ದಿಂದ ಈಚೆಗೆ ಹೊರತು ಅದಕ್ಕೆ ಮೊದಲಲ್ಲ. ತೆಲುಗು ಭಾಷೆಯಲ್ಲಿ ಈ ವ್ಯತ್ಯಾಸ ಆದ ಕಾಲವೇ ಬೇರೆ, ಅದು ತಮಿಳಿನ ಕಾಲಕ್ಕೆ ಸೇರುವುದಿಲ್ಲ. ಅಂದರೆ ಕ– >ಚ–ಆಗುವ ವಿಚಾರದಲ್ಲಿ ತಮಿಳು ತೆಲುಗು ಭಾಷೆಗಳಿಗೆ ಸಂಬಂಧವಿಲ್ಲ. ತೆಲುಗು ಭಾಷೆಯಲ್ಲಿ ಇಕಾರ, ಎಕಾರಗಳು ಅಥವಾ ಈಕಾರ ಏಕಾರಗಳು ಕಕಾರದ ಮುಂದೆ ಬಂದರೆ ಕ ಧ್ವನಿ ಕೂಡಲೆ ಚ ಧ್ವನಿಯಾಗುತ್ತದೆ. ತಮಿಳು ಮಲೆಯಾಳಗಳಲ್ಲಿ ಮೂರ್ಧನ್ಯ ಬಂದರೆ ಆಗುವುದಿಲ್ಲ; ಇಈ ಎಏ ಎಂಬ ಸ್ವರಗಳಲ್ಲಿ ಒಂದು ಕಕಾರದ ಮುಂದೆ ಇದ್ದಾಗ ಮತ್ತು ಆ ಸ್ವರಗಳ ಮುಂದೆ ಪ್ರತಿವೇಷ್ಟಿತ ಧ್ವನಿಮಾಗಳು ಇಲ್ಲದಿದ್ದಾಗ ಮಾತ್ರ ಕಕಾರ ಚಕಾರವಾಯಿತು. ಇತ್ತೀಚಿನ ಸಂಶೋಧನೆಯಂತೆ ಕನ್ನಡದಲ್ಲಿಯೂ ಆದರ ಕೆಲವು ಉಪಭಾಷೆಗಳಲ್ಲಿ ಕಕಾರದ ಮುಂದೆ ಇಈ ಎಏ ಎಂಬ ಸ್ವರಗಳು ಇದ್ದಾಗ ಕಕಾರ ಚಕಾರವಾಗಿರುವುದಾಗಿ ತಿಳಿದುಬಂದಿದೆ. ಉದಾ : ಕೆ. ಆರ್. ನಗರ ತಾ. ನ ಆದಿಕರ್ನಾಟಕರ ಕನ್ನಡ. ಕ್ರಿ. ಶ. ೬೦೦ರ ತೆಲುಗು ಶಾಸನಗಳಲ್ಲಿ ಕಕಾರದ ರೂಪಗಳೇ ಸಿಗುತ್ತವೆ.

ಉದಾ :

ಕೇಸಿರಿ (>ಚೇಸಿರಿ), ಪನಿಕೇಸಿರಿ (>ಪನಿಚೇಸಿರಿ)
ಕೆದಱು (>ಚೆದಱು)

ಆದುದರಿಂದ ತೆಲುಗು ಭಾಷೆಯಲ್ಲಿ ಕಕಾರದ ಈ ಧ್ವನಿಪರಿವರ್ತನೆ ಕ್ರಿ. ಶ. ಆರನೆಯ ಶತಮಾನದ ಅನಂತರ ಕಾಲದಲ್ಲಿ ಆಗಿರಬಹುದು. ಹೀಗಾಗಿ ತೆಲುಗು ಭಾಷೆಯಲ್ಲಿ ತಮಿಳಿಗಿಂತ ತಡವಾಗಿ, ತೀರ ತರುವಾಯದ ಕಾಲದಲ್ಲಿ ಈ ಧ್ವನಿಪರಿವರ್ತನೆ ಆಯಿತೆಂದು ಹೇಳಬಹುದು.

ಕಕಾರದ ಪರಿವರ್ತನೆ ಕೆಲವು ವಿಶೇಷ ಸಂದರ್ಭಗಳಲ್ಲಿ ಮಾತ್ರ ಹೇಗೆ ಆಯಿತೆಂದು ನೋಡಬಹುದು. ಕಕಾರ ಮೂಲ ದ್ರಾವಿಡ ಪದದ ಆದಿಯಲ್ಲಿ ನಿಂತಾಗ, ಕೆಲವು ದ್ರಾವಿಡ ಭಾಷೆಗಳಲ್ಲಿ ಚಕಾರವಾಯಿತು—ಎಂದು ವಿವರಿಸುವ ಮೊದಲು ಒಂದು ಮುಖ್ಯವಾದ ಮಾತು ನೆನಪಿನಲ್ಲಿ ಇಡಬೇಕು. ಯಾವುದೇ ಒಂದು ಧ್ವನಿ ಮತ್ತೊಂದು ಧ್ವನಿಯಾಗಿ ವ್ಯತ್ಯಾಸ ಹೊಂದುವ ಕಾಲದಲ್ಲಿ ಆ ಧ್ವನಿ ಇತರ ಯಾವ ಧ್ವನಿಗಳ ಪರಿಸರದಲ್ಲಿ ನಿಂತಿದೆ ಎಂಬುದನ್ನು ಪರಿಶೀಲಿಸುವುದು ಅವಶ್ಯ. ಮೂಲ ದ್ರಾವಿಡದ ಕ ಧ್ವನಿಯ ಮುಂದುಗಡೆ ಪೂರ್ವೇತರ ಸ್ವರಗಳು ನಿಂತಾಗ ಆ ಧ್ವನಿ ಯಾವ

ವ್ಯತ್ಯಾಸವನ್ನೂ ಪಡೆಯದ ಮೊದಲಿನಂತೆಯೇ ತೆಲುಗು, ತಮಿಳು, ಮಲೆಯಾಳ ಭಾಷೆಗಳಲ್ಲೂ ನಿಲ್ಲುತ್ತದೆ. ಆದರೆ ಆದೇ ಕ ಧ್ವನಿಯ ಮುಂದುಗಡೆ ಪೂರ್ವ ಸ್ವರಗಳು ಬಂದುದೇ ಆದರೆ ಆಗ ತೆಲುಗು ಭಾಷೆಯಲ್ಲಿ ಕ ಧ್ವನಿ ಚ ಧ್ವನಿಯಾಗಿ ಪರಿವರ್ತನೆ ಪಡೆಯುತ್ತದೆ. ಮೂಲದ್ರಾ *ಕ್-ಕನ್ನಡ ಮತ್ತು ಮಧ್ಯ ದ್ರಾವಿಡ ಭಾಷೆಗಳು ಉಳಿಸಿ ಕೊಂಡಿವೆ. ತ. ತೆ. ಮ. ಭಾಷೆಗಳಲ್ಲಿ ಈ ತಾಲವ್ಯೀಕರಣಕ್ರಿಯೆ ನಡೆದಿದ್ದರೂ, ವಿಶೇಷ ಪರಿಸರದಲ್ಲಿ ತ.ಮ.ಗಳಲ್ಲಿ ತಾಲವ್ಯೀಕರಣಕ್ರಿಯೆಗೆ ಹೇಗೆ ಅಡ್ಡಿಯುಂಟಾಗುತ್ತದೆ ಯೆಂಬುದನ್ನೂ ಮುಂದೆ ತಿಳಿಸಿದೆ.

| | | | | |
|---|---|---|---|---|
| | | | | ಕ, ತೆ, ತ, ಮ |
| ಮೂದ್ರಾ*ಕ್- > | >ಕ್- | ಅ- ಉ- ಒ- | ಪೂರ್ವೇತರ ಸ್ವರಗಳು | >ಕ್- |
| | | | | ಕ, (ತು) : ತ, ತೆ, ಮ |
| | >ಕ್- | ಇ-(ಈ) ಎ-(ಏ) | ಪೂರ್ವ ಸ್ವರಗಳು | >ಕ್-: ಚ್- |

ಆದರೆ ತ.ಮ. ಗಳಲ್ಲಿ ಪೂರ್ವ ಸ್ವರಗಳಿದ್ದರೂ ಅವುಗಳಾದ ಮೇಲೆ ಪ್ರತಿವೇಷ್ಟಿತ ಧ್ವನಿಗಳಾದ-ಟ್-,-ಣ್-,ಳ್,-ಅಥವಾ-ಟ್-ಬಂದರೆ ಆಗ ಕ್-ಉಳಿಯುತ್ತದೆ.

| | | |
|---|---|---|
| | ಬ್ರಾ. | ಕೆಡು > ಚೆಚು (ತೆ) |
| ಕ್- | ಇ- ಮಲ್ತೊ | ಕೈ (⌄ ಕೆಯ್)> ಚೆಯ್ (ತೆ) |
| | ಈ- ಕುರುಖ್ | ಕಿಳಿ (> ಗಿಣಿ) > ಚಿಲುಕ (ತೆ) |
| ಖ್- | ಇತರ ಸ್ವರಗಳು ಬಂದಾಗ | ಕಿಱು > ಚಿರು (ತೆ) |
| | | ಕೆವಿ (> ಕಿವಿ) > ಚೆವಿ (ತೆ) |
| ಕ್- | ಕೋತ ತೊದ | ಕೀಱು (> ಕೀರು) > ಚೀಱು > ಚೀರು (ತೆ) |
| | | ಗಿಡ > ಚೆಟ್ಟು (ತೆ) |
| | | ಕೆಣಕು > ಚೆಣಕು (ತೆ) |
| | | ಕೆದರು > ಚಿದರು (ತೆ) |
| | | ಕೆತ್ತು > ಚೆಕ್ಕು (ತೆ) |

ಕನ್ನಡದಲ್ಲಿ ಸಾರ್ವತ್ರಿಕವಾಗಿ ಮೂದ್ರಾ*ಕ್- ಉಳಿದಿದ್ದರೂ, ಈ ಭಾಷೆಯಲ್ಲಿ ಕೆಲವು ಶಬ್ದಗಳಲ್ಲಿ ಕ್-ಇರಬೇಕಾದ ಕಡೆ ಚ್-ರೂಪಗಳಿವೆ. ಇವು ಸ್ವೀಕರಣ

ರೂಪವೆಂದು ತಿಳಿಯಲಾಗಿದೆ. ಬಹುಶಃ ತೆಲುಗುವಿನಿಂದ ಬಂದಿದೆ. ಕನ್ನಡದಲ್ಲಿ ತಾಲವ್ಯೀಕರಣವಿಲ್ಲವಾಗಿ ಕೆಲವು ಕಡೆಗಳಲ್ಲಿ ತಾಲವ್ಯೀಕರಣ ನಡೆದಿದೆ.

| | | ತಮಿಳು | ತೆಲುಗು |
|---|---|---|---|
| ಕ– > | ಮೂರ್ಧನ್ಯ ವ್ಯಂಜನ ಧ್ವನಿಗಳಿದ್ದರೆ —ಟ, ಡ, ಱ, ಳ | > ಕ್–, [ತ. ಕಿಳಿ, ಕೀಱು, ಕೆಟು] | ಚ್– |

| | | | ಕ | ತ | ತೆ | |
|---|---|---|---|---|---|---|
| ಕ್– | ಇ | *ಕೆರ್ವಿ > | ಕಿವಿ | ಚೆವಿ | ಚೆವಿ | ಕೆಬಿ (ತು) |
| | | - (ಕಿ) | ಗಿಳಿ | ಕಿಳಿ | ಚಿಲುಕ | ಕಿಳಿ (ಪರ್ಜಿ) |
| | ಎ | | ಕೀವು | ಚೀ | ಚೀವು | |
| | | | ಕೆದಱು | ಚಿದಱು | ಚೆದಱು | |
| | | | ಕೆಡು | ಕೆಡು | ಚೆಡು | |

ಆದರೆ ಚಿಕ್ಕ ಎಂಬ ಕನ್ನಡದ ಪದ ಮಾತ್ರ ಬಹಳ ಕುತೂಹಲಕಾರಿಯಾಗಿದೆ. ಕಿಟೆಲ್ ಈ ಪದಕ್ಕೆ ಚಿಱು [< ಕೀಱು] > ಚಿಕ್ಕ ಆಗಿದೆಯೆಂದು ವಿವರಣೆ ನೀಡಿದ್ದಾನೆ.[1] ಆದರೆ ಅವನ ವಿವರಣೆ ಅಸಮರ್ಪಕವೆಂದು ತೋರುತ್ತದೆ. ವಾಸ್ತವವಾಗಿ ಈ ಪದ ಕನ್ನಡದಲ್ಲಿ ಕಕಾರದ ಧ್ವನಿ ನಿಯಮಗಳಿಗೆ ಒಂದು ಅಪವಾದದಂತೆ ಇದೆಯೆಂದು ಹೇಳಬಹುದೇ ಹೊರತು ಕಿಱು > ಚಿಱು ಆಯಿತೆಂದು ಹೇಳಲು ಸಾಧ್ಯವಿಲ್ಲ.

> In the case of chikka, on the other hand no trace of k-appears so that C-here must be regarded as original, and the word can have no connection with ciṛu<kiṛu.[2]

ಇಲ್ಲಿ ಇನ್ನೂ ಒಂದು ಸ್ವಾರಸ್ಯವೆಂದರೆ ಕನ್ನಡ ಭಾಷೆಯ ಚಿಕ್ಕ (= ಸಣ್ಣ) ಎಂಬ ಪದ ಇಂಡೊ-ಆರ್ಯನ್ ಭಾಷೆಗೂ ಪ್ರವೇಶಿಸಿದೆ. ಉದಾಹರಣೆಗೆ ಮರಾಠಿಭಾಷೆ ಈ ಪದವನ್ನು ಕನ್ನಡದಿಂದ ತೆಗೆದುಕೊಂಡಿದೆ. ಆದರಂತೆ ಸಂಸ್ಕೃತ-ಪ್ರಾಕೃತಗಳಲ್ಲೂ ಸೇರಿಹೋಗಿದೆ. ಉದಾಹರಣೆಗೆ ಸಂಸ್ಕೃತದ 'ಚಿಕ್ಕಗಜ.'

> The Present Dravidian k is most faithfully preserved by Canarese and Tuḷu. Teluguh as a great tendency for palatalisation; and Tamil stands midway between Telugu and Canarese-Tuḷu.[3]

---

[1] ಕಿಟೆಲ್ ಕೋಶ, ಪು. ೬೦೫

[2] T. Burrow, *Dravidian Studies*, III, Two Developments of Initial K in Dravidian, BSOAS XI, 1943–46

[3] *A Primer of Dravidan Phonology*, IA, 1909, p. 217

ಕನ್ನಡ, ತುಳು, ತೆಲುಗು ಭಾಷೆಗಳಲ್ಲಿ ಕ>ಗ ಆಗುವುದೂ ಉಂಟು. ಕೆಲವು ಉದಾ :

| ತ | ಮ | ಕ | ತುಳು | ತೆ |
|---|---|---|---|---|
| ಕುನ್ರು ಜ | ಕುನ್ನು | ಗುಡ್ಡ | ಗುಡ್ಡ | ಕೊಂಡ |
| ಕೂಡು | ಕೂಡು | ಗೂಡು | ಗೂಡು | ಗೂಡು |
| ಕೆಟ್ಟಿ | ಕಟ್ಟಿ | ಗಟ್ಟಿ | ಗಟ್ಟಿ | ಗಟ್ಟಿ |
| ಕಾಲ್ | ಕಾತ್ತು | ಗಾಳಿ | ಗಳಿ | ಗಾಲಿ |

ಬಹುಮಟ್ಟಿಗೆ ಎಲ್ಲ ದ್ರಾವಿಡ ಭಾಷೆಗಳಲ್ಲೂ ಕಕಾರ ಉಳಿದುಬಂದಿದೆ; ಕಕಾರ ಇರುವ ಕೆಲವು ಪದಗಳನ್ನು ಗಮನಿಸಿದರೆ ಅದರಲ್ಲಿ ಏಕರೂಪತೆ ಇರುವುದೂ ಕಂಡುಬರುತ್ತದೆ :

| ತ | ಮ | ಕ | ತುಳು | ತೆ |
|---|---|---|---|---|
| ಕಡಲ್ | ಕಡಲ್ | ಕಡಲು | ಕಡಲು | ಕಡಲು |
| ಕಡು | ಕಡು | ಕಡು | ಕಡು | ಕಡು |
| ಕತ್ತಿ | ಕತ್ತಿ | ಕತ್ತಿ | ಕತ್ತಿ | ಕತ್ತಿ |
| ಕಟ್ಟು | ಕಟ್ಟು | ಕಟ್ಟು | ಕಟ್ಟು | ಕಟ್ಟು |
| ಕಾವಲ್ | ಕಾವಲ್ | ಕಾವಲು | ಕಾವಲು | ಕಾವಲು |

| ಕ | ತ | ಮ | ತೆ |
|---|---|---|---|
| ಕಲ್>ಕಲ್ಲು | ಕಲ್ | ಕಲ್ | ಕಲ್ಲು (=ರಾಯಿ) (ಬ್ರಾ) ಖಲ್ |
| ಕಳ್>ಕಳ್ಳು | ಕಳ್ | ಕಳ್ | ಕಲ್ಲು |
| ಕಣ್>ಕಣ್ಣು | ಕಣ್ | ಕಣ್ | ಕನ್ನು (ಮಲ್ತೊ) ಖನು, (ಬ್ರಾ) ಖನ್ |
| ಕಾಲಾ>ಕಾಲು | ಕಾಲ್ | | ಕಾಲು |
| ಕುಡಿ | ಕುಡಿ | | ಕುಡುಚು |
| ಕೋಲ್ | ಕೋಲ್ | ಕೋಲ್ | ಕೋಲ |

| ಕ | ತ | ಮ | ತೆ |
|---|---|---|---|
| ಚೀಕೀ>ಕೀವು | ಚೀ | ಚೀಕ | ಚೀಮು/ಚಿಮಿಡಿ (ಮಲ್ತೊ) ಕಿತೆ (ಬ್ರಾ) ಕೀಶ್ |
| * ಕೆವಿ>ಕಿವಿ | ಚೆ/ಶೆ ವಿ | ಚೆವಿ | ಚೆವಿ (ತುಳು) ಕೆಬಿ |
| ಕೆದಱು | ಚಿತಱು | ಚಿತರುಕ | ಚೆದಱು |
| ಕಿಱು | ಚಿಱು | ಚಿಱು | ಚಿರು |

| | | | |
|---|---|---|---|
| ಕೆಲ | ಚಿ(ಶಿ) ಲ | ಚಿಲ | ಚಿಲುಪ |
| ಕಿಳಿ (>ಗಿಳಿ) | ಕಿಳಿ | | ಚಿಲುಕ |
| ಕೆಡು | ಕೆಟು | ಕೆಟು | ಚೆಡು |

ದ್ರಾವಿಡ ಭಾಷೆಗಳ ಧ್ವನಿಚರಿತ್ರೆಯಲ್ಲಿ ಕ ಧ್ವನಿಮಾದ ಇತಿಹಾಸ ಹಾಗೂ ವಿಕಾಸ ವನ್ನು ವಿವರಿಸುವುದಕ್ಕೆ ವಿಪುಲವಾದ ಉದಾಹರಣೆಗಳು ಸಿಗುತ್ತವೆ. ಕಕಾರದ ಮುಂದೆ ಬರುವ ಸ್ವರದ ತರುವಾಯ ಮೂರ್ಧನ್ಯವಲ್ಲದ ವ್ಯಂಜನ ಬಂದರೆ ಆಗ ತಮಿಳು, ಮಲೆಯಾಳ ಭಾಷೆಗಳಲ್ಲಿ ಕ>ಚ ಆಗುತ್ತದೆ; ಕನ್ನಡ, ತುಳು, ಬ್ರಾಹೂಈ, ಕುರುಖ್ ತೊದ ಭಾಷೆಗಳಲ್ಲಿ ಕಕಾರವೇ ಉಳಿಯುತ್ತದೆ. ಇದಲ್ಲದೆ ಕನ್ನಡದಲ್ಲಿ ಕ– >ಗ– ಆಗುವುದು ಸಾಮಾನ್ಯ. ಕನ್ನಡದಲ್ಲಿ ವರ್ಗ ಪ್ರಥಮಾಕ್ಷರಗಳು ವರ್ಗತೃತೀಯತ್ವವನ್ನು, ಸಂಧಿಯಾಗುವಾಗ, ಪಡೆಯುವುದುಂಟು; ಅದರಂತೆ ಕ– , – ಕ – >ಗ – , ಗ– ಆಗುತ್ತದೆ. ಕ ಎಂಬುದು ಅಘೋಷ ಧ್ವನಿ; ಗ ಎಂಬುದು ಘೋಷ ಧ್ವನಿ. ಕನ್ನಡ ದಲ್ಲಿ ಕೆಲವೊಮ್ಮೆ ಪರುಷಧ್ವನಿಯಾದ ಕ ಧ್ವನಿಮಾದ ಬದಲು ಸರಳ ಧ್ವನಿಯಾದ ಗ ಧ್ವನಿಯಾಗಿ ಪದದ ಆದಿಯಲ್ಲೇ ನಿಂತುಬಿಡುತ್ತದೆ—ಇದು ಇತರ ದ್ರಾವಿಡ ಭಾಷೆ ಗಳಲ್ಲಿ ಇಲ್ಲವೆಂಬಷ್ಟು ಕಡಮೆ, ತಮಿಳಿನಲ್ಲಿ ಇಲ್ಲವೇ ಇಲ್ಲ.

ಉದಾ: ಗಿಳಿ (>ಕಿಳಿ)
ಗೆಳೆಯ (>ಕೆಳೆಯ)

ಕಕಾರ ಕೆಲವು ದ್ರಾವಿಡಭಾಷೆಗಳಲ್ಲಿ ಚಕಾರವಾದುದನ್ನು ನೋಡಿ ಮೂಲದ್ರಾವಿಡ ಭಾಷೆಯಲ್ಲಿ 'ಚ' ಎಂಬ ಸ್ವತಂತ್ರ ಧ್ವನಿಮಾ ಇರಲಿಲ್ಲವೆಂದೂ, ಅದು ಇತ್ತೀಚೆಗೆ ಬಂದುದೆಂದೂ ಭಾವಿಸಬಾರದು. /ಚ/ ಎಂಬ ಧ್ವನಿಮಾ ಮೂಲದ್ರಾವಿಡದಲ್ಲಿ ಸ್ವತಂತ್ರ ವಾಗಿತ್ತು. ಅದರ ಉಚ್ಚಾರ ಹೇಗಿತ್ತೆಂದು ಖಚಿತವಾಗಿ ಹೇಳುವುದು ಕಷ್ಟವಾದರೂ, ಬಹುಶಃ ಸ್ಪರ್ಶಘರ್ಷ ಇಲ್ಲವೇ ಸ್ಪೃಷ್ಟೋಷ್ಮ ಧ್ವನಿಯಾಗಿತ್ತೆಂದು ಹೇಳಬಹುದು. ಆ ಧ್ವನಿಯೂ ಬೇರೆ ಬೇರೆ ದ್ರಾವಿಡ ಭಾಷೆಗಳಲ್ಲಿ ವ್ಯತ್ಯಾಸಗೊಂಡಿದೆ.

ಉದಾ:

*ಚ್– >

ಚ್— ತಮಿಳು, ತೆಲುಗು, ಪರ್ಜಿ, ಕುರುಖ್, ಮಲ್ತೊ, ಬ್ರಾಹೂಈ [ಚಿಕ್ಕು]

ಸ್–ಕನ್ನಡ, ಕೋಲಾಮಿ, ಕುಈ, ಗೋಂಡಿ [ಸಿಲ್ಕು] [ಸಿಕ್]

ಹ್—ಗೋಂಡಿ [ಹಿಲಕನೆ]

ತ್—ತೊದ, ತುಳು [ತಿಕ್]

ಮೂಲದ್ರಾವಿಡ ಭಾಷೆಯ ಚಕಾರ ತಮಿಳು, ತೆಲುಗು, ಪರ್ಜಿ, ಕುರುಖ್, ಮಲ್ತೊ, ಬ್ರಾಹೂಈ—ಭಾಷೆಗಳಲ್ಲಿ ಚಕಾರವಾಗಿಯೇ ಉಳಿದಿದೆ; ಕನ್ನಡ, ಕೋಲಾಮಿ, ಮತ್ತು ಕುಈ—ಭಾಷೆಗಳಲ್ಲಿ ಅದು ಸಕಾರವಾಗಿ ಪರಿವರ್ತಿತವಾಗಿದೆ; ಗೋಂಡಿ ಭಾಷೆಯಲ್ಲಿ ಮಾತ್ರ ಮೂಲದ್ರಾವಿಡದ ಚ- > ಹ- ಆಗಿರುವುದು ತೋರುತ್ತದೆ; ತೊದ ಮತ್ತು ತುಳು ಭಾಷೆಗಳಲ್ಲಿ ಅದು ತಕಾರವಾಗಿರುವುದಕ್ಕೆ ನಿದರ್ಶನವಿದೆ. ಉಳಿದ ಅಲಿಪಿ ಭಾಷೆಗಳಲ್ಲಿ ಈ ಧ್ವನಿ ಹೇಗೆ ನಿಂತಿದೆ ನೋಡಬೇಕು. ಮೊದಲು ಚ್ - ಧ್ವನಿಯೂ ಸ್ - ಧ್ವನಿಯೂ ಆಗಿ, ಅದು ಅನಂತರ ಹ್ - ಆಗಿ ಅಲ್ಲಿಂದ ಮುಂದೆ ಅದು ಶೂನ್ಯವಾಗಿ ಅದರ ಮೇಲಿನ ಸ್ವರ ಮಾತ್ರ ನಿಂತಿತೆಂದೂ ಹೇಳಬಹುದು: ಇದರಿಂದ

$$ಚ್ - > ಸ್ - > ಹ್ - \phi -$$

ಎಂಬ ನಿಯಮವನ್ನು ರೂಪಿಸಿ ತೋರಿಸಬಹುದು. ಸ್ - > ಹ್ - ಆಗಿ ಅನಂತರ ಅದು ಶೂನ್ಯಧ್ವನಿಯಾಗಿ ಪರಿವರ್ತಿತವಾಗಿರುವುದಕ್ಕೆ ಸಿಂಹಳೀ ಭಾಷೆಯಿಂದಲೂ ಉದಾಹರಣೆ ದೊರೆಯುತ್ತದೆ.

ಈ ಕೆಲವು ನಿದರ್ಶಗಳನ್ನು ನೋಡಿ:

ಸಿಂಹಳೀ: ಸಸ್ > ಹಸ್ > ಅಸ್ = ಧಾನ್ಯದ ಬೆಳೆ: ಹೋ. ಸಂ. ಸಸ್ಯ
ಸಿಮ್ > ಹಿಮ್ > ಇಮ್ = ಎಲ್ಲೆ: ಹೋ. ಸಂ. ಸೀಮಾ
ಸಿಂಬಿಲಿ > ಹಿಂಬುಲ್ > ಇಂಬುಲ್ = ರೇಷ್ಮೆ: ಹೋ. ಪ್ರಾ. ಸಿಂಬಿಲಿ
ಸೇ > ಹೇ > ಏ = ಸೇತುವೆ: ಹೋ. ಸಂ. ಸೇತ
ಸೋ > ಹೋ > ಓ = ನದಿ: ಹೋ. ಸಂ. ಪ್ರೋತಸ್—

ಆದರೆ ಕೆಲವೊಮ್ಮೆ ಈ ಸ್ ಕೂಡ ಸಮಾಸದಲ್ಲಿ ಚ್ ಎಂದಾಗಿದೆ. ಮುಚ್ಚಂಜೆ.

ಮೂಲದ್ರಾವಿಡ ಭಾಷೆಯಲ್ಲಿ ಚ್ - ಎಂಬ ವ್ಯಂಜನ ಧ್ವನಿ ಇತ್ತೆಂಬುದರಲ್ಲಿ ಅನುಮಾನವಿಲ್ಲ. ಆದರೆ ಎಲ್ಲ ದ್ರಾವಿಡ ಭಾಷೆಗಳಲ್ಲೂ ಅದು ಚ್ - ಆಗಿ ಉಳಿದು ಬಂದಿಲ್ಲ. ಕೆಲವು ಭಾಷೆಗಳಲ್ಲಿ ಸ್ - ಆಗಿದೆ. ಉದಾ: ತ. ಮ. ತೆ. ಕೊಡ. ಪ. ಕುರು. ಮಲ್ತೊ ಭಾಷೆಗಳಲ್ಲಿ ಮೂಲದ್ರಾ* ಚ್ - ವ್ಯತ್ಯಾಸಹೊಂದದೆ ಚ್ - ಆಗೇ ನಿಂತಿದೆ; ಆದರೆ ಕ. ಗೋ. ಕುಈ. ಕುವಿ. ಕೋಲಾ. ನಾ. ಭಾಷೆಗಳಲ್ಲಿ ಮೂಲದ್ರಾ* ಚ್ - ಧ್ವನಿಯೂ ಸ್ - ಧ್ವನಿಯಾಗಿ ಮಾರ್ಪಾಟು ಪಡೆದಿದೆ. ಇಲ್ಲಿ ಮತ್ತೊಂದು ಸ್ವಾರಸ್ಯವಿದೆ. ನೀಲಗಿರಿಯ ಕೋತ ಮತ್ತು ಕೊಂಡೇಕೋರ್ ಗದಬ ಭಾಷೆಗಳಲ್ಲಿ ಮೂಲದ್ರಾ* ಚ್ - ಧ್ವನಿ ಸ್ - ಧ್ವನಿಯೂ ಆಗಿ ಪರಿವರ್ತನೆಯಾಗದೆ ಕ್ರಮವಾಗಿ ತ್ - ಮತ್ತು ಹ್ - ಧ್ವನಿಗಳಾಗಿ ಮಾರ್ಪಾಟು ಹೊಂದಿದೆ. ಗೋಂಡಿ ಮತ್ತು ಕುವಿ ಭಾಷೆಗಳ ಕೆಲವು ಉಪಭಾಷೆಗಳಲ್ಲೂ, ಒಮ್ಮೊಮ್ಮೆ ಬ್ರಾಹೂಈ ಭಾಷೆಯಲ್ಲೂ ಇದು ಹ್ - ಆಗಿದೆ. ಕನ್ನಡ ಮಲ್ತೊ ಮುಂತಾದ ಭಾಷೆಗಳಲ್ಲೂ ಚ್ - > ತ್ - ಆಗಿರುವುದು ಕಾಣುತ್ತದೆ:

ಚ್ – > ತ್ > $\phi$ – ಆಗಿರುವುದೂ ಉಂಟು.

| | | | |
|---|---|---|---|
| ಮೂ ದ್ರಾ* ಚ್ – | > | ಚ್ – | |
| | | ಸ್ – | |
| | | ತ್ – | |
| | | ಹ್ – | |
| | | $\theta$ – | |
| | | ಜ್ – | ಕ. ಜಿನುಗು < ಚಿನಕು |

ಚಾತಕ > ಜಾತಕ
ಚಾದಗೆ > ಜಾದಿಗೆ
ಆದರೂ ಚ್ > ಜ್ ಆಗವು ಅಪರೂಪ
ಎಸಳ್ಜಾಪೆ (ಶಬ್ದಾನುಶಾಸನ)

ದ್ರಾವಿಡ ಭಾಷೆಗಳಲ್ಲಿ ಪದದ ಆದಿಯಲ್ಲಿ ಇರುವ ಚ್ – ಧ್ವನಿ ಎಲ್ಲ ವೇಳೆಯಲ್ಲೂ ಅಥವಾ ಎಲ್ಲ ಪದಗಳಲ್ಲೂ ಮೂ ದ್ರಾ* ಚ್ – ಧ್ವನಿಯನ್ನೇ ಪ್ರತಿನಿಧಿಸುತ್ತದೆಂದು ತಿಳಿಯಬಾರದು. ಕೆಲವೊಮ್ಮೆ ಪೂದ್ರಾ* ಕ್ – ಧ್ವನಿಯಿಂದ ಅಂಥ ಪದಗಳು ಬಂದಿರುವುದೂ ಸಾಧ್ಯವಿದೆ. ಏಕೆಂದರೆ ಮೂಲ ದ್ರಾ ಕ್ – ಧ್ವನಿಯು, ಕೆಲವು ಪರಿಸರದಲ್ಲಿ ಕೆಲವು ಭಾಷೆಗಳಲ್ಲಿ ಕ್ – ಆಗಿ ನಿಂತರೆ ಮತ್ತೆ ಕೆಲವು ಭಾಷೆಗಳಲ್ಲಿ ಚ್ – ಆಗಿ ಪರಿವರ್ತಿತವಾಗಿದೆ. ಹಿಂದೆ ಕಕಾರದ ಚರಿತ್ರೆಯಲ್ಲಿ ವಿವರಿಸಿದ ಸೂತ್ರವನ್ನು ಇಲ್ಲಿ ಮತ್ತೆ ನೆನಪಿಗೆ ತಂದುಕೊಳ್ಳಬಹುದು :

| | |
|---|---|
| ಕ್– | ತ. ಮ. ತೆ. ಬಿಟ್ಟು |
| | ಉಳಿದ ಎಲ್ಲ ದ್ರಾ. ಭಾಷೆಗಳು |

| | |
|---|---|
| ಮೂ ದ್ರಾ ಕ್ – > | ಚ್ – ತ. ಮ. ತೆ. (ಇ ಮತ್ತು ಎ ಪರವಾದಾಗ) |
| | ಶ್ – ತ. ಶಿಗಪ್, ಕ. ಕೆಂಪು |

ಈ ನಿಯಮಗಳಿಗೆ ಅಪವಾದಗಳೂ ಉಂಟೆಂಬುದನ್ನು ಕೆಲವು ಶಬ್ದಗಳು ತೋರಿಸುತ್ತವೆ. ಚ್ – ಕಾರದ ಸ್ಥಾನದಲ್ಲಿ ಗೋಂಡಿ, ಕುಈ ಮುಂತಾದ ಭಾಷೆಗಳಲ್ಲಿ ಸ್ – ಕಾರವೇ ಇದ್ದರೂ ಅದನ್ನು (ಸ್) ಮೂಲದ್ರಾ ಧ್ವನಿಯೆಂದು ಹೇಳಲಾಗದು. ಸಂಸ್ಕೃತದಿಂದ ತಮಿಳಿಗೆ ಬಂದ ಕೆಲವು ಪದಗಳಲ್ಲಿ ಸಂಸ್ಕೃತದ ಶಬ್ದದ ಆದಿಯ ಕ್ – ಧ್ವನಿ > ಚ್ ಧ್ವನಿಯಾಗಿದೆ.

ಉದಾ :

ಸಂ. ಶರಣ್ > ತ. ಚರಣ್
ಶಾಲಾ > ಚಾಲೈ : ಶುಲ್ಕ > ಚುಲ್ಕಮ್
ಶಮಣರ್ > ಚಮಣರ್
ಶ್ರೇಣಿ > ಚೇಣಿ
ಸೂಜಿ > ಚೂಚಿ

ಆದರೆ ಚಕಟಮ್ ಎಂಬ ಪದವನ್ನು ಸಂಸ್ಕೃತ ಶಕಟಮ್ ಶಬ್ದದಿಂದ ಬಂದಿದೆಯೆಂದು ಹೇಳಬಹುದಾದರೂ, ಶಕಟಮ್ ಎಂಬುದೇ ದ್ರಾವಿಡದಿಂದ ಸಂಸ್ಕೃತಕ್ಕೆ ಹೋಗಿರುವ ಪದವೆಂಬ ವಾದವೂ ಇದೆ. ತ. ಚಾಕಾಟು, ಚಾಟು, ಮ. ಚಾಟು— ಪದಗಳಲ್ಲಿ ದೀರ್ಘವಿರುವುದು ಈ ಭಾವನೆಗೆ ಬೆಂಬಲವಾಗಿದೆ. ಹಾಗಿದ್ದಲ್ಲಿ ಈ ಪದ ದ್ರಾ > ಸಂ > ತ—ಹೀಗೆ ಹಬ್ಬಿರಬಹುದು.

ತ. ಇದಟು್ : ಕ. ಎಸಟು್ ಕ. ಚಾಪೆ/ಸಾಪೆ
ತ. ಎಚರ್ : ಕ. ಎಸರ್

ತಾಲವ್ಯೀಕರಣ ನಿಯಮಕ್ಕೆ ಪಕ್ಕಾಗಿ ತ್ > ಚ್ ಆಗಿರುವುದೂ ಉಂಟು.
ಉದಾ : ತೇಟು್ > ಚೇಳು : ಚೇಟು್ > ತ. ಮ. ತೇಳ್, ತೆ. ತೇಲು

* ಚ್– | ಕ. ಚ್–, ತ್–, ಸ್–, ϕ–
ತ. ಚ್–, ಶ್–, ϕ– (ಏರ್ = ಉಳು)
ತೊದ. ತ್–
ತೆ. ಚ್–
ಮ. ಚ್–

| ಪೂದ್ರಾ ಪರಿಸರ | ತ | ಮ | ಕ | ತು | ತೆ | ಕುಈ | ಗೋಂ | ಕೋಲಾ | ಪ | ಕುರು | ಮಲ್ತೊ | ಬ್ರಾ |
|---|---|---|---|---|---|---|---|---|---|---|---|---|
| * ಚ್– ಎಲ್ಲಸ | ಚ್ – | ಚ್ | ಸ್ – | ಸ್ – | ಚ್ – | ಸ್ – | ಸ್ – | ಸ್ – | ಚ್ – | ಚ್ – | ಚ್ – | ? ಹ್– |
| | | | | ಚ – | | | | | ಸ್ – | | | |
| | ϕ | ϕ | ϕ | ϕ | ϕ | | | | | | | |

ಎಲ್ಲಸ = ಎಲ್ಲ ಸ್ವರಗಳು (ಯಾವುದೇ ಸ್ವರ)

ϕ = ಶೂನ್ಯ: ಹಿಂದೆ ಇದ್ದು ಅದೃಶ್ಯವಾದ ಶೂನ್ಯ-ಧ್ವನಿ

ಉದಾ: ಉಪ್ಪು ಎಂಬ ಪದದ ಪ್ರಾರಂಭದಲ್ಲಿ ಚಕಾರವಿದ್ದು ಕಾಲಾಂತರದಲ್ಲಿ ಅದು ಶೂನ್ಯ ಧ್ವನಿಯಾಯಿತು (Zero-Phoneme)

| | | | | | | | |
|---|---|---|---|---|---|---|---|
| ತ. | ಉಪ್ಪು / ಉವರ್ – ಉವುಣರ್ | ತು. | ಉಪ್ಪು | ಕುವಿ. | ಹಾರು | ಕೋಲಾ. | ಚುಪ್ಪ್ – / ಸುಪ್ಪ್ – |
| ಮ. | ಉಪ್ಪು | ತೆ. | ಉಪ್ಪು | ಕೊಂಡ. | ಸೋರು | ಗ. | ,, |
| ಕ. | ಉಪ್ಪು | ಕುಈ. | ಸಾರು | ಪ. | ಚುಪ್ಪ್ / ಸುಪ್ಪ್ – | ಒ. | ,, |
| | | | | | | ಗೋಂ. | ಸೊವರ್ |

* ಪೂದ್ರಾ * ಚುಪ್ – > { * ಚು – ಅರ್ – ; * ಉಪ್ಪ್ – }

ತಾಲವ್ಯೀಕರಣದ ಮೂಲಕ * ಕ್ – > ಚ್ – ಆಗಿರುವುದೂ ಉಂಟು: * ಕ್ – > ತ್ – > ಚ್ –

## ಳಕಾರ : / ಳ್‌- /

ಳಕಾರ ಮೂಲದ್ರಾವಿಡ ಭಾಷೆಯಲ್ಲಿ ಇದ್ದ ಒಂದು ಸ್ವತಂತ್ರ ಧ್ವನಿಮಾ ಎಂಬುದರಲ್ಲಿ ಸಂದೇಹವಿಲ್ಲ. ಕೇಶಿರಾಜ ಇದನ್ನೇ ಕುಳ ಳಕಾರವೆಂದು ಕರೆದಿರುವುದು. ಕನ್ನಡದಲ್ಲಿ ಸಹಜವಾಗಿ ಇದ್ದ ಳಕಾರವೇ ಕುಳ; ಸಂಸ್ಕೃತದ ಲಕಾರದ ಸ್ಥಾನಕ್ಕೆ ಬಂದ ಳಕಾರ ಕ್ಷಳ: ಳಕಾರದಂತೆ ಇದ್ದ ಮತ್ತೊಂದು ಧ್ವನಿ ರಳ < ಱಟ.

ದ್ರಾವಿಡವರ್ಗದ ಎಲ್ಲ ಭಾಷೆಗಳಲ್ಲೂ ಈ ಳಕಾರ ಹಿಂದೆ ಇದ್ದಿತಾದರೂ ಇಂದು ಕೆಲವು ಭಾಷೆಗಳಲ್ಲಿ ಇಲ್ಲ. ದಕ್ಷಿಣ ದ್ರಾವಿಡ ಭಾಷೆಗಳಲ್ಲೇ ತೆಲುಗು ಭಾಷೆಯಲ್ಲಿ ಳಕಾರದ ಪ್ರಯೋಗ ಕಡಮೆ, ತಮಿಳು ಮತ್ತು ಕನ್ನಡದೊಡನೆ ಹೋಲಿಸಿದಾಗ. ಈ ಳ ಧ್ವನಿಮಾ ಕನ್ನಡ, ತುಳು, ತಮಿಳು, ಮಲೆಯಾಳ ಭಾಷೆಗಳಲ್ಲಿ ಹೆಚ್ಚಾಗಿ ಬಳಕೆಯಲ್ಲಿದೆ ಯಾದರೂ ಉತ್ತರ ದ್ರಾವಿಡ ಮತ್ತು ಮಧ್ಯದ್ರಾವಿಡ ಭಾಷೆಗಳಲ್ಲಿ ಲಕಾರವೇ ಈ ಳಕಾರದ ಸ್ಥಾನದಲ್ಲಿ ಉಪಯೋಗವಾಗುತ್ತಿದೆ.

ಉದಾ :

ಕನ್ನಡ—ಬೆಳಗು
ತುಳು—ಬೆಳಗುನಿ
ತಮಿಳು—ವಿಳಕ್ಕು
ಕುಈ—ವೆಲ್ಲ
ಮಲ್ತೊ—ವಿಲ್ಬ
ಕುವಿ—ವಿಲೆ
ಕೋಲಾಮಿ—ವೆಲೆನ್‌

ಪರ್ಜಿ ಭಾಷೆಯಲ್ಲಿ ಈ ಳಕಾರ ಕಳೆದುಹೋಗಿದೆ, ಇಂದು ಆ ಭಾಷೆಯಲ್ಲಿ ಇದರ ಸ್ಥಾನದಲ್ಲಿ ಲಕಾರವಿದೆ. ಕೇಶಿರಾಜ ಳಕಾರದ ಉಚ್ಚಾರ ಸ್ಥಾನವನ್ನು (Place of articulation) ಕುರಿತು ಳಕಾರ ಲಕಾರಗಳು ಏಕಸ್ಥಾನೀಯಗಳೆಂದು ಹೇಳಿದ್ದಾನೆ. ಆದರೆ ಧ್ವನಿವಿಜ್ಞಾನದ ದೃಷ್ಟಿಯಿಂದ ಲಕಾರ ಳಕಾರಗಳು ಏಕಸ್ಥಾನೀಯಗಳಲ್ಲ;

ಬೇಕಾದರೆ ಸವಿಾಪಸ್ಥಾನೀಯಗಳೆನ್ನಬಹುದು. ಏಕೆಂದರೆ ಲಕಾರ ವರ್ತ್ಸ್ಯಧ್ವನಿ (alvealar) ; ಳಕಾರ ಮೂರ್ಧನ್ಯಧ್ವನಿ (cerebral).

ಕನ್ನಡದಲ್ಲಿ ಈ ಳಕಾರಕ್ಕೆ ಸಂಬಂಧಿಸಿದಂತೆ ಒಂದೆರಡು ವಿಶೇಷಾಂಶಗಳನ್ನು ಗುರುತಿಸಬಹುದು. ಕನ್ನಡದಲ್ಲಿ ಕೆಲವು ಳಕಾರಯುಕ್ತ ಪದಗಳು ಪರಿವರ್ತನಗೊಂಡು ಣಕಾರಯುಕ್ತ ಪದಗಳಾದುವು.

(೧) ಕೆಲವು ಳಕಾರಾಂತ ಪದಗಳು ಣಕಾರಾಂತ [ – ಳ > – ಣ] ಪದಗಳಾದುವು ; ಮತ್ತೆ ಕೆಲವು ಕಡೆ ಪದಮಧ್ಯೆ ಇದ್ದ ಳಕಾರವೂ ಣಕಾರವಾಯಿತು [ – ಳ – > – ಣ – ].

(೨) ಅದರಂತೆ ಹಳಗನ್ನಡದ ೞ ಧ್ವನಿ ಈ ಳಕಾರದಲ್ಲಿಯೇ ಐಕ್ಯವಾಗಿ ಹೋಯಿತು [ – ೞ್ > – ಳ್].

(೩) ಹಳಗನ್ನಡದ ಕೆಲವು ಲಕಾರಾಂತ ಪದಗಳು ಳಕಾರಾಂತ ಪದಗಳಾದುವು. [ – ಲ > – ಳ].

(೪) ಸಂಸ್ಕೃತದ ಲಕಾರ ಯುಕ್ತಪದಗಳಲ್ಲಿ ಕೆಲವು ಕಡೆ ಆ ಲಕಾರ ಳಕಾರವಾಯಿತು. [ ಸಂ. – ಲ > – ಳ ; – ಲ > – ಳ – ].

(೫) ಹಳಗನ್ನಡದ ಕೆಲವು ಶಬ್ದಗಳ ಲಕಾರ ನಕಾರವಾಗಿದೆ. ಗೊಲೆ > ಗೊನೆ [ ಲ್ > ನ್]

ಆದರೆ ಈ ನಿಯಮಗಳಾವುವೂ ಸಾರ್ವತ್ರಿಕವಾದ ನಿಯಮಗಳಲ್ಲ. ಈ ಧ್ವನಿಮಾರ್ಪಾಟಿಗೆ ಸಂಬಂಧಿಸಿದಂತೆ ಕೆಲವು ಉದಾಹರಣೆಗಳನ್ನು ನೋಡಬಹುದು :

| | | |
|---|---|---|
| ಅಂಗಳ | ಅಂಗಣ | |
| ಅಂದಳ | ಅಂದಣ | ಉೞು > ಉಳಿ |
| ಅಳಿಲ್ | ಅಣಿಲು | |
| ಅಮಳ್ | ಅಮಣ್ | ಬಾೞ್ > ಬಾಳು |
| ಅಟಳಿಗೆ | ಅಟ್ಟಣಿಗೆ* | ಬಾೞೆ > ಬಾಳೆ |
| ಅಟ್ಟಳೆ | ಅಟ್ಟಣೆ | |
| ಇಟ್ಟಳ | ಇಟ್ಟಣ | |
| (ವಡ್ಡಾ) ಅಳಂಜೆ | ಅಣಜೆ | |
| ಎತ್ತಳ | ಎತ್ತಣ | ಮೞೆ > ಮಳೆ |
| ಕಳ | ಕಣ | |

* ಇದು ಸಂಸ್ಕೃತ ಭಾಷೆಯ ಅಟ್ಟಾಲಿಕಾ ಪದದಿಂದ ಬಂದಿದೆಯೆಂದು ವಿದ್ವಾಂಸರ ಹೇಳಿಕೆ.

| | | |
|---|---|---|
| ಕಳ | ಕಣ | ಟ್ – > – ಳ |
| ಕೊಪಳ | ಕೊಪಣ | |
| ಗಳೆ | ಗಣೆ | |
| ಗಾಳ | ಗಾಣ | |
| ಗಿಳಿ | ಗಿಣಿ | |
| ಗೆಳಸು | ಗೆಣಸು | ಆಲೇಖ > ಆಳಕ |
| (ಕುಱು >)ಗುಳಿ | ಗುಣಿ (> ಕುಣಿ) | (ಸಂ) ಕಮಲ > ಕಮಳ |
| ಆಟ್ಟಿಗುಳಿ | ಆಟ್ಟಿಗುಣಿ | |
| ಗೊಂದಳ | ಗೊಂದಣ | ಜಲ > ಜಳ |
| ಗೋಳಿ (ಮರ) | ಗೋಣಿ (ಮರ) | |
| ತಳಿಗೆ | ತಣಿಗೆ | ಕಾಲಿದಾಸ > ಕಾಳಿದಾಸ |
| (ಪಂಪಭಾ) ಜಿಗುಳೆ | ಜಿಗುಣೆ | ಮಾಲವಿಕೆ > ಮಾಳವಿಕೆ |
| ದೆಕ್ಕ್ಪಾಳಂ | ದೆಕ್ಕ್ಪಾಣಂ | |
| (ಪಂಪಭಾ) ನೊಳ | ನೊಣ | (ಸಂ) – ಲ – > – ಳ – |
| (ನೊಳವುಗಳ್. | ವಡ್ಡಾ) | – ಲ – > – ಳ |
| ಪೂಳ್ | ಪೂಣ್ | |
| ಬಾಳಂತಿ | ಬಾಣಂತಿ | |
| ಬೆಳವಳಿಗೆ | ಬೆಳವಣಿಗೆ* | ಮುಳಿಸು > ಮುನಿಸು |
| ಮೆಳಸು | ಮೆಣಸು | |
| ಮಿಳಿ | ಮಿಣಿ | |
| ಮೊಳಕಾಲು | ಮೊಣಕಾಲು | |
| ಮೊಳಕೈ | ಮೊಣಕೈ | |
| (ಪಂಪಭಾ) ಮೆಱಸು | ಮೆಣಸು | |
| ರಾವಳ | ರಾವಣ | |
| ಸರಪಳಿ | ಸರಪಣಿ | |
| ಸೆಳೆ | ಸೆಣೆ (ಬಟ್ಟೆ ಸೆಣೆಯುವುದು) | |
| –ಳ | | |
| –ಳ– | > ಣ | |

* ಕನ್ನಡ ಕೈಪಿಡಿಯಲ್ಲಿ ಬರುವ ಭಾಷಾಚರಿತ್ರೆಯ ವಿಭಾಗದಲ್ಲಿ ಬೆಳವಳಿಗೆ ಎಂಬ ಪದವೇ ಮೊದಲ ಎರಡು ಮುದ್ರಣಗಳತನಕ ಇದೆ. ಎ. ಆರ್. ಕೃ. ಅವರು ೪೧ ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಹೈದರಾಬಾದಿನಲ್ಲಿ ಮಾಡಿದ ಭಾಷಣದಲ್ಲೂ ಬೆಳವಳಿಗೆ ಎಂಬ ಪದವಿದೆ.

ಅರಲ್     ಅರಳು
ಎರಲ್     ಎರಳು
ಒರಲ್     ಒರಳು
ಕೊರಲ್     ಕೊರಳು > ಕೊಳ್ಳು
ನರಲ್     ನರಳು
ನೆಳಲ್     ನೆರಳು
ಪರಲ್     ಪರಳು > ಹರಳು
ಬೆರಲ್     ಬೆರಳು > ಬೆಳ್ಳು
ಮರಲ್     ಮರಳು > ಮಳ್ಳು
ಸರಲ್     ಸರಳು
∴ – ಲ್ > – ಳ್ ಸ

ಮರಾಠಿ ಭಾಷೆಯುಲ್ಲಿ ಳಕಾರದ ಬಳಕೆ /ಳ್/ ದ್ರಾವಿಡಭಾಷೆಗಳ ವಿಶಿಷ್ಟ ಧ್ವನಿಗಳ ಲ್ಲೊಂದು. ಇದಕ್ಕೆ ಅದರ ನೆರೆನಾಡಿನ ನುಡಿಯಾದ ಕ. ದ ಪ್ರಭಾವವೇ ಕಾರಣವಿರಬೇಕು. ಏಕೆಂದರೆ ಮರಾಠಿ ಭಾಷೆಯ ಮೂಲ ಶಾಖೆಯಾದ ಇಂಡೊ-ಆರ್ಯನ್ ವಿಭಾಗದಲ್ಲಿ ಈ ಧ್ವನಿ ಇಲ್ಲ.

ಸಂಸ್ಕೃತ ಭಾಷೆಯಲ್ಲಿ ಳಕಾರ ಇಲ್ಲವೆಂಬ ಹೇಳಿಕೆಯ ವಿಚಾರದಲ್ಲೂ ಭಿನ್ನಾಭಿ ಪ್ರಾಯವಿದೆ. ಹಳೆಯ ಸಂಸ್ಕೃತದಲ್ಲಿ ಬರುವ ಳಕಾರಕ್ಕೆ ಒಂದು ಉದಾಹರಣೆ :

ಅಗ್ನಿಮಿಾಳೇ ಪುರೋಹಿತಂ। ಯಜ್ಞಸ್ಯ ದೇವಮೃತ್ವಿಜಂ। ಹೋತಾರಂ ರತ್ನಧಾತಮಂ।

ಆದರೆ ಇಲ್ಲಿನ – ಳ <–ಡ ದಿಂದ ಬಂದುದೆಂದು ವಿದ್ವಾಂಸರ ವಿವರಣೆ. ಅಗ್ನಿಮಿಾಡೇ > ಅಗ್ನಿಮಿಾಳೇ ಆಗಿದೆಯಂತೆ, ಖಡ್ಗ > ಖಳ್ಗ ಆದಂತೆ. ಲಳಯೋರಭೇದಃ ಆದಂತೆ ಲಡಯೋರಭೇದಃ ಕೂಡ ಆಗಿದೆ. ಹಳಗನ್ನಡದಲ್ಲಿ ಸಂಸ್ಕೃತದ ಲಕಾರ ಳಕಾರ (ಕ್ಷಳ) ವಾಗಲು ಕಾರಣವೇನು? ಬಹುಶಃ ಪ್ರಾಕೃತದ ಪ್ರಭಾವವೇ ಇದಕ್ಕೆ ಕಾರಣವಿರ ಬೇಕೆಂದು ತೋರುತ್ತದೆ.

ಪ್ರಾಕೃತದಲ್ಲಿ ಲ > ಳ ಆಗುವುದು ವಿಶೇಷ :
(ಸಂ) ನಮೋಲೋಯೇ > (ಪ್ರಾ) ಣಮೋಳೋಯೇ
ಮೂಲ > ಮೂಳ

ಛಂದಸ್ಸಿನ, ಪ್ರಾಸದ ದೃಷ್ಟಿಯಿಂದ ಲ > ಳ ಆದುದು ಹಾಗಿರಲಿ, ಪ್ರಾಸರಹಿತ ಸ್ಥಾನ ದಲ್ಲೂ ಲ > ಳ ಆದುದಕ್ಕೆ ಪ್ರಾಕೃತದ ಪ್ರಭಾವವನ್ನು ಕಾರಣವೆಂದು ಒಪ್ಪಬಹುದು. ಳಕಾರದಿಂದ ಪ್ರಾರಂಭವಾಗುವ ಶಬ್ದಗಳು ಕನ್ನಡದಲ್ಲಿ ಇಲ್ಲ. ತಮಿಳಿನಲ್ಲೂ ರಕಾರ ಲಕಾರದಿಂದ ಆರಂಭವಾಗುವ, ಸಂಸ್ಕೃತ ಶಬ್ದಗಳಿಗೂ ಆದಿಸ್ವರಾಗಮವಾಗುತ್ತದೆ. ಲೋಕ (ಸಂ) ಉಲಗಂ (ತ)

| ಮೂದ್ರಾ | ಪರಿಸರ | ತ | ಮ | ಕ | ತು | ತೆ | ಕುಈ | ಗೋಂ | ಕೋಲಾ | ಪ | ಕುರು | ಮಲ್ತೊ | ಬ್ರಾ |
|---|---|---|---|---|---|---|---|---|---|---|---|---|---|
| * ವ್– | ಪೂಸ–ಸ ಅ | ವ್– | ವ್– | ಬ್– | ಬ್– | ವ್–/ಬ್– | ವ್– | ವ್– | ವ್– | ವ್– | ಬ್– | ಬ್– | ಬ್– |
| * ಪ್– | ಎಲ್ಲಸ | ಪ್– | ಪ್– | ಪ್– | ಪ್– | ಪ್– | ಪ್– | ಪ್– | ಪ್– | ಪ್– | ಪ್– | ಪ್– | ಪ್– |
| | | | | > ಹ್ | | ಬ್– | ಬ್– | | | | | | |
| * ಮ್– | ಎಲ್ಲಸ | ಮ್– | ಮ್– | ಮ್– | ಮ್– | ಮ್– | ಮ್– | ಮ್– | ಮ್– | ಮ್– | ಮ್– | ಮ್– | ಮ್– |

| | | | | | | | |
|---|---|---|---|---|---|---|---|
| ತ. | ವರ್–, ವಾ– | ತೆ. | ವಚ್ಚು | ಕೋಲಾ. | ವರ್– | ಕುರು. | ಬರ್– |
| ಮ. | ವರುಕ | ಕುಈ. | ವಾವ (ವಾ – ತ್–) | ನಾ. | ವರ್– | ಮಲ್ತೊ. | ಬರ್–. (ಬರ್–ಚ್–) |
| ಕ. | ಬರ್, ಬಾ– | ಕುವಿ. | ವ– | ಗ. | ವಾರ್– | ಬ್ರಾ. | ಬಸ್ಸ್– (ಬಸ್ಸ್–) |
| ತು. | ಬಾ– | ಗೋಂ. | ವಯ್– | ಪ. | ವರ್– | | |

## ವ / ಬಕಾರ : / ವ್- /, / ಬ್- /

ಕನ್ನಡ ಭಾಷೆಯಲ್ಲಿ ಬಕಾರ ಹಿಂದಿನಿಂದಲೂ ಬಾಳಿ ಬಂದಿರುವ ಧ್ವನಿಯಾದರೂ ಬಹಳ ಹಿಂದಿನಿಂದಲೂ ಬಳಕೆಯಲ್ಲಿ ಬಂದಿರುವ ಧ್ವನಿಯಲ್ಲ. ಏಕೆಂದರೆ ಪೂರ್ವದ ಹಳಗನ್ನಡ ದಲ್ಲಿ ವಕಾರವೇ ಬಕಾರದ ಕೆಲಸವನ್ನು ನಿರ್ವಹಿಸುತ್ತಿತ್ತೆಂದು ಹೇಳುವುದಕ್ಕೆ ಆಧಾರ ಗಳಿವೆ. ವಾಸ್ತವವಾಗಿ ಧ್ವನಿವಿಜ್ಞಾನದ ದೃಷ್ಟಿಯಿಂದ ಪೂರ್ವದ ಹಳಗನ್ನಡದಲ್ಲಿ /ಬ/ ಎಂಬ ಸ್ವತಂತ್ರ ಧ್ವನಿಮಾ ಇರಲಿಲ್ಲವೆಂದೇ ತೋರುತ್ತದೆ; ಆದರೆ /ವ/ ಧ್ವನಿ ನಿಶ್ಚಯವಾಗಿಯೂ ಇತ್ತು.

ಅಲ್ಲದೆ ಕನ್ನಡ ಭಾಷೆಯ ದೃಷ್ಟಿಯಿಂದಲೇ ಹೇಳುವುದಾದರೆ, ಅದರಲ್ಲಿಯೂ ಪದದ ಆದಿಯಲ್ಲಿ, ಹಳಗನ್ನಡದಲ್ಲೂ ಬಕಾರಕ್ಕಿಂತಲೂ ವಕಾರವೇ ಹೆಚ್ಚು ರೂಢಿಯಲ್ಲಿ ಇದ್ದುದು ಕಾಣುತ್ತದೆ. ಹೀಗಾಗಿ ಇರುವ ಚಾರಿತ್ರಿಕ ಆಧಾರಗಳಿಂದಲೂ ಬಕಾರ ಬಹಳ ಹಿಂದಿನ ಧ್ವನಿಯೆಂದು ಹೇಳಲಾಗುವುದಿಲ್ಲ.

ವಿತ್ತಿದಲ್ಲಿ ವೆಳೆಯಾದೆ ಕೆಡುಗ

ಎಂಬ ಒಂದು ಶಾಸನ ಪ್ರಯೋಗ ನೋಡಬಹುದು; ಇದು ಬಿತ್ತಿದಲ್ಲಿ ಬೆಳೆಯಾದೆ ಕೆಡುಗ—ಎಂದು ಅನಂತರ ಆಗಿದೆ. ಇದರಂತೆ ವೆಟ್ಟದುಳ್ > ಬೆಟ್ಟದಲ್ಲಿ;[1] ವಿಟ್ಟರ್ > ಬಿಟ್ಟರು.[2] ಆದುದರಿಂದ ಕನ್ನಡದಲ್ಲಿ ಕಾಣುವ (ಪದದ ಆದಿಯ) ಬಕಾರ ಇತ್ತೀಚಿನದು, ಅಂದರೆ ಹಳಗನ್ನಡ ಕಾಲಕ್ಕೆ ಬಂದಿದೆ. ಶಾಸನದ ಆಧಾರಗಳಿಂದ ವಿದ್ವಾಂಸರು ವ > ಬ ಆದದ್ದು ಎಂಟನೆಯ ಶತಮಾನದಿಂದ, ವಿಶೇಷವಾಗಿ ಹತ್ತನೆಯ ಶತಮಾನದಲ್ಲಿ ಎಂದು ಭಾವಿಸಿದ್ದಾರೆ.

> Forms with b -in place of v – are met with in larger number in the 9th and 10th cent. This change of v– to b–seems to have been in a transitional stage in this period. . .[3]

---

[1] ಶ್ರವಣಬೆಳ್ಗೊಳ ಶಾಸನ, ಸಂಖ್ಯೆ ೨೭

[2] *Epigraphia Karnatica III*, Mysore, Nanjangud, 23

[3] *HGOKI*, 1946, p. 107

ಕನ್ನಡದಲ್ಲಿ ಪೂರ್ವದ ಹಳಗನ್ನಡ ಕಾಲಕ್ಕೆ ಮಾತ್ರ ವಕಾರವಿದ್ದು ಅಲ್ಲಿಂದ ಮುಂದೆ ಬಕಾರ ಬಂದು ಬೆರೆತುಹೋಯಿತು. ಉಳಿದ ದ್ರಾವಿಡ ಭಾಷೆಗಳಲ್ಲಿ ವಕಾರದ ಸ್ವರೂಪ ಗಳು ಬಹುವಾಗಿ ಉಳಿದುಬಂದಿದೆ. ತೆಲುಗು ಭಾಷೆಯಲ್ಲೂ—ತಮಿಳು, ಮಲೆಯಾಳ ಹಾಗಿರಲಿ—ವಕಾರವೇ ಉಳಿದಿದೆ. ವ- > ಬ- ಆದುದಕ್ಕೆ, ಇತರ ದ್ರಾವಿಡಭಾಷೆ ಗಳ ವಕಾರ ಉಳಿದಿರುವುದಕ್ಕೂ ಕೆಲವು ಉದಾಹರಣೆಗಳು:

ತ. ವಾಯಿಲ್, ಮ. ವಾದಲ್, ತೆ. ವಾಕಿಲಿ, ಕ. ಬಾಗಿಲು. ವೆಟ್ಟ > ಬೆಟ್ಟ
ವಿಲ್ (ತ) ಬಿಲ್; ವಿಲಿತು (ತ) > ಬಿಲಿತು ವೆಳ್ಳಿ > ಬೆಳ್ಳಿ
ವಯಲ್ (ತ) ಬಯಲು; ವಾನುಲ್ಪೆ > ವಾನುಲಿ (ತ) > ಬಾನುಲಿ
* ವೆವರ್ ವಿವರ್ (ತ) > ಬೆವರ್
ವೆಳ್ಳ (ಮ): ಬೆಳ್ಳ/ವೆಳ್ಳ (ತ) ಬೆಳ್ಳ (ಕ) ಬೊಳ್ಳ (ತು) ವೆಣ್ಣ (ತೆ)

ತಮಿಳು ಮತ್ತು ಮಲೆಯಾಳ ಭಾಷೆಗಳು ವಕಾರವನ್ನೇ ಉಳಿಸಿಕೊಂಡು ಬಂದಿವೆ. ಅಷ್ಟೇ ಅಲ್ಲದೆ ಈ ಎರಡು ಭಾಷೆಗಳಲ್ಲಿ ಸಂಸ್ಕೃತ ಭಾಷೆಯ ಬ ಕಾರವನ್ನೂ ವ- ಅಥವಾ -ಪ- ಆಗಿ ಮಾಡಿಕೊಂಡಿರುವುದು ಕಾಣುತ್ತದೆ. (ಸಂ) ಬಾಲ್ಯಮ್ > (ಮ) ವಾಲ್ಯಮ್: (ಸಂ) ಬಾಲಾಂಬ > (ತ) ವಾಲಮ್ಮ (ಸಂ) ಬುದ್ಬುದ > (ತ) ಪುತ್ಪುದಮ್. ಕನ್ನಡದಲ್ಲಿ ವಕಾರ ಬಕಾರವಾಗುವ ಮಾರ್ಪಾಟಿನ ಕ್ರಿಯೆಯ ಗಾಳಿ ಎಷ್ಟು ಬೀಸಿತೆಂದರೆ (< ವೀಸು), ಸಂಸ್ಕೃತದಿಂದ ಕನ್ನಡಕ್ಕೆ ಬಂದಿರುವ (< ವರ್) ಪದಗಳಲ್ಲೂ, ಎಲ್ಲೆಲ್ಲಿ ಸಂಸ್ಕೃತ ಪದಗಳ ಆದಿಯಲ್ಲಿ ವಕಾರವಿದೆಯೋ ಅಲ್ಲೆಲ್ಲ ಅಲ್ಲ ದಿದ್ದರೂ, ಅನೇಕ ಕಡೆಗಳಲ್ಲಿ, ವ > ಬ ಆಗಿದೆ.[1]

| | |
|---|---|
| ವಶೆ > ಬಸೆ | ವಸತಿ > ಬಸದಿ |
| ವಾಪಿ > ಬಾವಿ | ವೀರ > ಬೀರ |
| ವಿಧಿ > ಬಿದಿ | ವೀಥಿ > ಬೀದಿ |
| ವೇಗ > ಬೇಗ | ವಸಂತ > ಬಸಂತ |

ಈ ವಕಾರ ಬಕಾರ ಆದದ್ದು, ಅದರಲ್ಲಿಯೂ ಕನ್ನಡದಲ್ಲಿ, ಬಹುಶಃ ಅನ್ಯಭಾಷೆಯ ಪ್ರಭಾವವೇ ಕಾರಣವಿರಬೇಕು. ಒಂದುವೇಳೆ ಪ್ರಾಕೃತ ಭಾಷೆಯ ಪ್ರಭಾವವೇ ಇದಕ್ಕೆ ಮೂಲಕಾರಣವಾಗಿದ್ದರೆ ಆಶ್ಚರ್ಯವೇನಲ್ಲ. ೮-೯-೧೦ನೆಯ ಶತಮಾನದ ಕನ್ನಡ ಕವಿಗಳಿಗೆ ಪ್ರಾಕೃತದ ಸಂಪರ್ಕ ಹೇರಳವಾಗಿದ್ದಿತೆಂದು ಹೇಳಲು ಸಾಧ್ಯವಿದೆ.

ಕೆಲವು ಕಡೆ ಬಕಾರಕ್ಕೆ ಬದಲಾಗಿ ವಕಾರ ಬಂದಿರುವುದೂ ಉಂಟು.[2]

---

[1] ಶಮದ, ೧೯೬೪, ಸೂತ್ರ ೨೭೨, ಪುಟ, ೩೧೯

[2] ಅದೇ., ಸೂತ್ರ ೩೦೭, ಪುಟ ೩೪೦-೩೪೧

ಉದಾ :

ಕಬಲಂ > ಕವಳಂ　　ಶಿಬಿಕೆ > ಶಿವಿಗೆ
ಶಬಂ > ಸವಂ　　ಶೃಂಕಲಾಬಂಧಂ > ಸಂಕಲೆವಂದಂ
ದಿಶಾಬಲಿ > ದೆಸೆವಲಿ　　ಶರಬಂಧಂ > ಸರವಂದಂ

ಬ > ವ ಆಗುವುದು ಕನ್ನಡದಲ್ಲಿ ಮಾತ್ರವಲ್ಲದೆ ತಮಿಳಿನಲ್ಲೂ ಉಂಟು.

. . .where the root ends in a nasal consonant, this b appears : but where it ends in a vowel, b is ordinarily changed into v.[1]

ವ > ಬ, ಬ > ವ ಆಗುವುದಲ್ಲದೆ ಬ > ಮ ಆಗುವುದೂ ಉಂಟು.

ಉದಾ :

(ತೆ) ಪದಿ ಮಿದಿ > ತೊಮ್ಮಿದಿ
(ತ) ಎನ್ಬರ್ > ಎನ್ಮರ್
ಉನ್ಬಾನ್ > ಉಣ್ಮಾನ್
(ಮ) ಕಾಣುವಾನ್ > ಕಾಣ್ಮಾನ್
ವಾರ್ವವನ್ > ವಾರುಮವನ್

ಕ. ದ ಕೆಲವು ಬಕಾರದ ರೂಪಗಳು ಪಕಾರದ ರೂಪದಿಂದಲೂ ಬಂದಿವೆ ; ಬಾನೆ, ತ. ಪಾನೈ. ಆದರೆ ಬಂಕೆ (ತೆ. ಬಂಕ), ಬಂಡೆ (ತೆ. ಬಂಡ), ಬದುಕು (ತೆ. ಬ್ರತುಕು), ಬೋಡು, ಬೋಟು—ಮುಂತಾದ ಪದಗಳು ಸಮಸ್ಯಾತ್ಮಕವಾಗಿವೆ. ಇಲ್ಲವೇ ಈ ಪದಗಳಿಗೆ ಸಮಾನ ಪದಗಳು ತಮಿಳು—ಮಲೆಯಾಳಗಳಲ್ಲಿ ಕಳೆದುಹೋಗಿರಬೇಕು ಅಥವಾ ಕನ್ನಡ—ತೆಲುಗುಗಳಿಗೆ ಹೊಸದಾಗಿ ಬಂದಿರಬೇಕು. ಈ ಪದಗಳು ದ್ರಾವಿಡದ ಪದಗಳೆಂದು ಅಂಗೀಕರಿಸಿದರೆ ಆಗ ಮೂಲದ್ರಾವಿಡ ಭಾಷೆಯಲ್ಲಿ /ಬ/ ಧ್ವನಿಮಾ ಇತ್ತೆಂದು ಒಪ್ಪಬೇಕಾಗುತ್ತದೆ. ಆದರೆ ತಮಿಳು, ಮಲೆಯಾಳ ಭಾಷೆಗಳಲ್ಲಿ ಇದಕ್ಕೆ ಸಂಬಂಧಿಸಿದ ಜ್ಞಾತಿಪದಗಳು ಇಲ್ಲದುದರಿಂದಲೂ, ಮೂಲದ್ರಾವಿಡದಲ್ಲಿ /ಬ/ ಎಂಬ ಸ್ವತಂತ್ರ ಧ್ವನಿಮಾ ಇರಲಿಲ್ಲವೆಂಬ ಆಧಾರದಿಂದಲೂ ಈ ಪದಗಳು ಕನ್ನಡ—ತೆಲುಗುಗಳಲ್ಲಿ ಬರಲು ಅನ್ಯಭಾಷೆಯ ಪ್ರಭಾವವೇ ಕಾರಣವಿರಬೇಕು ಇಲ್ಲವೇ ಈ ಪದಗಳಿಗೆ ಮೂಲದಲ್ಲಿ ವ ಕಾರವನ್ನು ಆರೋಪಿಸಬೇಕು. ಬಹುಶಃ ಈ ಶಬ್ದಗಳು ಎರವಲೆಂದು ತೋರುತ್ತದೆ.

The exact reasons for the uniform development of initial b- in what we might term the 'b-dialects of Dravidian-Kannada, Tulu, Kurukh, Brahui—remain, however, to be investigated and clarified further.[2]

---

[1] *AOGODLs*, 1956, p. 157

[2] L. V. R. Ayyer, *Initial Fricatives and Africates of Dravidian*, IA, 1910, p. 166

ಹೀಗಾಗಿ ಮೂಲದ್ರಾವಿಡದಲ್ಲಿ ಘೋಷ ಸ್ಪರ್ಶ ವ್ಯಂಜನ ಧ್ವನಿಯೂ ಇತ್ತೆ? ಅಥವಾ ಕೇವಲ ಘರ್ಷಧ್ವನಿಯೇ ಇತ್ತೆ? ಅಥವಾ ಇವೆರಡು ಧ್ವನಿಗಳೂ ಜೊತೆ ಜೊತೆಯಲ್ಲಿ ಇದ್ದುವೆ?—ಎಂಬುದು ಪರಿಶೀಲನೆಗೆ ತಕ್ಕ ವಿಚಾರ. ಇದನ್ನು ಹಿಂದೆ ನೋಡಿದ್ದೇವೆ.

ದ್ರಾವಿಡ ಭಾಷೆಗಳಿಗೆ ಸಂಬಂಧಿಸಿದ ಭಾಷಾವರ್ಗವೆಂದು ವಿದ್ವಾಂಸರು ವಿವರಿಸುವ ಯುರಲ್ ಭಾಷೆಗಳಲ್ಲೂ ಪದದ ಪ್ರಾರಂಭದಲ್ಲಿ ವ-ಧ್ವನಿಯೇ ಇದೆ.

> Initially Dravidian m–corresponds to uralian v–. In one dialect of Samoyede an initial m–is found; otherwise v– universal in Uralian."[1]

ಎಲ್ಲ ದ್ರಾವಿಡ ಭಾಷೆಗಳ ಶಬ್ದಗಳನ್ನು ಪರಿಶೀಲಿಸಿದಾಗ ಮೂಲದ್ರಾವಿಡ ವ್-ಧ್ವನಿಯು ಒಟ್ಟು ಪರಿವರ್ತನೆಗಳು ಇಂತಿವೆ:

ಮೂದ್ರಾ * ವ್—
- ವ್–ತ. ಮ. ಕುಈ. ಕುವಿ, ಕೋತ. ಗೋಂ. ಕೊಲಾ. ಪ. ತೆ.
- ಬ್–ಕ. ತು. ಕೊಡ. ಬಡಗ. ಕುರು ಮಲ್ತೋ. ಬ್ರಾ. ತೆ.
- ಒ– / ಓ– | ಕಡಮೆ
- ಪ್– ತೊದ.
- ಮ್–ತೆ. ಮ. ತ. ಕಡಮೆ ಉದಾ.

ಮ್ > ವ್ : ಮಾಮು/ಮಾವು, ಎಮೆ/ಎವೆ, ತಾಮರೆ/ತಾವರೆ, ಬೆಮರ್ ; ಬೆಮರ್
ಸಮರು/ಸವರು, ಸಮೆ/ಸವೆ ಸಮೆದು ; ಸವೆದು
ಅಮುಂಕು/ಅವುಂಕು: ಆಲಮ್ಬಟಿಕೆ/ಆಲವ್ಬಟಿಕೆ> –ಳಿ: ಅಮಾರಾತ್ರಿ>ಅಮಾತ್ರಿ (ಸಂ)
ಆವರೆ>ಅಮರೆ: ಅಮರೀ>ಅವರಿ (ಸಂ) : ಅಮುಳ್>ಅವಳಿ; ಸೊಮಡು : ಸೊಗಡು
ಒಳ್ಮಾನಸ, ಒಳ್ಮಾತು, ಒಳ್ಮನೆ ಮುಂತಾದ ಸಮಾಸ ಶಬ್ದಗಳನ್ನು ಗಮನಿಸಬಹುದು.

[1] T. Burrow, *Dravidian Studies*, V, BSOAS, 1943-46

# ಉಪಭಾಷಾ ಪರಿವೀಕ್ಷಣೆ

In the science of language, Languages are not treated as a means; language itself becomes the sole object of scientific inquiry. Dialects which have never produced any literature at all, the Jargons of savage tribes, the clicks of the Hottentots, and the Vocal modulations of the Indo-Chinese are as important, nay, for the solution of some of our problems, more important, than the poetry of Homer, or the prose of Cicero.

Prof. Max-Muller, M.A., Lectures on the *Science of Language*. Delivered at the Royal Institution of Great Britain in April, May, and June 1861, Fifth Reprint 1965 (July). . . .page 24.

ದೋಷಮಿನಿತೆಂದು ಬಗೆವು
ದ್ಭಾಸಿಸಿ ತಱಿಸಂದು ಕನ್ನಡಂಗಳೊಳೆಂದುಂ ।
ವಾಸುಗಿಯುಮಱಿಯಲಾಱದೆ
ಬೇಸಱುಗುಂದೇಶಿ ಬೇಱೆ ಬೇಱಪ್ಪುದಱಿಂ ॥

—ಕವಿರಾಜಮಾರ್ಗ, ೧–೪೬

ಪ್ರಾದೇಶಿಕ ವೈಲಕ್ಷಣ್ಯಗಳ ಪ್ರಸ್ತಾಪದ ಪದ್ಯವಿದು. ಪ್ರಾದೇಶಿಕ ವ್ಯತ್ಯಾಸಗಳು ಕನ್ನಡದಲ್ಲಿ ಒಂದು ಸಾವಿರ ವರುಷದ ಹಿಂದೆ ಕೂಡ ಇದ್ದುವು.

ಭಾಷೆಯೆಂಬುದು, ಒಂದು ದೃಷ್ಟಿಯಲ್ಲಿ, ಏಳುಸುತ್ತಿನ ಕೋಟೆಯಂತೆ ತೋರುತ್ತದೆ. ಒಂದೇ ಭಾಷೆಯಲ್ಲಿ ಹಲವು ಉಪಭಾಷೆಗಳು ಕೂಡಿಕೊಂಡಿರುತ್ತವೆ. ಉಪಭಾಷೆಯೆಂದರೆ ಒಂದು ಭಾಷೆಯ ಗ್ರಾಮ್ಯರೂಪವೆಂದಾಗಲಿ ಅಥವಾ ಬೇರೆ ಯಾವುದೇ ಬಗೆಯ ಸಂಕುಚಿತ ದೃಷ್ಟಿಯ ಅರ್ಥವಾಗಲಿ ಪಡೆದ ಭಾಷಾರೂಪವಲ್ಲ. ಉಪಭಾಷೆಯೆಂಬುದು ಒಂದು ಭಾಷೆಗೆ ಸೇರಿದ, ಆದರೆ ಪ್ರಾದೇಶಿಕ ಅಥವಾ ಸ್ಥಳೀಯ ವೈಶಿಷ್ಟ್ಯವುಳ್ಳ ಭಾಷೆ ; ಅದೊಂದು ಭೌಗೋಲಿಕ ಆಧಾರದಿಂದ ಒಂದೇ ಭಾಷೆಯಲ್ಲಿ ಕಾಣುವ ವಿಭೇದ. ಉಪಭಾಷೆ ಸಾಮಾಜಿಕ ಪರಿಸರದಿಂದ, ವೃತ್ತಿ ನಿಮಿತ್ತದಿಂದ, ಅನ್ಯಭಾಷೆಗಳ

ಪ್ರಭಾವದಿಂದ, ಮೂಲಭಾಷೆಯೊಡನೆ ಸಂಪರ್ಕ ಕಡಮೆಯಾಗುವಿಕೆಯಿಂದ—ನಾನಾ ಕಾರಣಗಳಿಂದ ಉಂಟಾಗಿರಬಹುದು.

Each family is said to have its own dialect; in fact in so far as each of us has his own vocabulary and particular quirks of speech, each individual has his own dialect. Also, of course, in so far as he is a member of many speech communities, each individual is more or less master of many dialects and shifts easily and almost unconsciously from one to another as he shifts from one social environment to another.[1]

ಸಮಾಜದಲ್ಲಿ ಪ್ರತಿಷ್ಠಿತರಾದವರ ಅಥವಾ ಜನನಾಯಕರ ಭಾಷೆ ಅವರ ಸುತ್ತ ಮುತ್ತ ಇರುವ, ಅವರ ಸ್ನೇಹದ ವ್ಯಾಪ್ತಿಯಲ್ಲಿ ಬರುವ ಜನತೆಯ ಮೇಲೆ ಆಳವಾದ ಪ್ರಭಾವ ಬೀರುವ ಸಂಭವ ಇರುತ್ತದೆ. ಅಂಥ ಹಿರಿಯರ ಮಾತುಕಥೆಯನ್ನು ಉಳಿದವರು ಅನುಕರಿಸುವರು.

The humble person is not initated; the lord or leader is a model to most of those who hear him. In conversation with him, common man avoids giving offense or cause for ridicule; he suppresses such of his habits as might seem peculiar, and tries to ingratiate himself by talking as he hears. Having conversed with the great he himself may become a model in his own group for these who have not had the privilege. Every speaker is a mediator between various groups.

ವ್ಯಕ್ತಿಯ ಭಾಷೆಯನ್ನು ಭಾಷೆಯ ಸಂಕೀರ್ಣ ರೂಪವೆಂದು ಹೇಳಬಹುದು. ಆದರೆ ಈ ವ್ಯಕ್ತಿ ಭಾಷೆಯನ್ನು ಇನ್ನೂ ಸೂಕ್ಷ್ಮತರವಾಗಿ; ವೈಜ್ಞಾನಿಕ ದೃಷ್ಟಿಯಿಂದ ಮತ್ತು ವಿಶೇಷವಾಗಿ ಧ್ವನಿವಿಜ್ಞಾನದ ದೃಷ್ಟಿಯಿಂದ ಅವಲೋಕಿಸಿದಾಗ ಒಬ್ಬನೇ ವ್ಯಕ್ತಿ ಎಲ್ಲ ಕಾಲಗಳಲ್ಲೂ ಒಂದೇ ಬಗೆಯಲ್ಲಿ ನುಡಿಯಲಾರನೆಂಬುದನ್ನು ಮನಗಾಣಬಹುದು. ಅನೇಕ ಆಧಾರಗಳನ್ನಿತ್ತು ವಿದ್ವಾಂಸರು ಇದನ್ನು ಸ್ಪಷ್ಟಪಡಿಸಿದ್ದಾರೆ. ಹೀಗಾಗಿ ಒಬ್ಬನೇ ವ್ಯಕ್ತಿ ಹಲವು ಭಾಷೆ (ಧ್ವನಿ)ಗಳ ಒಡೆಯನಾಗಿರುತ್ತಾನೆ. ಆದುದರಿಂದ ವ್ಯಕ್ತಿ ಭಾಷೆಯೆಂಬುದು ತೀರ ನಿಶ್ಚಿತಾರ್ಥದಲ್ಲಿ, ಯಾವುದೋ ಒಂದು ಅವಧಿಯಲ್ಲಿ ಒಬ್ಬ ವ್ಯಕ್ತಿ ಆಡಿದ ಭಾಷೆ; ಆದರೆ ಸಾಮಾನ್ಯಾರ್ಥದಲ್ಲಿ ವ್ಯಕ್ತಿಭಾಷೆಯೆಂಬುದು ಒಬ್ಬ ವ್ಯಕ್ತಿ ಹುಟ್ಟನಿಂದ ಸಾವಿನವರೆಗೆ ಆಡುವ ಭಾಷೆ.

ವ್ಯಕ್ತಿಭಾಷೆ ಒಂದು ಭಾಷೆಯ ಸಂಕೀರ್ಣ ರೂಪವಾದರೆ, ಉಪಭಾಷೆ ವ್ಯಕ್ತಿ

---

[1] Introductory Readings on *Language*, p. 366

[2] Leonard Bloomfield, *Language*, p. 47‡

ಭಾಷೆಯ ಸಾಮೂಹಿಕ ರೂಪ. ಉಪಭಾಷೆಯನ್ನು ಸ್ಥಾನೀಯ ಭಾಷೆಯೆಂದೂ ಕರೆಯಬಹುದು. ಯಾವುದೇ ಒಂದು ಜೀವಂತ ಭಾಷೆಯಲ್ಲಿ ಅಂತರ್ಗತವಾದ ಹಲವು ಉಪಭಾಷೆಗಳು ಇರುತ್ತವೆ. ಇಷ್ಟೇ ಅಲ್ಲದೆ ಉಪಭಾಷೆಯೊಳಗೆ ಉಪ–ಉಪಭಾಷೆ (subdialect) ಇರುವುದೂ ಸಾಧ್ಯ. ಉದಾಹರಣೆಗೆ ಕನ್ನಡದ ಉಪಭಾಷೆಯಾದ ಹವ್ಯಕದಲ್ಲಿ ಎರಡು ಉಪ–ಉಪಭಾಷೆಗಳಿವೆ. ಈ ಉಪ–ಉಪಭಾಷೆಯನ್ನು ವಿಭಾಷೆ ಎಂದೂ ಕರೆಯಬಹುದು. ಆಳುಕಾಳುಗಳ ಭಾಷೆ, ವರ್ತಕರ ಭಾಷೆ. ಹೆಂಗಸರ ಭಾಷೆ, ಸೈನಿಕರ ಭಾಷೆ, ಪೂಜಾರಿಗಳ ಭಾಷೆ—ಹೀಗೆ ಸಮಾಜದ ಒಂದು ವರ್ಗದವರ ಭಾಷೆಗೂ ಇನ್ನೊಂದು ವರ್ಗದವರ ಭಾಷೆಗೂ ಅಂತರ ಒಡೆದು ಕಾಣುತ್ತದೆ.

ವ್ಯಕ್ತಿಭಾಷೆ→ಉಪ–ಉಪಭಾಷೆ
→ ಉಪಭಾಷೆ→ ಭಾಷೆ → ಉಪಭಾಷೆ→
ಉಪ–ಉಪಭಾಷೆ→ ವ್ಯಕ್ತಿಭಾಷೆ

ಈ ದೃಷ್ಟಿಯಿಂದ ನಾವು ಭಾಷೆಯನ್ನು ಪೃಥಕ್ಕರಿಸಿದಾಗ ಪ್ರತಿಯೊಂದು ಭಾಷೆಯೂ ಹಲವು ಉಪಭಾಷೆಗಳಿಂದ ಆದ ಒಂದು ರೂಪವೆಂದು ತಿಳಿದುಬರುತ್ತದೆ. ದಾರಿ ಸವೆದು ದೂರ ಹೆಚ್ಚಿದಷ್ಟೂ, ಒಂದೇ ಭಾಷೆಗೆ ಸೇರಿದ ವಿಶಾಲವಾದ ಸೀಮಾರೇಖೆಯೊಳಗೆ, ಉಪಭಾಷೆಗಳೂ ಹೆಚ್ಚಾಗಿಯೇ ಕಾಣಿಸಿಕೊಳ್ಳುವ ಸಂಭವವಿದೆ. ಉಪಭಾಷೆಯಲ್ಲಿ, ಆ ಪದದ ವಿಶಾಲವಾದ ಅರ್ಥದಲ್ಲಿ, ಪ್ರಾಂತೀಯ ಅಥವಾ ಪ್ರಾದೇಶಿಕ ಉಪಭಾಷೆ (Regional dialect) ಮತ್ತು ಸಾಮಾಜಿಕ ಉಪಭಾಷೆ (Social dialect) ಎಂಬ ಎರಡು ಪ್ರಧಾನವಾದ ಭೇದಗಳಿವೆ. ಪ್ರತಿಯೊಂದು ಉಪಭಾಷೆಯೂ ತನ್ನದೇ ಆದ ಒಂದು ಧ್ವನಿವ್ಯವಸ್ಥೆ, ಕೆಲವು ವಿಶಿಷ್ಟ ಪದಗಳು ಸ್ವಲ್ಪಮಟ್ಟಿಗೆ ಒಂದು ಬಗೆಯ ಪ್ರತ್ಯೇಕ ವ್ಯಾಕರಣ ನಿಯಮ:—ಇವುಗಳನ್ನು ಪಡೆದಿರುತ್ತದೆ. ಉಪಭಾಷೆಗಳಲ್ಲಿ ಸಾಹಿತ್ಯ ರಚನೆ ಇರಬಹುದು, ಇಲ್ಲದಿರಬಹುದು.

> Dialects have always been the feeders rather than the channels of a literary language; anyhow, they are parallel streams which exicted long before one of them was raised to that temporary eminence which is the result of literary cultivation.[1]

ಈ ಹಲವು ಉಪಭಾಷೆಗಳಲ್ಲಿ ಯಾವುದಾದರೊಂದು ಉಪಭಾಷೆ, ಅನೇಕ ಕಾರಣಗಳಿಂದಾಗಿ ಮಾನ್ಯತೆಯನ್ನೂ, ಜನಪ್ರಿಯತೆಯನ್ನೂ ಪಡೆದು ಮುಂದೆ ಒಂದು ಕಾಲಕ್ಕೆ ಅದೇ ಉಪಭಾಷೆ ಎಲ್ಲ ಕಡೆಗೂ ಆದರ್ಶ ಭಾಷೆಯಾಗಿ ಹಬ್ಬಬಹುದು ಹಾಗೂ ಮನ್ನಣೆ ಪಡೆದು ಎಲ್ಲ ವ್ಯವಹಾರ ಮಾಧ್ಯಮದ ಭಾಷೆಯಾಗಬಹುದು.

---

[1] *The Science of Language*, p. 55

Before there is a national language, there have always been hundreds of dialects in districts, towns, villages, clans and families.[1]

ಹೀಗೆ ಆಗಿರುವುದಕ್ಕೆ ಐತಿಹಾಸಿಕ ದಾಖಲೆಗಳಿವೆ. ಅಂತಹ ಕೆಲವು ಚಾರಿತ್ರಿಕ ದೃಷ್ಟಾಂತಗಳಲ್ಲಿ ಗ್ರೀಕ್ ಭಾಷೆಗೆ ಸಂಬಂಧಪಟ್ಟುದನ್ನು ಇಲ್ಲಿ ಉದಾಹರಿಸಬಹುದು.

ಪ್ರಾಚೀನ ಗ್ರೀಕ್ ರಾಜ್ಯದಲ್ಲಿ ಅಥೆನ್ಸಿನ ಸುತ್ತಮುತ್ತ ಅನೇಕ ಉಪಭಾಷೆಗಳು ಪ್ರಚಾರದಲ್ಲಿ ಇದ್ದುವು. ಅವುಗಳಲ್ಲಿ ಡೋರಿಕ್, ಲ್ಯಕೊನಿಯನ್ (ಇದು ಸ್ಪಾರ್ಟಾದ ಉಪಭಾಷೆ), ಅಖೇನಿಯನ್, ಅಯೊನಿಯನ್, ಅಟ್ಟಿಕ್—ಮುಂತಾದ ಆರೇಳು ಉಪಭಾಷೆಗಳು ಗಮನಾರ್ಹವಾಗಿದ್ದುವು. ಆದರೆ ಈ ಉಪಭಾಷೆಗಳಲ್ಲಿ ಅಥೆನ್ಸಿನಲ್ಲಿ ಬಳಕೆಯಲ್ಲಿದ್ದ ಅಟ್ಟಿಕ್ ಎಂಬ ಉಪಭಾಷೆ ಹಲವು ಕಾರಣಗಳಿಂದ ಶ್ರೇಷ್ಠವೆಂದು ಪರಿಗಣಿತವಾಗಿ ಎಲ್ಲರಿಂದಲೂ ಮಾನ್ಯತೆ ಪಡೆದ ಭಾಷೆಯಾಯಿತು. ಅಲ್ಲಿಂದ ಮುಂದೆ ಈ ಅಟ್ಟಿಕ್ ಉಪಭಾಷೆಯೊಂದನ್ನೇ ಎಲ್ಲರೂ, ಎಲ್ಲೆಡೆಯಲ್ಲೂ ಬಳಸಿಕೊಂಡರು, ಬೆಳೆಸಿಕೊಂಡರು. ಹೀಗಾಗಿ ಅಟ್ಟಿಕ್ ಉಪಭಾಷೆಯಿಂದ ದೇಶಭಾಷೆಯ ಗದ್ದುಗೆ ಏರಿತು. ಇದು ಕ್ರಿಸ್ತಪೂರ್ವ ಮತ್ತು ಕ್ರಿಸ್ತಶಕದ ಆರಂಭ ಕಾಲದಲ್ಲೇ ಆದ ಒಂದು ಘಟನೆ. ಇದರಂತೆ ಲಂಡನ್ನಿನ ಇಂಗ್ಲಿಷ್ ಭಾಷೆ ಇಂಗ್ಲೆಂಡಿನ ಪ್ರಮಾಣ ಭಾಷೆ ಅಥವಾ ಶಿಷ್ಟಭಾಷೆಯಾಯಿತು; ಪ್ಯಾರಿಸ್ಸಿನ ಫ್ರೆಂಚ್ ಭಾಷೆ ಫ್ರಾನ್ಸಿನ ಶಿಷ್ಟಭಾಷೆಯಾಯಿತು; ಮೈಸೂರಿನ ಕನ್ನಡ ಭಾಷೆ ಕರ್ನಾಟಕದ ಶಿಷ್ಟಭಾಷೆಯಾಗಿದೆ.

ಜಗತ್ತಿನ ಎಲ್ಲ ಭಾಷೆಗಳಲ್ಲೂ, ಅದರಲ್ಲೂ ಅದು ಜೀವಂತಭಾಷೆಯಾಗಿರುವಾಗ, ಉಪಭಾಷೆಗಳು ಇದ್ದೇ ಇರುತ್ತವೆ. ಸಂಸ್ಕೃತ ಭಾಷೆಯಲ್ಲೂ ವೈದರ್ಭೀ, ಗೌಡೀ, ಪಾಂಚಾಲೀ....ಇತ್ಯಾದಿಯಾಗಿ ಹೇಳಿದ ಶೈಲಿ ಆ ಭಾಷೆಗೆ ಸೇರಿದ ಉಪಭಾಷೆಗಳಾಗಿದ್ದುವೆಂಬುದಕ್ಕೆ ಪಾಣಿನಿಯ ಅಷ್ಟಾಧ್ಯಾಯಿಯಿಂದಲೂ ಆಧಾರಗಳಿವೆ. ಚೀಣೀ ಭಾಷೆಯಲ್ಲೂ ವಿುನ್, ವು, ಕ್ಯಾಂಟೊನೀಸ್, ಮಂಡರಿನ್—ಮೊದಲಾದ ಉಪಭಾಷೆಗಳಿವೆ. ಕರ್ನಾಟಕದಲ್ಲೂ ಕನ್ನಡ ಭಾಷೆಗೆ ಸೇರಿದ ಕೆಲವು ಉಪಭಾಷೆಗಳು ಇದ್ದರೂ ಅವುಗಳಲ್ಲಿ ಮೈಸೂರು ಕನ್ನಡಕ್ಕೆ ಪ್ರಾಧಾನ್ಯ ಕೊಟ್ಟಿದ್ದಾರೆ. ಬಹುಶಃ ಕವಿರಾಜಮಾರ್ಗ ರಚಿತವಾದ ಕಾಲಕ್ಕಿಂತ ಹಿಂದಿನಿಂದಲೂ ಕನ್ನಡ ಭಾಷೆಯಲ್ಲಿ ಉಪಭಾಷೆಗಳು ಇದ್ದಿರಬೇಕು. ಕವಿರಾಜಮಾರ್ಗದಲ್ಲಿ ಹೆಚ್ಚು ವಿವರಣೆಯಿದೆ;[2] ಪಂಪ ಹೇಳಿದ 'ಸಾಜದ ಪುಲಿಗೆರೆಯ ತಿರುಳ್ಗನ್ನಡ'ವೂ ಅಂದಿನ ಕನ್ನಡದ ಒಂದು ಮುಖ್ಯ ಉಪಭಾಷೆಯಿದ್ದಿರಬೇಕು. ಉಪಭಾಷೆಗಳು ಎಲ್ಲ ಜೀವಂತಭಾಷೆಯಲ್ಲೂ, ಎಲ್ಲ ಕಾಲದಲ್ಲೂ ಇರುವಂತಹುವೇ. ಆದರೂ ಅವುಗಳಲ್ಲಿ ಏರುಪೇರುಗಳಾಗುವ

---

[1] ಅದೇ., ಪುಟ ೫೯

[2] ಎರಡು ಸಾವಿರ ನಾಲಗೆಯುಸ್ನುಳ್ಳ ವಾಸುಕಿಗೂ ತಿಳಿಯಲು ಕಷ್ಟವೆನಿಸುವಷ್ಟು ಮಟ್ಟಿಗೆ ಕನ್ನಡದಲ್ಲಿ ದೇಸಿಗಳಿವೆಯೆಂದು ಕವಿರಾಜಮಾರ್ಗಕಾರ ತಿಳಿಸಿದ್ದಾನೆ.

ಸಂಭವನಿದೆ. ಬಹುಶಃ ವಿದ್ಯಾಭ್ಯಾಸ, ನಿಕಟಸಂಪರ್ಕ, ವಾಣಿಜ್ಯ ವ್ಯವಹಾರ—ಮುಂತಾದುವು ಉಪಭಾಷೆಗಳನ್ನು ತಗ್ಗಿಸುವ, ಕೆಲವೊಮ್ಮೆ ಅಳಿಸಿಬಿಡುವ ಕಾರಣಗಳೆನ್ನಬಹುದು. ಇಷ್ಟಾದರೂ ಒಂದು ಉಪಭಾಷೆ ಹೋದರೆ ಇನ್ನೊಂದು ಉಪಭಾಷೆ ಬರಬಹುದು. ಭಾಷೆಯನ್ನು ತಿಳಿಯಬಯಸುವ ಹೊಸಬರಿಗೆ ಕೆಲವೊಮ್ಮೆ ಈ ಉಪಭಾಷೆಗಳು ಅಡ್ಡಿ ಆತಂಕಗಳಾಗಿ ಪರಿಣಮಿಸಬಹುದಾದರೂ, ಉಪಭಾಷೆಗಳನ್ನು ನಿರ್ಲಕ್ಷ್ಯ, ತಾತ್ಸಾರಗಳಿಂದ ಕಾಣಲಾಗದು. ಉಪಭಾಷೆಗಳು ಭಾಷೆಗೆ ವೈವಿಧ್ಯದ ಶೋಭೆಯನ್ನು ಕೊಡುತ್ತವೆ. ವೈವಿಧ್ಯ ಬದುಕಿನ ಸಾರ, ಉಪಭಾಷೆ ಭಾಷೆಯ ರುಚಿಯನ್ನು ಹೆಚ್ಚಿಸುವ ಸಾಂಬಾರವಿದ್ದಂತೆ.

ಜೀವಂತಭಾಷೆ, ಪ್ರತಿಭೆಯಂತೆ ನವನವೋನ್ಮೇಷಶಾಲಿನಿ, ನವನವೋಲ್ಲೇಖಶಾಲಿನಿ. ದೇಶ ಕಾಲ ಪರಿಸರಗಳ ಪ್ರಭಾವ ಭಾಷೆಗೂ ತಪ್ಪಿದ್ದಲ್ಲ. ಮಾನವ ಮತ್ತು ಅವನು ಆಡುವ ಭಾಷೆ—ಎರಡೂ ಕಾಲಕ್ಕೆ ತಕ್ಕಂತೆ ಮಾರ್ಪಾಟುಗೊಂಡು, ಪರಿಸರದೊಡನೆ ಹೊಂದಿಕೊಂಡು ಹೋಗಬೇಕಾಗುತ್ತದೆ. ಈ ಹೊಂದಿಕೊಂಡು ಹೋಗುವ ಸ್ವಭಾವ ಆಡುಭಾಷೆಯ ಮುಖ್ಯ ಗುಣ. ಈ ದೃಷ್ಟಿಯಿಂದಲೇ ಭಾಷೆಯನ್ನು ನಿತ್ಯಪರಿವರ್ತನ ಶೀಲವೆನ್ನುವುದು. ಮಾನವಲೋಕದಲ್ಲಿ ನಡೆಯುವ ಹುಟ್ಟು—ಸಾವುಗಳು, ಸಿರಿತನ ಬಡತನಗಳು ಭಾಷಾಲೋಕದಲ್ಲೂ ಉಂಟು ಎನ್ನುವುದು ಈ ಅರ್ಥದಲ್ಲಿಯೇ. ಇಂತಹ ವ್ಯತ್ಯಾಸಗಳ ಪರಿಣಾಮವಾಗಿ ಉಪಭಾಷೆಗಳು ಕಾಣಿಸಿಕೊಳ್ಳುತ್ತವೆ.

ಒಂದೇ ಭಾಷೆಯಲ್ಲಿ ಒಂದು ಸ್ಥಳಕ್ಕೂ ಇನ್ನೊಂದು ಸ್ಥಳಕ್ಕೂ ವ್ಯತ್ಯಾಸವಿರುತ್ತದೆ. ಊರಿಂದ ಊರಿಗೆ ಕಾಣುವ ವ್ಯತ್ಯಾಸಗಳ ಜೊತೆಗೆ ಸ್ಥಳೀಯ ವ್ಯತ್ಯಾಸವಿರುವುದೂ ಉಂಟು. ಭಾಷೆಯ ಅಭ್ಯಾಸದಲ್ಲಿ ಇವೆಲ್ಲವನ್ನೂ ಪರಿಶೀಲಿಸುವುದು ಆಗತ್ಯ. ಈ ಉಪಭಾಷಾ ಪರಿವೀಕ್ಷಣೆಯಿಂದ ಯಾವ ಯಾವ ಹೊರಗಿನ ಭಾಷೆ ಯಾವ ಯಾವ ಭಾಗದಲ್ಲಿ ಎಷ್ಟೆಷ್ಟು ಪ್ರಭಾವ ಬೀರಿದೆಯೆಂಬುದನ್ನು ತಿಳಿಯಬಹುದು. ಕನ್ನಡದಲ್ಲಿ ಇದುವರೆಗೆ ಯಾರೂ ಈ ಉಪಭಾಷಾ ಪರಿವೀಕ್ಷಣೆಯನ್ನು ಸಮಗ್ರ ಕರ್ನಾಟಕಕ್ಕೆ ವ್ಯಾಪಿಸುವಂತೆ ನಡಸಿಲ್ಲ. ಭಾಷಾ ಭೂಗೋಳಗಳನ್ನೂ ರಚಿಸಿ, ಭಾಷಾ ಭೂಪಟವನ್ನು ಸಿದ್ಧಪಡಿಸುವಂತೆ, ಉಪಭಾಷಾ ಭೂಗೋಳಗಳನ್ನೂ, ಜೊತೆ ಜೊತೆಗೆ ಉಪಭಾಷೆಗಳ ಭೂಪಟವನ್ನೂ, ಮತ್ತು ಇದರ ಜೊತೆಗೆ ಉಪಭಾಷಾ ನಿಘಂಟನ್ನೂ ಸಿದ್ಧಪಡಿಸುವುದು ಆಗತ್ಯ.

ಉಪಭಾಷೆಗಳ ಶಬ್ದಕೋಶವನ್ನು ತಯಾರಿಸುವಾಗ ಕೇವಲ ಪದಗಳ ವ್ಯತ್ಯಾಸವನ್ನು ಗುರುತಿಸಿದರೆ ಸಾಲದು; ಧ್ವನಿವ್ಯತ್ಯಾಸವನ್ನೂ ಉಚ್ಚಾರಣಾ ರೀತಿಯನ್ನೂ ಗಮನಿಸಿ ಸಾಧ್ಯವಾದ ಮಟ್ಟಿಗೂ ಅದನ್ನು ತೋರಿಸಬೇಕು. ಏಕೆಂದರೆ ಉಚ್ಚಾರಣೆ, ರೂಪರಚನೆ, ವಾಕ್ಯರಚನೆ, ಅರ್ಥ, ಶಬ್ದಸಮೂಹ—ಇವು ಉಪಭಾಷೆಯನ್ನು ನಿರ್ಧರಿಸುವ ಅಂಶಗಳು. ಇದು ಒಬ್ಬನಿಂದ ಆಗುವ ಕಾರ್ಯವಲ್ಲ, ಸಂಘ ಸಂಸ್ಥೆಗಳು ಸಾಮೂಹಿಕವಾಗಿ ನಡಸಬೇಕಾದ ಕೆಲಸ. ಹೀಗಾಗಿ ಇಲ್ಲಿ ಕೇವಲ ಕರ್ನಾಟಕದ

ಕನ್ನಡದ ಉಪಭಾಷಾ ಪರಿವೀಕ್ಷಣೆಯನ್ನು ನನ್ನ ಪರಿಚಯದ ಪರಿಮಿತಿಯಲ್ಲಿ ನಡಸಿದ್ದೇನೆ.

ಉತ್ತರ ಕರ್ನಾಟಕದ ಕನ್ನಡಕ್ಕೂ ಮೈಸೂರು ಕಡೆಯ ಕನ್ನಡಕ್ಕೂ ಬಹಳವಾದ ಅಂತರವಿದೆ. ಈ ಅಂತರದಲ್ಲಿ ಎರಡು ಬಗೆ; ಒಂದು ಉಚ್ಚಾರಕ್ಕೆ ಸಂಬಂಧಪಟ್ಟದ್ದು, ಇನ್ನೊಂದು ಬರವಣಿಗೆಗೆ ಸಂಬಂಧಪಟ್ಟದ್ದು. ಇವಲ್ಲದೆ ಎರಡು ಭಾಗಗಳಲ್ಲೂ ೧೯೦೧ರಿಂದ ೧೯೨೭ರ ವರೆಗೆ ಭಾರತದ ಭಾಷಾಪರಿವೀಕ್ಷಣೆಮಾಡಿದ ಸರ್ ಜಾರ್ಜ್ ಗ್ರಿಯೆರ್ಸನ್ನನು ಕನ್ನಡಕ್ಕೆ ಸೇರಿದಂತೆ ಬಡಗ (ನೀಲಗಿರಿಯ ಬಡಗರು) ಕುರುಂಬ (ನೀಲಗಿರಿಯ ಕುರುಂಬರು) ಬಿಜಾಪುರೀ (ಬಿಜಾಪುರದ ಕನ್ನಡ) ಗೋಲರು ಅಂದರೆ ಹೊಲೆಯರು (ಮಧ್ಯಪ್ರಾಂತ) ಎಂಬ ಭಾಷೆಗಳನ್ನು ಹೇಳಿದ್ದಾನೆ.

> Baḍaga . . . is a more ancient form than ordinary Kanarese and in several points agrees with the language of old literature [*L.S.I.* Vol, iv, 1906-363.]

ಒಂದೇ ಪದಕ್ಕೆ ಬೇರೆ ಬೇರೆ ಅರ್ಥಗಳಿವೆ,[1] ಒಂದೇ ಅರ್ಥಕ್ಕೆ ಬೇರೆ ಬೇರೆ ಪದಗಳಿವೆ. ದ. ರಾ. ಬೇಂದ್ರೆಯವರ ಪದ್ಯಗಳಲ್ಲೂ, ಗೋಕಾಕರ 'ಸಮರಸವೇ ಜೀವನ', ರಾವ್ ಬಹದ್ದೂರರ 'ಗ್ರಾಮಾಯಣ' ಹಾಗು ಮಿರ್ಜಿ ಅಣ್ಣಾರಾಯರ 'ನಿಸರ್ಗ'—ಮೊದಲಾದ ಕಾದಂಬರಿಗಳಲ್ಲೂ ಉತ್ತರ ಕರ್ನಾಟಕದ ಕನ್ನಡಭಾಷೆಯ ಸ್ವರೂಪದ ಸಂದರ್ಶನವಾಗುತ್ತದೆ. ಆ ಉಪಭಾಷೆಯ ನೇರ ಪರಿಚಯಕ್ಕೆ ಇರುವ ಇತರ ಸಾಧನಗಳೆಂದರೆ 'ಸಂಯುಕ್ತ ಕರ್ನಾಟಕ' (ಹುಬ್ಬಳ್ಳಿ ಮುದ್ರಣ), 'ಪ್ರಪಂಚ', 'ಕರ್ಮವೀರ'—ಮುಂತಾದ ಪತ್ರಿಕೆಗಳು. ಉತ್ತರ ಕರ್ನಾಟಕದ, ಅದರಲ್ಲಿಯೂ ಹುಬ್ಬಳ್ಳಿ—ಧಾರವಾಡಗಳಲ್ಲಿನ ಕನ್ನಡಭಾಷೆಯ ವೈಶಿಷ್ಟ್ಯವನ್ನು ಸಮೀಕ್ಷಿಸಿದಾಗ ಸಂಗ್ರಹಿಸಿದ ಕೆಲವು ವಿವರಗಳನ್ನು ಇಲ್ಲಿ ಕೊಟ್ಟಿದ್ದೇನೆ. ಒಂದು ದೃಷ್ಟಿಯಲ್ಲಿ ಚಿತ್ರದುರ್ಗ, ಉತ್ತರ ಕರ್ನಾಟಕ ಮತ್ತು ಮೈಸೂರು ಕನ್ನಡಗಳ ಉಪಭಾಷೆಗಳ ವ್ಯತ್ಯಾಸಗಳನ್ನು ಬೇರ್ಪಡಿಸಿ ತೋರಿಸುವ ಗೆರೆಯಂತೆ ಇರುವ ಗಡಿ ಎನ್ನಬಹುದು. ಚಿತ್ರದುರ್ಗದಿಂದ ಹಿರಿಯೂರು, ಶಿರಾ, ತುಮಕೂರು ಕಡೆಗೆ ಬರುತ್ತಾ ಮೈಸೂರು ಕನ್ನಡ ಹೆಚ್ಚಾಗುತ್ತದೆ; ಚಿತ್ರದುರ್ಗದಿಂದ ದಾವಣಗೆರೆ, ಹರಿಹರ, ರಾಣೆಬೆನ್ನೂರು ಮತ್ತು ಮುಂದಕ್ಕೆ ಹೋಗುತ್ತಾ ಉತ್ತರ ಕರ್ನಾಟಕದ ಉಪಭಾಷೆ ಹೆಚ್ಚಾಗುತ್ತದೆ.

ದಾವಣಗೆರೆಯಲ್ಲಿ ಎರಡೂ ಬಗೆಯ ಉಪಭಾಷೆಗಳನ್ನು ಆಡುವವರು ಇರುವರಾದರೂ, ಸಮಪ್ರಮಾಣದಲ್ಲಿ ಇಲ್ಲ; ಉತ್ತರ ಕರ್ನಾಟಕದ ಕನ್ನಡ ಹೆಚ್ಚು, ಸುಮಾರು ೭೫%ರಷ್ಟು ಕಾಣುತ್ತದೆ.

---

[1] ಇದು ಸಾಮಾನ್ಯವಾಗಿ ಎಲ್ಲ ಆಡುನುಡಿಗಳಲ್ಲೂ ಉಂಟೆಂದು ಕಾಣುತ್ತದೆ. ಆದುದರಿಂದ ಇದು ಕೇವಲ ಕನ್ನಡಭಾಷೆಯ ವೈಶಿಷ್ಟ್ಯವೇನಲ್ಲ.

ಧಾರವಾಡದಿಂದ ಬೆಳಗಾಂ ಮತ್ತು ಸೊಲ್ಲಾಪುರದ ಕಡೆಗೆ ಹೊರಟಷ್ಟೂ ಅಲ್ಲಿನ ಕನ್ನಡದಲ್ಲಿ ಕನ್ನಡಭಾಷೆಯ ಶಬ್ದಗಳು ಕಡಮೆಯಾಗುತ್ತಾ ಮರಾಠಿ ಭಾಷೆಯ ಶಬ್ದಗಳು ಹೆಚ್ಚುತ್ತಾ ಬರುತ್ತವೆ. ಅಲ್ಲಿಂದ ಕನ್ನಡದಲ್ಲಿ ಕನ್ನಡ-ಮರಾಠಿ ಭಾಷೆಗಳ ಪ್ರಮಾಣ ೪೦ : ೬೦ರಷ್ಟು. ಅಲ್ಲಿಂದ ಆಚೆಗೆ ಕನ್ನಡ ನಿಂತುಹೋಗುತ್ತದೆ. ಕೊಲ್ಲಾಪುರದಲ್ಲಿ ಅಲ್ಪ ಸ್ವಲ್ಪ ಕನ್ನಡದ ಸೊಲ್ಲು ಕೇಳುತ್ತದೆ—೩೦ : ೭೦ರಷ್ಟು. ವಿಜಾಪುರ ಜಿಲ್ಲೆಯಲ್ಲಿ—ವಿಜಾಪುರದಲ್ಲಿ ಉರ್ದು ಭಾಷೆಯ ಪ್ರಭಾವ ಕನ್ನಡ ನುಡಿಯ ಮೇಲೆ—ಮರಾಠಿಗಿಂತಲೂ ಹೆಚ್ಚಾಗಿ ಇರುವುದು ಕಾಣುತ್ತದೆ. ಆದರೆ ವಿಜಾಪುರ ಜಿಲ್ಲೆ ಮುಗಿದು ಬೆಳಗಾಂ ಜಿಲ್ಲೆ ಆರಂಭವಾಗುವ ಶೇಡಬಾಳ ಮುಂತಾದ ಊರುಗಳಿಂದ ಆಚೆಗೆ ಮತ್ತೆ ಮರಾಠಿಯ ಪ್ರಭಾವ ಅಧಿಕತರವಾಗಿ ಕಾಣುತ್ತದೆ. ದಾವಣಗೆರೆಯಿಂದ ಹೊಸಪೇಟೆಯವರೆಗೂ ಕನ್ನಡ ಭಾಷೆಯ ಪದಗಳು ಒಂದು ತೆರನಾಗಿ ಇರುವಂತೆ ಸಾಮಾನ್ಯವಾಗಿ ತೋರಿದರೂ, ಹೊಸಪೇಟೆ, ಕಮಲಾಪುರದಿಂದ ಬಳ್ಳಾರಿಯ ಕಡೆಗೆ ಹೋಗುತ್ತಾ ತೆಲುಗು ಭಾಷೆಯ ಪ್ರಭಾವ ಕಾಣುತ್ತದೆ—ಕೋಲಾರ ಜಿಲ್ಲೆಯ ಕನ್ನಡದಂತೆ. ಬಳ್ಳಾರಿಯಿಂದ ಆಚೆಗೆ ಕನ್ನಡದ ಗಡಿ ಮುಗಿದು ಆಂಧ್ರದ ಗಡಿ ಆರಂಭವಾದಂತೆ ಕನ್ನಡ ನುಡಿಯೂ ನಿಂತು ತೆಲುಗು ಭಾಷೆ ಪ್ರಾರಂಭವಾಗುತ್ತದೆ. ಆಂಧ್ರದ ಕರ್ನೂಲ್ ಜಿಲ್ಲೆ ಸಮೀಪವಾಗುತ್ತದೆ. ಹೀಗಾಗಿ ಬಳ್ಳಾರಿಯ ಸುತ್ತಮುತ್ತಲಿನ ಕನ್ನಡ ಒಂದು ಪ್ರತ್ಯೇಕ ಉಪಭಾಷೆಯೆಂದು ಕರೆಸಿಕೊಳ್ಳಲು ಅರ್ಹವಾಗಿದೆ—ಇದನ್ನು ಬಳ್ಳಾರಿ ಕನ್ನಡವೆಂದು ಕರೆಯಬಹುದು.

ವಿಜಾಪುರದ ಕನ್ನಡವನ್ನು 'ವಿಜಾಪುರಿ' ಎಂದು ಹೇಳಬಹುದು. ಇಲ್ಲಿನ ಕನ್ನಡದ ಬಗ್ಗೆ ಮೂರು ದಶಕಗಳ ಹಿಂದೆಯೇ ಭಾರತದ ಭಾಷಾ ಪರಿವೀಕ್ಷಣೆಯ ಕಾಲದ ವರದಿಯಲ್ಲಿ

> The Kanarese spoken ih Bijāpur is locally known as Bijāpuri. It does not, however, differ from the (Kannada) language to such an extent that it deserves to be considered as a separate dialect. The difference is chiefly one of pronunciation[1]

ಎಂದು ಜಾರ್ಜ್ ಗ್ರಿಯರ್ಸನ್ ಅಭಿಪ್ರಾಯಪಟ್ಟಿದ್ದಾನೆ. ಈ ಹೇಳಿಕೆಯನ್ನು ಅನುಮೋದಿಸಲಾಗದು. ಅಲ್ಲಿನ ಅನೇಕ ವ್ಯತ್ಯಾಸವನ್ನು ಅಲ್ಲಗಳೆಯುವಂತಿಲ್ಲ. ಉದಾಹರಣೆಗೆ ಪದದ ಕೊನೆಯ ಸ್ವರವಾದ–ಎ, ಬಿಜಾಪುರಿಯಲ್ಲಿ—ಅ, ಆಗುತ್ತದೆ. (ಯಾಕೆ > ಯಾಕ); ಕೆಲವು ಪದಗಳ ನಡುವೆ ಬಿಂದು ಬಂದು ಅನುನಾಸಿಕೋಚ್ಚಾರ ಉಂಟಾಗುತ್ತದೆ—ಕಿವಿ > ಕಿಂವಿ, ಅವನು > ಅಂವ; ಬಹುವಚನ ಪ್ರತ್ಯಯವಾದ—ಗಳು > —ಗೋಳು ಆಗುತ್ತದೆ—ಅಯ್ಯಗೋಳು, ಯಪ್ಪಗೋಳು ; ಇದ್ದಾನೆ ಮತ್ತು ಇದ್ದಾರೆ ಎಂಬ ಪದಗಳು ಕ್ರಮವಾಗಿ ಹಾನೆ, ಹಾರ—ಎಂದಾಗುತ್ತದೆ.

ಈ ವಾಕ್ಯಗಳನ್ನು ನೋಡಿ :

[1] *Linguistic Survey of India*, vol, IV, p. 81

ಕನ್ನಡದ ಉಪಭಾಷಾ ಪರಿವೀಕ್ಷಣೆಯನ್ನು ನನ್ನ ಪರಿಚಯದ ಪರಿಮಿತಿಯಲ್ಲಿ ನಡಸಿದ್ದೇನೆ.

ಉತ್ತರ ಕರ್ನಾಟಕದ ಕನ್ನಡಕ್ಕೂ ಮೈಸೂರು ಕಡೆಯ ಕನ್ನಡಕ್ಕೂ ಬಹಳವಾದ ಅಂತರವಿದೆ. ಈ ಅಂತರದಲ್ಲಿ ಎರಡು ಬಗೆ; ಒಂದು ಉಚ್ಚಾರಕ್ಕೆ ಸಂಬಂಧಪಟ್ಟುದು, ಇನ್ನೊಂದು ಬರವಣಿಗೆಗೆ ಸಂಬಂಧಪಟ್ಟುದು. ಇವಲ್ಲದೆ ಎರಡು ಭಾಗಗಳಲ್ಲೂ ೧೯೦೧ರಿಂದ ೧೯೨೭ರ ವರೆಗೆ ಭಾರತದ ಭಾಷಾಪರಿವೀಕ್ಷಣೆಮಾಡಿದ ಸರ್ ಜಾರ್ಜ್ ಗ್ರಿಯೆರ್ಸನ್ನನು ಕನ್ನಡಕ್ಕೆ ಸೇರಿದಂತೆ ಬಡಗ (ನೀಲಗಿರಿಯ ಬಡಗರು) ಕುರುಂಬ (ನೀಲಗಿರಿಯ ಕುರುಂಬರು) ಬಿಜಾಪುರೀ (ಬಿಜಾಪುರದ ಕನ್ನಡ) ಗೋಲರು ಅಂದರೆ ಹೊಲೆಯರು (ಮಧ್ಯಪ್ರಾಂತ) ಎಂಬ ಭಾಷೆಗಳನ್ನು ಹೇಳಿದ್ದಾನೆ.

> Baḍaga . . . is a more ancient form than ordinary Kanarese and in several points agrees with the language of old literature [*L.S.I.* Vol, iv, 1906-363.]

ಒಂದೇ ಪದಕ್ಕೆ ಬೇರೆ ಬೇರೆ ಅರ್ಥಗಳಿವೆ,[1] ಒಂದೇ ಅರ್ಥಕ್ಕೆ ಬೇರೆ ಬೇರೆ ಪದಗಳಿವೆ. ದ. ರಾ. ಬೇಂದ್ರೆಯವರ ಪದ್ಯಗಳಲ್ಲೂ, ಗೋಕಾಕರ 'ಸಮರಸವೇ ಜೀವನ', ರಾವ್ ಬಹದ್ದೂರರ 'ಗ್ರಾಮಾಯಣ' ಹಾಗು ಮಿರ್ಜಿ ಅಣ್ಣಾರಾಯರ 'ನಿಸರ್ಗ'—ಮೊದಲಾದ ಕಾದಂಬರಿಗಳಲ್ಲೂ ಉತ್ತರ ಕರ್ನಾಟಕದ ಕನ್ನಡಭಾಷೆಯ ಸ್ವರೂಪದ ಸಂದರ್ಶನವಾಗುತ್ತದೆ. ಆ ಉಪಭಾಷೆಯ ನೇರ ಪರಿಚಯಕ್ಕೆ ಇರುವ ಇತರ ಸಾಧನಗಳೆಂದರೆ 'ಸಂಯುಕ್ತ ಕರ್ನಾಟಕ' (ಹುಬ್ಬಳ್ಳಿ ಮುದ್ರಣ), 'ಪ್ರಪಂಚ', 'ಕರ್ಮವೀರ'—ಮುಂತಾದ ಪತ್ರಿಕೆಗಳು. ಉತ್ತರ ಕರ್ನಾಟಕದ, ಅದರಲ್ಲಿಯೂ ಹುಬ್ಬಳ್ಳಿ—ಧಾರವಾಡಗಳಲ್ಲಿನ ಕನ್ನಡಭಾಷೆಯ ವೈಶಿಷ್ಟ್ಯವನ್ನು ಸಮೀಕ್ಷಿಸಿದಾಗ ಸಂಗ್ರಹಿಸಿದ ಕೆಲವು ವಿವರಗಳನ್ನು ಇಲ್ಲಿ ಕೊಟ್ಟಿದ್ದೇನೆ. ಒಂದು ದೃಷ್ಟಿಯಲ್ಲಿ ಚಿತ್ರದುರ್ಗ, ಉತ್ತರ ಕರ್ನಾಟಕ ಮತ್ತು ಮೈಸೂರು ಕನ್ನಡಗಳ ಉಪಭಾಷೆಗಳ ವ್ಯತ್ಯಾಸಗಳನ್ನು ಬೇರ್ಪಡಿಸಿ ತೋರಿಸುವ ಗೆರೆಯಂತೆ ಇರುವ ಗಡಿ ಎನ್ನಬಹುದು. ಚಿತ್ರದುರ್ಗದಿಂದ ಹಿರಿಯೂರು, ಶಿರಾ, ತುಮಕೂರು ಕಡೆಗೆ ಬರುತ್ತಾ ಮೈಸೂರು ಕನ್ನಡ ಹೆಚ್ಚಾಗುತ್ತದೆ; ಚಿತ್ರದುರ್ಗದಿಂದ ದಾವಣಗೆರೆ, ಹರಿಹರ, ರಾಣೆಬೆನ್ನೂರು ಮತ್ತು ಮುಂದಕ್ಕೆ ಹೋಗುತ್ತಾ ಉತ್ತರ ಕರ್ನಾಟಕದ ಉಪಭಾಷೆ ಹೆಚ್ಚಾಗುತ್ತದೆ.

ದಾವಣಗೆರೆಯಲ್ಲಿ ಎರಡೂ ಬಗೆಯ ಉಪಭಾಷೆಗಳನ್ನು ಆಡುವವರು ಇರುವರಾದರೂ, ಸಮಪ್ರಮಾಣದಲ್ಲಿ ಇಲ್ಲ; ಉತ್ತರ ಕರ್ನಾಟಕದ ಕನ್ನಡ ಹೆಚ್ಚು, ಸುಮಾರು ೭೫%ರಷ್ಟು ಕಾಣುತ್ತದೆ.

---

[1] ಇದು ಸಾಮಾನ್ಯವಾಗಿ ಎಲ್ಲ ಆಡುನುಡಿಗಳಲ್ಲೂ ಉಂಟೆಂದು ಕಾಣುತ್ತದೆ. ಆದುದರಿಂದ ಇದು ಕೇವಲ ಕನ್ನಡಭಾಷೆಯ ವೈಶಿಷ್ಟ್ಯವೇನಲ್ಲ.

ಧಾರವಾಡದಿಂದ ಬೆಳಗಾಂ ಮತ್ತು ಸೊಲ್ಲಾಪುರದ ಕಡೆಗೆ ಹೊರಟಷ್ಟೂ ಅಲ್ಲಿನ ಕನ್ನಡದಲ್ಲಿ ಕನ್ನಡಭಾಷೆಯ ಶಬ್ದಗಳು ಕಡಮೆಯಾಗುತ್ತಾ ಮರಾಠಿ ಭಾಷೆಯ ಶಬ್ದಗಳು ಹೆಚ್ಚುತ್ತಾ ಬರುತ್ತವೆ. ಅಲ್ಲಿಂದ ಕನ್ನಡದಲ್ಲಿ ಕನ್ನಡ–ಮರಾಠಿ ಭಾಷೆಗಳ ಪ್ರಮಾಣ ೪೦ : ೬೦ರಷ್ಟು. ಅಲ್ಲಿಂದ ಆಚೆಗೆ ಕನ್ನಡ ನಿಂತುಹೋಗುತ್ತದೆ. ಕೊಲ್ಲಾಪುರದಲ್ಲಿ ಅಲ್ಪ ಸ್ವಲ್ಪ ಕನ್ನಡದ ಸೊಲ್ಲು ಕೇಳುತ್ತದೆ—೩೦ : ೭೦ರಷ್ಟು. ವಿಜಾಪುರ ಜಿಲ್ಲೆಯಲ್ಲಿ—ವಿಜಾಪುರದಲ್ಲಿ ಉರ್ದು ಭಾಷೆಯ ಪ್ರಭಾವ ಕನ್ನಡ ನುಡಿಯ ಮೇಲೆ—ಮರಾಠಿಗಿಂತಲೂ ಹೆಚ್ಚಾಗಿ ಇರುವುದು ಕಾಣುತ್ತದೆ. ಆದರೆ ವಿಜಾಪುರ ಜಿಲ್ಲೆ ಮುಗಿದು ಬೆಳಗಾಂ ಜಿಲ್ಲೆ ಆರಂಭವಾಗುವ ಶೇಡಬಾಳ ಮುಂತಾದ ಊರುಗಳಿಂದ ಆಚೆಗೆ ಮತ್ತೆ ಮರಾಠಿಯ ಪ್ರಭಾವ ಅಧಿಕತರವಾಗಿ ಕಾಣುತ್ತದೆ. ದಾವಣಗೆರೆಯಿಂದ ಹೊಸಪೇಟೆಯವರೆಗೂ ಕನ್ನಡ ಭಾಷೆಯ ಪದಗಳು ಒಂದು ತೆರನಾಗಿ ಇರುವಂತೆ ಸಾಮಾನ್ಯವಾಗಿ ತೋರಿದರೂ, ಹೊಸ ಪೇಟೆ, ಕಮಲಾಪುರದಿಂದ ಬಳ್ಳಾರಿಯ ಕಡೆಗೆ ಹೋಗುತ್ತಾ ತೆಲುಗು ಭಾಷೆಯ ಪ್ರಭಾವ ಕಾಣುತ್ತದೆ—ಕೋಲಾರ ಜಿಲ್ಲೆಯ ಕನ್ನಡದಂತೆ. ಬಳ್ಳಾರಿಯಿಂದ ಆಚೆಗೆ ಕನ್ನಡದ ಗಡಿ ಮುಗಿದು ಆಂಧ್ರದ ಗಡಿ ಆರಂಭವಾದಂತೆ ಕನ್ನಡ ನುಡಿಯೂ ನಿಂತು ತೆಲುಗು ಭಾಷೆ ಪ್ರಾರಂಭವಾಗುತ್ತದೆ. ಆಂಧ್ರದ ಕರ್ನೂಲ್ ಜಿಲ್ಲೆ ಸಮೀಪವಾಗುತ್ತದೆ. ಹೀಗಾಗಿ ಬಳ್ಳಾರಿಯ ಸುತ್ತಮುತ್ತಲಿನ ಕನ್ನಡ ಒಂದು ಪ್ರತ್ಯೇಕ ಉಪಭಾಷೆಯೆಂದು ಕರೆಸಿ ಕೊಳ್ಳಲು ಅರ್ಹವಾಗಿದೆ—ಇದನ್ನು ಬಳ್ಳಾರಿ ಕನ್ನಡವೆಂದು ಕರೆಯಬಹುದು.

ವಿಜಾಪುರದ ಕನ್ನಡವನ್ನು 'ವಿಜಾಪುರಿ' ಎಂದು ಹೇಳಬಹುದು. ಇಲ್ಲಿನ ಕನ್ನಡದ ಬಗ್ಗೆ ಮೂರು ದಶಕಗಳ ಹಿಂದೆಯೇ ಭಾರತದ ಭಾಷಾ ಪರಿವೀಕ್ಷಣೆಯ ಕಾಲದ ವರದಿಯಲ್ಲಿ

> The Kanarese spoken ih Bijāpur is locally known as Bijāpuri. It does not, however, differ from the (Kannada) language to such an extent that it deserves to be considered as a separate dialect. The difference is chiefly one of pronunciation[1]

ಎಂದು ಜಾರ್ಜ್ ಗ್ರಿಯೆರ್ಸನ್ ಅಭಿಪ್ರಾಯಪಟ್ಟಿದ್ದಾನೆ. ಈ ಹೇಳಿಕೆಯನ್ನು ಅನು ಮೋದಿಸಲಾಗದು. ಅಲ್ಲಿನ ಅನೇಕ ವ್ಯತ್ಯಾಸವನ್ನು ಅಲ್ಲಗಳೆಯುವಂತಿಲ್ಲ. ಉದಾಹರಣೆಗೆ ಪದದ ಕೊನೆಯ ಸ್ವರವಾದ–ಎ, ಬಿಜಾಪುರಿಯಲ್ಲಿ—ಅ, ಆಗುತ್ತದೆ. (ಯಾಕೆ > ಯಾಕ); ಕೆಲವು ಪದಗಳ ನಡುವೆ ಬಿಂದು ಬಂದು ಅನುನಾಸಿಕೋಚ್ಚಾರ ಉಂಟಾಗುತ್ತದೆ—ಕಿವಿ > ಕಿಂವಿ, ಅವನು > ಅಂವ; ಬಹುವಚನ ಪ್ರತ್ಯಯವಾದ—ಗಳು > —ಗೋಳು ಆಗುತ್ತದೆ—ಅಯ್ಯಗೋಳು, ಯಪ್ಪಗೋಳು ; ಇದ್ದಾನೆ ಮತ್ತು ಇದ್ದಾರೆ ಎಂಬ ಪದಗಳು ಕ್ರಮವಾಗಿ ಹಾನೆ, ಹಾರ—ಎಂದಾಗುತ್ತದೆ.

ಈ ವಾಕ್ಯಗಳನ್ನು ನೋಡಿ :

---

[1] *Linguistic Survey of India*, vol, IV, p. 81

## ಬಿಜಾಪುರೀ ಕನ್ನಡ

ಒಬ್ಬ ಮನಶ್ಯಾಗ ಇಬ್ಬರು ಮಕ್ಕಳಿದ್ದರು। ಮತ್ತು ಅವರಲ್ಲಿ ಸಂಣವಾ ತನ್ನ ಯಪ್ಪಗೆ ಅಂದಾ, ಯಪ್ಪಾ ನಂನ ಪಾಲಿಗೆ ಬಂದ ಜಿಂದಗೀ ಪಾಲಾ ನಂಗೆ ಕೊಡು। ಮತ್ತು ಅಂವಾ ತಂನ ಜಿಂದಗೀ ಅವರೊಳಗೆ ಹಂಚಿ ಕೊಟ್ಟಾ। ಮತ್ತು ಭಾಳ ದಿನ ಆಗಿದ್ದಿಲ್ಲ ಆಗ ಸಣ್ಣವನು ತಂನ ಯಲ್ಲಾ ಕೂಡಿಸಿದನು ಮತ್ತು ದೂರದೇಸಕ್ಕೆ ಹೋದಾ। ಮತ್ತು ಅಲ್ಲಿ ತನ್ನ ಬದಕಾ ದುಂದತನದಿಂದ ನಡದು ಹಾಳಮಾಡಿದಾ। ಮತ್ತು ಆತ ಯಲ್ಲಾ ಖರ್ಚ ಮಾಡಿದ ಮ್ಯಾಗ ಆ ದೇಸದಲ್ಲಿ ದೊಡ್ಡ ಬರಾ ಬಿತ್ತು; ಮತ್ತು ಅಂವಗ ಕೊರತೆ ಬೀಳಾಕ ಹತ್ತಿತು। ಮತ್ತು ಅಂವಾ ಹೋದಾ, ಮತ್ತು ಆ ದೇಸದ ಒಬ್ಬ ಮನಶ್ಯಾನ ಬದ್ಯಾಕ ನಿಂತಾ। ಮತ್ತು ಆತಾ ಇವಂನ ಹಂದಿ ಮೇಸಾಕ ತಂನ ಹೊಲದಾಗ ಕಳವಿದಾ। ಮತ್ತು ಆತಾ ಹಂದಿ ತಿನ್ನುವ ಸೊಪ್ಪಿನ ಮೇಲೆ ತಂನ ಹೊಟ್ಟೀ ಖುಷಿ ಇಂದ ತುಂಬಿಸಿ ಕೊಳ್ಳತಿರಬಹುದು, ಮತ್ತು ಯಾರೂ ಅಂವಗ ಕೊಡಲಿಲ್ಲಾ। ಮತ್ತು ಅವನ ವೈನ್ಯಾಗ ಯಚ್ಚರ ಬಂದ ಬಳಿಕ ಅಂವಾ ಅಂದನು, ನಂನ ಯಪ್ಪನ ಯೇಸ ಮಂದಿ ಆಳ ಮಕ್ಕಳ ಹತ್ತರ ಹೊಟ್ಟೆತುಂಬಿ ಸಾಕಾಗಿ ವುಳಿಯುವಷ್ಟು ಬಕ್ಕರೆ ಅದೆ, ಮತ್ತು ನಾ ಹಶಿವಿನಿಂದ ಸಾಯತೇನೆ! ನಾ ಯೇಳತೇನಿ ಮತ್ತು ನಂನ ಯಪ್ಪನ ಬದ್ಯಾಕ ಹೋಗತೇನಿ, ಮತ್ತು ಅಂವಗ ಅಂತೇನು ಯಪ್ಪಾ ದ್ಯಾವರ ಮುಂದೆ ಮತ್ತು ನಿಂನ ಮುಂದೆ ಪಾಪಾ ಮಾಡಿಧೇನೆ। ಮತ್ತು ನಿಂನ ಮಗ ಅನಸಾಕ ನಾ ಯೋಗ್ಯ ಇಲ್ಲ। ನೀನು ನಿಂನ ಆಳಮಗನಂತೆ ನಂನ ಮಾಡಿಕೋ। ಮತ್ತು ಅಂವ ಯದ್ದಾ ಮತ್ತು ತಂನ ಯಪ್ಪನ ಬದ್ಯಾಕ ಬಂದಾ।[1]

ವಿಜಾಪುರ ಜಿಲ್ಲೆಯ ಒಂದು ಬದಿಗೆ ಬೆಳಗಾವಿ ಜಿಲ್ಲೆಯೂ, ಇನ್ನೊಂದು ಪಕ್ಕಕ್ಕೆ ಗುಲ್ಬರ್ಗ ಜಿಲ್ಲೆಯೂ ಇದ್ದು ಕನ್ನಡದ ಪ್ರಭಾವ ಆಗಬೇಕಲ್ಲವೆ? ಆದರೆ ಕನ್ನಡದ ಆಡಳಿತದಿಂದ ಕಳೆದ ಎರಡು ಶತಮಾನಗಳಿಂದಲೂ ತಪ್ಪಿಹೋದ ಈ (ದೂರದ) ಭಾಗಗಳಲ್ಲಿ ಕನ್ನಡನುಡಿ ಅಳಿಯದೆ ಉಳಿದಿರುವುದೇ ಹೆಚ್ಚೆಂದು ತಿಳಿಯಬೇಕು. ಬಿಜಾಪುರ ಜಿಲ್ಲೆಯ ಬಹುಮಟ್ಟಿನ ಗಡಿ ಮಹಾರಾಷ್ಟ್ರಕ್ಕೆ ಸಮೀಪತರವಾಗಿದೆ; ಗುಲ್ಬರ್ಗ—ಬೀದರಿನ ಅರ್ಧ ಭಾಗ ಮಹಾರಾಷ್ಟ್ರದ ಗಡಿಯಲ್ಲೂ, ಇನ್ನರ್ಧಭಾಗ ಆಂಧ್ರಪ್ರದೇಶದ ಎಲ್ಲೆಯಲ್ಲೂ ನಿಂತಿವೆ. ಬೆಳಗಾವಿ-ಬಿಜಾಪುರಗಳ ಭಾಗಗಳನ್ನು ಬಿಡುತ್ತಿದ್ದಂತೆ ಮಹಾರಾಷ್ಟ್ರದ ಸೆರಗು ಆರಂಭವಾಗುತ್ತದೆ.

ಮಹಾರಾಷ್ಟ್ರದ ಗಡಿ ಸಾಂಗಲಿ. ಸಾಂಗಲಿಯಲ್ಲಿ ಕನ್ನಡ ಭಾಷೆ ಹಾಗೂ ಹೀಗೂ ತೂಗಾಡುತ್ತಿದೆ; ಅಲ್ಲಿ ಅಲ್ಲಲ್ಲಿ ಕನ್ನಡದ ಸೊಲ್ಲು ಕೇಳಿಬರುತ್ತದೆ. ಹಾನೆ (ಅಹನೆ) ಹಾಳೆ (<ಅಹಳೆ) ರೂಪಗಳು. ಸಾಂಗಲಿಯನ್ನು ದಾಟಿ ಮುಂದೆ ಸತಾರ, ಪುಣೆಗಳ ಕಡೆ ಹೋದರೆ ಕನ್ನಡ ಕಡಮೆಯಾಗುತ್ತಾ, ಕರಗಿಹೋಗುತ್ತದೆ, ಆದರೆ ಬತ್ತಿಹೋಗುವುದಿಲ್ಲ, ಪುಣೆಬಿಟ್ಟು ಮುಂಬಯಿ ಪ್ರದೇಶವನ್ನು ಪ್ರವೇಶಿಸುತ್ತಿದ್ದಂತೆಯೇ ಮತ್ತೆ ಕನ್ನಡ ನುಡಿಯ

---

[1] *LSI*, Vol, Vol IV, p. 382

ಬಾವುಟ ಹಾರಾಡುವುದನ್ನು ನೋಡಬಹುದು (—ಮುಂಬಯಿಗೆ ಬೊಂಬಾಯಿ ಎಂದೂ, ಇಂಗ್ಲಿಷಿನಲ್ಲಿ ಬಾಂಬೆ ಎಂದೂ ಕರೆಯುವರು).

ಬೊಂಬಾಯಿ ಮತ್ತು ಅದರ ಸುತ್ತಮುತ್ತಲಿನ ಪ್ರದೇಶ ಸುಮಾರು ಒಂದು ಸಾವಿರ ವರುಷಗಳ ಕಾಲ ಕನ್ನಡಿಗರ ಆಳ್ವಿಕೆಗೆ ಒಳಪಟ್ಟಿತ್ತು; ಕ್ರಿ.ಶ. ೧೭ನೆಯ ಶತಮಾನದ ವರೆಗೂ ಕನ್ನಡ ಭಾಷೆಯೇ ಅಲ್ಲಿನ ಪ್ರಧಾನ ಭಾಷೆಯಾಗಿತ್ತು. ೧೬೦೦ರಲ್ಲಿ ಅಲ್ಲಿನ ಕಾನೂನುಗಳು ಕನ್ನಡ ನುಡಿಯಲ್ಲೇ ರಚಿತವಾದುವು. ಅಲ್ಲದೆ ೧೮೧೮ರಲ್ಲಿ ಭಾರತದ ಬ್ರಿಟಿಷ್ ಗೌರ್ನರ್ ಮಹಾಶಯನಿಗೆ ಕೊಟ್ಟ ಬಿನ್ನವತ್ತಳೆಯ ಭಾಷೆ ಕನ್ನಡ. ಈಗಲೂ ಮೂರು ಸಾವಿರಕ್ಕಿಂತಲೂ ಹೆಚ್ಚಿನ ಕನ್ನಡಿಗರ ಮನೆಗಳು ಬೊಂಬಾಯಿ ನಗರ ಒಂದರಲ್ಲೇ ಇವೆ; ಸುಮಾರು ಮುನ್ನೂರಕ್ಕೂ ಹೆಚ್ಚು ಕನ್ನಡಿಗರ ಶಾಲೆಗಳಿವೆ. ಬೊಂಬಾಯಿ ನಗರದಲ್ಲಿ ಇರುವಷ್ಟು ಕನ್ನಡಿಗರ ಸಂಖ್ಯೆ ಮತ್ತೆ ಯಾವ ನಗರದಲ್ಲೂ ಇಲ್ಲವೆಂದು ಅಂಕಿ-ಅಂಶಗಳು ತಿಳಿಸುತ್ತವೆ.[1]

> Kanarese is a main language well established racially, culturally, socially and geographically and there is no likelihood of its failing to keep its place.[2]

ಅಲ್ಲದೆ ಬೊಂಬಾಯಿಯ ಜನಗಣತಿಯ ವರದಿ ಮುವ್ವತ್ತು ವರುಷಗಳ ಹಿಂದೆಯೇ ಬರೆದಿರುವ ಕೆಲವು ಮಾತುಗಳು ಇಂತಿವೆ:

ಮುಂಬಯಿಯ ಮಾತುಂಗ ಮೊದಲಾದ ವಿಸ್ತರಣದಲ್ಲಿ ಎಲ್ಲರ ಮನೆಮಾತು ಕನ್ನಡ. ಮಹಾರಾಷ್ಟ್ರದ ರಾಜಧಾನಿಯಾದ ಮುಂಬಯಿಯಲ್ಲಿ ಸುಮಾರು ಐದನೆಯ ಒಂದು ಭಾಗದಷ್ಟು ಕನ್ನಡಿಗರು ಇರುವುದು ಹೆಮ್ಮೆಯ ಮಾತು. ಆದರೆ ಬೊಂಬಾಯಿ ಬಿಟ್ಟರೆ ಅಲ್ಲಿಂದ ಮುಂದೆ ಮತ್ತೆ ಕನ್ನಡ ಕಾಣದಾಗುತ್ತದೆ. ಬೊಂಬಾಯಿ ನಗರದ ಭಾಷಾ ಭೂಪಟ, ಕರ್ನಾಟಕದ ಇತರ ಎಲ್ಲಾ ಭಾಗಗಳ ಭಾಷಾ ಭೂಪಟದಂತೆ ಬೇಗನೆ ಆಗ ಬೇಕು.

ಮೈಸೂರು ಕಡೆಯ ಕನ್ನಡದಲ್ಲೂ ಏಕರೂಪವಿಲ್ಲ. ಬೆಂಗಳೂರಿನ ಕರ್ನಾಟಕದ ರಾಜಧಾನಿಯ ಕನ್ನಡವಂತೂ ಯಾವ ಒಂದು ಗುಂಪಿಗೂ ಸರಿಯಾದ ಉದಾಹರಣೆಯಾಗಿ ನಿಲ್ಲುವುದಿಲ್ಲ. ಸಮಾಜದ ಎಲ್ಲ ಅಂತಸ್ತುಗಳಿಗೂ ಸೇರಿದ ಜನರು ಇರುವಂತೆ, ಎಲ್ಲ ಬಗೆಯ ಭಾಷೆಗಳನ್ನು ಆಡುವವರೂ ಇದ್ದಾರೆ. ಜರ್ಮನಿಕ್ ಶಾಖೆಗೆ ಸೇರಿದ ಇಂಗ್ಲಿಷ್ ಭಾಷೆಯನ್ನು, ಕ್ರಿಶ್ಚಿಯನರಿಂದ ಹಿಡಿದು ಪ್ರತಿಷ್ಠಿತ ಅಧಿಕಾರಿಗಳ ಮನೆಗಳವರೆಗೂ ಅಭಿಮಾನದಿಂದ ಆಡುವವರಿದ್ದಾರೆ. ಇವರಲ್ಲಿ ಅನೇಕರು ಕನ್ನಡ ಚೆನ್ನಾಗಿ ಬಂದರೂ ಮಾತನಾಡುವುದಿಲ್ಲ, ಕನ್ನಡದಲ್ಲಿ ವ್ಯವಹರಿಸುವುದು ಅವರ ಪ್ರತಿಷ್ಠೆಗೆ ಕುಂದು. ಇಂಡೊ-

---

[1] ಇದಕ್ಕೆ ಸಂಬಂಧಪಟ್ಟ ಇನ್ನೂ ಹೆಚ್ಚಿನ ವಿವರಗಳಿಗೆ *Directory*, Karnataka Sangha, Bombay, 1961, ಎಂಬ ಕೈಪಿಡಿಯನ್ನು ನೋಡಿ.

[2] *Report of Bombay Census*, 1931.

ಆರ್ಯನ್ ಬುಡಕಟ್ಟಿಗೆ ಸೇರಿದ ಹಿಂದಿ, ಗುಜರಾತಿ, ಸಿಂಧಿ, ಮರಾಠಿ ಭಾಷೆಗಳನ್ನು ಆಡುವವರೂ ಇಲ್ಲಿ ಇದ್ದಾರೆ; ದ್ರಾವಿಡ ಕುಟುಂಬಕ್ಕೆ ಸೇರಿದ ತಮಿಳು, ತೆಲುಗು, ಮಲಯಾಳ ಭಾಷೆಗಳನ್ನು ಆಡುವವರೂ ಇರುವರು. ಕನ್ನಡದಲ್ಲೇ ಉತ್ತರ ಕರ್ನಾಟಕ ದವರೂ ಇದ್ದಾರೆ, ಮಂಗಳೂರು ಕಡೆಯವರೂ ಇದ್ದಾರೆ, ಮೈಸೂರು ಕನ್ನಡದವರ ಜೊತೆಗೆ.

ಇವರಲ್ಲದೆ ಉರ್ದು ಭಾಷೆಯಾಡುವವರೂ ಹೆಚ್ಚಿನ ಸಂಖ್ಯೆಯಲ್ಲೇ ಇದ್ದಾರೆ, ತುಳು ಭಾಷೆಯನ್ನು ಆಡುವವರೂ—ಕಡಮೆ ಆದರೂ—ಇದ್ದಾರೆ. ಹೀಗಾಗಿ ಬೆಂಗಳೂರು ಕನ್ನಡ ಕಲಸುಮೇಲೋಗರವಾಗಿದೆ, ಚೌ-ಚೌ ಆಗಿದೆ. ಇಲ್ಲಿನ ಕನ್ನಡದ ವೈಶಿಷ್ಟ್ಯ ಸುಲಭವಾಗಿ ತಿಳಿದು ಬರುವುದಿಲ್ಲ. . ಬೆಂಗಳೂರಿನ ಕನ್ನಡದ ಒಂದು ಪ್ರಮುಖ ವೈಶಿಷ್ಟ್ಯವೆಂದರೆ, ಸಪ್ತಮೀ ವಿಭಕ್ತಿಯ ಪ್ರತ್ಯಯ-ಅಲ್ಲಿ, ಎಂಬುದಕ್ಕೆ ಬದಲಾಗಿ-ನಲ್ಲಿ ಎಂಬುದು ಸೇರುವುದು: ಮನೆಯಲ್ಲಿ > ಮನೇನಲ್ಲಿ; ಕೈಯಲ್ಲಿ > ಕೈನಲ್ಲಿ; ನಲ್ಲಿಯಲ್ಲಿ > ನಲ್ಲಿನಲ್ಲಿ; ಹೀಗೆಯೇ ಏನಕ್ಕೆ < ಏತಕ್ಕೆ ಎಂಬುದು ಕೇಳಿಬರುತ್ತದೆ.

ಬೆಂಗಳೂರಿನಿಂದ ಕೆಂಗೇರಿ ಮಾರ್ಗವಾಗಿ ರಾಮನಗರ, ಚೆನ್ನಪಟ್ಟಣದ ಕಡೆಗೆ ಹೊರಟರೆ ಈ ಕೊನೆಯ ಎರಡು ಊರುಗಳಲ್ಲಿ ಮಾತ್ರ ಉರ್ದು ಭಾಷೆಯ ಪ್ರಭಾವ ಮತ್ತು ಪ್ರಾಬಲ್ಯ ಕಾಣುತ್ತದೆ. ಅಲ್ಲಿಂದ ಮದ್ದೂರು, ಮಂಡ್ಯ, ಮಳವಳ್ಳಿ, ಸಾತನೂರು, ಪಾಂಡವಪುರ[1]—ಮುಂತಾದ ಕಡೆಯ ಕನ್ನಡವೇ ಒಂದು ತೆರನಾಗಿ ಇರುತ್ತದೆ, ಮೈಸೂರಿನ ಕನ್ನೇಗೌಡನ ಕೊಪ್ಪಲಿನ ಭಾಷೆಯಲ್ಲಿ ಇದರ ನೆರಳು ಕಾಣುತ್ತದೆ. ಈ ಭಾಗದ ಕನ್ನಡದಲ್ಲಿ ಪರಭಾಷೆಯ ಪ್ರಭಾವ ಏನೇನೂ ಇಲ್ಲವೆಂದೇ ಹೇಳಬಹುದು, ಮತ್ತು ಆದಷ್ಟೂ ಶುದ್ಧಕನ್ನಡ ರೂಪಗಳೂ—ಸ್ವಲ್ಪ ಗ್ರಾಮ್ಯವಾಗಿದ್ದರೂ-ಕಂಡುಬರುತ್ತವೆ. ಈ ಪ್ರದೇಶದ ಕನ್ನಡಕ್ಕೆ 'ಮಂಡ್ಯ ಕನ್ನಡ'ವೆಂಬ ಉಪಭಾಷೆಯ ಹೆಸರಿನಿಂದ ಕರೆಯ ಬಹುದು. ಮೈಸೂರು ಕನ್ನಡಕ್ಕೂ ಮಂಡ್ಯದ ಕನ್ನಡಕ್ಕೂ ಮಹತ್ತರವಾದ ಭೇದವಿದೆ.

ಇನ್ನು ಮೈಸೂರಿನ ಆಚೆಗೆ ನಂಜನಗೂಡು, ಗುಂಡ್ಲುಪೇಟೆ ಕಡೆಯಲ್ಲಿ ಮಾತನಾಡುವ ಕನ್ನಡವೇ ಒಂದು ವಿಧ. ಗುಂಡ್ಲುಪೇಟೆ ತಾಲ್ಲೂಕಿನಲ್ಲಿ, ನಾವು ತಿಂಗಳು ಎಂಬುದನ್ನು ತಿಂಗ ಎನ್ನುವರು— ಐದು ತಿಂಗ, ಹತ್ತು ತಿಂಗ (= ತಿಂಗಳು)—ಅಂತ್ಯಾಕ್ಷರವನ್ನು ಲೋಪ ಗೊಳಿಸುವರು; ಬಿಸಾಕು (=ಬಿಸುಡು) ಎಂಬುದಕ್ಕೆ ಬೀಸಾಕು ಎನ್ನುವರು—ಈ ಬೀಸಾಕು ಎಂಬುದು ಕನ್ನಡದ ಬಹು ಹಳೆಯ ರೂಪವೆಂದು ಕಾಣುತ್ತದೆ, ಬಸವಣ್ಣನವರ ವಚನದಲ್ಲಿ (೯೬) ಬೀಸಾಡು ಎಂಬ ರೂಪವಿದೆ. ಪುರಂದರದಾಸರ ಒಂದು ಕೀರ್ತನೆ ಯಲ್ಲೂ 'ತಾಳಿಯ ಹರಿದು ಬೀಸಾಟಿ' ಎಂದಿದೆ. ಚಾಮರಾಜನಗರದ ಕನ್ನಡದಲ್ಲೂ ಕೆಲವು ಸ್ಥಳೀಯ ವೈಶಿಷ್ಟ್ಯಗಳಿವೆ. ಕೊಡಗಿನ ಕಡೆಯ—ಮಡಕೇರಿ, ವಿರಾಜಪೇಟೆ...ಇತ್ಯಾದಿ ಊರುಗಳ—ಕನ್ನಡ ಹುಣಸೂರಿನಿಂದ ಆಚೆಗೆ ಪ್ರಾರಂಭವಾಗುತ್ತದೆ. ಮಡಕೇರಿಯ

[1] ಈ ಊರಿಗೆ ಇದು ನಾನು ಕಂಡಂತೆ ಮೂರನೆಯ ಹೆಸರು: ಹಿರೋಡೆ, ಫ್ರೆಂಚ್‌ರಾಕ್ಸ್ ಎಂಬುವು ಹಿಂದೆ ಇದ್ದ ಹೆಸರುಗಳು.

ಬೆಟ್ಟಘಟ್ಟಗಳನ್ನು ಇಳಿದು ಪುತ್ತೂರಿನ ಕಡೆಗೆ ಪ್ರವೇಶಿಸುತ್ತಿದ್ದಂತೆಯೆ ಮಂಗಳೂರು ಕನ್ನಡ ಮೊದಲಾಗುತ್ತದೆ.

ಮಂಗಳೂರು ಕನ್ನಡ ಮೈಸೂರು ಕನ್ನಡದಂತೆ ವಿಸ್ತಾರವಾದ ಪ್ರದೇಶದ ಭಾಷೆಯಾಗಿದೆ. ಮಂಗಳೂರು ನಗರ ಒಂದನ್ನೇ ಲೆಕ್ಕಕ್ಕೆ ತೆಗೆದುಕೊಂಡರೆ ಅದು ಬೆಂಗಳೂರಿನಂತೆ ಹಲವು ಭಾಷೆಗಳ ಕೇಂದ್ರ. ಇಂಗ್ಲಿಷ್, ತುಳು, ಕನ್ನಡ, ಕೊಂಕಣಿ—ಇವು ಅಲ್ಲಿನ ಪ್ರಮುಖ ಭಾಷೆಗಳು ; ಈ ಭಾಷೆಗಳು ಹೆಚ್ಚುಕಡಮೆ ಸಮಪ್ರಮಾಣದಲ್ಲಿವೆ.

ಸಮುದ್ರ ತೀರದುದ್ದಕ್ಕೂ, ಮಂಗಳೂರು, ಮಲ್ಪೆ, ಕಾಪು, ಕುಂದಾಪುರ ಮುಂತಾದ ಕಡೆಗಳಲ್ಲಿ—ಇರುವ ಅಂಬಿಗರ ಭಾಷೆಯೇ ಒಂದು ಬಗೆ. ತುಳು, ಕೊಂಕಣಿ ಆ ಪ್ರಾಂತ್ಯದಲ್ಲಿ ಎದ್ದುಕಾಣುವ ಭಾಷೆಗಳು. ಈ ಕೊಂಕಣಿ ಭಾಷೆ ಕಾರವಾರದಿಂದ ಮರ್ಮಗೋವ, ಗೋವ, ಡಯು, ಡಾಮನ್ ಕಡೆಗೆ ಹೋಗುತ್ತಾ ಹೆಚ್ಚಾಗುತ್ತದೆ. ಆದರೆ ತುಳು ದಕ್ಷಿಣ ಕನ್ನಡ ಜಿಲ್ಲೆಯ ತುಂಬ, ಕೆಲವು ಕಡೆ ಕಡಮೆ ಪ್ರಮಾಣದಲ್ಲೂ, ಕೆಲವು ಕಡೆ ಹೆಚ್ಚಿನ ಸಂಖ್ಯೆಯಲ್ಲೂ—ತಕ್ಕಮಟ್ಟಿಗೆ ಕೇಳಿಬರುತ್ತದೆ. ಶಿವಮೊಗ್ಗದಿಂದ ತೀರ್ಥಹಳ್ಳಿ, ಸಾಗರ ದಾಟಿ ಆಗುಂಬೆ ಘಟ್ಟದಿಂದ ಕೆಳಕ್ಕೆ ಇಳಿದು ಸುಬ್ರಹ್ಮಣ್ಯವನ್ನು ಪ್ರವೇಶಿಸುತ್ತಿದ್ದಂತೆಯೇ ಕನ್ನಡದ ಜೊತೆಗೆ ತುಳು ಭಾಷೆಯನ್ನು ಕೇಳಬಹುದು ; ಅಥವಾ ಹಾಸನ—ಬೇಲೂರುಗಳ ಕಡೆಯಿಂದ ಚಾರ್ಮಾಡಿ ಘಟ್ಟದಿಂದ ಇಳಿಯುತ್ತಿರುವಂತೆ ತುಳುಭಾಷೆ ಆಡುವುದು ಕೇಳಿಸುತ್ತದೆ. ಈ ಕಡೆಗಳಲ್ಲಿ ಓಡಾಡುವ ಬಸ್ಸು ಮತ್ತು ಇತರ ವಾಹನಗಳನ್ನು ನಡೆಸುವವರೂ ಬಹುವಾಗಿ ತುಳು ಮಾತನಾಡುವರು.

ದಕ್ಷಿಣ ಕನ್ನಡ ಜಿಲ್ಲೆಯ ಪ್ರದೇಶದ ಕನ್ನಡ ಭಾಷೆಯಲ್ಲಿ ಬಹುವಾಗಿ ಏಕರೂಪವಿರುವಂತೆ ಕಾಣುತ್ತದೆ—ಬಹುಶಃ ಮೂಡಬಿದ್ರೆ, ಉಡುಪಿ, ಧರ್ಮಸ್ಥಳ ಮುಂತಾದ ಮೂರು ಬೇರೆ ಭಾಗಗಳ ಕನ್ನಡದಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳೂ ಇದ್ದಿರಬಹುದು.[1] ಆದರೆ ಕುಂದಾಪುರದ ಕಡೆಯ ಕನ್ನಡ, ಅದರಲ್ಲಿಯೂ ಅಲ್ಲಿಯ ಹವ್ಯಕರ ಕನ್ನಡ—ಮಂಗಳೂರು ಕನ್ನಡ ಅಥವಾ ಇತರ ಯಾವುದೇ ಕನ್ನಡ ಉಪಭಾಷೆಗಳಿಗಿಂತಲೂ ಭಿನ್ನವಾಗಿದೆ. ಹವ್ಯಕರ ಕನ್ನಡ, ಕನ್ನಡದ ಮತ್ತೊಂದು ಉಪಭಾಷೆಯೆಂದು ಪರಿಗಣಿಸಲು ಅರ್ಹವಾಗಿದೆ. ಇದನ್ನು ಕುಂದಕನ್ನಡವೆಂದು ಕರೆಯುವ ಸೂಚನೆಗಳನ್ನೂ ಕೆಲವರು ಇತ್ತಿದ್ದಾರೆ, ಹವ್ಯಕ (ರ) ಕನ್ನಡವೆಂದು ಕರೆಯುವುದೇ ಹೆಚ್ಚು ; ಈ ಎರಡು ಹೆಸರುಗಳಲ್ಲಿ ಯಾವ ಹೆಸರಿನಿಂದ ಕರೆದರೂ ತಪ್ಪಾಗುವುದಿಲ್ಲ.

ಹವ್ಯಕರ ಕನ್ನಡದಲ್ಲಿ ಉತ್ತರ ಕನ್ನಡ ಹವ್ಯಕರ ಭಾಷೆ ಮತ್ತು ದಕ್ಷಿಣ ಕನ್ನಡ ಹವ್ಯಕರ ಭಾಷೆ—ಎಂದು ಎರಡು ಗುಂಪು ತೋರುತ್ತದೆ. ಸಿರಸಿ, ಸಿದ್ದಾಪುರ, ಸಾಗರ—ಇತ್ಯಾದಿ ಭಾಗಗಳಲ್ಲಿ ಆಡುವ ಹವ್ಯಕರ ಕನ್ನಡ ಉತ್ತರ ಕರ್ನಾಟಕ ಹವ್ಯಕರ ಭಾಷೆ ; ಕುಂದಾಪುರ, ಕಾಸರಗೋಡು ಇತ್ಯಾದಿ ಸ್ಥಳಗಳತ್ತ ಆಡುವ ಹವ್ಯಕರ ಕನ್ನಡ ದಕ್ಷಿಣ ಹವ್ಯಕರ

[1] ನನ್ನ ಐದಾರು ಬಾರಿಯ ದಕ್ಷಿಣ ಕನ್ನಡ ಜಿಲ್ಲೆಯ ಪ್ರವಾಸ ಕಾಲದಲ್ಲೂ ಈ ವ್ಯತ್ಯಾಸಗಳು ಇರುವಂತೆ ಭಾಸವಾದರೂ, ಸ್ಪಷ್ಟವಾಗಿ ಗುರುತಿಸಲಾರದವನಾಗಿದ್ದೇನೆ.

ಭಾಷೆ. ಈ ದಕ್ಷಿಣ ಹವ್ಯಕ ಭಾಷೆಯಲ್ಲೂ ಅಲ್ಪಸ್ವಲ್ಪ ಭಿನ್ನತೆಯಿದೆ. ಕುಂದಾಪುರದ ಹವ್ಯಕರ ಭಾಷೆ ಒಂದು ಬಗೆ; ಪಂಜಸೀಮೆ ಮತ್ತು ಕುಂಬಳಸೀಮೆ—ಅಂದರೆ ಕಾಸರಗೋಡು ಮತ್ತು ಅದರ ಅಕ್ಕಪಕ್ಕದ ಕರಾವಳಿಯ ಕನ್ನಡ ಒಂದು ಬಗೆ. ಉದಾಹರಣೆಗಳನ್ನಿತ್ತು ಇದನ್ನು ಸ್ಪಷ್ಟಪಡಿಸಬಹುದು; 'ಬಪ್ಪೆ'—ಎಂಬ ಪದಕ್ಕೆ ಕುಂದಾಪುರ ಹವ್ಯಕರ ಕನ್ನಡದಲ್ಲಿ ಬಂದಿದ್ದೇನೆ ಎಂಬ ಅರ್ಥ; ಕಾಸರಗೋಡು ಹವ್ಯಕರ ಕನ್ನಡದಲ್ಲಿ ಬರುತ್ತೇನೆ ಎಂಬ ಅರ್ಥ. ಈ ತರಹದ ಅನೇಕ ವ್ಯತ್ಯಾಸಗಳಿವೆ; ಕುಂದಾಪುರದ ಹವ್ಯಕರ ಕನ್ನಡಕ್ಕೆ ಕನ್ನಡೇತರ ಭಾಷೆಗಳ ಪ್ರಭಾವ ಕಡಮೆ. ಆದರೆ ಕಾಸರಗೋಡು ಹವ್ಯಕರ ಕನ್ನಡದ ಮೇಲೆ ಅದರ ನೆರೆಹೊರೆಯ ಮಲೆಯಾಳ ಭಾಷೆಯ ಪ್ರಭಾವ ಹೆಚ್ಚು.

ಉದಾ:

ಅದಾಗಿದ್ದು < (ಮ.) ಅದಾಯದು
ಏನಾದರೂ < ಏನಕೇನಾರ
ಕಂಡಾಪಟ್ಟೆ < ಎಕ್ಕಾಸಕ್ಕ

ಇಲ್ಲಿ ಮಿಂದ ಎಂದರೆ ಸ್ವಲ್ಪ, ಕಡಮೆ ಎಂಬ ಅರ್ಥ; ರಜ (< ಸಂ.) ಎಂಬ ಪದವನ್ನೂ ಇದೇ ಅರ್ಥದಲ್ಲಿ ಬಳಸುವರು. ಕಟ್ಟಿಗೆಗೆ ಇವರು ಹೊಳ್ಳಾಚ್ಚು ಎನ್ನುವರು. ಕಾಸರಗೋಡಿನ ಹವ್ಯಕರ ಕನ್ನಡದಲ್ಲಿ ಬಹುಮಟ್ಟಿನ ಪದಗಳ ಕೊನೆಯ ಧ್ವನಿ ನಾಸಿಕೋಚ್ಚಾರವಾಗುತ್ತದೆ. ಧಾರವಾಡದ ಕಡೆ ಇರುವಂತೆ—

ಉದಾ:

ಮಾಡಿಡೆಯೊ (=ಮಾಡಿದೆವು); ಅಪ್ಪ, ಅವ, ಬತ್ತೆ.

ಹವ್ಯಕರ ಕನ್ನಡದಲ್ಲಿ ಏಕವಚನವೇ ಪ್ರಬಲವಾಗಿ ಕಾಣುತ್ತದೆ. ಚಿಕ್ಕ ಮಕ್ಕಳಿಂದ ಮೊದಲುಗೊಂಡು ಹೆಂಗಸರಿಂದ ಹಿಡಿದು ಹಿರಿಯರವರೆಗೂ ಎಲ್ಲರಿಗೂ ಏಕವಚನದಲ್ಲೇ ಸಂಬೋಧಿಸುವರು. ಹೆಂಗಸರಿಗೆಲ್ಲಾ 'ಅದು' ಎಂದೇ ಹೇಳುವರು, ಅವಳು ಎಂದು ನಿರ್ದೇಶಿಸುವುದಿಲ್ಲ. ಇದು ದ್ರಾವಿಡ ಭಾಷೆಯ ಹಳೆಯ ಪದ್ಧತಿಯ ಪ್ರತೀಕ. ಏಕವಚನವೇ ಎಲ್ಲೆಲ್ಲಿಯೂ ಪ್ರಯೋಗವಾದರೂ ಬಹು ಮುಖ್ಯವಾಗಿ ಒಂದುಕಡೆ ಮಾತ್ರ ಬಹುವಚನ ಬಳಕೆಯಾಗುತ್ತದೆ. ಅದೆಂದರೆ ಹೆಂಗಸು ಗಂಡನಿಗೆ ಹೇಳುವುದು; ನೀನು ಎಂದು ಹೇಳದೆ ನೀವು ಎಂದು ಹೇಳಲು ನಿಂಗೊ [=ನೀವು (c.f. ತುಮ್ಮಿ—ಕೊಂಕಣಿ)] ಎಂದು ಹೇಳುವುದುಂಟು. ಇದು ಗಂಡನಿಗೆ ಮಾತ್ರ.

ಹವ್ಯಕರ—ಕನ್ನಡದ ವೈಶಿಷ್ಟ್ಯಗಳಲ್ಲಿ ಕೆಲವನ್ನು ಆದಷ್ಟೂ ಸಂಗ್ರಹವಾಗಿ ಇಲ್ಲಿ ಕೊಟ್ಟಿದ್ದೇನೆ. ಇದರ ಬಗ್ಗೆ ಇನ್ನೂ ಹೆಚ್ಚಿನ ಮತ್ತು ವಿಸ್ತಾರವಾದ ಅಭ್ಯಾಸ ನಡಸಿದರೆ ಮಹತ್ವದ ಅಂಶಗಳು ಹೊರಬೀಳುವ ಸಂಭವವಿದೆ. ಹಲವು ಹಳಗನ್ನಡ ರೂಪಗಳು ಕುಂದಗನ್ನಡದ ಕುಂದಣದಲ್ಲಿ ಅಂದವಾಗಿ ಹೊಂದಿಕೊಂಡಿರುವುದು ಅದರ ವೈಶಿಷ್ಟ್ಯಗಳಲ್ಲೊಂದು. ಇನ್ನೂ ಕೆಲವು ಗ್ರಾಮ್ಯ ವಿಶೇಷವನ್ನು ಹೊತ್ತ ಉದಾಹರಣೆಗಳನ್ನೂ ಇತ್ತಿದ್ದೇನೆ. ಇದನ್ನು

ಬಿಟ್ಟರೆ ಮಂಗಳೂರು ಕಡೆಯ ಕನ್ನಡದ ಪರಿಚಯವನ್ನು ಮುಳಿಯ ತಿಮ್ಮಪ್ಪಯ್ಯ, ಕಡೆಂಗೋಡ್ಲು ಶಂಕರಭಟ್ಟ, ಸೇಡಿಯಾಪು ಕೃಷ್ಣಭಟ್ಟ ಮತ್ತು ವಿಶೇಷವಾಗಿ ಶಿವರಾಮ ಕಾರಂತರ ಕೃತಿಗಳಲ್ಲಿ ಪಡೆಯಬಹುದು. 'ನವಭಾರತ' ದಿನಪತ್ರಿಕೆ ಮಂಗಳೂರು ಕನ್ನಡದ ಪ್ರತಿನಿಧಿಯಾಗಿದೆ.

ಬೆಂಗಳೂರಿಂದ ಯಲಹಂಕದ ಮಾರ್ಗವಾಗಿ ರಾಜಾನುಕುಂಟೆ, ದೊಡ್ಡಬಳ್ಳಾಪುರ ದವರೆಗೂ, ಹೊಸೂರು ಮಾರ್ಗವಾಗಿ ಕೋಲಾರದವರೆಗೂ ಒಂದು ಬಗೆಯ ಕನ್ನಡ—ಅಂದರೆ ಅನ್ಯಪ್ರಭಾವರಹಿತ ಕನ್ನಡ ಭಾಷೆಯಿದೆ. ಆದರೆ ದೊಡ್ಡಬಳ್ಳಾಪುರದಿಂದ ಮೊದಲು ಗೊಂಡು ತೊಂಡೇಬಾವಿ, ಗೌರಿಬಿದನೂರು; ಕೋಲಾರದಿಂದ ಚಿಂತಾಮಣಿ, ಬಾಗೇಪಲ್ಲಿ, ಚಿಕ್ಕಬಳ್ಳಾಪುರ, ಗುಡಿಬಂಡೆ—ಮುಂತಾದ ಕಡೆಗಳಲ್ಲೆಲ್ಲಾ ತೆಲುಗು ಭಾಷೆಯ ಪ್ರಭಾವ ಕಾಣುತ್ತದೆ. ಗೌರೀಬಿದನೂರಿನಿಂದ ವಿದುರಾಶ್ವತ್ಥದವರೆಗೆ ಮತ್ತು ಅಲ್ಲಿಂದ ಮುಂದಕ್ಕೆ ತೆಲುಗು ಹೇರಳ. ವಿದುರಾಶ್ವತ್ಥದಿಂದ ಐದಾರು ಮೈಲಿಯಿಂದ ಆಂಧ್ರದ ಗಡಿ—ಹಿಂದೂ ಪುರ ತಾಲ್ಲೂಕು ಮತ್ತು ಅನಂತಪುರ ಜಿಲ್ಲೆ ಪ್ರಾರಂಭವಾಗುತ್ತದೆ.

ಹಿಂದೆ ಒಂದು ಕಾಲಕ್ಕೆ ಹಿಂದೂಪುರ, ಮಲುಗೂರು, ಪೆನಗೊಂಡೆ (< ತೆ. ಪೆನ ಕೊಂಡ)ಯವರೆಗೂ ಕನ್ನಡ ನುಡಿಯ ಹರವು ಇದ್ದಿತೆಂಬುದಕ್ಕೆ ಐತಿಹಾಸಿಕ ಆಧಾರ ಗಳಿವೆ; 'ಜೀವಂಧರ ಚರಿತೆ'ಯನ್ನು ಬರೆದ ಭಾಸ್ಕರ ಕವಿ ಪೆನುಗೊಂಡೆಯವನು. ಆದರೆ ಇಂದು ಪೆನುಗೊಂಡೆಯಲ್ಲಿ ಕನ್ನಡ ಶೇಕಡ ಸು. ಐದು ಮಾತನಾಡುವರು, ಶೇಕಡ ಸು. ಹದಿನೈದು ಜನಕ್ಕೆ ಅರ್ಥವಾಗುವುದು. ಅಲ್ಲಿ ತೆಲುಗು ೬೫% ; ಉರ್ದು ೨೫%. ಆದರೆ ಆಂಧ್ರ ರಾಜ್ಯದಲ್ಲಿರುವ ಹಿಂದೂಪುರ—ಲೇಪಾಕ್ಷಿ ಕಡೆಗಳಲ್ಲಿ ಕನ್ನಡ ತಕ್ಕಮಟ್ಟಿಗೆ ಕೇಳಿ ಬರುತ್ತದೆ. ಗೌರೀಬಿದನೂರು ತಾಲ್ಲೂಕಿನ ಎಲ್ಲ ಊರುಗಳಲ್ಲೂ ತೆಲುಗು ಹೆಚ್ಚು. ಆದರೂ ಕುರೂಡಿ, ಅರಸಾಪುರದ ಕಡೆ ಹೊರಟರೆ ಕ್ರಮೇಣ ತೆಲುಗು ಕಡಮೆ, ಕನ್ನಡ ಹೆಚ್ಚು. ಅರಸಾಪುರ ಅಕ್ಕಿರಾಂಪುರ—ಮುಂತಾದ ಊರುಗಳು ಕೊರಟಗೆರೆ ತಾಲ್ಲೂಕು, ತುಮ ಕೂರು ಜಿಲ್ಲೆಗೆ ಸೇರಿವೆ.

ತುಮಕೂರು ಜಿಲ್ಲೆಯಲ್ಲಿ ಕನ್ನಡ ನುಡಿಯುವೇ ಆಡಳಿತವಾದರೂ, ಆ ಜಿಲ್ಲೆಯ ಮಧುಗಿರಿ ತಾಲ್ಲೂಕಿನ (ಕೊರಟಗೆರೆ ತಾಲ್ಲೂಕು ಆದಮೇಲೆ ಬರುತ್ತದೆ) ಅರ್ಧ ಭಾಗದಲ್ಲಿ ತೆಲುಗು ಅಧಿಕ. ಗೌರೀಬಿದನೂರು ತಾಲ್ಲೂಕಿನಂತೆ, ಮಧುಗಿರಿ ತಾಲ್ಲೂಕು ಕೂಡ ಕರ್ನಾಟಕದ ಗಡಿಯ ಭಾಗ—ಆಂಧ್ರದ ಅಂಚನ್ನು ಪಡೆದ ಸೆರಗು; ಮಧುಗಿರಿಯಿಂದ ಆ ತಾಲ್ಲೂಕಿಗೆ ಸೇರಿದ ಪುರವರ, ಕೊಡಿಗೇನಹಳ್ಳಿ ಹೋಬಳಿಗಳು ದಾಟಿದರೆ ಆಂಧ್ರದ ಹಿಂದೂಪುರ ತಾಲ್ಲೂಕು ಪ್ರಾರಂಭವಾಗುತ್ತದೆ. ಆದುದರಿಂದ ಈ ಭಾಗಗಳಲ್ಲಿ ತೆಲುಗು ಭಾಷೆಯ ಕೈ ಮೇಲಾಗುತ್ತದೆ. ಆದರೆ ಕೋಲಾರ ಜಿಲ್ಲೆಯ ತಾಲ್ಲೂಕುಗಳಲ್ಲೂ, ಮಧು ಗಿರಿ ತಾಲ್ಲೂಕಿನಲ್ಲೂ ಶಾಲೆಗಳಲ್ಲಿ ಮಕ್ಕಳು ಕನ್ನಡ ಭಾಷೆಯನ್ನೇ ಕಲಿಯುವರು ಕೋಲಾರದ ಕೆ.ಜಿ.ಎಫ್.ನಲ್ಲಿ ಕನ್ನಡ, ತೆಲುಗುಗಳಷ್ಟೇ ತಮಿಳೂ ಇದೆ ಅಥವಾ ತಮಿಳೇ ಹೆಚ್ಚಾಗಿದೆ.

ಗೌರೀಬಿದನೂರು[1] ತಾಲ್ಲೂಕಿನಲ್ಲಿ—ರಮಾಪುರ, ಹಂಪಸಂದ್ರ, ಇಡಗೂರು, ಮುದುಗೆರೆ ಮುಂತಾದ ಕಡೆಗಳಲ್ಲಿ—ಜೈನರೂ, ಸಾದರೂ, ಲಿಂಗಾಯಿತರೂ ಮನೆಗಳಲ್ಲಿ ಕನ್ನಡವನ್ನೇ ಮಾತನಾಡಿದರೂ ಮನೆಯಿಂದ ಹೊರಗಡೆ ಎಲ್ಲರಂತೆ ತೆಲುಗು ಮಾತನಾಡುವರು. ಆದರೆ ಬೇಡರು, ಕುರುಬರು, ವೈಶ್ಯರು, ಬ್ರಾಹ್ಮಣರು ಮನೆಯ ಒಳಗೂ-ಹೊರಗೂ ತೆಲುಗು ಮಾತನಾಡುವರು. ಇಲ್ಲಿಯ ಕನ್ನಡ ಭಾಷೆಯ ಮೇಲೆ ತೆಲುಗು ಭಾಷೆಯ ಮತ್ತು ತದ್ವಿರುದ್ಧವಾದ ಪರಿಣಾಮ ಆಗುವುದು ಸಹಜವಾದ ಕ್ರಿಯೆ. ಇತರ ಅನೇಕ ವಸ್ತುಗಳಂತೆ ಭಾಷೆಯೂ ಪರಿಸರದ, ವಾತಾವರಣ ಶಿಶು. ಇದಕ್ಕೆ ತನ್ನ ನೆರೆಹೊರೆಯ ವರ್ಚಸ್ಸಿಗೆ ಒಳಗಾಗದೆ ಹೊರತಾಗಿ ನಿಲ್ಲುವುದು ಕಡುಕಷ್ಟ. ಅಂತೆಯೇ ಇಲ್ಲಿನ ಕನ್ನಡ ತೆಲುಗುನುಡಿಯ ತೆಕ್ಕೆಯಲ್ಲಿ ಸಿಕ್ಕಿಹೋಗಿದೆ. ದೈನಂದಿನ ವ್ಯವಹಾರದ ಕನ್ನಡದಲ್ಲಿಯೂ ಎಷ್ಟೋ ತೆಲುಗು ಪದಗಳು ಸರಾಗವಾಗಿ ಸೇರಿಹೋಗಿವೆ. ಅಲ್ಲದೆ ಈ ಭಾಗದಲ್ಲಿ ಕೆಲವು ನಾಮಪದಗಳಿಗೆ—ಅದು ಪುಲ್ಲಿಂಗ-ಸ್ತ್ರೀಲಿಂಗ ಅಥವಾ ನಪುಂಸಕ ಲಿಂಗಗಳಲ್ಲಿ ಯಾವುದೇ ಆಗಿರಲಿ-ಅಯ್ಯ ಎಂಬ ಪದವನ್ನು ಪ್ರತ್ಯಯಮೋಪಾದಿಯಲ್ಲಿ ಸೇರಿಸುವುದು ಕಾಣುತ್ತದೆ.

ನಿದರ್ಶನವಾಗಿ ಈ ಕೆಳಗಿನ ಪದಗಳನ್ನು ನೋಡಿ :

ಚಿಕ್ಕ ಹುಡುಗನಿಗೆ—ಅಪ್ಪಯ್ಯ/ಚಿಕ್ಕಪ್ಪಯ್ಯ
ಚಿಕ್ಕಹುಡುಗಿಗೆ—ಅಮ್ಮಯ್ಯ/ಚಿಕ್ಕಮ್ಮಯ್ಯ
ಅಣ್ಣನಿಗೆ—ಅಣ್ಣಯ್ಯ/ದೊಡ್ಡಣ್ಣಯ್ಯ
ಅಕ್ಕನಿಗೆ—ಅಕ್ಕಯ್ಯ
ದೊಡ್ಡ ಹುಡುಗನಿಗೆ—ದೊಡ್ಡಪ್ಪಯ್ಯ
ದೊಡ್ಡ ಹುಡುಗಿಗೆ—ದೊಡ್ಡಮ್ಮಯ್ಯ

ಇನ್ನು ರಾಯಿಚೂರು ಉರ್ದು-ಕನ್ನಡ ಸಹಬಾಳ್ವೆ ನಡಸುವ ಊರು. ರಾಯಿಚೂರಿನಿಂದ ಗುಲ್ಬರ್ಗದ ಕಡೆಗೆ ಹೋದಂತೆಲ್ಲಾ ಉರ್ದು ಭಾಷೆಯ ಪ್ರಭಾವವೇ ಹೆಚ್ಚಾಗಿ ಕಾಣುತ್ತದೆ. ಈಗ ಕನ್ನಡ ಕಲಿಯುವ ಅವಕಾಶ ಹೆಚ್ಚು ಇದೆಯಾದರೂ ಹಿಂದೆ ಇಲ್ಲಿ ಹಿಂದೂಗಳೂ ಉರ್ದು ಕಲಿಯುವ ಸಂಪ್ರದಾಯವೇ ಹೆಚ್ಚಾಗಿ ಇತ್ತು. ಹೈದರಾಬಾದು ಆಂಧ್ರದ ಕೇಂದ್ರವಾದರೂ ಅಲ್ಲಿ ಉರ್ದು ರಾಜಭಾಷೆ, ತೆಲುಗು ತರುವಾಯದ ಭಾಷೆ, ಕನ್ನಡ ಅನಂತರದ ಭಾಷೆ. ಇಲ್ಲಿನ ಕನ್ನಡ ರಾಯಿಚೂರು ಮತ್ತು ಗುಲ್ಬರ್ಗ ಕನ್ನಡದಂತೆ ಉರ್ದು ಬೆರಕೆಯ ಕನ್ನಡ.

ಈ ಮುಂದಿನ ಪುಟಗಳಲ್ಲಿ ಮಾದರಿಗಾಗಿ ಕನ್ನಡಕ್ಕೆ ಸೇರಿದ ಕೆಲವು ಉಪಭಾಷೆಗಳ ತುಣುಕುಗಳನ್ನು, ಆದಷ್ಟೂ ಅಕಾರಾದಿಯಾಗಿ, ಉದಾಹರಿಸಿ ಕೊಟ್ಟಿದ್ದೇನೆ. ಈ ಬಗೆಯ ಉಪಭಾಷಾ ಪರಿವೀಕ್ಷಣೆ ಇನ್ನೂ ವಿಸ್ತಾರವಾಗಿ—ಕ್ರಮಬದ್ಧವಾಗಿ ನಡೆಯಬೇಕು.

[1] ಹಿಂದೆ ಇದನ್ನು ಗೋರೀಬಿದನೂರು ಎಂದು ಕರೆಯುತ್ತಿದ್ದರು. ಇತ್ತೀಚೆಗೆ ಈಗ ಐದಾರು ವರ್ಷಗಳಿಂದ ಗೌರಿಬಿದನೂರು ಎಂಬು ಕರೆಯುವರು.

ಅದು ಒಬ್ಬನಿಂದ, ಇಬ್ಬರಿಂದ ಆಗುವ ಸುಲಭ ಕೆಲಸವಲ್ಲ. ಯಾವುದಾದರೂ ಹಿರಿಯ ವಿದ್ಯಾಸಂಸ್ಥೆಯ ವತಿಯಿಂದ ನಡೆಯಬೇಕಾದ, ಅಗತ್ಯ ಆಗಬೇಕಾದ ಕಾರ್ಯ. ಇಲ್ಲಿ ಕೊಟ್ಟಿರುವ ಉದಾಹರಣೆಗಳೆಲ್ಲವೂ ಲೇಖಕನ ಸ್ವಂತ ಅನುಭವದ, ನೇರ ಪರಿಚಯದ ಸಂಗ್ರಹ. ಹವ್ಯಕರ ಕನ್ನಡದಿಂದ ಮೊದಲುಗೊಂಡು, ಮಂಗಳೂರು ಕನ್ನಡ, ಧಾರವಾಡ ಕನ್ನಡ, ಕೋಲಾರ ಕನ್ನಡ, ಮಂಡ್ಯ ಕನ್ನಡ—ಹೀಗೆ ಬೇರೆಬೇರೆ ಸ್ಥಳಗಳ ಕನ್ನಡವನ್ನು ಮೈಸೂರು ಕನ್ನಡದೊಡನೆ ಹೋಲಿಸಿ ಕೊಟ್ಟಿದ್ದೇನೆ. ಇಷ್ಟಾದರೂ ವರ್ಣನಾತ್ಮಕ ವ್ಯಾಕರಣವನ್ನು ಗುರುತಿಸಿ ತೋರಿಸಲು ಆಗದಿದ್ದುದು ದೊಡ್ಡ ಕೊರತೆಯೆಂದು ಭಾವಿಸುವೆನು.

ಬೆಳಗಾಂ ಜಿಲ್ಲೆಯ ಶೇಡಬಾಳದ ಸುತ್ತಮುತ್ತಲಿನ ಕನ್ನಡ ಭಾಷೆಯ ಪರಿಚಯವನ್ನು ಮಿರ್ಜಿ ಅಣ್ಣಾರಾಯರ ಹೆಸರಾಂತ ಕಾದಂಬರಿ 'ನಿಸರ್ಗ'ದಿಂದ ಆರಿಸಿ ಕೊಡಲಾಗಿದೆ.[1] ಭಾಷಾಶಾಸ್ತ್ರ ವಿವೇಚನೆಯ ದೃಷ್ಟಿಯಿಂದ ಬಹು ಮಹತ್ವದ ವಿಚಾರಗಳನ್ನೂ ವಿಶಿಷ್ಟ ಶಬ್ದರೂಪಗಳನ್ನೂ 'ನಿಸರ್ಗ' ಒಳಗೊಂಡಿದೆ. ಮುನ್ನುಡಿಕಾರರು ಹೇಳಿರುವ "...ಭಾಷಾ ಚರಿತ್ರೆಗೆ ಹಾಗೂ ಶಾಸ್ತ್ರಕ್ಕೆ (ಇಲ್ಲಿ) ವಿಪುಲ ಸಾಮಗ್ರಿ ದೊರೆಯುವುದು. ದೇಸಿಯನ್ನು ಔಚಿತ್ಯವರಿತು ಉಪಯೋಗಿಸುವಲ್ಲಿ, ಅದರ ಸಂಪತ್ತಿಯನ್ನು ಸೂರೆಮಾಡುವಲ್ಲಿ ಅಣ್ಣಾ ರಾಯರು ಮೆಚ್ಚತಕ್ಕ ಗುಣವನ್ನು ತೋರಿಸಿದ್ದಾರೆ...."[2] ಈ ಮಾತುಗಳು ಸರಿಯಾಗಿವೆ. ಏಕೆಂದರೆ ನಿಸರ್ಗ ಕಾದಂಬರಿಯಲ್ಲಿ ತುಂಬಿತುಳುಕುವ ದೇಸಿನುಡಿಗಳು, ನಾಡು ನುಡಿಗಳು ಕನ್ನಡದ ಸೊಗಡನ್ನು ಸೂಸುವಂತೆ, ಅಲ್ಲಿನ ಗಡಿಭಾಷೆಯಾದ ಮರಾಠಿ ಭಾಷೆಯ ಆಳವಾದ ಪ್ರಭಾವಕ್ಕೆ ಕನ್ನಡ ನುಡಿ ಒಳಗಾಗಿರುವುದನ್ನೂ ತೋರಿಸುತ್ತದೆ.

ಉತ್ತರ ಕನ್ನಡ ಭಾಷೆಯ ಪರಿಚಯ ಮಾಡಿಕೊಡಲು ಪ್ರಾತಿನಿಧಿಕವೆಂದು ಒಂದು ಪುಟದಷ್ಟು, ಓದುಗರ ಹೋಲಿಕೆಗೆ ಸಹಕಾರಿಯಾಗಲೆಂದು ಆರಿಸಿಕೊಂಡಿರುವ ಮತ್ತೊಂದು ಕಾದಂಬರಿ ರಾವ್‌ಬಹಾದ್ದೂರರ ಪ್ರಖ್ಯಾತ ಕಾದಂಬರಿ 'ಗ್ರಾಮಾಯಣ.' ಆ ಕೃತಿಯ ಈ ಕೆಲವು ವಾಕ್ಯಗಳನ್ನು ಗಮನಿಸಿ: "ಅಕೀ ಚಮತ ಏನ, ಒಯ್ಯಾರ ಏನ, ಕೈ ತಿರುವೂದೇನ, ಛೀ, ಛೀ, ಹೇಳೂಸೋಯ ಇಲ್ಲ ತಗೀರಿ. ಫೌಜುದಾರ 'ನಿನ್ನ ಹೆಸರೇನು ?' ಅಂತ ಕೇಳಾಣಾ, ಆಟದಾಗ ಹೆಣಸೋಗು ಮಾಡತಾವಲ್ರಿ, ಹಾಗ ಉಗರಲೆ ನೆಲಾಕರಕೂಂತ, 'ಮಲ್ಲಿ' ಅಂತ ಈಟ ಹೇಳಾಕ ಒಂದ ತಾಸ ಬೇಕಾತರೀ. ಫೌಜುದಾರ ಬಲ್ಯಾಗ್ಯು ಬಿದ್ದ ಬುದ್ಧಿ. ಆಗಿಂದಾಗ ಗೌಡಗ, ಚನ್ನ್ಯಾಗ ಕಾಳ ಕೊಡೂ ಅಂತ ಹೇಳೇ ಬಿಟ್ಟಾ. ಗೌಡರಿಗೆ ದಿಗಲುಬಿತ್ತರಿ. 'ನಿನ್ನೇ ಇಂವಾ ನಮ್ಮ ಮನ್ಯಾಗಿದ್ದ್ಯ ಕಾಳು ಒಯ್ದಾನರಿ' ಅಂತು ಅವರು ಹೇಳಿದರರಿ ಫೌಜುದಾರ ಚನ್ನ್ಯಾನಮಾರಿ ನೋಡಿದಾ. ಅದರ ಚನ್ನ್ಯಾಗ ನಾಚಿಕೆ ಎಲ್ಲೈತರಿ ? ಮಾನಕ್ಕ ಈ ಸಾಕ ಕಲಸೂದೂ ಒಂದ್ಯ. ಮತ್ತ

---

[1] ಮಿರ್ಜಿ ಅಣ್ಣಾರಾಯ, ನಿಸರ್ಗ, ಮೊದಲನೆಯ ಮುದ್ರಣ ೧೯೪೫, ದ್ವಿತೀಯ ಮುದ್ರಣ, ೧೯೬೨

[2] ಮಿರ್ಜಿ ಅಣ್ಣಾರಾಯ, ನಿಸರ್ಗ, ಮುನ್ನುಡಿ.

ಫೌಜದಾರನ ಕಾಲಾಗ ಅಡ್ಡ ಬಿದ್ದನರಿ. 'ಯಪ್ಪಾ ಇಲ್ಲ ಅಂದರ ನಾಲಿಗ್ಯಾಗ ಹುಳಾ ಬಿದ್ದಾವರಿ. ಧನ್ಯಾರು ಕಾಳು ಕೊಟ್ಟದ್ದು ಕರೇಯಪ್ಪಾ. ಕಾಳು ಕಟಿಗೊಂಡು ಹೊಂಟರ ಪಡದಪ್ಪನವರ ಶಿಶಮಕ್ಕಳು ಬಂದು ಕಸಕೊಂಡರರಿ. ಪಡದಪ್ಪನವರು ಅವನ್ನ ಕಸಗೊಂಡು ತಮ್ಮ ಕಾಳು ಕೊಟ್ಟಾರ್ರೀ. ಈ ಕಾಳಿನ ಹಿಟ್ಟಲೇ ಮಾಡಿದ ರೊಟ್ಟಿ ತುಣುಕು ತಿಂದು ಮಕ್ಕಳೆಲ್ಲಾ ಹಿಂದಕ ಮುಂದಕ ಮಾಡಿಕೊಂಡ ನೆಲಪಟ್ಟು ಬಿದ್ದಾವರಿ' ಅಂತ ಚನ್ನ್ಯಾ ಹೇಳಾಣಾ, ಫೌಜದಾರ ಆ ಕಾಳ ಮೂಸಿ ನೋಡಿದ್ದನೋ ಇಲ್ಲೋ, ಮಾರಿ ಸೈ ಮಾಡಿ, ಕೈ ತೊಳಕೊಂಡನರಿ."[1]

ಉತ್ತರ ಕರ್ನಾಟಕದ ಕನ್ನಡದ ಒಟ್ಟು ವೈಶಿಷ್ಟ್ಯಗಳನ್ನು ಮತ್ತು ಮೈಸೂರು ಕನ್ನಡ ದೊಡನೆ ಹೋಲಿಸಿದಾಗ ಕಾಣುವ ವ್ಯಾಕರಣ ವ್ಯತ್ಯಾಸಗಳನ್ನು ಸಂಗ್ರಹರೂಪವಾಗಿ ಇಲ್ಲಿ ಹೇಳಿದೆ :

೧. ಬಹುಮಟ್ಟಿಗೆ ಎಕಾರಾಂತ ಪದಗಳೆಲ್ಲ ಇಕಾರಾಂತ ಪದಗಳಾಗುತ್ತವೆ : [—ಎ > —ಇ]. ಈ ಬಗೆಯ ಪ್ರವೃತ್ತಿ ಉತ್ತರ ಕರ್ನಾಟಕದ ಸಮಾಜದಲ್ಲಿನ ಎಲ್ಲ ವರ್ಗದ ಕುಟುಂಬದವರಲ್ಲೂ ಹೆಚ್ಚಾಗಿ ಕಾಣುತ್ತದೆ. ಉದಾ : ತಲೆ, ಮನೆ, ಕೊಡೆ, ಗೊನೆ ಎಂಬ ಪದಗಳು ಕ್ರಮವಾಗಿ ತಲಿ, ಮನಿ, ಕೊಡಿ, ಗೊನಿ— ಎಂದಾಗುತ್ತವೆ.

೨. ಚತುರ್ಥೀ ವಿಭಕ್ತಿಯ ಪ್ರತ್ಯಯಗಳಾದ ಕೆ, ಗೆ—ಗಳು 'ಗಿ' ಆಗುತ್ತವೆ. [—ಕೆ, ಗೆ > —ಗಿ]. ಉದಾ : ಅವರಿಗೆ, ದನಕ್ಕೆ, ಮನೆಗೆ ಎಂಬ ಪದಗಳು ಕ್ರಮವಾಗಿ ಅವರಿಗಿ, ದನಿಗಿ, ಮನಿಗಿ ಎಂದು ಆಗುತ್ತವೆ.

೩. ಉಕಾರಾಂತ ಪದಗಳು ಅಕಾರಾಂತ ಪದಗಳಾಗಿ ಮಾರ್ಪಡುತ್ತವೆ. ಅದರಿಂದಾಗಿ ಅನೇಕ ಸಲ ಪದದ ಪ್ರಥಮಾ ವಿಭಕ್ತಿರೂಪ ಷಷ್ಠೀ ವಿಭಕ್ತಿಯಂತೆ ಕಾಣುವ ಸಂಭವವಿದೆ. ಅಥವಾ ಇದನ್ನು ಬೇರೆ ರೀತಿಯಲ್ಲಿ ಹೇಳುವುದಾದರೆ, ಮೈಸೂರು ಕನ್ನಡದಲ್ಲಿ ವ್ಯಂಜನಾಂತ ಪದಗಳಿಗೆ 'ಉ' ಎಂಬ ಸ್ವರವನ್ನು ಸೇರಿಸಿದರೆ, ಧಾರ ವಾಡದ ಕಡೆ 'ಅ' ಸ್ವರವನ್ನು ಸೇರಿಸುವರು. [—ಉ > —ಅ]. ಉದಾ : ಮಗಳು > ಮಗಳ ; ಜುಟ್ಟು > ಜುಟ್ಟ ; ಕಾಳು > ಕಾಳ.

೪. ಏಕಾರ 'ಯಾ' ಆಗಿ ಪರಿಣಮಿಸುತ್ತದೆ. ಈ ವ್ಯತ್ಯಾಸ ಸಾಮಾನ್ಯವಾಗಿ ಪದಗಳ ಆರಂಭದಲ್ಲಿ ಆಗುವ ಮಾರ್ಪಾಟು. ಆದರೂ ಅಲ್ಲಲ್ಲಿ ಪದದ ಅಂತರಾಳದಲ್ಲಿಯೂ ಆಗುವುದುಂಟು. ಉದಾ : ಏನು > ಯಾನ ; ಏನಂತ > ಯಾನತ್ತ ; ಬೇನೆ > ಬ್ಯಾನಿ ; ಹೆಂಡತಿ > ಹ್ಯಾಂತಿ. [> ಎ (ಏ)— > ಯಾ- ;—ಎ (ಏ)— > — ಯಾ—]

---

[1] ಗ್ರಾಮಾಯಣ, ಮೊದಲಚ್ಚು ೧೯೫೭, ಪುಟ-೧೪೪

೫. ಕೆಲವೊಮ್ಮೆ ಷಷ್ಠೀ ವಿಭಕ್ತಿ ಪ್ರತ್ಯಯವಿರುವ ತನ್ನ ಮೂಲರೂಪವನ್ನು ಕಳೆದು ಕೊಂಡು ವಿಕೃತರೂಪದಲ್ಲಿ ಉಳಿಯುವುದು ಕಾಣುತ್ತದೆ.
ಉದಾ : ಕರುವಿನ > ಕರೀನ ; ದನದ > ದನೀನ.

೬. ಕ್ರಿಯಾಪದಗಳಿಗೆ ಅವು ನಪುಂಸಕ ಲಿಂಗದಲ್ಲಿ ಇರುವಾಗ ಮೈಸೂರು ಕನ್ನಡ ದಲ್ಲಿ ನಾವು 'ಉದು, ಉವು' ಎಂಬ ಪ್ರತ್ಯಯಗಳನ್ನು ಕೂಡಿಸುವೆವು; ಉ. ಕ. ದಲ್ಲಿ ಇವುಗಳಿಗೆ ಕ್ರಮವಾಗಿ 'ಅದು, ಅವು' ಎಂಬ ಪ್ರಯೋಗಗಳು ಬರುತ್ತವೆ.
ಮಾಡುವುದು ﹨ ಮಾಡುವದು. ಹೀಗೆಯೇ ಕೇಳುವದು, ನೋಡುವದು . . . ಇ. ಇ,

೭. ವರ್ತಮಾನ, ಭೂತ ಕ್ರಿಯಾನಾಮಗಳ ವಿಷಯವಾಗಿ 'ಧಾರವಾಡ, ಮೈಸೂರು'— ಈ ಎರಡು ಕಡೆಗಳಲ್ಲೂ ಎರಡು ಬಗೆಯಲ್ಲಿ ಪ್ರತ್ಯಯ ಸೇರು ತ್ತದೆ. ಮೈಸೂರಿನವರು ವರ್ತಮಾನ–ಭೂತ ಕೃದಂತಗಳಿಗೆ 'ಉದು' ಪ್ರತ್ಯಯವನ್ನು ಸೇರಿಸಿ ವರ್ತಮಾನ–ಭೂತ ಕ್ರಿಯಾ ನಾಮಗಳನ್ನು ಮಾಡಿ ದರೆ ಧಾರವಾಡ ಕಡೆಯವರು 'ದು' ಪ್ರತ್ಯಯವನ್ನು ಹಚ್ಚುತ್ತಾರೆ.

ಮೈಸೂರು ಕನ್ನಡ

| | |
|---|---|
| ವರ್ತಮಾನಕಾಲ : | ಮಾಡುವ + ಉದು = ಮಾಡುವುದು |
| ವರ್ತಮಾನಕಾಲ : | ನುಡಿಯುವ + ಉದು = ನುಡಿಯುವುದು |
| ಭೂತಕಾಲ : | ಮಾಡಿದ + ಉದು = ಮಾಡಿದುದು |
| ಭೂತಕಾಲ : | ನುಡಿದ + ಉದು = ನುಡಿದುದು |

ಉತ್ತರ ಕನ್ನಡ

| | |
|---|---|
| ವರ್ತಮಾನಕಾಲ: | ಮಾಡುವ + ದು = ಮಾಡುವದು |
| ವರ್ತಮಾನಕಾಲ: | ನುಡಿಯುವ + ದು = ನುಡಿಯುವದು |
| ಭೂತಕಾಲ : | ಮಾಡಿದ + ದು = ಮಾಡಿದ್ದು |
| ಭೂತಕಾಲ : | ನುಡಿದ + ದು = ನುಡಿದದ್ದು |

೮. ಸಪ್ತಮೀ ವಿಭಕ್ತಿ ಪ್ರತ್ಯಯಕ್ಕೆ ಉತ್ತರ ಕರ್ನಾಟಕದ ಕಡೆ (ರಾಯಚೂರಿನ ಕಡೆಗೂ) 'ಆಗ' ಪ್ರತ್ಯಯವನ್ನು ಸೇರಿಸುವುದುಂಟು. ಉದಾ : ಪುಸ್ತಕದಾಗ ಕಲ್ಲಾಗ, ಮುಳ್ಳಾಗ.

೯. ಮೇಲಿನ ರೀತಿಯಂತೆ ದ್ವಿತೀಯಾ ವಿಭಕ್ತಿ ಪ್ರತ್ಯಯವೂ ವಿಕೃತ ರೂಪವನ್ನು ಪಡೆಯುವ ನಿದರ್ಶನಗಳಿವೆ. ಆದರೂ ಈ ಬಗೆಯ ಮಾರ್ಪಾಟು ಕಡಮೆ

ಪ್ರಮಾಣದಲ್ಲಿ ನಡೆಯುತ್ತದೆ. ಉದಾ : ಅವರನ್ನು > ಅವರ್ನಾ. ಇದನ್ನು ಗ್ರಾಮ್ಯ ರೂಪವೆಂದೂ ಹೇಳಬಹುದು. ಧಾರವಾಡದ ಕಡೆಯೇ ಅಲ್ಲದೆ ಇತರ ಕಡೆಯೂ ಇದನ್ನು ಕಾಣಬಹುದು.

೧೦. ಕ್ರಿಯಾ ರೂಪದ ಪದಗಳಲ್ಲಿನ 'ಏ' ಕಾರ 'ಯಾ' ಕಾರವಾಗುವುದು ಸಾಮಾನ್ಯವಾಗಿ ಆಗುವ ಇನ್ನೊಂದು ಪರಿವರ್ತನೆ. [– ಏ – > ಯಾ –.] ಉದಾ : ಕೊಡುತ್ತೇನೆ > ಕೊಡುತ್ಯಾನ; ಎತ್ತುಕೊಳ್ಳುತ್ತೇನೆ > ಎತು ಕೋತ್ಯಾನ.

೧೧. ಕೆಲವು ಎಕರಾಂತ ಪದಗಳೂ ಅಕಾರಾಂತ ಪದಗಳಾಗಿ ವ್ಯತ್ಯಾಸ ಪಡೆಯುವುದುಂಟು. [– ಎ > – ಅ.] ಉದಾ : ಯಾಕೆ > ಯಾಕ ; ಸಂ. ಸಂಖ್ಯೆ > ಸಂಖ್ಯ ; ನೆಟ್ಟಗೆ > ನೆಟ್ಟಗ ; ವಿದ್ಯೆ > ವಿದ್ಯ.

೧೨. ಪದದಲ್ಲಿರುವ ಜಕಾರ ಚಕಾರಗಳು (ಸಾಮಾನ್ಯವಾಗಿ ಇದು ಪದಾಂತ್ಯದಲ್ಲಿಯ ಸ್ವರದ ಹಿಂದೆ ಇರುತ್ತದೆ), ಚ್ಸಕಾರದಂತೆ ಉಚ್ಚಾರವಾಗುತ್ತದೆ. ಬಹುಶಃ ಇದು ಅವರಿಗೆ ತೀರ ಸಮೀಪತರ ಭಾಷೆಯಾದ ಮರಾಠಿ ಭಾಷೆಯ ಪ್ರಭಾವವಿರಬೇಕು.

In Marathi the palatals of old Indo-Aryan are represented by $\check{t}$s and $\check{d}$z affricates before front vowels, *ts dz* affricates before back back vowels. . .[1]

ಸಾಮಾನ್ಯವಾಗಿ ಚ, ಜ, ಕಾರಗಳ ಮುಂದೆ ಇ ಅಥವಾ ಎ—ಎಂಬ ಸ್ವರಗಳಿದ್ದರೆ ಚ – ಜ ಗಳ ಉಚ್ಚಾರದಲ್ಲಿ ವ್ಯತ್ಯಾಸವಿರುವುದಿಲ್ಲ. ಉದಾ : ಅಜ್ಜ, ಅಜ್ಜಿ, ಚೇಳು ಪದಗಳು ಕ್ರಮವಾಗಿ ಅಜ್ಜ ಅಜ್ಜಿ ಚೇಳು ಎಂದು ಉಚ್ಚಾರವಾಗುತ್ತವೆ. ಒರಿಯಾ, ತೆಲುಗು, ಮರಾಠಿ ಭಾಷೆಗಳಲ್ಲಿ ಇದು ಸಾಮಾನ್ಯವಾಗಿ ಕಾಣುವ ವೈಶಿಷ್ಟ್ಯ. [– , – ಜ – > ಜ್ಸ – , – ಜ್ಸ – , – ಜ್ಸ, – ಚ್ಸ –.]

೧೩. ಇಂಗ್ಲಿಷ್ ಭಾಷೆಯ ಪದಗಳ ಕೊನೆಯ 'ಸ್' ಕಾರವನ್ನು 'ಜ' ಕಾರವಾಗಿ ಬರೆಯುವರು, ಉಚ್ಚರಿಸುವರು ; [– s > – j] : ಉದಾ : ಟಾಕಿಸ್ > ಟಾಕೀಜ ; ಪೋರ್ಚುಗೀಸ್ > ಪೋರ್ತುಗೀಜ.

೧೪. ಇನ್ನು ಕೆಲವು ಇಂಗ್ಲಿಷ್ ಭಾಷೆಯ ವ್ಯಂಜನಾಂತ ಪದಗಳು ಸ್ವರಾಂತವಾಗಿ ರೂಪಾಂತರ ಪಡೆಯುತ್ತವೆ, [– ವ್ > – ಸ್]. ಉದಾ : ಟ್ರೇಡಿಂಗ್ >

[1] M. B. Emeneau, *India as a Linguistic Area*, p. 7.

ಟ್ರೇಡಿಂಗ ; ಆಫೀಸ್ >ಆಫೀಸ ; ಕಾಲೇಜ್ >ಕಾಲೇಜ.

೧೫. ಮೈಸೂರು ಕನ್ನಡದಲ್ಲಿ ಇದೆ, ಇವೆ—ಎಂಬ ಕ್ರಿಯಾ ರೂಪಗಳನ್ನು ಬಳಸುವರು ; ಧಾರವಾಡದ ಕಡೆ ಇವುಗಳಿಗೆ ಕ್ರಮವಾಗಿ 'ಅದೆ, ಅವೆ' ಎಂಬ ಕ್ರಿಯಾ ಪದಗಳನ್ನು ಉಪಯೋಗಿಸುವರು.

೧೬. ನೆಟ್ಟಗೆ=ಚೆನ್ನಾಗಿರುವುದು, ಧಾರಣೆ=ಉಷ್ಣ, ಜ್ವರ; ಝುಳಝುಳ=ಗುಣವಾಗುವುದು.

ಪ್ರಾಚೀನ ರೋಮಿನ ಕೊಲ್ಚಿಸ್ ಪ್ರದೇಶ ಉಪಭಾಷೆಗಳ ಬೀಡು. ಪ್ಲಿನಿಯ ಹೇಳಿಕೆಯಂತೆ ಕೊಲ್ಚಿಸ್‌ನಲ್ಲಿ ಸುಮಾರು ಮುನ್ನೂರು ಅನಾಗರಿಕ ಬುಡಕಟ್ಟುಗಳು ಇದ್ದು, ಅವರು ಅನೇಕ ಉಪಭಾಷೆಗಳನ್ನು ಆಡುತ್ತಿದ್ದರು ; ರೋಮನರು ಇವರೊಡನೆ ಸಂಭಾಷಿಸಬೇಕಾದರೆ ಒಂದುನೂರು ಮುವ್ವತ್ತು ಜನ ದುಭಾಷಿಗಳ ಸಹಾಯ ಪಡೆಯಬೇಕಾಗುತ್ತಿತ್ತಂತೆ. ತನಗಿಂತಲೂ ಹಿಂದೆ ಇದ್ದ ಟಿಮೊಸ್ಥೆನಿಸನ ಉಲ್ಲೇಖಗಳನ್ನು ಆಧರಿಸಿ ಬರೆಯುತ್ತಿದ್ದ ಪ್ಲಿನಿಯ ಈ ಹೇಳಿಕೆಯನ್ನು ಉತ್ಪ್ರೇಕ್ಷೆಯೆನ್ನಬಹುದಾದರೂ, ಸ್ಟ್ರ್ಯಾಬೊ ಹೇಳುವ ವಿವರಣೆಯನ್ನು ನಂಬಬಹುದು, ಅಲ್ಲದೆ ಸ್ಟ್ರ್ಯಾಬೊ ಕೂಡ ಟಿಮೊಸ್ಥೆನಿಸನನ್ನು ಕುರಿತು 'ಅವನ ಹೇಳಿಕೆ ನಂಬಲರ್ಹವಾಗಿಲ್ಲ' ಎಂದು ಹೇಳಿದ್ದಾನೆ. ಸ್ಟ್ರ್ಯಾಬೊ ಕೊಲ್ಚಿಸ್ಸಿನಲ್ಲಿ ಎಪ್ಪತ್ತು ಕಾಡುಜನಾಂಗಗಳು ಇವೆಯೆಂದು ಹೇಳಿದ್ದಾನೆ, ಎಪ್ಪತ್ತು ಉಪಭಾಷೆಗಳೂ ಇದ್ದಿರಬಹುದು.

ಕರ್ನಾಟಕದಲ್ಲಿ ಇಷ್ಟು ಹೆಚ್ಚಿನ ಸಂಖ್ಯೆಯ ಉಪಭಾಷೆಗಳುಳ್ಳ ಭಾಗಗಳು ಕಂಡುಬರುತ್ತಿಲ್ಲವಾದರೂ, ಮೂರು ನಾಲ್ಕು ಉಪಭಾಷೆಗಳುಳ್ಳ ಸ್ಥಳಗಳು ಇರುವಂತಿದೆ. ಇಲ್ಲಿ ಅಂಥ ಕೆಲವು ಉಪಭಾಷೆಗಳನ್ನು ಪರಿಶೀಲಿಸುವ ಒಂದು ಪುಟ್ಟ ಪ್ರಯತ್ನವನ್ನು ಕೈಗೊಂಡಿದೆ. ಇಲ್ಲಿ ಕೊಟ್ಟಿರುವ ಎಲ್ಲ ಉಪಭಾಷಾ ಪರಿವೀಕ್ಷಣೆಯ ಬಹುಮಟ್ಟಿನ ಉದಾಹರಣೆಗಳು ಶ್ರೀಸಾಮಾನ್ಯರ ಸಂಭಾಷಣೆಯಿಂದ ಆರಿಸಿಕೊಂಡಿದೆ. ಇದಕ್ಕಿಂತ ಬೇರೆಯಾದ, ಬಗೆಬಗೆಯಾದ ಪ್ರಯೋಗಗಳೂ, ಪದಗಳೂ ಇತರರಿಗೆ—ವಿದ್ವಾಂಸರಿಗೆ ಕಾಣಬಹುದು. ಆದರೆ ನನಗೆ ತಿಳಿದಷ್ಟು, ನಾನು ಆಲಿಸಿದಷ್ಟು ಇಲ್ಲಿ ಕೊಟ್ಟಿದ್ದೇನೆ. ಈ ಉದಾಹರಣೆಗಳನ್ನು ನಾಮಪದಗಳು, ಧಾತುಗಳು, ಸರ್ವನಾಮಗಳು—ಹೀಗೆ ವರ್ಗೀಕರಿಸುವ ಅಪೇಕ್ಷೆಯಿತ್ತು, ಆದರೆ ಇಲ್ಲಿ ಅದು ಸಾಧ್ಯವಾಗಿಲ್ಲ.

ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶದ ಒಂದೇ ಭಾಷೆಗೂ, ಹಳ್ಳಿಯಿಂದ ಹಳ್ಳಿಗೆ ಹೋಲಿಸಿದಾಗ ಭಿನ್ನತೆ ಗಮನಾರ್ಹವಾಗಿ ಗೋಚರಿಸುವುದು ಹಾಗಿರಲೀ, ಒಂದೇ ನಗರದಲ್ಲಿ ಕೇರಿಕೇರಿಗೂ, ಕೆಲವೊಮ್ಮೆ ಮನೆಮನೆಗೂ ವ್ಯತ್ಯಾಸ ಕಾಣಿಸುತ್ತದೆ. ಅಂದ ಮಾತ್ರಕ್ಕೆ ಭಾಷೆಯಲ್ಲಿ ಇದೇ ಶ್ರೇಷ್ಠ ಅಥವಾ ಉತ್ತಮ, ಅದು ಕೀಳು ಅಥವಾ ಅಧಮವೆಂದು ಪರಿಗಣಿಸತೊಡಗಬಾರದು ; ಆದರೆ ಹಲವು ಉಪಭಾಷೆಗಳಿದ್ದಾಗ ಯಾವುದಾದರೂ ಒಂದನ್ನು ಶಿಷ್ಟಪ್ರಯೋಗವೆಂದು ಅಂಗೀಕರಿಸಬಹುದು. "ಕನ್ನಡ ದೇಶ

ದಲ್ಲಿಯೂ ಅಚ್ಚಗನ್ನಡ ಮೈಸೂರು ಪ್ರಾಂತ್ಯದ್ದೇ ಹೊರ್ತು ಕಡಮೆ ಎಲ್ಲಾ ಅಚ್ಚಗನ್ನಡ ವಲ್ಲವು. ಬೆಂಗಳೂರು ಬಳ್ಳಾರಿ ಮೊದಲಾದ ಶೀಮೆಯೂ ತೆಲುಗು ರಾಜ್ಯದ ಸಮೀಪ ದಲ್ಲಿರುವುದರಿಂದ ಅಲ್ಲಿಯ ಕನ್ನಡವು–ತೆಲುಗು ಕಲೆತುಹೋಯಿತು. ಕೊಯಮುತ್ತೂರು ಶೀಮೆಯು ತಿಗುಳು ರಾಜ್ಯದ ಸಮೀಪದಲ್ಲಿರುವದ್ದರಿಂದಲ್ಲಿ, ತಿಗುಳು ಕಲೆತುಹೋಯಿತು. ಮಂಗಳೂರು ಜಿಲ್ಲಾ ಕನ್ನಡವು ಕೊಂಕಣಿ ಮಲೆಯಾಳ ತುಳುವ ಭಾಷೆಗಳು ಕಲೆತು ಹೋಯಿತು, ಮತ್ತು ಆ ದೇಶಗಳಲ್ಲಿ ಪ್ರಬಲವಾದ ಕರ್ನಾಟಕ ಸಂಸ್ಥಾನವಿಲ್ಲದ್ದರಿಂದ ವಿದ್ವಾಂಸರುಗಳೂ ದುರ್ಲಭವಾಗಿ ಹೋಯಿತು ; ಆದ್ದರಿಂದ ಆ ದೇಸಗಳಲ್ಲಿ ಪರಿಶುದ್ಧ ವಾದ ಕನ್ನಡವಿಲ್ಲದೇ ಹೋಯಿತು"[1]—ಎಂಬ ವಿಂಗಡಣೆ ಸಮಂಜಸವಾಗಿರುವಂತೆ ಕಂಡರೂ, ಇಲ್ಲಿ ಭಾಷೆಯಲ್ಲಿ ಮೇಲುಕೀಳೆಂಬ ತಾರತಮ್ಯಕ್ಕೆ ಎಡೆಕೊಟ್ಟಂತೆ ಕಾಣು ತ್ತದೆ. ಭಾಷೆಯಿರುವುದು ವ್ಯವಹಾರ ಸುಲಭವಾಗಲೆಂದು. ಅನುಕೂಲಕ್ಕೆ ತಕ್ಕಂತೆ ಭಾಷೆಯೂ ಬದಲಾಗುತ್ತಿರುತ್ತದೆ. ಭಾಷೆ ವ್ಯಾಕರಣವನ್ನು ಅನುಸರಿಸಿ ಬೆಳೆಯುವುದಿಲ್ಲ. ಭಾಷೆಯನ್ನು ಅನುಸರಿಸಿ ವ್ಯಾಕರಣ ರೂಪುಗೊಳ್ಳುತ್ತವೆ.

ಎಲ್ಲ ದ್ರಾವಿಡ ಭಾಷೆಗಳಲ್ಲೂ ಉಪಭಾಷೆಗಳಿವೆ.

ಉದಾ :

ತಮಿಳು : ಕೊಯಮುತ್ತೂರಿನ ತಮಿಳು, ಚೋಳ ದೇಶದ ತಮಿಳು, ಮೈಸೂರು ತಮಿಳು, ಕೈಕಾಡೀ ತಮಿಳು, ಯೆರುಕಲ ತಮಿಳು, ಕೊರ್ವೀ ತಮಿಳು, ಜಾಫ್ನಾ ತಮಿಳು, ಸಿಲೋನಿನ ತಮಿಳು ಇತ್ಯಾದಿ.

ತೆಲುಗು : ದತ್ತಮಂಡಲದ ತೆಲುಗು, ಗುಂಟೂರು ತೆಲುಗು, ರಾಜಮಂದಿರದ ತೆಲುಗು, ವಿಶಾಖಪಟ್ಟಣದ ತೆಲುಗು, ತೂರ್ಪು ತೆಲುಗು, ಮೈಸೂರು ತೆಲುಗು.

ಮಲೆಯಾಳ : ಕಾಸರಗೋಡಿನ ಮಲೆಯಾಳ, ಕಲ್ಲಿಕೋಟೆಯ ಮಲೆಯಾಳ, ಕೊಚ್ಚಿಯ ಮಲೆಯಾಳ, ತಿರುವಾಂಕೂರಿನ ಮಲೆಯಾಳ, ಮಾಪಿಳ್ಳೆ ಯವರ ಮಲೆಯಾಳ, ಬೆಳ್ಚಡರ ಮಲೆಯಾಳ, ಪುಲಯ (ಸೆರಮರ್) ಮಲೆಯಾಳ.

ದಕ್ಷಿಣ ಕನ್ನಡ ಜಿಲ್ಲೆ, ಭಾಷಾಶಾಸ್ತ್ರದ ಅಭ್ಯಾಸ ನಡಯಿಸುವ ದೃಷ್ಟಿಯಿಂದ ಹಲವು ಭಾಷೆ-ಉಪಭಾಷೆಗಳ ಆಗರವೆಂದು ಹೇಳಬಹುದು. ಕನ್ನಡ ಭಾಷೆಗೆ ಸೇರಿದ ಮತ್ತು ಸೇರಿರುವಂತೆ ತೋರುವ ಹತ್ತಾರು ಉಪಭಾಷೆಗಳ ಬೀಡು ದಕ್ಷಿಣ ಕನ್ನಡನಾಡು. ಅಲ್ಲಿನ ಕೊಡಗರು, ಕುಂಬಾರರು, ಹವ್ಯಕರು, ಕುಡಿಯರು, ಹಾಲಕ್ಕಿಯವರು, ಕೊರಗರು ಕನ್ನಡದ ಉಪಭಾಷೆಗಳನ್ನು ಆಡುವರು. ಇವರಲ್ಲಿ ಹವ್ಯಕರ ಭಾಷೆಯಲ್ಲಿ ಹಳಗನ್ನಡಕ್ಕೆ

[1] ಹೊಸಗನ್ನಡ ನುಡಿಗನ್ನಡ, ಕೃಷ್ಣಮಾಚಾರ್ಯ, ಪು. v

ಹೊಂದಿಕೊಂಡ ಅಥವಾ ಹತ್ತಿರವಾದ ಪದಗಳು ಹೆಚ್ಚು. ಇನ್ನು ಕುಡಿಯರು ಮುಂತಾದವರು ಆಡುವ ಮಾತುಗಳಲ್ಲಿ ಕನ್ನಡದ ಜೊತೆಗೆ ಕೊಂಚ ತುಳು ಪದಗಳೂ ಕೂಡಿಕೊಂಡಿರುತ್ತವೆ.

ಮಂಗಳೂರು ಪ್ರಾಂತ್ಯದ ಶೂದ್ರರು ಆಡುವ ಪೊಂಬದೆ (ಗುಟ್ಟು ಭಾಷೆ) ಮತ್ತು ನಟರಾದ ಪಂಚಮರಿಗೆ ಸೇರಿದ ನಲಿಕೆ (ನೃತ್ಯಕ್ಕೆ ಸಂಬಂಧಿಸಿದ್ದು) ಅಭ್ಯಾಸ ಯೋಗ್ಯವಾಗಿದೆ. ಇದೇ ತೆರನಾಗಿ ದಕ್ಷಿಣ ಕನ್ನಡ ಜಿಲ್ಲೆಗೆ ಸೇರಿದಂತೆ ಪಶ್ಚಿಮ ಮಲೆನಾಡು ಪ್ರದೇಶದಲ್ಲಿ ವಾಸಿಸುವ ಆದಿವಾಸಿಗಳಾದ ಮಲೇರು, ಹಸಲರು ಮುಂತಾದವರೂ ಕನ್ನಡ ಭಾಷೆಯ ಮಾತುಗಳನ್ನು ಆಡುವುದು ಕಾಣುತ್ತದೆ. ಇವುಗಳನ್ನು ಕನ್ನಡದ ಉಪಭಾಷೆಗಳೆಂದು, ಬಹುಮಟ್ಟಿಗೆ, ಹೇಳಬಹುದು. ಆದರೆ ಕೊಡಗಿನಲ್ಲಿ ಇರುವ ಎರವರು ಎಂಬ ಜನಾಂಗ ಆಡುವ ಭಾಷೆಯನ್ನು ಕನ್ನಡದ ಉಪಭಾಷೆಯೆಂದು ಹೇಳುವುದು ಕಷ್ಟವಾಗುತ್ತದೆ. ಕೊಡಗಿನ ಎರವರ ಭಾಷೆಯಲ್ಲೇನೊ ನೂರಕ್ಕೆ ಐವತ್ತು ಪದಗಳಿಗಿಂತಲೂ ಹೆಚ್ಚು ಕನ್ನಡ ಪದಗಳಿವೆ. ಕಾವೇರಿ, ಕಾಳಿ, ಕುಟ್ಟತಮ್ಮ, ಚಾಮುಂಡಿ ಇವು ಅವರ ದೇವತೆಗಳು. ಅವರು ಪೂಜೆ ಮಾಡುವ ಮರದ ಕೆಳಗೆ ನೆಟ್ಟ ಕಲ್ಲಿಗೆ ಗುಳಿಕನ್—ಎಂದು ಹೆಸರು. ಈ ಭಾಷೆಯನ್ನು ಇನ್ನೂ ಸಂಶೋಧಕ ವಿದ್ವಾಂಸರು ಪರಿಶೀಲಿಸಿ ಖಚಿತವಾಗಿ ಏನನ್ನೂ ಹೇಳಿದಂತೆ ತೋರುವುದಿಲ್ಲ. ಇದೇ ರೀತಿ ಕಾಡುಗೊಲ್ಲರು, ಕಾಡುಕುರುಬರು ಜೇನುಕುರುಬರು, ಬೆಟ್ಟಕುರುಬರು ಮುಂತಾದವರು ಆಡುವ ಕನ್ನಡ ಭಾಷೆಯನ್ನು ಕುರಿತ ಅಭ್ಯಾಸ ಆದಷ್ಟೂ ಬೇಗ ಆಗಬೇಕು. ಸರ್ಕಾರ—ವಿದ್ವಾಂಸರು ಇಬ್ಬರೂ ತಮ್ಮ ಉದಾರ ದೃಷ್ಟಿಯನ್ನು ಇತ್ತ ಹರಿಸಬೇಕು.

## ಕೊರಗರ ಕನ್ನಡ

ಕೊರಗರು ಆದಿವಾಸಿಗಳ ಗುಂಪಿಗೆ ಸೇರಿದ ಜನಾಂಗ. ಅವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸಿಸುವರು. ಕೊರಗರು ಸೂರ್ಯನನ್ನು ಮುಖ್ಯ ದೇವರೆಂದು ಪೂಜಿಸುವರು. ಆದರೆ ದೇವಾಲಯಗಳನ್ನು ದೇವರ ವಾಸಕ್ಕೆಂದಾಗಲಿ ಅಥವಾ ದೇವರ ವಿಗ್ರಹವಿಟ್ಟು ಪೂಜಿಸಲೆಂದಾಗಲಿ ಅವರು ಕಟ್ಟುವುದಿಲ್ಲ. ಕೊರಗರ ಪೂಜಾ ಪದ್ಧತಿಯೆಂದರೆ ಕಾಡುಗಳ ಮರಗಳ ಬುಡದಲ್ಲಿ ಕಸಕೊಳೆಗಳನ್ನು ಹೋಗಲಾಡಿಸಿ ಅಚ್ಚುಕಟ್ಟುಮಾಡಿ ಅಲ್ಲೊಂದು ಕಲ್ಲು ನೆಟ್ಟು ಪೂಜಿಸುವರು. ಆದರೆ ಎಲ್ಲ ಹಿಂದೂಗಳಂತೆ ಅನ್ನ ತೆಂಗಿನಕಾಯಿ ಬಾಳೆಹಣ್ಣು ಮುಂತಾದ ಫಲಪುಷ್ಪಗಳನ್ನು ದೇವರಿಗೆ ಕೊಡುವರಲ್ಲದೆ ಮದ್ಯವನ್ನೂ ದೇವರ ಮುಂದೆ ಇಟ್ಟು ಪೂಜಿಸುವರು. ಇಂಥ ಒಂದು ಜನಾಂಗದವರ ಭಾಷೆ ಅಭ್ಯಾಸಕ್ಕೆ ಯೋಗ್ಯವಾಗಿದೆ. ಬಹುಶಃ ಇದು ಕನ್ನಡದ ಒಂದು ಉಪಭಾಷೆ ಎಂದು ಕರೆಸಿಕೊಳ್ಳಲು ಅರ್ಹವಾಗಿದೆಯೆಂದು ತೋರುತ್ತದೆ. ಆದರೆ ಹೆಚ್ಚು ಸಂಶೋಧನೆ ನಡೆಯಬೇಕು. ಎಲ್ಲಕ್ಕೂ ಮೊದಲು ಅವರು ಆಡುವ ನುಡಿಯ ಪದಸಂಗ್ರಹ ಆಗಬೇಕು. ಸಂಸ್ಕೃತ ಪದಗಳನ್ನು ಲೀಲಾಜಾಲವಾಗಿ ಅವರು ತದ್ಭವ ಮಾಡಿಕೊಂಡಿದ್ದಾರೆ.

ಈ ಕೆಲವು ಕೊರಗರ ಪದಗಳನ್ನು ನೋಡಿ:

ಐತ್ಯ (=ಸೂರ್ಯ) <(ಸಂ) ಆದಿತ್ಯ ?
ಟೋಮ (=ಚಂದ್ರ) <(ಸಂ) ಸೋಮ ?
ಗುರ್ವ (=ಒಂದು ಗ್ರಹ) <(ಸಂ) ಗುರು ?
ಶಾನ್ಯ (=ಒಂದು ಗ್ರಹ) <(ಸಂ) ಶನಿ ?

ಇತ್ತೀಚೆಗೆ ಈ ಕೊರಗ ಉಪಭಾಷೆಯನ್ನು ಪ್ರತ್ಯೇಕ್ಷ ಭಾಷೆಯಾಗಿ ಪರಿಗಣಿಸಬೇಕೆಂಬ ಅಭಿಪ್ರಾಯವೂ ವ್ಯಕ್ತವಾಗಿದೆ; ಆದರಿಂದಾಗಿ ಶ್ರಾವಣ ಭಾಷೆಗಳ ಪರಿಶೀಲನೆಯ ವಿಭಾಗದಲ್ಲಿ ಈ ಭಾಷೆಯ ವಿವರಣೆಯೂ ಬಂದಿದೆ.

## ಸೋಲಿಗರ ಕನ್ನಡ

ಇಂದು ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನಲ್ಲೂ ವಿಶೇಷವಾಗಿ ಎಳಂದೂರು ತಾಲ್ಲೂಕು ಚಾಮರಾಜನಗರ ತಾಲ್ಲೂಕು ಮತ್ತು ಬಿಳಿಗಿರಿರಂಗನ ಬೆಟ್ಟದ ಬುಡದ ಮತ್ತು ಮಾದೇಶ್ವರನಬೆಟ್ಟದ ಸುತ್ತಲೂ ವಾಸಿಸುವ ಸೋಲಿಗರನ್ನು ಹಿಂದೆ ಅಲೆಮಾರಿ ಜನಾಂಗದವರೆಂದು ಹೇಳಬಹುದು. ಅವರು ಒಂದೇ ಕಡೆ ವಾಸಿಸುವ ಜಾಯಮಾನ ದವರಲ್ಲ. ಬಹು ಒಳ್ಳೆಯ ಬೇಟೆಗಾರರಾದ ಸೋಲಿಗರೂ ಆದಿವಾಸಿಗಳ ಗುಂಪಿಗೆ ಸೇರಿ ದವರೆಂದು ತೋರುತ್ತದೆ. ಸೋಲಿಗರ ವಿದ್ಯೆ ವಸತಿ ಮತ್ತು ಇತರ ಯೋಗಕ್ಷೇಮಾಭಿ ವೃದ್ಧಿಗೆ ಸರ್ಕಾರ ಸೌಕರ್ಯಗಳನ್ನು ಮಾಡಿಕೊಟ್ಟಿದೆ. ಕಾಡುಮೇಡುಗಳಲ್ಲಿ ವಾಸಿಸುವ ಸೋಲಿಗರು ಹಬ್ಬಹುಣ್ಣಿಮೆಗಳಲ್ಲಿ ಹಾಡುವ ಹಾಡುಗಳನ್ನು ಸಂಗ್ರಹಿಸುವುದು ತೀರ ಅಗತ್ಯ.

ಸೋಲಿಗಯ್ಯ ಎಂಬುವನು ಸೋಲಿಗರ ಮೂಲಪುರುಷನೆಂಬ ಪ್ರತೀತಿಯಿದೆ: ಬೊಮ್ಮೇಗೌಡ ಎಂಬುದು ಸೋಲಿಗರ ಕುಲದ ಯಜಮಾನನಿಗೆ ಇರುವ–ಇಡುವ ಹೆಸರು. ಹಿಂದೆ ಇವರ ಮೊದಲ ಹಿರಿಯ ಬೊಮ್ಮೇಗೌಡನ ಕಿರಿಯ ಮಗಳು ಕುಸು ಮಾಲೆಯನ್ನು ಬಿಳಿಗಿರಿರಂಗಸ್ವಾಮಿಯೇ ಮದುವೆಯಾದನೆಂದು ಸೋಲಿಗರ ನಂಬಿಕೆ, ಕತೆ. ಇಂದಿಗೂ ಈ ದೇವರ ರಥವನ್ನು ಜಾತ್ರೆಯ ದಿವಸ ಸೋಲಿಗರು ಮೊದಲು ಎಳೆಯುವುರಲ್ಲದೆ ರಂಗಸ್ವಾಮಿಯನ್ನು ಸೋಲಿಗರು 'ಭಾವ' ಎಂದು ಕರೆಯುವರು. ಬಿಳಿಗಿರಿರಂಗಸ್ವಾಮಿಯನ್ನೇ ಅಲ್ಲದೆ ಎಲ್ಲಮ್ಮ, ಕ್ಯಾತೇದೇವರು, ಗಂಗಾಧರೇಶ್ವರ, ಜಡೇಸ್ವಾಮಿ, ಬೈರಮ್ಮ, ಮಂದಲಗಿರಿಯಮ್ಮ, ಮರಿಯಮ್ಮ, ಹುಲೀರಪ್ಪ—ಎಂಬ ದೇವರುಗಳನ್ನೂ ಪೂಜಿಸುವುದುಂಟು.

ಗುಡ್ಡಗಾಡುಗಳಲ್ಲಿ ಸಿಗುವುದನ್ನು ಮಾರಿ ಜೀವನ ನಡಯಿಸುವ ಈ ಸೋಲಿಗರ ಭಾಷೆ ಕನ್ನಡದ ಉಪಭಾಷೆಯೆಂದು, ಕರೆಸಿಕೊಳ್ಳಲು ಅರ್ಹವಾಗಿದೆ. ಸೋಲಿಗರ ಭಾಷೆ ಸುಲಭವಾಗಿ ಅರ್ಥವಾಗದಿದ್ದರೂ ಆ ಭಾಷೆ ಪ್ರಧಾನವಾಗಿ ಕನ್ನಡವೆಂಬುದರಲ್ಲಿ

ಅನುಮಾನವಿಲ್ಲ. ಇಂದಿನ ಕನ್ನಡದೊಡನೆ ಹೋಲಿಸಿದಾಗ ಸೋಲಿಗರ ಭಾಷೆ ಅರ್ಥವಾಗದೆ ಇರುವುದಕ್ಕೆ ಒಂದು ಮುಖ್ಯ ಕಾರಣವೆಂದರೆ ಅವರ ಉಚ್ಚಾರಣೆ. ಅಕಾರಾಂತ ನಾಮಪದಗಳ ಅಂತ್ಯದಲ್ಲಿ ಅನುನಾಸಿಕಕ್ಕೋಚ್ಚಾರವಿರುತ್ತದೆ: ರಂಗ ಮಾದಕರಿಯ ಉರುಬುತ್ತಿ ಸೋಲಿಗ, ಊರಾಳಿ ಸೋಲಿಗ, ಮಲೆ ಸೋಲಿಗ—ಹೀಗೆ ನಾನಾ ಗುಂಪುಗಳು ಸೋಲಿಗರಲ್ಲಿವೆ.

ಇಲ್ಲಿ ಕೊಟ್ಟಿರುವ ಕೆಲವು ಪದಗಳನ್ನು ಗಮನಿಸಿ:

| | | |
|---|---|---|
| ಕಟ್ಟೇಮನೆ | (=ನ್ಯಾಯಸ್ಥಾನ) | ಬುಟ್ಟು=ಬಿಟ್ಟು |
| ಹೊತ್ತು | (=ಸೂರ್ಯ) | ಹೆಱೆ < (ಕ) ಪೆಱೆ (=ಚಂದ್ರ) |
| ತಾರಕಿ | (ನಕ್ಷತ್ರ) | ಪೋಡು (=ಗುಡಿಸಲುಗಳ ಗುಂಪು) |

ಇಜ್ಜಲುಪಾಳ್ಯ, ಎಂಜಲಗೆರೆ, ಗುಂಡಲ್ ಬುರುಡೆ, ಮುತ್ತುಗದ ಗದ್ದೆ—ಇತ್ಯಾದಿಯಾಗಿ ಸೋಲಿಗರ ಪೋಡುಗಳು ಹಲವು ಇವೆ.[1] ಸೋಲಿಗ ಉಪಭಾಷೆಯಲ್ಲಿ ಹಳಗನ್ನಡದಲ್ಲಿದ್ದ ೞ ಮತ್ತು ಱ ಧ್ವನಿಗಳು ಉಳಿದಿವೆಯೆಂದು ತಿಳಿದುಬಂದಿದೆ.

## ಕುಱುಂಬ ಮತ್ತು ಇರುಳ

ಈ ಹಿಂದೆಯೇ ಒಂದೆಡೆಯಲ್ಲಿ ಹೇಳಿರುವಂತೆ ನೀಲಗಿರಿ ಹಲವು ದ್ರಾವಿಡಭಾಷೆ-ಉಪಭಾಷೆಗಳ ತವರುಮನೆಯಾಗಿದೆ. ಕೋತ, ತೊದ, ಬಡಗ ಭಾಷೆಗಳಲ್ಲದೆ ಅಲ್ಲಿ ಕುಱುಂಬ ಮತ್ತು ಇರುಳ ಎಂಬ ಎರಡು ಉಪಭಾಷೆಗಳಿವೆ. ವಿದ್ವಾಂಸರು ಈ ಎರಡೂ ಉಪಭಾಷೆಗಳು ಕನ್ನಡದ ಉಪಭಾಷೆಗಳೆಂದೂ ತಿಳಿಸಿದ್ದರೂ, ಇರುಳ ಉಪಭಾಷೆಯ ವಿಚಾರದಲ್ಲಿ ಅನುಮಾನವಿದೆ. ಅದು ತಮಿಳಿನೊಡನೆಯೂ ಇದೇ ಪ್ರಮಾಣದಲ್ಲಿ ಹೋಲುತ್ತದೆ. ಇಲ್ಲಿ ಈ ಎರಡು ಉಪಭಾಷೆಗಳ ಕೆಲವು ಪದಗಳನ್ನಿತ್ತು, ಕನ್ನಡದೊಡನೆ ಹೋಲಿಸಿ, ಕನ್ನಡಕ್ಕೆ ಎಷ್ಟು ಸಮೀಪತರ ಉಪಭಾಷೆಗಳಾಗಿವೆ ಎಂಬುದನ್ನು ಪರಿಶೀಲಿಸಲು ಅನುವು ಮಾಡಿಕೊಟ್ಟಿದೆ.

| ಕನ್ನಡ | ಇರುಳ | ಕುಱುಂಬ |
|---|---|---|
| ಇಱುಂಪೆ > ಇರುವೆ | ಇರೂಂಬ | ಇರೂಪ |
| ಎರಡು/ಇರ್ | ಇರಂಡು | ಎರಡು |
| ಒಂದು | ಒಂದು | ಒಂದು |
| ಕಣ್ಣು | ಕಣ್ಣು | ಕಣ್ಣು |
| ನಾನು | ನಾನು/ನಾ· | ನಾ/ನಾನು |

[1] ಡಾ|| ಕೆ. ಎಸ್. ಗುರುಬಸವೇಗೌಡರು ಸೋಲಿಗ ಭಾಷೆಯನ್ನು ಕುರಿತು ನಿಬಂಧವನ್ನು ಸಿದ್ಧಪಡಿಸಿದ್ದಾರೆ. ಅದು ಪ್ರಕಟವಾದಾಗ ಈ ಭಾಷೆಯ ಬಗೆಗೆ ಹೆಚ್ಚಿನ ಮಾಹಿತಿ ದೊರೆತಂತೆ ಆಗುವುದು.

| ಕನ್ನಡ | ಇರುಳ | ಕುಱುಂಬ |
|---|---|---|
| ನಾವು | ನವು | ಎನ್ನ/ಎಂಗ |
| ನೀನು | ನಿ | ನಿ |
| ನೀವು | ನೀವ್ | ನೀಂಗ |
| ಪಾವು > ಹಾವು | ಪಾಂಬು | ಹಾವು |
| ಬಾ | ಬರವೆ | ಬ |
| ಮೀನು | ಮೀನು | ಮಿನು |
| ಮೂಱು > ಮೂರು | ಮುರು | ಮೂರು |

| ಸೋಡಬಾಳ | ಮೈಸೂರು | ಸೋಡಬಾಳ | ಮೈಸೂರು |
|---|---|---|---|
| ಅಗಲು ↘ ತಾಟು | ಊಟದ ತಟ್ಟೆ | ಓಸ | ವಂಶ |
| ಅಗಾವು | ಮುಂಚಿತ | ಐತಿ | ಇರುತ್ತದೆ |
| ಅಡಚಣೆ | ತೊಂದರೆ | –ಬರತೇತಿ | ಬರುತ್ತದೆ |
| ಅಡಹೊತ್ತು | ಇಳಿಹೊತ್ತು | ಕಥ್ಯಾವರಾ | ಕಡೆಯುವರು |
| ಆಬಚಿ | ದೊಡ್ಡಮ್ಮ ↘ ಚಿಕಮ್ಮ | ಕಪ್ಪಾಳಿಗಿ | ಕಪಾಳಕ್ಕೆ |
| | | ಕರೀನ | ಕರುವಿನ |
| ಅಯ್ನು | ಅಂದೆನು | ಕರ್ಯಾನ | ಕರೆಯೋಣ |
| ಅರಿವಿ | ಬಟ್ಟೆ | ಕಳೆದಿದ್ದಾದೋತ | ಕಳೆದಿರಬಹುದು |
| ಅಲ್ಲಡ | ತಿಳಿವಳಿಕೆಸಾಲದ | ಕಾರಣ | ಮದುವೆ ↘ ಮುಂಜಿಕೆಲಸ |
| ಅವಣ್ನಾ | ಅವರನ್ನು | | |
| ಅವರಿಗಿ | ಅವರಿಗೆ | ಕಾರುಣ್ಣಿ | ಕಾರಹುಣ್ಣಿಮೆ |
| ಅಸ್ಕರಿ | ಪ್ರಸಿದ್ಧ | ಕಾಲಮಡಿ | ಮೂತ್ರವಿಸರ್ಜನೆ |
| ಅಳತೀಳು | ಅಳುತ್ತಿದ್ದಳು | ಕಾಸಡಿ[1] | ಪೈಯಷ್ಟು |
| ಆಕೀಗಿ | ಅಕೆಗೆ | ಕಾಸಡೇವ | ಕಾಸಿನ ಬೆಲೆಯವು |
| ಆಚ್ಚಿಬರೆ | ಅಚಿವರ್ಷ ಹೋದಸಲ | ಕಿಮ್ಮತ್ತು | ಬೆಲೆ |
| | | ಕುರುಕಲ | ಸೊಟ್ಟ ↘ ಚಿಕ್ಕ |
| ಆದೋತು | ಆದೀತು | ಕುಸಲತ | ಕುಶಲತನ |
| ಆಯಾರ | ಉಡುಗೊರೆ | ಕುಳ್ಳು | ಬೆರಣೆ |
| ಆರಾಕು | ಹರವು | ಕೆಪ್ಪ | ಕೆಂಪು |
| ಆಂಯ್ದು | ಅಲ್ಲಿಂದ; ಅನಂತರ | ಕೊಡ್ಡ | ಕೊರಡು |
| | | ಕೊಂಗ್ಯಾ | ಕಪಡಿ |
| ಇಕಡಿ | ಈ ಕಡೆ | ಖಡತರ | ಕಟ್ಟ |
| ಇಡಗ | ಇಜ್ಜೋಡು | ಖೋಡಿ | ಕಟ್ಟ |
| ಇದಕ | ಇದಕ್ಕೆ | ಖಾಸಲೇರು | ಕುಶಲೆಯರು |

[1] ಪಂಪಭಾರತ ೩-೪೪ರಲ್ಲಿ ಬರುವ ಕಾಸಟ ಎಂಬ ಪದಕ್ಕೂ ಈ ಪದಕ್ಕೂ ಸಂಬಂಧವಿರಬಹುದೆ ?

| ಸೇಡಬಾಳ | ಮೈಸೂರು | ಸೇಡಬಾಳ | ಮೈಸೂರು |
|---|---|---|---|
| ಉಡುಗೋಲ ~ ಕಸಬರಿಗಿ | ಪೊರಕೆ | ಗರ್ದಿ | ಸಡಗರ |
| ಉದೊಳಿಸು | ತೂರು ~ ಹಾಳುಮಾಡು | ಗುಳಿದಾಳಿ | ಮಂಗಳಸೂತ್ರ |
| ಉಪದ್ರ(ವ) | ತೊಂದರೆ | ಚಾಳಿ | ನಡತೆ |
| ಎಡತಾಕಿಸ್ನ | ಎಡತಾಕಿದೆನು | ಚೂರು | ಉಗುರಿನಿಂದ ಗಾಯ ಮಾಡುವುದು |
| ಎದಿಕ್ | ಯಾವುದಕ್ಕೆ | ಜಗಲಿ[1] | ಮನೆಯಲ್ಲಿರುವ ದೇವರ ಕಟ್ಟೆ |
| ಎಬ್ಬಿಸು | ಕದಿ | ಜರಾ | ಸ್ವಲ್ಪ |
| ಒಗೆ | ಎಸೆ ~ ಎಸಿ | ಜಾಚ | ತೊಂದರೆ |
| ಜಿಕಿಜಿಕಿ | ಜಿಪುಣ | ತಿಂಯ್ದಾನ | ತಿಂದಿದ್ದಾನೆ |
| ಝುಕಾಸ | ಸುಂದರ | ತೆಕ್ಕಾ | ತಕ್ಕ |
| ಝಿಪ್ಪರ | ತಲೆಯ ಕೂದಲು | ತೊಡಗು | ಮೊದಲು ಮಾಡು |
| ಟೊಂಗ | ಅಸಂಬದ್ಧ | ತ್ಯಾವರಾ | ತೈವರು |
| ಡೋಣಿ | ನೀರು ನಿಲ್ಲುವ ಹೊಲ | ಥಣ್ಣಗ (< ತಣ್ಣಗೆ) | ಶಾಂತ |
| ತಲಿಹಗ(ಗು)ರು | ಜಾಣ, ಚುರುಕು | ದಗದ | ಕೆಲಸ |
| ತಾಬುಡತೋಬ | ಕೂಡಲೆ | ದನೀಗಿ | ದನಕ್ಕೆ |
| ತಿಂದಾದಾ | ತಿಂದಿದ್ದಾನು | ದನೀನ | ದನದ |
| ದಮ್ಮ | ತಾಳ್ಮೆ | ಮಗಳ | ಮಗಳು |
| ದರುಣ | ದೊಣ್ಣೆ | ಮರ್ಜಿ | ಮನಸ್ಸು |
| ದುರುಡಿ | ಬಿದರಬುಟ್ಟಿ | ಮದಿಂದಾಗ | ಮಧ್ಯಾಹ್ನದಲ್ಲಿ |
| ಧಡಧಡೀತ | ಗಟ್ಟಿ | ಮನೀಗಿ | ಮನೆಗೆ |
| ಧವಳಕ್ಕಿ | ಡೌಲಿನಾಕೆ ~ ಶ್ರೀಮಂತಳು | ಮಸ್ತ | ಬಹಳ |
| ಧಾಭೆ | ಕೊಟ್ಟಿಗೆ | ಮಾಡಿಳ್ಳ | ಮಾಡುತ್ತಿದ್ದಳು |
| ನವಬ್ಯಾನಿ | ನವೆಯುವ ಬೇನೆ | ಮಾನುಳ್ಳ | ಮರ್ಯಾದೆಯುಳ್ಳ |
| ನಿಶ್ಚವ | ನಿಶ್ಚಯ | ಮಾಯೆ | ಪ್ರೀತಿ |
| ನೆಲುವ ಗಣಿ | ನೇತಾಡುವ ಬಿದುರು | ಮುಕ್ಕು | ಸ್ವಲ್ಪ ತಾಳು ~ ಒಮ್ಮೆಬೀರುವ ಕಲ್ಲಿನಲ್ಲಿ ಹಿಡಿಯುವಷ್ಟು ಧಾನ್ಯ |
| ನೇಟ | ಶಕ್ತಿಯುತ ~ ನೆಟ್ಟಗೆ | ಮುಗದ್ಯಾ | ಮುಗ್ಧ |
| ಪಚನ | ಜೀರ್ಣ | ಮೂರಾಬಟ್ಟೆ | ಹಾಳಾಗು |
| ಪರವಿ | ಸುದ್ದಿ ~ ಬೆಲೆ | ಮೂರು ಸಂಜೆ | ದೀಪಹಚ್ಚುವ ಹೊತ್ತು |
| ಪರಾದ | ಪ್ರಾಯದ | | |

[1] ಗೌರಿಬಿದನೂರು ತಾಲ್ಲೂಕಿನಲ್ಲಿ 'ಜಗತಿ' (ಜಗತಿಕಟ್ಟೆ) ಎನ್ನುವರು.

| | | | |
|---|---|---|---|
| ಸೇಡಬಾಳ | ಮೈಸೂರು | ಸೇಡಬಾಳ | ಮೈಸೂರು |
| ಪಾವದೇರು | ಆಪ್ತರು | ಮೊಟ್ಟೆ | ಏತ > ಯಾತ |
| ಪುರೋಸು | ಸಾಕಾಗು | ಯಾಸ | ಏಸು |
| ಪೋರ | ಹುಡುಗ | ಯಾನತ್ತ | ಏನಂತ |
| ಪೋರಿ | ಹುಡುಗಿ | ಯಾಸರ | ಏನಾದರೂ |
| ಬಗೆಹರಿ | ತೀರು | ರೂಳಕ | ಹಾದಿಗೆ |
| ಬಡ್ಯಾನ್ನ | ಬಡಿಸಿದ ಅನ್ನ | ವಗತನ | ಜನ್ಮ, ಬಾಳ್ವೆ |
| ಬಡೇಂಜಾವ- | | (< ಒಗೆತನ) | ಓಲಗ |
| ಡೌಲು | ಬಡಾಯಿ, ಜಂಬ | ವಾಲಗ | ಜಗಳವಾಡು- |
| ಬಂದೋತು | ಬಂದೀತು | ವಾಸ್ಯಾಡು | ಓರೆಮಾತಾಡ |
| ಬಂಯ್ದಾನ | ಬಂದಿದ್ದಾನೆ | | |
| ಬಾಗಿಲ ಇಕ್ಕು | ಬಾಗಿಲು ಹಾಕು | (ವಹಿನಿ >) ವೈನಿ | ಅತ್ತಿಗೆ |
| ಬಿಟ್ನೆ | ಬಿಟ್ಟೆನು | ಸಡಸಡೀತ | ಸ್ಪಷ್ಟವಾಗಿ |
| ಬೇಡತೀಬೆ(<-ಅಬ್ಬೆ) | ಬೇಡುತ್ತಿರುವೆ | ಸನೇ | ಸಮೀಪ |
| | ಅಮ್ಮ | ಸಮಜೂತಿ | ತಿಳಿವಳಿಕೆ |
| | ಸ್ಮಶಾನದಲ್ಲಿ ಹೆಣ | ಹಾಕಿಳ | ಹಾಕಿದ್ದಳು |
| ಸರಣ | ಸುಡಲು ಒಟ್ಟಿದ | [1]ಹ್ವಾಸ | ಅಹೋಸವ್ರತ |
| | ಕಟ್ಟಿಗೆ | ಹ್ಯಾಂತಿ | ಹೆಂಡತಿ |
| ಹಚಕುಡು | ಕಳುಹಿಸಿಕೊಡು | ಹುಜುರು | ಕಿವಿಯ ಚಿಕ್ಕ ಒಡವೆ |
| ಹರತಾಟೆ | | ಹುಡದಿ | ಗಲಾಟೆ, ಗದ್ದಲ |
| (< ಪರದಾಟ) | ತಾಪತ್ರಯ | ಹುರಬೆಂಡ್ಲ | ಬೆರಕೆ |
| (ಹರಿಹೊತ್ತು > | | ಹುರೂಟ | ಹುಡುಗಾಟಿಕೆಯವನು |
| ಹರಿವತ್ತು >) | ಮುಂಜಾನೆ | ಹುಷಾರ | ಜಾಣ |
| ಹರೀವತ್ತು | | ಹುಲ್ಲು | ಹುಚ್ಚ |
| ಹಳ್ಳೀ ಹೊಡಿ | ಕೂಗಿಕರೆ | | |

| | | | |
|---|---|---|---|
| ಮೈಸೂರು | ಧಾರವಾಡ | ಮೈಸೂರು | ಧಾರವಾಡ |
| ಅಕ್ಕಪಕ್ಕ | ಅಜೂಬಾಜು | ಕವರು(> ಕವರ್‌ಇಂ) | ಕವ್ಹರ |
| ಅಜ್ಜ | ಅಜ | ಕಜ್ಜಿ | ತಿಂಡಿ |
| ಅಜ್ಜಿ | ಅಜ್ಜಿ | ಕಾರಖಾನೆ | ಗಿರಣಿ |
| ಅಡ್ಡಯಿಲ್ಲ | ಹರಕತ್ತಿಲ್ಲ | ಕಾಲೇಜಿನ | ಕಾಲೇಜದ |
| ಅದಕ್ಕಿಂತ | ಅದರಕಿಂತ[1] | ಕಾಹಿಲೆ | ಜಡ್ಡು |

[1] ಜೈನರು ಸೂರ್ಯಾಸ್ತಮಕ್ಕೆ ಮೊದಲೇ ಊಟ ಮಾಡುವ ವಾಡಿಕೆ. ಈ ನಿಯಮವನ್ನು ಅಹೋಸವ್ರತವೆನ್ನುವರು. ಗೌರಿಬಿದನೂರು ತಾಲ್ಲೂಕಿನ ಜೈನರು ಇದನ್ನು 'ವಾಸದೂಟ' ಎನ್ನುತ್ತಾರೆ.

| ಮೈಸೂರು | ಧಾರವಾಡ |
|---|---|
| ಅನ್ನುತ್ತಾರೆ | ಅಂತಾರ |
| ಅಧ್ಯಕ್ಷರ ಭಾಷಣ | ಅಧ್ಯಕ್ಷೀಯ ಭಾಷಣ |
| ಅನಂತರ | ಹಿಂದಾಗಡೆ |
| (ಕಳ್ಳತನ) ಅಪರಾಧ | ಗುನ್ನೆ < ಗುನ್ಹೆ |
| ಅಭಿಪ್ರಾಯ | ಅಂಬೋಣವಿದೆ |
| ಅವನು | ಅವ, ಅಂವಾ |
| ಅವಕಾಶ (ವಿರಾಮ) | ಸವಡು |
| ಅವಳು | ಆಕಿ |
| ಅಲ್ಪಸಂಖ್ಯಾತರಿಗೆ | ಅಲ್ಪಸಂಖ್ಯಾಕರಿಗೆ |
| ಅಳಿಲು | ಇಣಚಿ |
| ಆಗುವುದು | ಆಗುವದು |
| ಆಗುವುದಿಲ್ಲ | ಆಗಲಿಕ್ಕಿಲ್ಲ |
| ಆತುರ | ತರಾತುರಿ |
| ಆಫೀಸ್ (ಇಂ) | ಅಫೀಸ |
| ಆಯಾಸ (ತೊಂದರೆ) | ತ್ರಾಸ |
| ಆಮ್ಲಜನಕ | ಪ್ರಾಣವಾಯು |
| ಆಯಿತು | ಆತು |
| ಆಯಿತ್ರಪ್ಪಾ | ಆತ್ರಪಾ |
| ಆರೋಗ್ಯ | ಆರಾಮ್ |
| ಆಸ್ಪತ್ರೆ | ದವಾಖಾನೆ |
| ಆಹ್ವಾನ | ಆಮಂತ್ರಣ/ಅವ್ಹಾನ |
| ಇದ್ದಾನೆ | ಆದಾನ |
| ಇವನು | ಇವ, ಇಂವಾ |
| ಇಷ್ಟು | ಈಟ |
| ಇವಳು | ಈಕಿ |
| ಈರುಳ್ಳಿ | ಉಳ್ಳಾಗಡ್ಡಿ |
| ಉದ್ದೇಶ | ಇರಾದೆ |
| ಉಪಕುಲಪತಿ | ಉಪಕುಲಗುರು |
| ಉಳುತ್ತಾನೆ | ರಂಟೆ ಹೊಡೆಯುತ್ತಾನೆ |
| ಊಟದ ತಟ್ಟೆ | ಗಂಗಳ |
| ಎಚ್ಚರ | ಎಚ್ಚರ; ಜಾಗೃತಿ |
| ಏಕೆ (ಯಾಕೆ) | ಯಾಕs |

| ಮೈಸೂರು | ಧಾರವಾಡ |
|---|---|
| ಕುಳಿತುಕೊಳ್ಳಿ | ಕೂಡ್ರಿ |
| ಕಿತ್ತುಕೊಳ್ಳುವುದು | ಕಸಗೊಳ್ಳುವುದು |
| ಕುಳಿತುಕೊಳ್ಳುವುದಕ್ಕೆ | ಕೊಡ್ರಲಿಕ್ಕೆ |
| ಕೆಲಸ, ವೃತ್ತಿ, ನೌಕರಿ | ದಗದ |
| ಕೊಂಚ | ತುಸು |
| ಕ್ಲೋಸಿಂಗ್ (ಇಂ) | ಕ್ಲೋಜಿಂಗ |
| ಕ್ಷೇಮ | ಖುಷಾಲ |
| ಕಡಲೇಕಾಯಿ | ಶೇಂಗಾ |
| ಗಂಟೆ | ತಾಸು |
| ಗವರ್ನರ್ | ಗವ್ಹರ್ನರ |
| ಗಾಂಜಾ | ಸಿದ್ಧಪತ್ರಿ |
| ಚಂದಾ | ವರ್ಗಣಿ |
| ಚಿಟ್ಟೆ | ಪಾತರಗಿತ್ತಿ |
| ಚಿಹ್ನೆ | ಚಿನ್ಹೆ |
| ಜರುಗುವುದು | ಜರುಗುವದು |
| ಜನ | ಮಂದಿ |
| ಜೇಬು | ಬಕ್ಕಣ |
| ಟಾಕೀಸ್ (ಇಂ) | ಟಾಕೀಜ |
| ಟೀ | ಚಾ |
| ತನಿಖೆ | ತಪಾಸಣೆ |
| ತೀರ, ತುಂಬ | ಅಗದಿ |
| ತೆಗೆದುಕೊಂಡುಹೋದ | ಒಯ್ದು ಬಿಟ್ಟ |
| ತೆಗೆದುಕೊಂಡಿದೆ | ತಕ್ಕೊಂಡದೆ |
| ತ್ರಿವರ್ಣ | ತ್ರಿರಂಗಿ |
| ತುಂಬ | ಭರ್ತಿ |
| ತೆಗೆದುಕೊಂಡು | ತಕ್ಕೊಂಡು |
| ಹಿಡಿದುಕೊಂಡು | ಹಿಡಕೊಂಡು |
| ದನಗಳಿಗಿಡುವಹೊಟ್ಟು | ಮುದುವು |
| ದನಗಳ ಮೊದಲ ಗಂಡುಕರು | ಮಣಕ |
| ದಂಟಿನಮೇಲಿನ ಸಿಪ್ಪೆ | ರವದಿ |
| ದನಿ < ಧ್ವನಿ | ಸಪ್ಪಳ |
| ದಿನವಹಿ (ಪ್ರತಿನಿತ್ಯ) | ದಿನಾಲು |
| ದಾಟು | ತಡಾದುನಡಿ |

| ಮೈಸೂರು | ಧಾರವಾಡ | ಮೈಸೂರು | ಧಾರವಾಡ |
|---|---|---|---|
| ಒಟ್ಟಿನಲ್ಲಿ | ಒಟ್ಟಾರೆ | ದುಡ್ಡು | ರೊಕ್ಕ |
| ಒಪ್ಪಿಗೆ | ಕಬೂಲಿ | ನಡು (ಸೊಂಟ) | ಟೊಂಕ |
| ಓಪನಿಂಗ್ (ಇಂ) | ಓಪನಿಂಗ | ನೂರುಜನ | ಶಂಬರ್‌ಮಂದಿ |
| ಓದುವುದಕ್ಕೆ | ಓದಲಿಕ್ಕೆ | ನೆರೆಹೊರೆ | ಆಜೂಬಾಜು |
| ಓಲೆಗರಿ | ತಾಡವೋಲೆ | ನಿಜ | ಖರೆ |
| ಕಚ್ಚು | ಕಚ್ಚು | ಪಕ್ಕಕ್ಕೆ ಸರಿ | ಹೋಳಾಗು |
| ಕೊಲ್ಲಾಪುರ | ಕೊಲ್ಹಾಪುರ | | |
| ಪಟ್ಟಿ | ಯಾದಿ | ವ್ರತ | ವೃತ |
| ಪಟ್ಟಣ | ಶಹರ್ | ಸೆಗಣಿ | ಹೆಂಡಿ |
| ಪಟ್ಟಣದಲ್ಲಿ | ಶಹರದಾಗ | (ಶಾಲೆಗೆ) ಸೇರಿಸಿದ್ದೇವೆ | ಹಚ್ಚೇವಿ |
| ಪಡೆದುಕೊಂಡು | ಪಡಕೊಂಡು | | |
| ಪ್ರೀತಿಯಿರಲಿ | ಲೋಭವಿರಲಿ | ಹರಾಜು | ಲಿಲಾವು |
| ಪೋರ್ಚುಗೀಸ್ | ಪೋರ್ತುಗೀಜ | ಹಸು | ಆಕಳು |
| ಪ್ರೈವೇಟ್ | ಪ್ರೈವ್ಹೇಟ | ರಜ | ಸೂಟಿ |
| ಬರದು | ಬಾರದು | ಹ್ರಸ್ವ | ಹೃಸ್ವ |
| ಬರೆಯುವವನು | ಬರೆಯುವವ | (ಮಗು) ಹೆರುವುದು | ಹಡೆಯೋದು |
| ಬರೆಯುವುದು | ಬರೆಯುವದು | | |
| ಬಹಳ ಜನ | ರಗಡ್‌ಮಂದಿ | ಹೋಗೋಣ | ಹೋಗುವಾ |
| ಬೇಗನೆ (ಗಕ್ಕನೆ) | ಲಗೂನೆ | ರೊಟ್ಟಿ | ಬಕರಿ > ಬಕ್ರಿ |
| ಬ್ಯಾಂಕಿನ | ಬ್ಯಾಂಕದ | ಹೊರಳೋಣ | ಹೊರಳುವಾ |
| ಬನ್ನಿ | ಬರ್ರಿಲಾ | ಸಣ್ಣ ಕಲ್ಲು | ಹರಳು |
| (ಭೂಮಿ) ಬೀಳು ಬಿದ್ದಿರು | ಪಡಬಿದ್ದಿರು | ಮಾಹಿತಿ ~ ಸಮಾಚಾರ | ಹಕೀಕತ |
| ಬುದ್ಧಿ (ಜಾಣ್ಮೆ) | ಶಾಣೆ | ಸಾಧ್ಯವಿಲ್ಲ | ಶಕ್ಯವಿಲ್ಲ |
| ಬೆಳಿಗ್ಗೆ | ಮುಂಜಾನೆ | ಸಾಬೂನು | ಸಬಕಾರ |
| ಬುದ್ಧಿವಂತ | ಶಾಣೆ ~ ಬೆರಕಿ | ಸಾಲ | ಉದರಿ |
| ಬೊಂಬಾಯಿ | ಮುಂಬಯಿ | ಸ್ನಾನ | ಜಳಕ |
| ಬೆಪ್ಪ (ಬೆಪ್ಪತಕ್ಕಡಿ) | ಮಳ್ಳಹುಡುಗ | ಸಂಬಳ | ಪಗಾರ |
| ಮೈಸೂರು | ಮೈಸೂರ | ಸಂಕ್ಷಿಪ್ತವಾಗಿ | ಕಿಂಬಹುನಾ |
| ಮಲಗು | ಅಡ್ಡಾಗು | ಸ್ವಲ್ಪ | ಸ್ವಲ್ಪು |
| ಮಾಡೆಲ್ (ಇಂ) | ಮೋಡೆಲ್ | ಹೆಣ್ಣು ಪಾತ್ರ | ಹೆಣಸೋಗು |
| ಮಾಡುವುದಕ್ಕೆ | ಮಾಡಲಿಕ್ಕೆ | ಸಾಧ್ಯ | ಶಕ್ಯ |
| ರಿಲೀಸ್ (ಇಂ) | ರಿಲೀಜ | ಸಾಲಾಗಿ ನಿಲ್ಲಿ | ಪಾಳಿ ಹಚ್ಚಿ |
| ಮಾಡಲೇಬೇಕು | ಮಾಡಲಿಕ್ಕೇ ಬೇಕು | ಸೊಲ್ಲಾಪುರ | ಸೊಲ್ಹಾಪುರ |

| ಮೈಸೂರು | ಧಾರವಾಡ |
|---|---|
| ಮೊದಲು (ಶುರು) ಮಾಡಿದ್ದಾನೆ | ಹತ್ತ್ಯಾನೆ |
| ಲೇಸಿದೆ (ಲೇಸು) | ಪಾಡದ (ಪಾಡು) |
| ಕೊಡಿ | ಕೊಡ್ರಿ |
| ನೋಡಿ | ನೋಡ್ರಿ |
| ಬೇಡಿ | ಬೇಡ್ರಿ |
| ಹೌದು | ಹೌದ್ರಿ / ಹೂನ್ರಿ |
| ಶಿಷ್ಟರೂಪ | ಗ್ರಾಮ್ಯ |
| ಅಂದು | ಅವತ್ತು |
| ಆಗ | ಆವಾಗ—ಅವಾಗ |
| ಎಂದು | ಯಾವತ್ತು / ಯಾವಾಗ |
| ಕುಳಿತು | ಕುಂತು |
| ನಿಂದು | ನಿಂತು |
| ಬಂದಿತು | ಬಂತು |

ಹೋಯಿತು > ಹೋಯ್ತು > ಹೋತು > ಓತು

| | |
|---|---|
| ಹತ್ತಿರ | ಅತ್ತಿರ > ಅತ್ರ |
| ಹೇಗೆ > ಹೆಂಗೆ | ಎಂಗೆ |
| ಹೀಗೆ (ಹೀಗಾಯಿತು) | ಇಂಗೆ (ಇಂಗಾಯ್ತು) |
| ಹೊಲ | ಒಲ |
| ಹೊಟ್ಟು (ಮರದ ಹೊಟ್ಟು) | ಒಟ್ಟು (ಮರದೊಟ್ಟು) |
| ಹೆಸರು | ಎಸರು (ಎಸ್ರು) |
| ಹುಳ | ಉಳ |
| ಹಸಿವು | ಅಸಿವು (ಅಸ್ವು) |
| ಹುಡುಗಿ | ಉಡುಗಿ > ಉಡ್ಗಿ |
| ಹುಚ್ಚ(ಪ್ಪ) | ಉಚ್ಚ (ಪ್ಪ) |
| ಹಾಸನ | ಆಸನ > ಆಸ್ನ |
| ಹುಡುಗಾಟ | ಉಡುಗಾಟ > ಉಡ್ಗಾಟ |
| ಹಾಲು | ಆಲು |

| ಮೈಸೂರು | ಧಾರವಾಡ |
|---|---|
| ಲೋಟ | ವಾಟ |
| ಹೆಂಡದಂಗಡಿ | ಪಡಖಾಣೆ |
| ಹೈಸ್ಕೂಲು | ಹಾಯ್‌ಸ್ಕೂಲು |
| ಹೊರತಂದು | ಬಯಲಿಗೆಳೆದು |
| ಇಲ್ಲ | ಇಲ್ರಿ |
| | ಗ್ರಾಮ್ಯ |
| ಹೆಚ್ಚು | ಎಚ್ಚು |
| ಹಲ್ಲಿ | ಅಲ್ಲಿ |
| ಹುಳಿ | ಉಳಿ |
| ಹುಡುಗ | ಉಡುಗ > ಉಡ್ಗ |
| ಹಂಪಸಂದ್ರ | ಅಂಪಸಂದ್ರ > ಅಂಪ್ಸಂದ್ರ |
| (ನನ್ನ) ಹಾಗೆ > ಆಗೆ – | (ನನ್ನಂಗೆ) ಆಂಗ |
| ನಿನ್ನ | ನಿನ್ನಂಗೆ |
| ಹೋಗುತ್ತೇನೆ | ಓಗ್ತೀನಿ |
| ಬಹಳ | ಬಾಳಾ |
| ನರಸಿಹ್ಮ | ನರಸುಮ್ಮ |

ಹ- > ಅ- ; -ಹ- > -ಅ-

ಬಹುಜನರ ಬಾಯಲ್ಲಿ, ವಿಶೇಷವಾಗಿ ಹಳ್ಳಿಯವರಲ್ಲಿ 'ಹ' ಸರಿಯಾಗಿ ಉಚ್ಚಾರವಾಗುವುದಿಲ್ಲ. ಹಕಾರದ ಮೇಲಿನ ಸ್ವರ ನಿಂತು, ಹ ಕಾರ ಬಿದ್ದುಹೋಗುತ್ತದೆ. ಹಳ್ಳಿಯಿಂದ ಬಂದವರಲ್ಲಿ, ಅವರು ಎಷ್ಟೇ ವಿದ್ಯಾವಂತರಾದರೂ, ಈ 'ಹ' ಕಾರವನ್ನು ತಪ್ಪಾಗಿ ಉಚ್ಚರಿಸುವ ಅಭ್ಯಾಸ ಹೋಗಿರುವುದಿಲ್ಲ. ಈ ಧ್ವನಿವ್ಯತ್ಯಾಸ ಕ್ರಮದಲ್ಲಿನ ಸ್ವಾರಸ್ಯವೆಂದರೆ ಪದದ ಆದಿಯಲ್ಲಿ ಹಕಾರವಿದ್ದಾಗ ಅದರ ಮೇಲಿನ ಸ್ವರ ಉಚ್ಚಾರಗೊಂಡು ಆ ವ್ಯಂಜನ ಶೂನ್ಯವಾಗಿ ಪರಿಣಮಿಸುತ್ತದೆಯೇ ಹೊರತು, ಪದಮಧ್ಯದಲ್ಲಿ 'ಹ' ಇದ್ದಾಗ ಸಾಮಾನ್ಯವಾಗಿ ಅದು ಉಚ್ಚಾರವಾಗುತ್ತದೆ. ದ್ರಾವಿಡ

ಭಾಷೆಗಳಲ್ಲಿ ಕನ್ನಡ ಭಾಷೆಯ ಒಂದು ವಿಶಿಷ್ಟ ಪದ್ಧತಿ ಪ>ಹ ಆದದ್ದು. ಈ ವ್ಯತ್ಯಾಸವೇ ಹ>ಅ ಆಗಿ ಉಚ್ಚಾರವಾಗಲು ಕಾರಣ. ಇದನ್ನು Social marker ಎನ್ನಬಹುದು. ಹಕಾರ ಸ್ಥಾನದಲ್ಲಿ ಪಕಾರವಿದ್ದಲ್ಲಿ ಅದು ಸರಿಯಾಗಿ ಉಚ್ಚಾರವಾಗುತ್ತದೆ.

| | ಗ್ರಾಮ್ಯ |
|---|---|
| ಒರಡಿ | ವಾರಡಿ |
| ಒರಗೆ | ವಾರಗೆ |
| ಒಲ್ (ಪೋಲ್) | ವೋಲ್ |
| ಒರೆ | ವಾರೆ |
| ಒಟ | ವಾಟ |
| ಒಲೆ | ವಾಲೆ>(ವಾಲಿ ಉ.ಕ.) |
| ಒರಣ | ವಾರಣ |
| ಒಲಗ | ವಾಲಗ>ವಾಲ್ಗ |
| ಒಕರಿಕೆ | ವಾಕರಿಕೆ |
| ಒಕಳಿ | ವೋಕ್ಳಿ |
| ಒಸರ | ವಾಸರ |
| ಕೋಟಿ | ಕ್ವಾಟಿ |
| ಗೋಡೆ | ಗ್ವಾಡೆ |
| ಕೋಟ | ಕ್ವಾಟ |
| ಒರಗಿತ್ತಿ | ವಾರಗಿತ್ತಿ |

ಒ– > ವಾ–;–ಒ– > –ವ–

| | |
|---|---|
| ಪೇಟೆ | ಪ್ಯಾಟೆ |
| ಬೇಟೆ | ಬ್ಯಾಟೆ |
| ಬೇಡ | ಬ್ಯಾಡ |
| ಮೇಲೆ(ಗೆ) | ಮ್ಯಾಕೆ(ಗೆ) |
| ಮೇಳ | ಮ್ಯಾಳ |
| ಎಲ್ಲವ್ವ | ಯೆಲ್ಲವ್ವ |

–ಎ– > –ಯ–

| | |
|---|---|
| ಆ ಕಡೆಯಿಂದ | ಆಂಗಾಸಿ |
| ಈ ಕಡೆಯಿಂದ | ಇಂಗಾಸಿ |
| ಕೆಳಗಡೆಯಿಂದ | ಕೆಳಗಾಸಿ |
| ಮೇಲುಗಡೆಯಿಂದ | ಮೇಗಾಸಿ |
| ಯಾವ ಕಡೆಯಿಂದ | ಎಂಗಾಸಿ |

| | ಗ್ರಾಮ್ಯ–(ಗೌರಿಬಿದನೂರು) ರೂಪ |
|---|---|
| ವೇದಲವೇಣಿ | ಏದಲ್ವೇಣಿ |
| ವಿಂಗಡಿಸು | ಇಂಗಡಿಸು |
| ವಿಷಯ | ಇಸ್ಯ(ಷ್ಯ) |
| ವಿಚಾರ | ಇಚಾ(ಸಾ)ರ |
| ವಿಚಾರಿಸಬೇಕು | ಇಚಾರಿಸ್ಬೇಕು |
| ವಿಶೇಷ | ಇಸೇಸ |
| ವಿಷ | ಇಸ |
| ವಿಷಕಂಠಪ್ಪ | ಇಸ್ಕಂಟಪ್ಪ |
| ವಿಮಾನ | ಇಮಾನ |
| ವೆಂಕಟಶಾಮಿ | ಎಂಕಟ್ಸಾಮಿ |
| ವಿಪರೀತ | ಇಪರೀತ>ಇಪ್ರೀತ |
| ವೀರಣ್ಣ | ಈರಣ್ಣ |
| ವಿದುರಾಶ್ವತ್ಥ | ಇದಿರಾಸ್ವತ್ತ |
| ವೆಂಕಟಪ್ಪ | ಎಂಕ್ಟಪ್ಪ |
| ವೆಂಕಟೇಶಾ | ಎಂಕಟೇಶಾ |
| ವೇಣೂರು | ಏಣೂರು |
| ವ್ಯವಸಾಯ | ಎವ್‌ಸಾಯ |
| ಯುಗಾದಿ | ಉಗಾದಿ |
| ವ್ಯತ್ಯಾಸ | ಎತ್ವಾಸ |

ಪದದ ಆದಿಯ ವ್ಯಂಜನವನ್ನು ಬಿಟ್ಟು ಅದರ ಮೇಲಿನ ಸ್ವರ ಮಾತ್ರ ಉಳಿಯುತ್ತದೆ. ಬಹುಶಃ ಸಂಸ್ಕೃತದ ಶ್ರೇಣಿ> ಏಣಿ ಎಂದು ಆದದ್ದು ಈ ಕಾರಣದಿಂದಲೇ ಇರಬೇಕು. ಮೇಲಿನ ಉದಾಹರಣೆಗಳಲ್ಲಿ ಬಹುಮಟ್ಟಿಗೆ 'ವ'ಕಾರದಿಂದ ಆರಂಭವಾದ ಪದಗಳೇ ಇದ್ದು ವಕಾರದ ಮೇಲಿನ ಸ್ವರ ಮಾತ್ರ ನಿಲ್ಲುವುದು ಸ್ವಾರಸ್ಯವಾಗಿದೆ.

ವಸ— > ಸ—

ಅಲ್ಲದೆ ಈ ವಕಾರ ಬರುವ ಪದಗಳು ಇನ್ನೂ ಬೇರೆ ಬಗೆಯ ವ್ಯತ್ಯಾಸವನ್ನೂ

ಹೊಂದುವಂತೆ ಕಾಣುತ್ತದೆ. ಈ ಕೆಳಗಿನ ನಿದರ್ಶನ ನೋಡಿ :

ವ್ಯಾಪಾರ > ಯಾಪಾರ
ವ್ಯತ್ಯಾಸ > ಯೆತ್ವಾಸ

ಗ್ರಾಮ್ಯ-ಗೌರೀಬಿದನೂರು

ಸೂಬರ < ಸಂ. ಶುಭ್ರ

| | |
|---|---|
| ಗ್ರಹಚಾರ | ಗಾಸಾರ |
| ವಿಚಾರ | ಇಸಾರ |
| ಮುಚ್ಚೋರೆ | ಮುಸೋರೆ |
| ಚಿಕ್ಕಣ್ಣ(ಪ್ಪ) | ಸಿಕ್ಕಣ್ಣ(ಪ್ಪ) |
| ಚೆನ್ನ(ಪ್ಪ) | ಸೆನ್ನ(ಪ್ಪ) |
| ಚಾಪೆ | ಸಾಪೆ |
| ಚೆಂಡು | ಸೆಂಡು |
| ಚರಂಡಿ | ಸರಂಡಿ |

ಚೆನ್ನಾಗಿದೆ > ಚೆಂದಾಗಿದೆ > ಸಂದಾಗಿ(ಗ)ದೆ
ಚಾವಡಿ > ಸಾವಡಿ > ಸಾವ್ಡಿ
ಚಳಿ > ಸಳಿ > ಸೊಳಿ

ಪದದ ಪ್ರಾರಂಭದ ಚಕಾರ ವಿಶೇಷವಾಗಿ ಸಕಾರವಾಗಿ ಮಾರ್ಪಾಟು ಪಡೆದು ಉಚ್ಚಾರವಾಗುತ್ತದೆ. ಬಹುಮಟ್ಟಿಗೆ ಈ ವ್ಯತ್ಯಾಸಕ್ಕೆ ಕಾರಣವೆಂದರೆ ಚಕಾರ ಸಕಾರಗಳು ಧ್ವನಿಯ ಜನನ ಸ್ಥಾನದ ದೃಷ್ಟಿಯಿಂದ ಅತ್ಯಂತ ಸಮೀಪ ಸ್ಥಾನೀಯ ವ್ಯಂಜನಗಳಾಗಿರುವುದು.

| | |
|---|---|
| ಬರಲಿ | ಬರ [ದೊಡ್ಡಾಪತ್ತು ಬರ] |
| ಅಡಗಲಿ | ಅಡಗ [ಸೊಲ್ಲು ಅಡ]ಗ |

ಗ್ರಾಮ್ಯ-ಗೌರೀಬಿದನೂರು

| | |
|---|---|
| ಅಗಲಿ | ಅಗ [ಅಗಬಾರದ್ದು ಅಗ] |
| ಹೋಗಲಿ | ಹೋಗ [ನೆಗೆದು ಬಿದ್ದುಹೋಗ] |

ನಿಂದೆಯ ನುಡಿಗಳನ್ನು ಆಡುವಾಗ ಪದದ ಕೊನೆಯ ವರ್ಣ ಬಿದ್ದುಹೋಗಿರುವುದು ಕಾಣುತ್ತದೆ.

{— ಅಲಿ} > {— ಅ}

| ಮೈಸೂರು | ಕೋಲಾರ |
|---|---|
| ಅಂಕುಡೊಂಕು | ಒಡಸು |
| ಅನಂತರ | ಆಮೇಗಿಂದ |
| ಅನ್ನುವುದಕ್ಕೆ | ಅನ್ನಕ್ಕೆ |
| ಅಹಂಕಾರ | ಪೆಗ್ಗ |
| ಆತುರ | ದಾವಂತ |
| ಆರ್ಭಟ | ಆವುಟ, ಆವ್ಟ |
| ಬಾಯಿಯ - ,, - | ಬಾಯಾವ್ಟ |
| ಆನೆ | ತ್ಯಾಬಲಿ > ತ್ಯಾಬ್ಲಿ. |
| ಇಡು | ಇಕ್ಕು ಮಡುಗು. |
| ಇದೆ | ಐತೆ |
| ಇದ್ದಕ್ಕಿದ್ದಂತೆ | ಧಡಾರನೆ |
| ಇದ್ದುದ್ದೂ | ಇರ್ರ್ವಾರ |
| ಇರುವೆ | ಚೀಮೆ |
| _ಕೆಂಪು ಇರುವೆ- | ಕೆಂಜೀಮೆ |
| ಎಟಕಲ್ಲ | ಅಂದೋಲ್ಲ ಅಂದಲ್ಲ[1] |
| ಎಟುಕಿಸಿಕೊ | ಅಂದಿಸಿಕೊ |
| ಎಚ್ಚರತಪ್ಪು | ಯಾನಾರು[2] |

[1] ಹೋಲಿಸಿ : ತೆ. ಅಂದಿಂಚಿಕೊ

[2] ನೋಡಿ ಪಂಪಭಾರತ, ವೇಮಾಜ್ಞಿ ೩-೩೨

| ಮೈಸೂರು | ಕೋಲಾರ | ಮೈಸೂರು | ಕೋಲಾರ |
|---|---|---|---|
| ಎರಡುಸಲ | ಎರ್ಡ್‌ಕಿತ್ತ | ಚಪ್ಪಡಿ | ಬಂಡೆ ಚಪ್ಪಡಿಕಲ್ಲು |
| ಏಡಿಕಾಯಿ | ಯೆ(ಎ)ಂಡರಕಾಯಿ | ಚಪ್ಪಲಿ | ಮೆಟ್ಟು |
| ಎದ್ವಾತದ್ವಾ | ಎಡವಟ್ಟು | ಚಿಕ್ಕಪ್ಪ | ಅಪಪ್ಪ |
| ಬೆಳಿಗ್ಗೆಯಿಂದ | ಒತ್‌ಬೀಳ್ಳು | ಚಿಕ್ಕಕಾಯಿ | ಪಿಟುಗುಕಾಯಿ |
| ಸಾಯಂಕಾಲದ | (> ಹೊತ್ತು | ಚಿಕ್ಕಮ್ಮ | ಚಿಕ್ಕಿ ಪಿನ್ನಮ್ಮ |
| ವರೆಗೆ | ಬೀಳಲು) | ಜಂಬ | ಪೆಗ್ಗ |
| ಒಣಗು | ಇಮುರು | ಜಾಗ | ತಾವು |
| ಒದ್ದೆ | ತ್ಯಾವ (> ತೆ. ತ್ಯಾಮ) | ಜೇಡು, ಜಿಗುಟು | |
| | ಪಸಿಮೆ | (ಭೂಮಿ) | ರ್‍ಯಾಗಡೆ |
| ಒಂದು ಅಳುದ್ದ | ಒಂದು ಮಟ್ಟು | ಜೋರಾಗಿ (ಬೇಗನೆ) | ರಪ್ಪನೆ (ಗಕ್ಕನೆ) |
| ಒರತೆ | ಸರವು | ಚಿವುಟು ↘ ಜಿಗುಟು | ಗಿಲ್ಲು |
| | | ತಕರಾರು | ತೇಡ |
| ಕರೆದುಕೊಂಡು | ಕರ್ಕೊಂಡು | ತಗಡು | ರೇಕು (ಡಬ್ಬಾರೇಕು) |
| (ನೀರು) ಕಟ್ಟು | (ನೀರು) ಯಾರಾಕು | ತಂಬಿಗೆ | ಚೆಂಬು |
| | | ತೊಟ್ಟಿಡು | ಜಿನುಗು |
| ಕಪ್ಪ | ಎಕ್ಕಾಸ | ತೊರೆಯದಡ | ತೊರೆಗಡ್ಡೆ |
| ಕಾಯಿ | ಪಿಂದಿ | ತೊಲೆ | ದೂಲ |
| ಹುಣಿಸೆಕಾಯಿ | ಉ(< ಹು)ಣಿಸೆಪಿಂದಿ | ನಷ್ಟ | ಲುಕ್ಸಾನು |
| | | ನೂಕು | ದಬ್ಬು |
| ಕಿರುಚು | ಕಿರ್ಲು | ನೀರು ನಿಂತ ಹಳ್ಳ | ಒಡ್ಡು |
| ಕುಳಿತುಕೊ | ಕೂಕೊ | (ಗುಂಡಿ) | |
| | | ನೊರೆ | ಬುರುಗು |
| ಕೆತ್ತು | ಚಿಕ್ಕು (< ತೆ) | ನಮ್ಮ ಕಡೆಯವರು | ನಮ್ಮ ಪೈಕಿ (> |
| ಕೆಡುವು | ಉದುರ್ಸು | | ನಂಪೈಕಿ) |
| ಕುರುಡ | ಗುಡ್ಡೋನು | ಪಟ್ಟು, ಹಠ | ಮುರಾಡ |
| ಕೆಮ್ಮು | ಕೆಮ್ಲು | ಪುನಃ | ತಿರುಗ > ತಿರ್ಗ |
| ಕೆಲಸ | ಕಾಪರ | ಪಕ್ಕಕ್ಕೆ ಎಳಿ | ವಾರಿಗೆಳಿ |
| ಕೆಸರು | ಬುರ್ಜೆ | ಪುರಿ | ಬುರುಗು |
| (ಎತ್ತಿನ) ಗಾಡಿ | ಬಂಡಿ | ಬತ್ತು | ಇಮುರು |
| ಗಿಟ್ಟಿಸಿಕೊ | ಗಿಲುಬ್ಕೊ | (ಬೀಜ) | (ಪಿತ್ತ) |
| ಗುಡಿಸಲು | ಜೋಪಡಿ | ಬುರುಡೆ | ಬುರೆ |
| (ಕಸ) ಗುಡಿಸು | (ಕಸ) ಉಡುಗು | ತಲೆ | ತಲೆಬುರೆ |
| ಗೊಂಚಲು | ಜೊಂಪೆ ↘ ಝೊಂಪೆ | (ಈಜು) ಬುರುಡೆ | (ಈಜು)ಬುರೆ |
| ಗೋಡಿ | ಯಾಸೆ | ಬೀಳು | ಕೂಲು |

| ಮೈಸೂರು | ಕೋಲಾರ |
|---|---|
| ಬೇಲಿ | ಕಂಪೆ |
| ಬುಗುರಿ | ಬಂಗರ |
| ಬೇಕಾದಷ್ಟು | ಪಂಡಿ ~ ವೋಸ್ತು |
| ಮಡಕೆ ಚೂರು | ಬೋಕಿ ಬಿಲ್ಲೆ |
| ಮರಳು | ಇಸುಗು (< ತೆ. ಇಸುಕು) |
| ಮರಹತ್ತು | ಮರ ಎಕ್ಕು |
| ಮೂಳೆ | ಎಮುಕೆ |
| ಮೊಲ | ಕುಂಡಲಿ |
| ಮೋಸಹೋದೆ | ಪರಪಾಟು ಬಿದ್ದೆ |
| ಯಂತ್ರಮಂತ್ರ | ಚೀಟು ಹಾಕುವುದು |
| (ಮಂತ್ರಿಸಿ) ಪೂಜೆ ಹಾಕುವುದು | |
| ರುಬ್ಬೋಕಲ್ಲು | ರುಬ್ಬೋಗುಂಡು |
| ಮಧ್ಯಾಹ್ನ | ಊಟಪೊ(ಹೊ)ತ್ತು |
| ವೃಥಾ | ಆಕಲಾಯವಾಗಿ |
| ಸಲ (ಬಾರಿ) | ಕಿತ್ತ ~ ದಪ |
| –ನಾಕುಸಲ | ನಾಕ್‌ಕಿತ್ತ |
| –ಒಂದುಸಲ | ಒಂದ್‌ದಪ |
| ಈ ಪ್ರಾಂತ್ಯ (ಭಾಗ) | ಈ ನೆಟ್ಟು |
| ಸೇರುವುದಿಲ್ಲ | ಸೇರಲ್ಲ ~ ಸ್ಯಾರಲ್ಲ |
| ಸ್ಕೇಲು (ಇಂ) | ಇಂಚುಪಟ್ಟೆ |
| ಹತ್ತ್ರೋಣ | ಎಕ್ಕಾನ |
| –ಹತ್ತು | ಎಕ್ಕು |
| ಹತ್ತುತ್ತೀನಿ | ಎಕ್ತೀನಿ |
| ಹುಚ್ಚು | ಎರಿ ~ ಯೆರಿ |
| ಹುರಿಗಡಲೆ | ಕಡ್ಲೆ ಪಪ್ಪು |
| ಹೊಡಿ | ಇಕ್ಕು |
| ಹೆದರಿಕೆ | ದಿಗಿಲು |
| (ತುಂಬ) ಹೊಡೆದುಕೊಂಡು | ಗುಬರಾಕ್ಕೊಂಡು |
| (ಮಳೆ) ಹನಿ | ಚಿ(>ಸಿ) ನುಕು |
| (ಬೆಲೆ) ಹೆಚ್ಚು | ಪಿರೇವು |

ಇವಲ್ಲದೆ ಪ್ರೀತಿ—ಗೌರವಗಳಿಂದ ಹುಡುಗರನ್ನು ಅಪ್ಪಯ್ಯ-ಚಿಕ್ಕಪ್ಪಯ್ಯ, ದೊಡ್ಡಪ್ಪಯ್ಯ ಎಂದೂ, ಹುಡುಗಿಯರನ್ನು ಅಮ್ಮಯ್ಯ—ಚಿಕ್ಕಮ್ಮಯ್ಯ, ದೊಡ್ಡಮ್ಮಯ್ಯ ಎಂದೂ ಕರೆಯುವರು. ಹೆಸರುಗಳಿಗೆ ಸಾಮಾನ್ಯವಾಗಿ ತೆಲುಗು 'ಡು' ಪ್ರತ್ಯಯದಂತೆ 'ನು' ಪ್ರತ್ಯಯ ಸೇರಿಸುವರು—ಜೂಲೋನು, ಕಡಿಸಿಲ್ಗಾನು, ಲಚ್ಮಗಾನು, ಉಗ್ರೋನು ನರಸಿಹ್ಮಗಾನು . . . ಇ

| ಮೈಸೂರು | ಮಂಡ್ಯ |
|---|---|
| ಅಮ್ಮ | ಅಮ್ಮಿ (>ಅಮ್ಮಣ್ಣಿ) |
| ಏನಮ್ಮ ಸಂ.ವಿ.(ಏ.ವ) | ಏನಮ್ಮಿ |
| ಎಲ್ಲರಿಗೂ | ಎಲ್ಲಕ |
| ಏನಾದರೂ ಆಗಲಿ | ಏನರ ಆಗ್ಲಿ |
| ಕೆಲಸ (ಕೆಲಸವಿಲ್ಲ) | ಕೇಮೆ (ಕೇಮಿಲ್ಲ) |
| ಏನೋ (ಸಂ.ವಿ. ಏ.ವ.) | ಏನ್ಲಾ |
| ಕರಿಯುತ್ತಾ | ಕರೀತಾ |
| ಕಂಡಿದ್ದೇನೆ | ಕಂಡಿವ್ನಿ |
| ಕೂಗುತ್ತಾ (ಇದ್ದಾರೆ) | ಕೂಗುತಾ > ಕೂಗ್ತಾ (ಬರೀತಾ, ಹೋಗುತಾ) |
| ಕೊಳ್ಳಿ (ಕ್ರಿ. ಪದ) | ಕೊನ್ನಿ |
| ಕುಕ್ಕೆ | ಮಂಕರಿ ~ ಗೂಡೆ |
| (ಹೂ) ಕಣಯ್ಯ | (ಊ) ಕನಯ್ಯ |
| ಕೂಲಿ ಕೊಡುವುದು | ಬಟವಾಡೆ |
| ತನಕ | ಗಂಟ |

| ಮೈಸೂರು | ಮಂಡ್ಯ | ಮೈಸೂರು | ಮಂಡ್ಯ |
|---|---|---|---|
| ದೆವ್ವ | ದೆಯ್ಯ | ಕೊಟ್ಟಿರುತ್ತಿದ್ದ | ಕೊಟ್ಟಿರೋವ ∽ |
| ಅಲ್ಲಿಯತನಕ | ಅಲ್ಲಿಗಂಟ | | ಕೊಡೋವ |
| ಇಲ್ಲಿಯತನಕ | ಇಲ್ಲಿಗಂಟ | ನೋಡುತ್ತಿದ್ದ | ನೋಡೋವ |
| ಆಗುವವರೆಗೆ | ಆಗೋಗಂಟ* | ಬರುತ್ತಿದ್ದ ∽ ಬರ್ತಿದ್ದ | ಬರೋವ |
| ಬರುವವರೆಗೆ | ಬರೋಗಂಟ | ಮಾಡುತ್ತಿದ್ದ | ಮಾಡೋವ |
| ಚಾಪೆ | ಮಂದಲಿಗೆ | ಹೇಳುತ್ತಿದ್ದ | ಹೇಳೋವ |
| ನಿಂತಿದ್ದೇನೆ | ನಿಂತಿವ್ನಿ | ನೋಡಲೇ(ನು) | ನೋಡಲಿ ∽ |
| ನೋಡೋಣ | ನೋಡುವಮಾ | | ನೋಡ್ಲಿ ? |
| ಹೋಗೋಣ | ಹೋಗುಮಾ | ಹೋಗಲೇ(ನು) | ಹೋಗಲಿ ? |
| ತಿಂದುಕೊಳ್ಳಲಿ | ತಿನ್‌ಕನ್ನಿ | ಬರಲೇ(ನು) | ಬರ್ಲಿ ∽ ಬರಲಿ |
| ಬಿಂದಿಗೆ | ಕೊಡ | ಮಾಡಲೇ ? | ಮಾಡ್ಲಿ |
| ಬಡ್ಡಿಮಕ್ಕಳು | ಬಡ್ಡಿಐಕ್ಳು | ಕೂಗಲೇ ? | ಕೂಗ್ಲಿ |
| ಬರುತ್ತೇನೆ | ಬತ್ತೀನಿ | ನೋಡುತ್ತೀಯಾ | ನೊಡುತಿ |
| ಬರುತ್ತೇನೆ ಮಾವಾ | ಬತ್ತೀನಿಕನ್ ಮಾವಾ | ಬರುತ್ತೀಯಾ | ಬರ್ತಿ |
| | | ಮಾಡುತ್ತೀಯಾ | ಮಾಡ್ತಿ |
| ಪೊರಕೆ | ಬರಲು > ಬರ್ಲು | ಕೇಳುತ್ತೀಯಾ | ಕೇಳ್ತೀ |
| ಬಾರೋ | ಬಾರ್ಲಾ | ಹೋಗುತ್ತೀಯಾ | ಹೋಗ್ತೀ |
| ಬಂದಿದ್ದೇನೆ | ಬಂದಿವ್ನಿ | ಬರೆಯುತ್ತೀಯಾ | ಬರಿತೀ |
| ಬರುತ್ತೀಯಾ ? | ಬಂದೀಯಾ ? | | |
| ಮಾಡಿದ್ದೇನೆ | ಮಾಡಿವ್ನಿ | | |
| ಯಾಕೋ ? | ಯಾಕ್ಲಾ | | |
| ಬಾರು (= ಅಳತೆ) | ಮಾರು | | |
| ಸ್ವಲ್ಪ (ವಾದರೂ) | ಒಸಿ (ನಾರಾ) | | |
| ಸಾಲ | ಕಡ (*ನಯಸೇನ) | | |
| ಹೂನೋ | ಹೂನ್ಲಾ | | |
| ಹೋಗುತ್ತಿದ್ದೇನೆ | ಹೋಗ್ತಿವ್ನಿ | | |
| ಮುಖ | ಮುಸುಣಿ (< ಮುಸಡಿ) | | |
| ಕೇಳುತ್ತಿದ್ದ | ಕೇಳೋವ | | |

| ಮೈಸೂರುಕಡೆಯ ಜಾನಪದ ಗೀತೆಗಳಲ್ಲಿ ಬರುವ ಪದಗಳು | ಧಾರವಾಡದ ಕಡೆಯ ಪದಗಳು |
|---|---|
| ಎತ್ತೋಳ್ (ಳು)[1] | ಅನುಗಾಲ |
| ಏರೋಕೆ | ಆಗಾಗ |
| ಕೂತವನೆ | ಇಚ್ಛಾಂಗ |
| ನಿಂತವನೆ | ಓಚ್ಯಾಗ |
| ಸುಡಿಸೋನು | ಚೆನ್ನಿ |
| ಬರ(ರು)ತಾನೆ | ತೊಚ್ಛಾಂಗ |
| ಬರದವ್ರೆ | ನಾತಾವ |

---

* ಈ –ಗಂಟ ಎಂಬ ಪದ –ಗೆಂಟು (=ದೂರ) ಪದದಿಂದ ನಿಷ್ಪನ್ನವಾದುದಿರಬೇಕು. ಎಲ್ಲಿಗಂಟ, ಎಲ್ಲಿಗುಂಟ ಎಂಬ ರೂಪಗಳೂ ಇವೆ.

[1] ಇವು ಸಮಾನಾರ್ಥಕ ಪದಗಳಲ್ಲ.

| ಮೈಸೂರುಕಡೆಯ ಜಾನಪದ ಗೀತೆಗಳಲ್ಲಿ ಬರುವ ಪದಗಳು | ಧಾರವಾಡದ ಕಡೆಯ ಪದಗಳು |
|---|---|
| ಬರ್ತವನೆ | ಬಸ್ತ್ಯಾನ |
| ಬಿತ್ತೀನಿ | ಬಂದ್ಹಾಗ |
| ಬಿಸುತಾರೆ | ಬ್ಯಾಡ |
| ಹಾಕ್ಕೊಂಡು | ಬೆಡ್ಡ್ಯಾಗ |
| ಹೊಡೆಯಾಕೆ | ಘೋರಾಡತಾವ |
| ಹೋಗ್ಯವನೆ | ಮಾಡಾಗ |
| ಹೋಗಾದು | ಮಾಡ್ಯಾನ |
| ಹೋಯ್ತಿನಿ | ಹೇಳ್ಯಾನ |
| | ಹೊಗ್ಯಾರ |
| . . . ಇತ್ಯಾದಿ | . . . ಇತ್ಯಾದಿ |

ಗ್ರಾಮ್ಯ

ತಿನ್ನುತ್ತೇನೆ > ತಿಂತೇನೆ > ತಿನ್ನತ್ತೀತಿ > ತಿಂತೀನಿ

ನೋಡುತ್ತೇನೆ > ನೋಡ್ತೇನೆ > ನೋದ್ತೀನಿ

ಬರುತ್ತೇನೆ > ಬರ್ತೇನೆ > ಬರ್ತೀನಿ > ಬತ್ತೀನಿ

ಮಾಡುತ್ತೇನೆ > ಮಾಸ್ತೇನೆ > ಮಾಡ್ತೀನಿ

ಹೋಗುತ್ತೇನೆ > ಹೋಗ್ತೇನೆ > ಹೋಗ್ತೀನಿ > ಹೋತೀನಿ

–ಉತ್ತೇನೆ > ತೇನೆ > ತೀನಿ [–ಎ < –ಇ]

| | |
|---|---|
| ಅಕ್ಕ | ಅಕ್ಕಾಜಿ |
| ಅಣ್ಣ | ಅಣ್ಣಾಜಿ |

ಗ್ರಾಮ್ಯ

ಅಡಕೆ ಕತ್ತರಿ > ಅಡಕತ್ತರಿ

ಅಡಕೆ ಕತ್ತಿ > ಅಡಕತ್ತಿ

| | ಗ್ರಾಮ್ಯ |
|---|---|
| ಅಪ್ಪ | ಅಪ್ಪಾಜಿ |
| ಭಾವ | ಭಾವಾಜಿ |
| ಗುರು | ಗುರೂಜಿ |
| ಅನಂತರ | ಆಮೇಗಿಂಟ |
| (ಎನ್ನುವ >) ಅನ್ನುವ | ಅನ್ನೊ |
| (ಎಂಬುವ >) ಅಂಬುವ | ಅಂಬೊ |
| ಅಷ್ಟೇ ಏನು | ಅಟೇನಾ |
| ಇರಲಿಲ್ಲ | ಇತ್ತಿಲ್ಲ |
| ಇಷ್ಟೇ ಏನು | ಈಟೇನಾ |
| ಈ ಕಡೆಯಿಂದ | ಇತ್ಲಿಂದ |
| ಜ್ಞಾಪಕ | ಜ್ಞಾಪ್ಕ > ಗೆಪ್ತಿ |
| ತಕರಾರು | ರಾಂಗು |
| ನನ್ನ ಹತ್ತಿರ | ನಂತಾಕೆ |
| ನಿನ್ನ ಹತ್ತಿರ | ನಿಂತಾಕೆ |
| ನನಗೆ | ನಂಗೆ |
| ನನ್ನಿಂದ | ನನ್‌ಕೈಯಿಂದ |
| ನೆನಪು | ನೆಪ್ಪು |
| ಬಿಡು | ಬುಡು |
| ಬಹಳ (ನೀರು) | ನಿಪ್ಪಟ್ಟೆ (ನೀರು) |
| ಮಗನಿಗೆ | ಮಗ್ಗೆ |
| ಸ್ವತಂತ್ರ | ಸ್ವತಂತ್ರ > ಸೊಸಂತ್ರ |
| (ಹೇಗಾದರೂ ಆಗಲಿ) ನನಗೇತಕ್ಕೆ ? | ಯಾಸಟ್ಟಿಗೆ ಬಿಡು |
| ಹೋಗಿದ್ದಾನೆ | ಹೋ (ಓ)ಗವ್ನೆ |
| ಬಂದಿದ್ದಾನೆ | ಬಂದವ್ನೆ |
| ನೋಡಿದ್ದಾನೆ | ನೋಡವ್ನೆ |
| ಮಾಡಿದ್ದಾನೆ | ಮಾಡವ್ನೆ |

| | ಗ್ರಾಮ್ಯ |
|---|---|
| ಬಂದರೆ | ಬಂದ್ರೆ |
| ಕರೆದರೆ | ಕರದ್ರೆ |

| | ಗ್ರಾಮ್ಯ |
|---|---|
| ಕಂಡಿದ್ದಾನೆ | ಕಂಡವ್ನೆ |
| ಕೇಳಿದ್ದಾನೆ | ಕೇಳವ್ನೆ |
| ನಿಂತಿದ್ದಾನೆ | ನಿಂತವ್ನೆ |

ಇದ್ದಾನೆ > ಅವ್ನೆ
[ – ಆನೆ > – ಅವ್ನೆ ]

| | |
|---|---|
| ಎಲ್ಲಿದೆ | ಎಲ್ಲೈತೆ |
| ಇಲ್ಲಿದೆ | ಇಲ್ಲೈತೆ |
| ಅಲ್ಲಿದೆ | ಅಲ್ಲೈತೆ |
| ಹೋಗಿದೆ | ಹೋಗೈತೆ |
| ಬರುತ್ತದೆ | ಬರ್ತೈತೆ |
| ಬಂದಿದೆ | ಬಂದೈತೆ |
| ನಿಂತಿದೆ | ನಿಂತೈತೆ |
| ಕೂತಿದೆ | ಕೂತೈತೆ |

– ಇದೆ > – ಐತೆ [ಅಯ್‌ತೆ]
– ಅದೆ

| | |
|---|---|
| ಹೋಗುತ್ತೇನೆ | ಹೋ(ಓ)ಗುತೀನಿ > ಹೋಗ್ತೀನಿ |
| ಬರುತ್ತೇನೆ | ಬರ್ತೀನಿ > ಬತ್ತೀನಿ |
| ನೋಡುತ್ತೇನೆ | ನೋಡ್ತೀನಿ |
| ಮಾಡುತ್ತೇನೆ | ಮಾಡ್ತೀನಿ |
| ಕೇಳುತ್ತೇನೆ | ಕೇಳ್ತೀನಿ |
| ಬರೆಯುತ್ತೇನೆ | ಬರೀತೀನಿ |

– ತೇನೆ > – ತೀನಿ

ಇದನ್ನು ಇನ್ನೊಂದು ಬಗೆಯಿಂದಲೂ ವಿವರಿಸಬಹುದು. ಬರುತ್ತೇನೆ > ಬರುತ್ತೀನಿ ಎಂಬ ಎರಡೂ ರೂಪಗಳು ಗ್ರಾಂಥಿಕವಾಗಿದ್ದು ಅದು ಬರ್ತೀನಿ > ಬತ್ತೀನಿ ಎಂಬ ವ್ಯತ್ಯಾಸಗಳನ್ನು ಮಾತ್ರ ಪಡೆಯಿತೆಂದು ಹೇಳಬಹುದು.

| | ಗ್ರಾಮ್ಯ |
|---|---|
| ಬರೆದರೆ | ಬರೆದ್ರೆ(ಬರದ್ರೆ) |
| ಕೂತರೆ | ಕೂತ್ರೆ |
| ನಿಂತರೆ | ನಿಂತ್ರೆ |
| ಹೋದರೆ | ಹೋ(ಓ)ದ್ರೆ |

ಒರಲು > ಒದರು > ಒಳ್ಳು
ವೆರಲ್ > ಬೆರಲ್ > ಬೆರಳು > ಬೆಳ್ಳು/ಬೆಟ್ಟು (ಹೆಬ್ಬೆಟ್ಟು)
ಆಗುವುದಿಲ್ಲ > ಆಗೋಕಿಲ್ಲ > ಆಗೋಲ್ಲ > (ಆಗಲ್ಲ)
ನೋಡುವುದಿಲ್ಲ > ನೋಡೋ(ದಿ)ಕಿಲ್ಲ > ನೋಡೋಲ್ಲ > ನೋಡಲ್ಲ
ಬರುವುದಿಲ್ಲ > ಬರೋಕಿಲ್ಲ > ಬರೋಲ್ಲ > ಬರಲ್ಲ
ಮಾಡುವುದಿಲ್ಲ > ಮಾಡೋಕಿಲ್ಲ > ಮಾಡೋಲ್ಲ > ಮಾಡಲ್ಲ
ಹೋಗುವುದಿಲ್ಲ > ಹೋಗೋಕಿಲ್ಲ > ಹೋಗೋಲ್ಲ > ಹೋಗಲ್ಲ (ಓಗಲ್ಲ)

ದೀರ್ಘ ಪದಗಳನ್ನು ಮೊಟಕುಮಾಡಿ ಉಚ್ಚರಿಸುವುದು ಸ್ವಾಭಾವಿಕ. ಹಾಗೆ ಮಾಡುವಾಗ ಪದಗಳು ಯಾವ ಯಾವ ರೂಪಾಂತರಗಳನ್ನು ಹೇಗೆ ಹೇಗೆ ಪಡೆಯುತ್ತವೆ ಎಂಬುದನ್ನು ಮೇಲಿನ ಎರಡು ಬಗೆಯ ವ್ಯತ್ಯಾಸಗಳ ಉದಾಹರಣೆಗಳಲ್ಲಿ ಗಮನಿಸಬಹುದು.

ಇನ್ನು ಕೆಲವು ಕಡೆ ಕಾಣುವ ಇತರ ವೈಶಿಷ್ಟ್ಯಗಳು :

| | |
|---|---|
| ಅವನೂಕೂಡ | ಅವನೂವ |
| ನಾನೂಸಹ | ನಾನೂವ |
| ನೀನೂಸಹ | ನೀನೂವ |
| ಎಲ್ಲರೂಸಹ | ಎಲ್‌ರೂವ |

ದೈನಂದಿನ ಪತ್ರಿಕೆಗಳಲ್ಲೂ, ವಿಧಾನಸಭೆಯ ಕಾರ್ಯಕಲಾಪಗಳಲ್ಲೂ, ರಾಜಕೀಯ ಮುಖಂಡರ ಮತ್ತು ಜನಪ್ರಿಯ ಸಾಹಿತಿಗಳ ಭಾಷಣಗಳಲ್ಲೂ ನೂರಾರು ತಪ್ಪು ಶಬ್ದಗಳು—ಅಸಾಧು ರೂಪಗಳು ? ನಿತ್ಯವೂ ಪ್ರಯೋಗವಾಗುತ್ತಿರುವುದನ್ನು ನಾವು ಗಮನಿಸಬಹುದು. ಇಂದಿನ ಎಷ್ಟೋ ನವ್ಯಕಾವ್ಯಗಳಲ್ಲೂ, ನವ್ಯಕತೆಗಳಲ್ಲೂ ಕೆಲವು ಅಶುದ್ಧ ಪದಗಳು ಅಲ್ಲಿನ ವಾಕ್ಯರಚನೆಯಲ್ಲಿ ಸೇರಿಹೋಗಿರುವುದನ್ನೂ ಗುರುತಿಸಬಹುದು. ಅನೇಕ ವೇಳೆ ಈ ಪದಗಳು ವ್ಯಾಕರಣ ದೃಷ್ಟಿಯಿಂದ ಸರಿಯಾಗಿ ಇಲ್ಲದಿದ್ದರೂ ತೋರಿಕೆಗೆ ಸರಿಯಾಗೇ ಇರುವಂತೆ ಭಾಸವಾಗುವುದೂ ಉಂಟು, ಭ್ರಾಂತಿ ಮೂಡುವುದುಂಟು. ಇನ್ನೂ ಸ್ವಾರಸ್ಯವೆಂದರೆ ಆ ವೇಳೆಯಲ್ಲಿ ಸಾಧುವಾದ ರೂಪವೇ ಏಕೋ—ಏನೋ ಅಸಾಧುವಾಗಿರುವಂತೆ ಬುದ್ಧಿಗೆ ಭಾಸವಾಗುತ್ತದೆ.

"ಆದರೆ ಎಲ್ಲ ಜೀವಿಗಳೂ ಸೃಷ್ಟಿಯಲ್ಲಿ ಹೇಗೊ ಬಾಳುವಂತೆ, ಈ ಅಪಪ್ರಯೋಗಗಳೂ ಅನೇಕ ವೇಳೆ ಅಭ್ಯಾಸಬಲದಿಂದಲೂ, ರೂಢಿಯ ಬೆಂಬಲದಿಂದಲೂ ಬಾಳುತ್ತವೆ. ಇಂದು ಬಹುಜನರಿಗೆ ನಂತರ, ಬುದ್ಧಿವಂತ, ಮನರಂಜನೆ ಎಂಬ ರೂಪಗಳು ತಪ್ಪು, ಇವು ಕ್ರಮವಾಗಿ ಅನಂತರ, ಬುದ್ಧಿವಂತ, ಮನೋರಂಜನೆ ಎಂದಿರಬೇಕು—ಎಂಬುದಾಗಿ ಹೇಳಿದರೆ ನಗು ಬರುತ್ತದೆ. ಜಗತ್ತಿನ ಬಹುತೇಕ ಭಾಷೆಗಳಲ್ಲಿ ಈ ಬಗೆಯ ಪ್ರಯೋಗಗಳಿವೆ. ತಪ್ಪುಒಪ್ಪುಗಳು ಇಲ್ಲದ ಬಾಳು—ಭಾಷೆ ಯಾವುದು ? ಶಬ್ದ ಪ್ರಪಂಚದಲ್ಲಿ ನೂರುಜನ ನೂರು ಬಾರಿ ಉಪಯೋಗಿಸುವ ಅಸಾಧು ರೂಪಗಳು ಮುಂದೆ ಸಾಧು ರೂಪಗಳಾಗಿ ಚಲಾವಣೆಯಲ್ಲಿ ಬರುತ್ತವೆ. ಆಗ ಕ್ರಮೇಣ, ಆ ರೂಪಗಳು 'ತಪ್ಪು' ಎಂದು ತಿಳಿದವರೂ 'ತಪ್ಪದೆ' ಬಳಸಬೇಕಾಗುತ್ತದೆ, ಕಾಲಾಯತಸ್ಮೈ ನಮಃ—ಎಂದು ಹೇಳಬೇಕೆನಿಸುತ್ತದೆ. ಆದುದರಿಂದ ಯಾವ ಪದ ಉಳಿಯುತ್ತದೆ, ಯಾವ ಪದ ಅಳಿಯುತ್ತದೆ, ಯಾವ ತಪ್ಪು ರೂಪ ಮುಂದೆ ಸರಿಯಾದ, ಸಾಧುವಾದ ರೂಪವಾಗಿ ಬಾಳುತ್ತದೆ—ಎಂಬುದನ್ನು ಯಾರೂ ಭವಿಷ್ಯ ಹೇಳಲಾಗುವಂತಿಲ್ಲ. ಹಾಗೆಂದು ತಪ್ಪು ರೂಪಗಳನ್ನೇ ಬಳಸಲಾಗದು ! ಕೆಲವು ಪದಗಳ ಸರಿಯಾದ ರೂಪಗಳನ್ನೂ, ಅವು ಪ್ರಯೋಗವಾಗುತ್ತಿರುವ ತಪ್ಪು ರೂಪಗಳನ್ನೂ ಇಲ್ಲಿ ಮುಂದೆ ಕೊಟ್ಟಿದೆ; ಅವುಗಳಲ್ಲಿ ಒಂದೆರಡು ಪದಗಳು ಈಗಾಗಲೇ ಸಾಧುವಾದ ಪದಗಳೆಂದು ಅಂಗೀಕೃತವಾಗಿ ಓದಿದವರ ಹೊತ್ತಗೆಗಳಲ್ಲಿ ಪ್ರವೇಶ ಪಡೆದಿವೆ—ಗಿಟ್ಟಿಸಿವೆ. ಆದರೂ ಆದಷ್ಟೂ ಈ ಉದಾಹೃತ ಪದಗಳ ಸುಸಂಬದ್ಧ ರೂಪವನ್ನೇ ಬಳಸುವುದು ಒಳಿತೆಂದು ಸೂಚಿಸಬಹುದು.

| ತಪ್ಪು | ಸರಿ |
|---|---|
| ಐಕ್ಯತೆ | ಐಕ್ಯ/ಏಕತೆ |
| ದೈನ್ಯತೆ | ದೈನ್ಯ/ದೀನತೆ |
| ಪ್ರಾಧಾನ್ಯತೆ | ಪ್ರಾಧಾನ್ಯ/ಪ್ರಧಾನತೆ |
| ಪ್ರಾವೀಣ್ಯತೆ | ಪ್ರಾವೀಣ್ಯ/ಪ್ರವೀಣೆ |
| ಪ್ರಾಮುಖ್ಯತೆ | ಪ್ರಾಮುಖ್ಯ/ಪ್ರಮುಖತೆ |

| ತಪ್ಪು | ಸರಿ |
|---|---|
| ಮೌಢ್ಯ | ಮೌಢ್ಯ |
| ವೈಶಿಷ್ಟ್ಯತೆ | ವೈಶಿಷ್ಟ್ಯ |

| ತಪ್ಪುರೂಪಗಳು | ಸರಿಯಾದರೂಪ | ತಪ್ಪುರೂಪಗಳು | ಸರಿಯಾದರೂಪ |
|---|---|---|---|
| ಅಂಥಹ | ಅಂಥ/ಅಂತಹ | ದುರಾದೃಷ್ಟ | ದುರದೃಷ್ಟ |
| ಅನಾನುಕೂಲ | ಅನನುಕೂಲ[1] | ನಂತರ | ಅನಂತರ |
| ಅನಾವಶ್ಯಕ | ಅನವಶ್ಯಕ | ನಾಗರೀಕ(ತೆ) | ನಾಗರಿಕ(ತೆ) |
| ಅಪದ್ಧ | ಅಬದ್ಧ | ಪಂಚವಾರ್ಷಿಕ | ಪಾಂಚವಾರ್ಷಿಕ |
| ಉಪದ್ರ | ಉಪದ್ರವ | ಪರ್ಯಾವಸಾನ | ಪರ್ಯವಸಾನ |
| ಔದಾರ್ಯತೆ | ಉದಾರತೆ : | ಪ್ರತೀದಿನ | ಪ್ರತಿದಿನ |
| | ಔದಾರ್ಯ | ಪ್ರಸ್ತಾಪ | ಪ್ರಸ್ತಾವನೆ |
| ಕೌಶಲ್ಯ | ಕೌಶಲ | ಪುನಹ | ಪುನಃ |
| ಕಡಿಮೆ | ಕಡಮೆ | ಪಾಶ್ಚಿಮಾತ್ಯ | ಪಾಶ್ಚಾತ್ಯ |
| ಕರ್ತೃ | ಕರ್ತೃ | ಪೌರ್ವಾತ್ಯ | ಪೌರಸ |
| ಕಾತುರ | ಕಾತರ | ಪುನರಾವತಾರ | ಪುನರವತಾರ |
| ಕೂಲಂಕುಷ | ಕೂಲಂಕಷ | ಪುನರ್‌ರಚನೆ | ಪುನಾರಚನೆ |
| ಕೈಗಾರಿಕೆ ಕೇಂದ್ರ | ಕೈಗಾರಿಕಾ ಕೇಂದ್ರ | ಪೂರ್ವಗ್ರಹ | ಪೂರ್ವಾಗ್ರಹ |
| ಕೊಂಚ(< ಕಿಂಚಿತ್) | ಸ್ವಲ್ಪ | ಪ್ರಾಧಾನ್ಯತೆ | ಪ್ರಧಾನತೆ ; ಪ್ರಾಧಾನ್ಯ |
| ಕೋಟ್ಯಾಂತರ | ಕೋಟ್ಯಂತರ | ಪ್ರಾಮುಖ್ಯತೆ | ಪ್ರಾಮುಖ್ಯ |
| ಚಳುವಳಿ | ಚಳವಳಿ | ಪ್ರೇರೇಪಿಸು | ಪ್ರೇರಿಸು |
| | (> ಸಂ. ಚಲನವಲನ ?) | ಪ್ರೇರೇಪಣೆ | ಪ್ರೇರಣೆ |
| ಚಿನ್ಹೆ | ಚಿಹ್ನೆ | ಬುದ್ಧಿವಂತ | ಬುದ್ಧಿಮಂತ |
| ಜಲ್ಮ | ಜನ್ಮ | | (ಬುದ್ಧಿಮಾನ್) |
| ಜಾತ್ಯಾತೀತ | ಜಾತ್ಯತೀತ | ಭಾವೈಕ್ಯತೆ | ಭಾವೈಕ್ಯ |
| ಜ್ಯೋತಿಷ್ಯ | ಜೋತಿಷ | ಮನರಂಜನೆ | ಮನೋರಂಜನೆ |
| ತುಸು | ಸ್ವಲ್ಪ | ಮಹತ್ಕಾರ್ಯ | ಮಹಾಕಾರ್ಯ |
| (< ತುಷ) | | ಮುಖಂಡ | ಮುಖ್ಯ |
| | | ರೋಮಾಂಚನ | ರೋಮಾಂಚ |

[1] ಪದದ ಆದಿಯಲ್ಲಿ ಹ್ರಸ್ವಸ್ವರ ಇರುವ ರೂಪಗಳು–ಅಕ್ಷರಸ್ಥ, ಅವಶ್ಯಕ, ಅಭಿಜ್ಞ ಇತ್ಯಾದಿ ನಿಶೇಧಾರ್ಥಕ ಪ್ರತ್ಯಯ ಸೇರಿದ ಮೇಲೆ ಅನಕ್ಷರಸ್ಥ, ಅನವಶ್ಯಕ ಎಂದು ಆಗುತ್ತವೆ, ಆಗಬೇಕು. ಇದರಂತೆ ಅನುಕೂಲ–ಅನನುಕೂಲ ಆಗಬೇಕು. ಆದರೆ ಅನಾನುಕೂಲ ಎಂಬುದೇ, ಬರೆಹದಲ್ಲೂ, ಬಳಕೆಯಲ್ಲಿದೆ. ಇದಕ್ಕೆ ಕಾರಣ ರೂಪಸಾಮ್ಯವಿಧಿ. ಪದಗಳ, ಅಂದರೆ ಪದದ ಆದಿಯಲ್ಲಿ ದೀರ್ಘಸ್ವರ ಇರುವಾಗ, ನಿಷೇಧಾರ್ಥಕ ಪ್ರತ್ಯಯ ಸೇರಿದಾಗ ದ್ವಿತೀಯಾಕ್ಷರ ದೀರ್ಘವಾಗುತ್ತದೆ, ಮೊದಲನೆಯ ವರ್ಣ ಹ್ರಸ್ವವಾಗುತ್ತದೆ. ಉದಾಹರಣೆಗೆ ಆಗತ, ಆಚಾರ, ಆರ್ಯ ಮತ್ತು ಆವರಣ ಎಂಬ ಪದಗಳು ಕ್ರಮವಾಗಿ ಅನಾಗತ, ಅನಾಚಾರ, ಅನಾರ್ಯ, ಅನಾವರಣ ಎಂದಾಗುತ್ತವೆ. ಅನನುಕೂಲ ಎಂಬುದು ಅನಾನುಕೂಲ ಎಂದು ಆದುದು ಈ ಸಾಮ್ಯನಿಯಮದಿಂದ.

| ತಪ್ಪುರೂಪಗಳು | ಸರಿಯಾದರೂಪ |
|---|---|
| ವೈಯಾಕರಣಿ | ವೈಯಾರಕಣ |
| ವಿನಃ | |
| ವಿನಹ | ವಿನಾ |
| ಶಕ್ತ್ಯಾನುಸಾರ | ಶಕ್ತ್ಯನುಸಾರ |
| ಸಕುಟುಂಬ ಸಹಿತ | |
| ಸಕುಟುಂಬ ಸಮೇತ | ಸಕುಟುಂಬ |
| ಸಮಯಮು | ಸಮಕ್ಷ |
| ಸಲಹಾಸಮಿತಿ | ಸಲಹೆ ಸಮಿತಿ |
| ಸ್ವಾತಂತ್ರ | ಸ್ವಾತಂತ್ರ್ಯ |
| ಸೂರ್ಯಾಸ್ತಮು | ಸೂರ್ಯಾಸ್ತ |

| ಮೈಸೂರು | ಮಂಗಳೂರು |
|---|---|
| ನೀವು ಯಾವ ಕಡೆ ಯವರು | ನಿಮಗೆ ಎಲ್ಲಾಯಿತು |
| ನೋಡುವುದಕ್ಕೆ | ನೋಡಲಿಕ್ಕೆ |
| ನೋಡೋಣ | ನೋಡುವಾ |
| ಪೇಟೆ | ರುಂಬಾಲು |
| ಫಲಿತಾಂಶವನ್ನು ಕುರಿತು | ಫಲಿತಾಂಶದ ಕುರಿತು |
| ಬರುವುದಕ್ಕೆ | ಬರಲಿಕ್ಕೆ |
| ಬಾಡರ್ | ಬೋರ್ಡರ್ |
| ಬಾಂಬ್ | ಬೋಂಬು |
| ಬುಡಮೇಲಾಗದೆ | ಅಡಿಮೇಲಾಗಿದೆ |
| ಬ್ಯಾಂಕ್ | ಬೇಂಕು |
| ಮನೆ | ಬೀಡು |
| ಮಹಾರಾಯರೆ | ಮಾರಾಯ್ರೆ (ಯ್ರೆ) |
| ಮೈಲಿ | ಮೈಲು |
| ಲಾರಿ | ಲೋರಿ |
| ವಿಷಯಗಳನ್ನು | ವಿಷಯಗಳ |
| ವೈರ್‌ಲೆಸ್ | ನಿಸ್ತಂತು |
| ಹುಡುಗ | ಮಾಣಿ |
| ರೂಪಾಯಿ | ರೂಪ್ಯಾ |
| ಹೋಗುವುದಕ್ಕೆ | ಹೋಗಲಿಕ್ಕೆ |
| ಹೌದಲ್ಲವೆ | ಹೋದಲ್ಲವೊ–ಹೌದಲ್ವೊ |
| ಹೈಸ್ಕೂಲ್ | ಹ್ಯಾಸ್ಕೂಲ್ |

| ಮೈಸೂರು | ಮಂಗಳೂರು |
|---|---|
| ಅಂಟವಾಳ (ಕೂಪಟೆ) ಕಾಯಿ | ನೊರೆಕಾಯಿ |
| ಅಲ್ಲವೆ | ಅಲ್ವೊ_ಅಲ್ಲವೊ |
| ಆಗಲಿ_ಆಗಬಹುದು | ಆಯಿತು |
| ಅಲದಮರ | ಗೋಳಿಮರ |
| ಆಹ್ವಾನ | ಆಮಂತ್ರಣ |
| ಊಟ ಮಾಡಿದ್ದು | ಉಂಡದ್ದು |
| ಚೆನ್ನಾಗಿ ಮಾಡಿದ್ದು | ಸಮಾ ಉಂಡದ್ದು |
| ಎಳನೀರು | ಸೀಯಾಳ |
| ಎಂತಹುದು | ಎಂಥದು |
| ಕಟ್ಟಡ | ಕಟ್ಟೋಣ |
| ಕಣಿಗಲೆ | ಗೋಸಂಪಗೆ |
| ಕಂದಾಯ | ತೀರ್ವೆ |
| ಕಾಲರಾ (ಇಂ) | ಕೊಲೆರಾ |
| ಕೂಡ | ಸಹ |
| ಚರ್ಚು (ಇಂ) | ಇಗರ್ಜಿ |
| ಚಿಕ್ಕಪ್ಪ | ಕಕ್ಕ |
| ತಂಟೆ | ತಳ್ಳಿ |
| ತಿನ್ನುವುದಕ್ಕೆ | ತಿನ್ನಲಿಕ್ಕೆ |
| ದಾಸವಾಳ | ದಾಸನ |
| ನಂಬುವುದಕ್ಕೆ | ನಂಬಲಿಕ್ಕೆ |

ಮೈಸೂರು ಕನ್ನಡಿಗರು ಕೂಡಿಸಿ ಹೇಳುವುದು, ಪದಗಳಲ್ಲಿ ಸಂಧಿ–ಸಮಾಸ ಮಾಡುವುದು ಹೆಚ್ಚು. ಆದರೆ ಮಂಗಳೂರು ಕನ್ನಡಿಗರು ಅಕ್ಷರಗಳನ್ನು ವಿರಳವಾಗಿ ಬಿಡಿಸಿ ಹೇಳುವರು, ಆದಷ್ಟೂ ಕನ್ನಡ ಪದಗಳನ್ನೇ ಬಳಸುವರು, ಸ್ಪಷ್ಟವಾಗಿ ಉಚ್ಚರಿಸುವರು.

| | | | |
|---|---|---|---|
| ಮೈಸೂರು | ಅಂಕೋಲೆ | ಮೈಸೂರು | ಅಂಕೋಲೆ |
| ಬರುವೆಯಾ | ಬತ್ತಿ | ಛಾಪುಡಿ | ಸಾಚಪ್ಪು |
| ಹೋಗುವೆಯಾ | ಹೋತಿ | ಛಾಪಿಸು | ಸಾಪಿಸು |
| ಕರೆ | ದಿಂಗ್ಯೈಯ್ಯ | ∴ ಛಾ (ಚ)- > ಸ- | |
| ಕೊಡುತ್ತೇನೆ | ಕುಡ್ತಿ | ಸೆಟ್ಪರೆ | ಚೆಪ್ರೆ |
| ನುಂಗುವ ಹಾಗೆ | ನುಂಗ್ವಂಗೆ | ಸಕ್ಕರೆ | ಚೆಕ್ಕರೆ |
| ರಾಗಿ | ಕುಂಬರಿ | ಸಖಿ | ಚಕಿ |
| ಹೊರತು | ಹೊರ್ತುಃ | ಸುಂದರ | ಚುಂದರ |
| ಒಂದು ಆಣೆ | ಉಂದು ಆಣಿ | ಸುರಪ | ಚುರೆಪ |
| ಹಾಲು | ಕರಿತಲ್ಲೆ | ಆಚೆಯಿಂದ | ಆಸಗಿಂದ |
| ಕರಿಯುತ್ತಿಲ್ಲ | (ಸ್ತ್ರೀ. ಲಿಂ.) | ಅಚೆಗೆ | ಆಸಗೆ |
| ಏನು ಮಾಡುವುದು | ಎಂತ ಮಾಡದು | ಈಚೆಗೆ | ಈಸಗೆ |
| ಬೆಳೆಯುತ್ತಿಲ್ಲ | ಬೆಳಿತಲ್ಲೆ (ಸ್ತ್ರೀಲಿಂಗ) | ಈಚೆಗಿಂದ | ಈಸಗಿಂದ |
| ಗೊತ್ತಾಗುವುದಿಲ್ಲ | ಗೊತಾಗಲೆಲ್ಲೆ ” | ಚಾಪೆ | ಸಾಪೆ |

∴ -ಚ- > -ಸ-; ಸ- > ಚ-

ಈ ಸ > ಚ ಮತ್ತು ಚ > ಸ ಗಳ ಪರಿವರ್ತನೆ ಎಷ್ಟು ವಿರೋದಾಭಾಸವಾಗಿದೆ. ನೋಡಿ. ಚಕಾರವನ್ನು ಉಚ್ಚರಿಸುವವರಿಗೆ ಸಕಾರ ಬಾರದೆಂದಾಗಲೀ, ಸಕಾರವನ್ನು ಹೇಳುವವರಿಗೆ ಚಕಾರ ಹೇಳಲು ಬರುವುದಿಲ್ಲವೆಂದಾಗಲಿ ಭಾವಿಸಬಾರದು. ಆದರೂ ಪರಿಸರ ಧ್ವನಿಗಳಿಗೆ ಬದ್ಧವಾಗಿ ಸಕಾರದ ಸ್ಥಾನದಲ್ಲಿ ಚಕಾರ ಮತ್ತು ತದ್ವಿರುದ್ಧ ವಾಗಿಯೇ ಹೇಳುವರು.

ಮೈಸೂರು ಸಂಸ್ಥಾನದ ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ಹಾಗೂ ಅದರ ಸುತ್ತಮುತ್ತಲ ಪ್ರದೇಶದಲ್ಲಿ ಆಡುವ ಕನ್ನಡ, ಅದರಲ್ಲಿಯೂ ಅಲ್ಲಿನ ಹವ್ಯಕ ಬ್ರಾಹ್ಮಣರು ತಮ್ಮ ಮನೆ ಮಾತಿನಲ್ಲಿ ಆಡುವ ಕನ್ನಡ—ಇವೆರಡೂ ಗಮನಾರ್ಹವಾದ ಕನ್ನಡದ ಉಪಭಾಷೆಗಳು. ಹೈದರಾಬಾದು, ರಾಯಚೂರು, ಧಾರವಾಡ, ಬಿಜಾಪುರ —ಮೊದಲಾದ ಭಾಗಗಳಲ್ಲಿ ಆಡುವ ಕನ್ನಡ ಮೈಸೂರು ಕನ್ನಡಕ್ಕಿಂತಲೂ ಭಿನ್ನವಾಗಿ ಕಾಣುವುದಕ್ಕೆ ಕಾರಣ ಅನ್ಯಭಾಷೆಗಳ—ವಿಶೇಷವಾಗಿ ಉರ್ದು, ಮರಾಠಿ ಭಾಷೆಗಳ—ಪ್ರಭಾವ. ಆದರೆ ಕುಂದಾಪುರದ ಕನ್ನಡ, ಹವ್ಯಕರ ಕನ್ನಡ ಹಾಗಲ್ಲ. ಇವು ಬಹುಶಃ ಅನ್ಯಭಾಷೆಗಳ ಪ್ರಭಾವಕ್ಕೆ ಏನೇನೂ ಒಳಗಾಗದಂತೆ ಕಾಣುವುದಿಲ್ಲ. ಏಕೆಂದರೆ ಕನ್ನಡದ, ಅದರಲ್ಲಿಯೂ ಹಳಗನ್ನಡದ ಕೆಲವು ಹಳೆಯ ರೂಪಗಳನ್ನು ಇಲ್ಲಿ ಗುರುತಿಸಬಹುದು. ಹೊರಗಿನವರ ಸಂಪರ್ಕ ಕಡಮೆಯಾಗಿ, ಕ್ರಮೇಣ ಬಾಹ್ಯ ವರ್ಚಸ್ಸು ನಿಂತೇ ಹೋದುದರಿಂದ ಈ ಭಾಷೆ ತನ್ನದೇ ಆದ ಒಂದು ವಿಶಿಷ್ಟ ಸ್ವರೂಪವನ್ನೂ, ಧ್ವನಿ ನಿಯಮವನ್ನೂ ಹೊಂದಿರುವಂತೆ ಭಾಸವಾಗುತ್ತದೆ, ಆಡು ನುಡಿಯಾಗಿ, ಜೀವಂತ ಭಾಷೆಯಾಗಿ ನಿತ್ಯ ವ್ಯವಹಾರದಲ್ಲಿ ಇರುವ ಕನ್ನಡದ ಈ ಉಪಭಾಷೆಗಳ ಪರಿವೀಕ್ಷಣೆ

ತೀರ ಅಗತ್ಯ, ಬೇಗನೆ ಆಗಬೇಕಾದುದು. ಶ್ರೀಧರರು ಕುಂದಾಪುರದ ಕನ್ನಡವನ್ನು 'ಕುಂದಗನ್ನಡ'ವೆಂದು ಕರೆದು, ಅಲ್ಲಿನ ಕೆಲವು ಮೂಲಧಾತುಗಳನ್ನು ನಡಸಿ ತೋರಿಸಿದ್ದಾರೆ[1]. ಈ ಕುಂದಗನ್ನಡಕ್ಕೂ ನಾವು ಆಡುವ ಕನ್ನಡಕ್ಕೂ ಇರುವ ಕೆಲವು ವ್ಯತ್ಯಾಸಗಳನ್ನು ಉದಾಹರಣೆಗಳೊಡನೆ ಮುಂದೆ ತೋರಿಸಿದ್ದೇನೆ. ಸಂಶೋಧಕರು ಇದನ್ನು ಇನ್ನೂ ಮುಂದುವರಿಸಿ ಬೆಳಸಬೇಕು, ಇದರಲ್ಲಿನ ಪ್ರಮುಖ ಧ್ವನಿನಿಯಮಗಳನ್ನು ರೂಪಿಸಬೇಕು.

ಕುಂದಾಪುರದ ಕನ್ನಡಕ್ಕೂ, ಅಲ್ಲಿನ ಹವ್ಯಕರ ಕನ್ನಡಕ್ಕೂ ಅನೇಕ ವ್ಯತ್ಯಾಸಗಳು ಇವೆ. ಹವ್ಯಾಕರ ಬಾಯಲ್ಲಿ ಕನ್ನಡದ ಮಾತುಗಳು ಕೆಲವು ವ್ಯತ್ಯಾಸ ಪಡೆದು ನುಡಿಯುತ್ತವೆ. ಅವರ ಕನ್ನಡ, ಹಳಗನ್ನಡದ ರೂಪಗಳು ಮಾತ್ರವಲ್ಲದೆ ಆ ಪದಗಳಿಗೆ ಇದ್ದ ಅದೇ ಅರ್ಥವನ್ನೂ ಕೆಲವೊಮ್ಮೆ ಉಳಿಸಿಕೊಂಡಿರುವುದು ಉಲ್ಲೇಖನೀಯ.

ಕನ್ನಡದಲ್ಲಿ ಉಪಭಾಷೆಗಳು ಹಿಂದಿನಿಂದಲೂ ಇವೆ, ಎಲ್ಲ ಭಾಷೆಗಳಲ್ಲೂ ಇರುವಂತೆ. ನಮ್ಮ ಹಳೆಯ ಲೇಖಕರು ಇದನ್ನು ಅಷ್ಟು ಖಚಿತವಾಗಿ ಗಮನಿಸಿ ನಿರ್ದೇಶಿಸಿ ತೋರಿಸಿಲ್ಲವಾದರೂ, ಅವರ ಹಲವು ಮಾತುಗಳಿಗೆ ವಿಶೇಶ ಅರ್ಥ ಕೊಟ್ಟು ಅನ್ವಯಿಸಿ ಹೇಳಿದರೆ, ಉಪಭಾಷೆಗಳನ್ನು ಅವರೂ ಗಮನಿಸಿದ್ದಾರೆ ಎನ್ನಬಹುದು. ಇವುಗಳಲ್ಲಿ ಬಹಳ ಮುಖ್ಯವಾದುದು ಕವಿರಾಜಮಾರ್ಗ. ಅದರ ದಕ್ಷಿಣ—ಉತ್ತರ ಮಾರ್ಗಗಳ ಮಾತು ಅಂತಿರಲಿ, 'ಕನ್ನಡಂಗಳ್' ಎಂಬ ಪದ ಮುಖ್ಯ. ಇದು ಬಹುಶಃ ಅಂದಿನ ಉಪಭಾಷೆಗಳನ್ನು ಕುರಿತು ಹೇಳಿದಂತಿದೆ.[2]

ಹವ್ಯಕ ಕನ್ನಡದಲ್ಲಿ ಕೆಲವು ತದ್ಭವಗಳು, ಸಂಸ್ಕೃತದಿಂದ ಬಂದವು :

ಈಚ (ಈಶ್ವರ) ದೇಕಿ (ದೇವಕಿ)
ನಾಚ (ನರಸಿಂಹ) ನಾಣ (ನಾರಾಯಣ)

ಕನ್ನಡದ ಉಪಭಾಷೆಯಾದ ಹವ್ಯಕ ಕನ್ನಡದಲ್ಲಿ ಒಟ್ಟು ಧ್ವನಿಮಾಗಳು ಇಂದಿನ ಕನ್ನಡದಲ್ಲಿ ಇರುವಷ್ಟೇ ಇವೆಯೆಂದು ಹೇಳಬಹುದು. ಅವುಗಳನ್ನು ಧ್ವನಿವಿಜ್ಞಾನದ ರೀತಿ ಹೀಗೆ ವರ್ಗೀಕರಿಸಬಹುದು :

ಸ್ವರಗಳು :

ಇ ಈ ಉ ಊ

ಎ ಏ ಒ ಓ

ಅ ಆ

1 ಕುಂದಗನ್ನಡ, ಬಿ. ಎಚ್. ಶ್ರೀಧರ, ಕಸಾಪಪ ೪೧–೧, ೨

2 ಶ್ರೀ ವಿಜಯ, ಕವಿರಾಜಮಾರ್ಗ, ೧–೪೬

